# ಸೋಲಿಗರು ಬುಡಕಟ್ಟು : ಸಮಾಜಶಾಸ್ತ್ರೀಯ ಅಧ್ಯಯನ

## (Soligaru Tribe: Sociological Study)

ಸಮಾಜಶಾಸ್ತ್ರ ವಿಷಯದಲ್ಲಿ ಪಿಹೆಚ್ ಡಿ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ರತ್ನಮ್ಮ ಎಸ್

ಮಾರ್ಗದರ್ಶಕರು
ಡಾ ಹಿ ಚಿ ಬೋರಲಿಂಗಯ್ಯ
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ ಕೆ ಎಂ ಮೇತ್ರಿ
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಸೋಲಿಗರು ಬುಡಕಟ್ಟು : ಸಮಾಜಶಾಸ್ತ್ರೀಯ ಅಧ್ಯಯನ

## (Soligaru Tribe: Sociological Study)

ಸಮಾಜಶಾಸ್ತ್ರ ವಿಷಯದಲ್ಲಿ ಪಿಹೆಚ್ ಡಿ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
**ರತ್ನಮ್ಮ ಎಸ್**

ಮಾರ್ಗದರ್ಶಕರು
**ಡಾ ಹಿ ಚಿ ಬೋರಲಿಂಗಯ್ಯ**
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
**ಡಾ ಕೆ ಎಂ ಮೇತ್ರಿ**
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೧೮

# ಪ್ರಮಾಣ ಪತ್ರ

**ಸೋಲಿಗರು ಬುಡಕಟ್ಟು : ಸಮಾಜಶಾಸ್ತ್ರೀಯ ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಬುಡಕಟ್ಟು ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ ಹಿ ಚಿ ಬೋರಲಿಂಗಯ್ಯ** ಅವರ ಮಾರ್ಗದರ್ಶನದಲ್ಲಿ ಹಾಗೂ **ಡಾ ಕೆ ಎಂ ಮೇತ್ರಿ** ಅವರ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Rathnamma. S

ದಿನಾಂಕ : 07-12-2018
ಸ್ಥಳ : ವಿದ್ಯಾರಣ್ಯ

**(ರತ್ನಮ್ಮ ಎಸ್)**
ಸಂಶೋಧನಾರ್ಥಿ
ಗ್ರಾಮ: ಮದ್ದೂರು ಕಾಲೋನಿ,
ಅಂಚೆ: ಮದ್ದೂರು ತಾಲೂಕು: ಗುಂಡ್ಲುಪೇಟ
ಜಿಲ್ಲೆ: ಚಾಮರಾಜನಗರ – ೫೭೧ ೧೧೧

# ಸಹ ಮಾರ್ಗದರ್ಶಕರ ದೃಢೀಕರಣ ಪತ್ರ

ರತ್ನಮ್ಮ ಎಸ್ ಅವರು **ಸೋಲಿಗರು ಬುಡಕಟ್ಟು: ಸಮಾಜಶಾಸ್ತ್ರೀಯ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ನನ್ನ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 07.12.2018
ಸ್ಥಳ : ವಿದ್ಯಾರಣ್ಯ

**(ಡಾ ಕೆ ಎಂ ಮೇತ್ರಿ)**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ರತ್ನಮ್ಮ ಎಸ್.** ಅವರು **ಸೋಲಿಗರು ಬುಡಕಟ್ಟು: ಸಮಾಜಶಾಸ್ತ್ರೀಯ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 07-12-2018
ಸ್ಥಳ : ವಿದ್ಯಾರಣ್ಯ

**(ಡಾ ಹಿ ಚಿ ಬೋರಲಿಂಗಯ್ಯ )**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

ನನ್ನ ಸಂಶೋಧನೆಗೆ ವಿಷಯವನ್ನು ಸೂಚಿಸಿ, ಮಾರ್ಗದರ್ಶನವನ್ನು ಮಾಡಿ ಮಹಾಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನೆರವು, ಸಹಕಾರ ಮತ್ತು ಪ್ರೋತ್ಸಾಹವನ್ನು ಪ್ರತೀ ಹಂತದಲ್ಲೂ ನೀಡಿ ಸಹನೆ, ಪ್ರೇರಣೆ, ಚಿಂತನಾ ಸಲಹೆಗಳು, ಹೃದಯ ತುಂಬಿದ ಸಹಾಯ ಅದ್ಭುತ ತಾಳ್ಮೆ ಮತ್ತು ಉದಾತ್ತ ಮನಸ್ಸು ಇವೆಲ್ಲವುಗಳಿಂದ ನಿತ್ಯ ಪ್ರೇರಣೆಯಾಗಿರುವ ನನ್ನ ಪೂಜನೀಯ ಗುರುಗಳು ಹಾಗೂ ಮಾರ್ಗದರ್ಶಕರು ಆದ **ಡಾ ಹಿ ಚಿ ಬೋರಲಿಂಗಯ್ಯನವರು** ಹಾಗು ಸಹ ಮಾರ್ಗದರ್ಶಕರಾದ **ಡಾ. ಮೇತ್ರಿ ಕೆ.ಎಮ್** ರವರು ಬುಡಕಟ್ಟು ಅಧ್ಯಯನ ವಿಭಾಗ, ಸಮಾಜವಿಜ್ಞಾನಗಳ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಇವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನಾ ಮಹಾಪ್ರಬಂಧದ ಸಿದ್ಧತೆಯಲ್ಲಿ ಸಹಕರಿಸಿದ ಹಾಗೂ ಸೌಜನ್ಯಶೀಲ ನೆರವು ನೀಡಿ ಸದಾಕಾಲ ಸಹಕಾರ ಸಲಹೆಗಳನಿತ್ತು ಎಲ್ಲಾ ರೀತಿಯಲ್ಲೂ ಪ್ರೋತ್ಸಾಹಿಸುತ್ತ ಬಂದ ನನ್ನ ಬುಡಕಟ್ಟು ವಿಭಾಗದವರಾದ ಡಾ. ಗಂಗಾಧರ ದೈವಜ್ಞ ಮುಖ್ಯಸ್ಥರು ಬುಡಕಟ್ಟು ಅಧ್ಯಯನ ವಿಭಾಗ, ಡಾ.ಚಲುವರಾಜು ಸಹಾಯಕ ಪ್ರಾಧ್ಯಾಪಕರು ಬುಡಕಟ್ಟು ಅಧ್ಯಯನ ವಿಭಾಗ, ಡಾ. ಪ್ರಭಾಕರ, ಪ್ರಾಧ್ಯಾಪಕರು, ಬುಡಕಟ್ಟು ಅಧ್ಯಯನ ವಿಭಾಗ, ಡಾ.ಕೇಶವನ್ ಪ್ರಸಾದ್.ಕೆ, ಸಹಾಯಕ ಪ್ರಾಧ್ಯಾಪಕರು ಬುಡಕಟ್ಟು ಅಧ್ಯಯನ ವಿಭಾಗ ಹಾಗೂ ಬುಡಕಟ್ಟು ಅಧ್ಯಯನ ವಿಭಾಗದ ಎಲ್ಲಾ ಸಿಬ್ಬಂದಿ ವರ್ಗದವರಿಗೂ ನನ್ನ ಹೃದಯ ಪೂರ್ವಕ ಧನ್ಯವಾದಗಳು.

ನನ್ನ ಸಂಶೋಧನ ಮಹಾಪ್ರಬಂಧದ ಸಿದ್ಧತೆಗೆ ಎಲ್ಲಾ ರೀತಿಯಲ್ಲೂ ಸಹಕಾರ ನೀಡಿದ ಡಾ. ಸಿದ್ದಗಂಗಮ್ಮ ಮಹಿಳಾ ಅಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಹಾಗೂ ಅಥಿತಿ ಉಪನ್ಯಾಸಕರಾದ ಡಾ ಜಕ್ಕಪಾರ್ಥಸಾರಥಿ ನಿವೃತ್ತ ನಿರ್ದೇಶಕರು, ತಮಿಳುನಾಡು ಬುಡಕಟ್ಟು ಸಂಶೋಧನಾ ಸಂಸ್ಥೆ ಮತ್ತು ದಿವಂಗತ ಪ್ರೋ ಕಿಕ್ಕೇರಿನಾರಾಯಣ ಅಥಿತಿ ಉಪನ್ಯಾಸಕರು ಇವರಿಗೂ ಸಹ ನನ್ನ ಹೃದಯ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆಗೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕಾರ, ಸಲಹೆಗಳನ್ನು ನೀಡಿದ ಭಾರತೀಯ ಮಾನವ ವಿಜ್ಞಾನ ಸರ್ವೇಕ್ಷಣ,ದಕ್ಷಿಣ ಪ್ರಾಂತೀಯ ಕೇಂದ್ರ ಡಾ ಎಚ್ ಎಮ್ ಮರಳುಸಿದ್ದಯ್ಯ. ಹಾಗೂ ಕುಮಾರಿ ಡಾ ಚಲುವಾಂಬ ರವರು ಈ ವಿಭಾಗದಲ್ಲಿ ಸಹಕಾರ ನೀಡಿದ ಎಲ್ಲರಿಗೂ ನನ್ನ ಹೃದಯ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ

ನನ್ನ ಸಂಶೋಧನೆಗೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಿಸಲು ಸಹಕಾರ ನೀಡಿದ ಕನ್ನಡ ವಿಶ್ವವಿದ್ಯಾಲಯ, ಹಂಪಿ ಗ್ರಂಥಾಲಯ, ಹೊಸಪೇಟೆ, ಮೈಸೂರು ವಿಶ್ವವಿದ್ಯಾಲಯ ಗ್ರಂಥಾಲಯ, ಮೈಸೂರು, ಹಾಗೂ ಭಾರತೀಯ ಮಾನವ ವಿಜ್ಞಾನ ಸರ್ವೇಕ್ಷಣಾ ಗ್ರಂಥಾಲಯ, ಇತರೆ ಎಲ್ಲಾ ಗ್ರಂಥಾಲಯ ಹಾಗೂ ಸಿಂಬಂಧಿ ವರ್ಗದವರಿಗೂ ನನ್ನ ಹೃದಯ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ವಿದ್ಯಾಭ್ಯಾಸಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಸಾಕಷ್ಟುಶ್ರಮವಹಿಸಿ ಕಾಡಿನ ಕಿರುಅರಣ್ಯಾ ಉತ್ಪಾದನೆ ಸಂಗ್ರಹಿಸಿ ಅದನ್ನು ತಂದು ಮಾರಾಟಮಾಡಿ ನನ್ನನ್ನು ಸಾಕಿ ಸಲುಹಿದ ನನ್ನ ವಿದ್ಯೆ ಎಂಬ ದೀವಿಗೆಗೆ ದಾರಿ ದೀಪ ನೀಡಿ ಕಾಡಿನ ಪರಿಸರದಲ್ಲಿಯೇ ಪೋಷಿಸಿ,ಬೆಳೆಸಿ, ಮಹತ್ತರವಾದ ಆಸೆಯನ್ನು

ನನ್ನ ಮೇಲೆ ಹೊಂದಿದ ನನ್ನ ಪೂಜ್ಯ ತಂದೆಯವರಾದ **ದಿವಂಗತ ಶಂಕರಯ್ಯ** ಮತ್ತು ತಾಯಿ **ದಿವಂಗತ ದೇವಮ್ಮ** ಇವರ ಪಾದಗಳಿಗೆ ನಮಸ್ಕರಿಸುತ್ತ ನನ್ನ ಈ ಪ್ರಬಂಧವನ್ನು ಇವರಿಗೆ ಅರ್ಪಿಸುತಿದ್ದೇನೆ.

ನನ್ನ ಉನ್ನತ ವಿದ್ಯಾಭ್ಯಾಸಕ್ಕೆ ತಮ್ಮ ಜೀವನದಲ್ಲಿ ಸಾಕಷ್ಟು ಶ್ರಮವಹಿಸಿ, ನನಗೆ ಬೆನ್ನೆಲುಬಾಗಿ ನಿಂತು, ಸಂಶೋಧನೆಗೆ ಸದಾ ಪ್ರೋತ್ಸಾಹ, ಸಲಹೆಯನ್ನು ನೀಡುತ್ತ ಪ್ರತಿಯೊಂದು ವಿಷಯದಲ್ಲಿಯೂ ನನ್ನನ್ನು ತಿದ್ದಿ ತೀಡಿ ಸಲಹೆ ನೀಡಿದ ನನ್ನ ಪತಿಯವರಾದ ಶ್ರೀ ದೊಡ್ಡಯ್ಯ ರವರಿಗೆ ಮತ್ತು ನನಗೆ ಧೈರ್ಯತುಂಬಿ ಎಲ್ಲಾ ರೀತಿಯಲ್ಲೂ ಸಹಕಾರ ನೀಡಿದ ನನ್ನ ಮಕ್ಕಳಾದ ಸೌಮ್ಯ. ಎಮ್.ಡಿ ಮತ್ತು ಗೋಪಿಕ ಎಮ್ ಡಿ ಇವರಿಗೆ ನನ್ನ ಹೃದಯ ಪೂರ್ವಕ ಕೃತಜ್ಞತೆಗಳು.

ನನ್ನ ಸಂಶೋಧನೆಗೆ ಸಲಹೆ ಸಹಕಾರ ನೀಡಿ ನನ್ನನ್ನು ತಮ್ಮೆಲ್ಲರ ಪ್ರೀತಿಯ ಮಗಳಾಗಿ ಕಂಡು ಆಶೀರ್ವಾದ ಮಾಡಿ ಬೆಳೆಸಿದ ಕುಟುಂಬ ವರ್ಗದವರಿಗೂ, ನನ್ನ ಸಹೋದರನಾದ ರಾಜೇಂದ್ರ ಎಸ್, ತಂಗಿ ರೂಪ ಎಸ್, ಅಕ್ಕ ಮಲ್ಲಾಜಮ್ಮ, ಭಾವ ದೊಡ್ಡಣ್ಣ ಹಾಗು ನನ್ನ ಎಲ್ಲಾ ಕುಟುಂಬಸ್ಥರಿಗೂ ಮತ್ತು ನನ್ನ ತವರು ಗ್ರಾಮವಾದ ಮದ್ದೂರು ಕಾಲೋನಿಯ ಎಲ್ಲಾ ಗ್ರಾಮಸ್ಥರಿಗೂ ಸಹ ನನ್ನ ಹೃದಯ ಪೂರ್ವಕ ಅಭಿನಂದನೆಗಳು.

ನನ್ನ ಸಂಶೋಧನೆಗೆ ಸಲಹೆ ಸಹಕಾರ ನೀಡಿದ **ಡಾ ಜಡೇಗೌಡ ಎಂ** ಸಹಾಯಕ ಪ್ರಾಧ್ಯಾಪಕರು,ಅರಣ್ಯಕಾಲೇಜು ಪೊನ್ನಂಪೇಟೆ ಮತ್ತು ಡಾ ಸಿ ಮಾದೇಗೌಡ, ಸಂಶೋಧಕರು ಏಟ್ರೀ ಹಾಗೂ ನಾನು ಕ್ಷೇತ್ರಾಧ್ಯಯನ ಕೈಗೊಂಡ ಚಾಮರಾಜನಗರ ಜಿಲ್ಲೆಯ ಇತರೆ ಕಡೆಗಳಲ್ಲಿ ಮಾಹಿತಿ ಸಂಗ್ರಹಿಸಲು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕಾರ ನೀಡಿದ ನನ್ನ ಎಲ್ಲಾ ಸೋಲಿಗ ಸಮುದಾಯದ ಬಂಧುಗಳಿಗೆ ನನ್ನ ಹೃತ್ಪೂರ್ವಕವಾದ ಧನ್ಯವಾದಗಳು.
ನನ್ನ ಮಹಾಪ್ರಬಂಧವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀಯುತರಾದ ಮಹಾಂತೇಶ್ ಬುಕ್ ಬೌಂಡರ್ ಧಾರವಾಡ ಇವರಿಗೂ ಸಹ ನನ್ನ ಕೃತಜ್ಞತೆಗಳು.

ಇವರೆಲ್ಲರ ಸಹಕಾರಗಳಿಂದ ರೂಪಗೊಂಡ ನನ್ನ ಸಂಶೋಧನಾ ಮಹಾ ಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಸಾದರಪಡಿಸಲು ನನಗೆ ತುಂಬಾ ಸಂತೋಷವಾಗುತ್ತಿದೆ.

Rathnamma.S
**ರತ್ನಮ್ಮ ಎಸ್**

## ಪರಿವಿಡಿ

# ಪರಿಶಿಷ್ಟಗಳು

## ನಕ್ಷೆಗಳು



## ಕೋಷ್ಟಕಗಳು

**ವೃತ್ತಚಿತ್ರ**



**ಲಂಬಚಿತ್ರ**



**ಛಾಯಾಚಿತ್ರ**

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪ

## ಪ್ರಸ್ತಾವನೆ

ಮಾನವ ಸಮುದಾಯವೇ ಬುಡಕಟ್ಟು ಸ್ಥಿತಿಯಿಂದ ಕಾಲಕ್ರಮೇಣ ಈಗಿನ ಆಧುನಿಕತೆಯ ಹಂತವನ್ನು ತಲುಪಿದೆ ಎಂಬುದು ಸಾರ್ವಕಾಲಿಕ ಸತ್ಯ. ಆದರೆ, ಬುಡಕಟ್ಟು ಸ್ಥಿತಿಯಲ್ಲಿದ್ದ ಪ್ರತಿಯೊಂದು ಸಮುದಾಯಗಳು ಏಕಕಾಲಕ್ಕೆ ಬದಲಾವಣೆಗೊಳಗಾಗಿ ಆಧುನಿಕ ಬದುಕನ್ನು ರೂಢಿಸಿಕೊಂಡರು ಎಂದು ತಿಳಿಯುವುದು ತಪ್ಪು. ಏಕೆಂದರೆ ಜೀವಿಗಳು ಬದುಕಲು ಅನುಕೂಲಕರವಾದ ಪರಿಸರವಿದ್ದಲ್ಲೆಲ್ಲಾ ನೆಲೆ ಕಂಡುಕೊಂಡರಾದರೂ ಅವರೆಲ್ಲರೂ ಸಮಾನ ರೀತಿಯಲ್ಲಿ ಇದ್ದಿರಲಿಲ್ಲ. ಆಯಾ ನೆಲೆಗಳ ಭೌಗೋಳಿಕ ಹಿನ್ನೆಲೆಯ ಕಾರಣ ಮಾನವನ ದೈಹಿಕ ಮತ್ತು ಮಾನಸಿಕ ಸ್ಥಿತಿಯು ಭಿನ್ನವಾದದ್ದು ಸಹಜ. ಗುಡ್ಡಗಾಡು ಪ್ರದೇಶ, ಸಮತಟ್ಟಾದ ಪ್ರದೇಶ, ದ್ವೀಪಗಳು ಮತ್ತು ಜಲಾನಯನ ಪ್ರದೇಶಗಳಿದ್ದವು. ಹೀಗೆ ವಿಭಿನ್ನ ಪ್ರದೇಶಗಳನ್ನೆಲ್ಲಾ ಮೂರು ವಲಯಗಳಾಗಿ ಮಾಡಿ ಉಷ್ಣವಲಯ, ಶೀತವಲಯ ಮತ್ತು ಸಮಶೀತೋಷ್ಣವಲಯ ಎಂದು ಗುರುತಿಸಿಕೊಂಡಿದ್ದಾರೆ.

ಸಮಾಜಶಾಸ್ತ್ರವು ಅತ್ಯಂತ ಉಪಯುಕ್ತ ಹಾಗೂ ಪ್ರಮುಖ ವಿಜ್ಞಾನವೆಂಬ ನಂಬಿಕೆಯನ್ನು ಅಗಸ್ಟ್ ಕಾಂಟ್‌ರು ಇರಿಸಿಕೊಂಡಿದ್ದರು. ಅದನ್ನು ಸಮರ್ಥಿಸಿಕೊಳ್ಳಲು ಅವರು ಹೇಳಿದ ವಿಚಾರಗಳೆಂದರೆ– ಮಾನವರು ಹೇಗೆ ಪ್ರಕೃತಿಯ ನಿಯಮಗಳನ್ನು ಗ್ರಹಿಸಿ ತನಗೆ ಬೇಕಾದ ರೀತಿಯಲ್ಲಿ ನಿಯಂತ್ರಿಸಿ ಕೊಂಡಿದ್ದಾರೆಯೋ ಅಂತೆಯೇ ಸಾಮಾಜಿಕ ತತ್ವಗಳನ್ನು ಅರಿತು ಸಮಾಜ ಜೀವನವನ್ನು ಸರಿಯಾದ ರೀತಿಯಲ್ಲಿ ನಿಯಂತ್ರಿಸಲು ಸಮಾಜಶಾಸ್ತ್ರದಿಂದ ಸಾಧ್ಯ ಎಂದಿದ್ದಾರೆ. ಸಮಾಜಶಾಸ್ತ್ರದ ಅಧ್ಯಯನದ ಅವಶ್ಯಕತೆ ಎಷ್ಟಿದೆ ಎಂದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಮೂಲಭೂತ ನಿಯಮಗಳನ್ನು ತಿಳಿದುಕೊಳ್ಳದೆ ಜನರು ಮಾಡುತ್ತಿರುವ ತಪ್ಪುಗಳನ್ನು ತಿದ್ದಿಕೊಳ್ಳಲು ಸಮಾಜಶಾಸ್ತ್ರದ ಅಧ್ಯಯನ ಅವಶ್ಯಕ ಎಂದಿದ್ದಾರೆ. ಸಾಮಾಜಿಕ ಪ್ರಗತಿಯು ಜನರ ಬೌದ್ಧಿಕ ಪ್ರಗತಿಯನ್ನು ಆಧರಿಸಿರುವುದರಿಂದ ಬೌದ್ಧಿಕ ಪ್ರಗತಿಯಾಗಬೇಕಾದರೆ ಸಮಾಜಶಾಸ್ತ್ರದಂತಹ ವಿಜ್ಞಾನಗಳ ಅವಶ್ಯಕ ಎಂದಿದ್ದಾರೆ. "ಸಮಾಜಶಾಸ್ತ್ರ ಬೇರೆಲ್ಲ ಸಮಾಜ ವಿಜ್ಞಾನಗಳ ತಾಯಿಯಾಗಿ ಸಂಯೋಜನಶಾಸ್ತ್ರವಾಗಿ ಪರಿಣಮಿಸಿದೆ. ಜೊತೆಗೆ ಮುಂದೇನಾಗಬಹುದೆಂಬ ಭವಿಷ್ಯದ ಬಗ್ಗೆ ಬೆಳಕು ಚೆಲ್ಲುವ ಅರ್ಹತೆ ಸಮಾಜಶಾಸ್ತ್ರಕ್ಕಿದೆ ಎಂದಿದ್ದಾರೆ. ಸಮಾಜಶಾಸ್ತ್ರವು ಕೇವಲ ಒಂದು ವಿಜ್ಞಾನವಾಗಿರದೇ ಸಾಮಾಜಿಕ ಪುನರಚನೆ, ಸಾಮಾಜಿಕ ಸಮಸ್ಯೆಗಳ ಬಗೆಹರಿಸುವಿಕೆ, ಸಾಮಾಜಿಕ ಪ್ರಗತಿ ಹಾಗೂ ನೈತಿಕ ಜಾಗೃತಿಗೆ ಅವಶ್ಯಕ ಮಾಹಿತಿಯನ್ನು ನೀಡುತ್ತದೆ."[೧]

ಭಾರತೀಯ ಸಮಾಜದ ಕುರಿತಾಗಿ ಹಾಗೂ ಬುಡಕಟ್ಟು ಸಮುದಾಯಗಳ ಬಗ್ಗೆ ನಡೆದ ಅಧ್ಯಯನಗಳಲ್ಲಿ ಆರಂಭಿಕವಾಗಿ ಪಾಶ್ಚಿಮಾತ್ಯರು ಹೆಚ್ಚು ಅಧ್ಯಯನಕ್ಕೆ ತೊಡಗಿಸಿಕೊಂಡಿರುವುದು

ಕಂಡುಬರುತ್ತದೆ. ಇದರಿಂದ ಸಮಾಜಶಾಸ್ತ್ರ ಸಂರಚನಾತ್ಮಕ ಮತ್ತು ಕಾರ್ಯಾತ್ಮಕ ದೃಷ್ಟಿಕೋನ ಮನ್ನಣೆ ಪಡೆಯಿತು. ೨೦ನೇ ಶತಮಾನದ ಆದಿಭಾಗದಲ್ಲಿ ಇಂಗ್ಲೀಷ್ ಶಿಕ್ಷಣ ಮತ್ತು ಸಮಾಜ ವಿಜ್ಞಾನಗಳ ಬೆಳವಣಿಗೆಯಿಂದಾಗಿ ಅನೇಕ ಭಾರತೀಯ ಚಿಂತಕರು ಭಾರತೀಯ ಸಮಾಜದ ಅಧ್ಯಯನ ಆರಂಭಿಸಿದರು. ಅವರಲ್ಲಿ ಭಾರತದ "ಸಮಾಜಶಾಸ್ತ್ರ ಪಿತಾಮಹ" ಎಂದು ಕರೆಯಲ್ಪಡುವ ಜಿ ಎಸ್ ಘುರ್ರೆಯವರು ಹಾಗೂ ಗ್ರಾಮಾಧ್ಯಯನ, ಸಂಸ್ಕೃತಾನುಕರಣೆ ಪರಿಕಲ್ಪನೆ ನೀಡಿದ ಎಂ ಎನ್ ಶ್ರೀನಿವಾಸ್ ಇವರುಗಳು ಪಾಶ್ಚಿಮಾತ್ಯರ ಚಿಂತನಾ ಕ್ರಮವನ್ನು ಅನುಸರಿಸಿ ಅಧ್ಯಯನ ಮಾಡಿದರು. ಇವರು ಲಭ್ಯವಿರುವ ಪ್ರಾಚೀನ ಸಾಹಿತ್ಯದ ಮೂಲಕ ಭಾರತೀಯ ಸಮಾಜವನ್ನು ತಿಳಿಯುವ ಪ್ರಯತ್ನ ಮಾಡಿದರು. ಇದನ್ನೇ 'ದಿ ಬುಕ್ ವ್ಯೂ' ದೃಷ್ಟಿಕೋನ ಎನ್ನಲಾಗುತ್ತದೆ. ಇದರ ಮುಂದುವರಿದ ಭಾಗವಾಗಿ ಕಾಮ್ಟೆಯವರ ಪ್ರತ್ಯಕ್ಷ ಪ್ರಮಾಣವಾದ ಮತ್ತು ಡರ್ಖಿಂ ಅಧ್ಯಯನ ಕ್ರಮಗಳು ಆರಂಭವಾದವು. ಇದು ಸಾಮಾಜಿಕ ರಚನೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದರ ಜೊತೆಗೆ ಸಮಾಜದ ವಿವಿಧ ಉಪಭಾಗಗಳ ಕಾರ್ಯ ಚಟುವಟಿಕೆಗಳನ್ನು ಗ್ರಹಿಸುವಲ್ಲಿ ಸಫಲವಾಯಿತು. ಕ್ಷೇತ್ರಕಾರ್ಯ ಅಧ್ಯಯನಕ್ಕೂ ಮಹತ್ವ ನೀಡಿದ್ದರಿಂದ ಈ ದೃಷ್ಟಿಕೋನವು ಇಂದಿಗೂ ಭಾರತದಲ್ಲಿ ಪ್ರಾಮುಖ್ಯತೆ ಪಡೆದಿದೆ.

ಬುಡಕಟ್ಟುಗಳ ಅಧ್ಯಯನವನ್ನು ಮುಖ್ಯವಾಗಿ ಹಲವಾರು ಭಾಗಗಳಾಗಿ ವಿಂಗಡಿಸಿಕೊಂಡು ಪಾಶ್ಚಿಮಾತ್ಯರು ಹಾಗೂ ಭಾರತೀಯರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಅವುಗಳು ಯಾವ ಕಾಲಘಟ್ಟಗಳಲ್ಲಿ ಎನ್ನುವುದನ್ನು ಈ ಕೆಳಗಿನಂತೆ ತಿಳಿಯಬಹುದಾಗಿದೆ.

- ಮುಸ್ಲಿಮರ ಆಡಳಿತದಲ್ಲಿನ ಅಧ್ಯಯನ.
- ಬ್ರಿಟೀಷರ ಆಡಳಿತದಲ್ಲಿನ ಅಧ್ಯಯನ.
- ಯೋಜನೆಯ ಕಾಲದಲ್ಲಿ ಬುಡಕಟ್ಟುಗಳ ಅಧ್ಯಯನ.
- ಪ್ರವಾಸಿಗರ ಕಾಲದಲ್ಲಿನ ಬುಡಕಟ್ಟುಗಳ ಅಧ್ಯಯನ.
- ಕುಲಶಾಸ್ತ್ರೀಯ ಅಧ್ಯಯನ.
- ಮಾನವಶಾಸ್ತ್ರಜ್ಞರ ಕಾಲದಲ್ಲಿನ ಬುಡಕಟ್ಟುಗಳ ಅಧ್ಯಯನ.
- ಸಮಾಜ ವಿಜ್ಞಾನಿಗಳ ಕಾಲದಲ್ಲಿ ಬುಡಕಟ್ಟುಗಳ ಅಧ್ಯಯನ.

ಆನಂತರದಲ್ಲಿ ಭಾರತದ ಸ್ವಾತಂತ್ರ್ಯದ ನಂತರದಲ್ಲಿನ ಅಭಿವೃದ್ಧಿ ಶಿಕ್ಷಣ, ಶಾಲಾ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಹಲವಾರು ಅಧ್ಯಯನಗಳು ಕಂಡುಬರುತ್ತದೆ.

ಇದೇ ರೀತಿಯಲ್ಲಿನ ಬುಡಕಟ್ಟು ಅಧ್ಯಯನವು ವಿಶೇಷವಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಬುಡಕಟ್ಟು ಅಧ್ಯಯನ ವಿಭಾಗದ ಮೂಲಕ ನಡೆಯುತ್ತಿದೆ. ಇಲ್ಲಿ ಇಡೀ ಕರ್ನಾಟಕದಲ್ಲಿರುವ ಐವತ್ತು ಬುಡಕಟ್ಟುಗಳ ಬಗ್ಗೆ ಸಂಶೋಧನಾ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ. ಒಟ್ಟಾರೆ ಕರ್ನಾಟಕದ ಬುಡಕಟ್ಟುಗಳ ಕಲೆ, ಸಂಸ್ಕೃತಿ, ಅಧ್ಯಯನ, ಸಮಸ್ಯೆಗಳು ಒಟ್ಟು ಬುಡಕಟ್ಟುಗಳ ಬಗೆಗಿನ ವಿಷಯಗಳ ಕುರಿತು ಅಧ್ಯಯನ ಕೈಗೊಂಡಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ ಮೈಸೂರಿನಲ್ಲಿರುವ

ಬುಡಕಟ್ಟು ಸಂಶೋಧನಾ ಸಂಸ್ಥೆಯೂ ಸಹ ಕರ್ನಾಟಕದಲ್ಲಿ ಬುಡಕಟ್ಟುಗಳ ಬಗ್ಗೆ ಸಂಶೋಧಿಸಿ ಸರ್ಕಾರಕ್ಕೆ ಮಾಹಿತಿಯನ್ನು ಕೊಡುವ ಕೇಂದ್ರವಾಗಿದೆ.

**ಬುಡಕಟ್ಟು ಸಮುದಾಯದ ಅರ್ಥ ಮತ್ತು ವ್ಯಾಖ್ಯಾನ**

ವಸಂತಮ್ಮ ಎಚ್ ಎಂ, (ಸಂ), ೨೦೧೧ರಲ್ಲಿ 'ಸಮಾಜಶಾಸ್ತ್ರಜ್ಞರು' ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಪ್ರಕಟಿಸಿದ ಕೃತಿಯಲ್ಲಿ ಈ ಕೆಳಗಿನ ವ್ಯಾಖ್ಯಾನಗಳನ್ನು ದಾಖಲಿಸಿರುವುದು ಕಂಡುಬರುತ್ತದೆ.

ಶತ ಶತಮಾನಗಳಿಂದ ಆಧುನಿಕತೆಯ ಪ್ರಭಾವಕ್ಕೊಳಗಾಗದೆ ಗುಡ್ಡಗಾಡು, ಹಿಮಚ್ಛಾದಿತ ಪ್ರದೇಶ, ಗಿರಿಕಂದರ, ಕಣಿವೆ ಕಾನನಗಳಲ್ಲಿ ನೆಲೆಸಿ ತಮ್ಮದೇ ಆದ ರೂಢಿ, ಸಂಪ್ರದಾಯ, ನಂಬಿಕೆ, ಆಚರಣೆಗಳು ಹಾಗೂ ನೃತ್ಯ, ಹಾಡು, ಕ್ರೀಡೆ, ಬಯಲಾಟ ಮುಂತಾದ ಮನೋರಂಜಕ ಕಲೆಗಳನ್ನು ಮೈಗೂಡಿಸಿಕೊಂಡಿದ್ದು, ವೈದ್ಯ ಪದ್ಧತಿ, ಮಾಟಮಂತ್ರ ಮುಂತಾದ ವಿಶೇಷ ಜ್ಞಾನಗಳನ್ನು ತಮ್ಮದೇ ಆದ ವಿಧಿವಿಧಾನ ಹಾಗೂ ನಿಷೇಧಕಗಳನ್ನು, ನೈಸರ್ಗಿಕ ಕಾಯಿದೆ ಕಟ್ಟಳೆಗಳನ್ನು ಸುಸಂಘಟಿತ ಸಾಮಾಜಿಕ ವ್ಯವಸ್ಥೆಗಳನ್ನು ಹೊಂದಿರುವ ಸಂಸ್ಕೃತಿ ಸಂಪನ್ನ ಜನಾಂಗಗಳೇ ಬುಡಕಟ್ಟು ಸಮುದಾಯಗಳು.

"ಒಂದು ನಿರ್ದಿಷ್ಟ ಪ್ರದೇಶಗಳಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ, ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದು ಲಂಡನ್ನಿನ **"ರಾಯಲ್ ಆಂಥ್ರೋಪಾಲಾಜಿಕಲ್ ಇನ್ಸ್ಟಿಟ್ಯೂಟ್"** ವ್ಯಾಖ್ಯಾನಿಸಿದೆ.

ಯಾವ ಜನ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸುಖವಾಗಿ ಬದುಕಲು ಬಯಸುವುದೋ ಪ್ರಕೃತಿಜನ್ಯ ಉತ್ಪನ್ನಗಳನ್ನೇ ರಕ್ಷಿಸಲು ಯತ್ನಿಸುವುದೋ, ತನ್ನದೇ ಆದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೋ ಆ ಜನ ಸಮುದಾಯಕ್ಕೆ 'ಆದಿವಾಸಿ' ಅಥವಾ 'ಬುಡಕಟ್ಟು' ಸಮುದಾಯ ಎಂದು ಕರೆಯಬಹುದು.

**ಬುಡಕಟ್ಟು ಅಥವಾ ಆದಿವಾಸಿಗಳನ್ನು ಅನೇಕ ವಿದ್ವಾಂಸರು ಹಲವಾರು ರೀತಿಯಲ್ಲಿ ಅರ್ಥೈಸಿದ್ದಾರೆ.**

**ಡಬ್ಲ್ಯೂ.ಹೆಚ್.ಆರ್. ರಿವರ್ಸ್** ಎಂಬ ಸಮಾಜಶಾಸ್ತ್ರಜ್ಞರ ಪ್ರಕಾರ "ಒಂದೇ ಭಾಷೆಯನ್ನಾಡುವ ಒಂದೇ ರೀತಿಯ ಸಾಮಾಜಿಕ ರಚನೆಗಳನ್ನೊಳಗೊಂಡಿರುವ ಯುದ್ಧ ಹಾಗೂ ಇನ್ನಿತರ ಸಂದಿಗ್ಧ ಪರಿಸ್ಥಿತಿಗಳನ್ನು ಒಂದೇ ರೀತಿಯಾಗಿ ಎದುರಿಸುವ ಸರಳ ಜನಾಂಗದ ಸದಸ್ಯರೇ ಆದಿವಾಸಿಗಳು".

**ಮಾನವಶಾಸ್ತ್ರಜ್ಞ ಕ್ರೋಬರ್** (೧೯೪೮) ಪ್ರಕಾರ "ಬುಡಕಟ್ಟು ಸಮುದಾಯವು ಚಿಕ್ಕದಾಗಿ, ಒಂಟಿಯಾಗಿ ಹಾಗೂ ಒಂದಕ್ಕೊಂದು ಹೆಣೆದಂತಿರುವ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಅಳವಡಿಸಿಕೊಂಡು ವ್ಯವಸ್ಥಿತವಾಗಿ ರಚಿತವಾಗಿರುವ ಸಮಾಜ."

**ಪಿಡ್ಡಿಂಗಟನ್** ಅವರು (೧೯೬೦) "ಚಿಕ್ಕ ಚಿಕ್ಕ ಸಾಮಾಜಿಕ ಗುಂಪುಗಳಾಗಿ ಹಂಚಿ, ತಾಂತ್ರಿಕತೆಯಲ್ಲಿ ಬಹು ಅಲ್ಪ ರೀತಿಯ ಸ್ಥರದಲ್ಲಿದ್ದು, ಸಂಬಂಧ, ಪ್ರಾದೇಶಿಕತೆ ಹಾಗೂ ಆರ್ಥಿಕ ವಿಷಯಗಳಲ್ಲಿ ವೈಶಿಷ್ಟ್ಯತೆ ಹೊಂದದ ಇಂತಹ ಗುಣಗಳಿಂದೊಡಗೂಡಿದ ಜನಾಂಗಗಳನ್ನು ಬುಡಕಟ್ಟು ಅಥವಾ

ಪ್ರಾಚೀನ ಸಮುದಾಯಗಳು ಎಂದು ಕರೆಯಬಹುದು. ಪಶ್ಚಿಮದ ಮಾನವಶಾಸ್ತ್ರಜ್ಞರು ಗಾಢವಾದ ಸಂಸ್ಕೃತಿ ಚರಿತ್ರೆಯ ವಿಕಾಸದ ಕಥನಗಳನ್ನು ಬಿಡಿಸಿದರು. ಅದರಲ್ಲೂ ಮಾನವಶಾಸ್ತ್ರಜ್ಞರು ಅವ್ಯಕ್ತ ಸಂಸ್ಕೃತಿಗಳ ಬೇರುಗಳನ್ನು ಮೊದಲ ಬಾರಿಗೆ ಲೌಕಿಕವಾಗಿ ಪರಿಶೀಲಿಸಿದರು. ಮಾನವಿಕ ವಿಜ್ಞಾನಗಳ ಎಲ್ಲ ಆಲೋಚನೆಗಳು ನಾಗರಿಕತೆಗಳ ಚರಿತ್ರೆಯ ವಿಕಾಸವನ್ನು ಮಂಡಿಸಿದವು. ಚಾರ್ಲ್ಸ್ ಡಾರ್ವಿನ್‌ನ ವಿಚಾರಗಳು ಇಲ್ಲೆಲ್ಲ ತಳಹದಿಯಾಗಿ ಸ್ವತಃ ಅನೇಕ ಎಡಪಂಥಿಯರಿಗೂ ಕೂಡ ಪ್ರಭಾವಿಸಿದ್ದನ್ನು ಎಂದಿಗೂ ಮರೆಯಲಾಗದು" ಎಂದು ಹೇಳಿದ್ದಾರೆ.

**ಮ್ಯಾಥೂ ಆರ್ನಾಲ್ಡ್** ಅವರು "ಸಂಸ್ಕೃತಿ ವಿಕಾಸದ ಬಹುದೊಡ್ಡ ನೆಲೆ ನಿಸರ್ಗವೇ ಆಗಿದೆ. ಸಂಸ್ಕೃತಿಯ ವಿಕಾಸಕ್ಕೂ ನಿಸರ್ಗದ ವಿಕಾಸಕ್ಕೂ ಮಾನವ ವಿಕಾಸಕ್ಕೂ ನೇರದಾರಿ ಇದ್ದದ್ದರಿಂದ ಸಾಮಾಜಿಕ ಕಥನಗಳು ಲೌಕಿಕದ ವಿಕಾಸವನ್ನೇ ಮುಖ್ಯ ಆಕರವಾಗಿಸಿಕೊಂಡು ಮುನ್ನಡೆಯಬೇಕಾಯಿತು. ಉನ್ನತ ಚಿಂತನೆಯಿಂದ ಸಂಸ್ಕೃತಿ ವಿಕಾಸದ ಕಥನವನ್ನು ಆ ಮೂಲಕ ಬರೆಯಲು ಸಾಧ್ಯವಾಯಿತು ಎಂದು ತಿಳಿಸಿದ್ದಾರೆ

**ವೆಬರ್** ಅವರು ಸಮಾಜಶಾಸ್ತ್ರೀಯ ನೆಲೆಯಲ್ಲಿ ಇನ್ನೊಂದು ದಿಕ್ಕಿನ ಸಾಮಾಜಿಕ ಚರಿತ್ರೆಯ ತತ್ವವನ್ನು ನಿರೂಪಿಸಿದ್ದು "ಚರಿತ್ರೆಯ ಬೇರೆ ಬೇರೆ ಸಂಗತಿಗಳು ವೈವಿಧ್ಯ ನಿರ್ವಚನಕ್ಕೆ ತೆರೆದುಕೊಳ್ಳುವಂತೆ ಮಾಡಿತು" ಎಂದು ಹೇಳುತ್ತಾರೆ.

**ರಿವರ್ಸ್ ಪ್ರಕಾರ** "ಆದಿವಾಸಿಗಳು ಒಂದು ಸರಳ ಜನಾಂಗದ ಸದಸ್ಯರಾಗಿರುತ್ತಾರೆ. ಸಾಮಾನ್ಯವಾಗಿ ಒಂದೇ ಭಾಷೆಯನ್ನಾಡುತ್ತಾರೆ. ಒಂದೇ ಸಮಾಜವನ್ನು ರಚಿಸಿಕೊಂಡಿರುತ್ತಾರೆ. ಯುದ್ಧ ಹಾಗೂ ಇನ್ನಿತರ ಗಂಡಾಂತರಗಳನ್ನು ಒಂದೇ ರೀತಿಯಾಗಿ (ಸಾಮೂಹಿಕವಾಗಿ) ಎದುರಿಸುವ ಸರಳ ಸಮೂಹಗಳ ಸದಸ್ಯರೇ ಆದಿವಾಸಿಗಳು."

**ಮಜುಂದಾರ್** ಅವರು (೧೯೮೧) "ಹಲವಾರು ಕುಟುಂಬಗಳ ಸಮೂಹವು ಸಾಮಾನ್ಯ ನಾಮಾಂಕಿತವನ್ನು ಹೊಂದಿರುವ ನಿರ್ದಿಷ್ಟ ಪ್ರದೇಶದಲ್ಲಿ ನೆಲೆಸಿರುವ ವಿಶಿಷ್ಟ ಭಾಷೆಯನ್ನಾಡುವ, ವಿವಾಹ, ಉದ್ಯೋಗಗಳ ಬಗೆಗೆ ಕೆಲವೊಂದು ನಿಶ್ಚಿತ ಕ್ರಿಯಾ ವಿಧಾನವನ್ನು ಒಳಗೊಂಡಿರುವ ಪರಸ್ಪರ ಸಹಕಾರ ಹಾಗೂ ತಿಳುವಳಿಕೆಗಳ ಮೇಲೆ ನೆಲೆಸಿರುವ ಸಮೂಹವನ್ನು ಆದಿವಾಸಿ ಸಮುದಾಯ" ಎಂದು ಹೇಳಿದ್ದಾರೆ.

**ಎಸ್.ಸಿ. ದುಬೆ** ಅವರು "ಸಾಮೂಹಿಕ ಸ್ವರೂಪವನ್ನು ಹೊಂದಿರುವ, ವಿಸ್ತೃತವಾದ ಸಾಂಸ್ಕೃತಿಕ ಲಕ್ಷಣವನ್ನು ಸಾಮಾನ್ಯವಾಗಿ ಹಂಚಿಕೊಂಡಿರುವಂತಹ, ವಾಸ್ತವಿಕವಾದ ಅಥವಾ ವಾಸ್ತವಿಕವೆಂದು ನಂಬಿರುವಂತಹ ವಂಶಾವಳಿಯನ್ನು ಹೊಂದಿರುವ ಜನಾಂಗೀಯ ಮಾನವ ಸಮೂಹವೇ ಬುಡಕಟ್ಟು ಸಮೂಹ" ಎಂದು ಹೇಳಿದ್ದಾರೆ.

ಭಾರತದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಆದಿವಾಸಿಗಳನ್ನು ಅನುಸೂಚಿತ ಪಂಗಡದವರೆಂದು ಕರೆದು ೧೯೫೦ರ ಆಜ್ಞೆಯ ಪ್ರಕಾರ ಆದಿವಾಸಿಗಳ ಬಗ್ಗೆ ಈ ಕೆಳಕಂಡಂತೆ ವಿವರಿಸಿದ್ದಾರೆ.

**"ಆದಿವಾಸಿ"** ಎಂದರೆ, ಒಬ್ಬರನ್ನೊಬ್ಬರು ಅವಲಂಬಿಸಿರುವ, ಆರ್ಥಿಕವಾಗಿ ಹಿಂದುಳಿದಿರುವ, ಅವರ ಪ್ರವೃತ್ತಿಯಾದ ನಿಸರ್ಗದ ಸಂಪತ್ತನ್ನು ಸಂರಕ್ಷಿಸುವ ಅವರ ಆಸ್ತಿಯನ್ನು ಹೊಂದಿರುವ ಮತ್ತು

ಸಂಪ್ರದಾಯಗಳನ್ನು ಮುಂದುವರಿಯಲಿಚ್ಚಿಸುವ ಸಮೂಹಗಳು. ಹೀಗೆ ಬುಡಕಟ್ಟು ಸಮೂಹದ ಮೇಲಿನ ವ್ಯಾಖ್ಯಾನಗಳ ಆಧಾರದ ಮೇಲೆ ಬುಡಕಟ್ಟು ಸಮುದಾಯಗಳಿಗೆ ತಮ್ಮದೇ ಆದ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ರಚನೆ ಹಾಗೂ ಕಟ್ಟಳೆಗಳಿರುತ್ತವೆಂಬುದು ತಿಳಿದು ಬರುತ್ತದೆ. ಈ ರೀತಿ ಪರಿಶಿಷ್ಟ ಬುಡಕಟ್ಟುಗಳು ಎಂಬ ಪದಕ್ಕೆ ವಿವಿಧ ದೃಷ್ಟಿಕೋನದಿಂದ ಬೇರೆ ಬೇರೆ ವಿವರಣೆಗಳನ್ನು ಕೊಡುವ ಪ್ರಯತ್ನ ನಡೆದಿದೆ. ಅದರ ಜೊತೆಗೆ ಆದಿವಾಸಿಗಳನ್ನು ಬಹುಮಟ್ಟಿಗೆ ವನ್ಯಜೀವಿಗಳು ಎಂಬ ಅರ್ಥದಲ್ಲಿ ವಿವರಿಸಲಾಗಿದೆ.[೨]

**ಅಂಬೇಡ್ಕರ್ ಅವರ ದೃಷ್ಟಿಕೋನ:** ಭಾರತದ ಹಿಂದೂ ಸಮಾಜವು ಅನೇಕ ಮಹಡಿಗಳುಳ್ಳ ಗೋಪುರ, ಒಂದು ಮಹಡಿಯಲ್ಲಿ ಹುಟ್ಟಿದ ಜನ ಅಲ್ಲಿಯೇ ಸತ್ತು ಕೊಳೆಯಬೇಕು. ಅಸ್ಪೃಶ್ಯರು, ಬುಡಕಟ್ಟು ಸಮುದಾಯಗಳು ಬಡತನದಿಂದ ಜಾಗೃತರಾಗುವ ತನಕ ಈ ನಾಡಿಗೆ ಮುಕ್ತಿ ಇಲ್ಲ. ಭಾರತ ಸ್ವಾತಂತ್ರ್ಯವಾದರೆ ಸಾಲದು, ಧಾರ್ಮಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳಲ್ಲಿ ಭರತ ಖಂಡದಲ್ಲಿ ಹುಟ್ಟಿದವರೆಲ್ಲರೂ ಸಮಾನ ಹಕ್ಕುಳ್ಳವರಾಗಬೇಕು. ಪ್ರತಿಯೊಬ್ಬರೂ ವಿಕಾಸ ಹೊಂದಲು ಅನುಕೂಲವಾಗುವಂತೆ ಸಮಾನಾವಕಾಶಗಳನ್ನು ಕಲ್ಪಿಸಬೇಕು ಎಂದು ೧೯೨೦ರಲ್ಲಿಯೇ ಈ ಮಾತುಗಳನ್ನು ಬರೆದ ಡಾ. ಬಾಬಾ ಸಾಹೆಬ್ ಅಂಬೇಡ್ಕರ್ ಇವರು **"ಪ್ರಗತಿಗೆ ವಿದ್ಯೆಯೇ ಮೂಲ"** ಭಾರತಕ್ಕೆ ಮೊದಲು ಸಾಮಾಜಿಕ ಸ್ವಾತಂತ್ರ್ಯ ದೊರೆಯಬೇಕೆಂದರು. "ಆದಿಮ ಜನಾಂಗಗಳಿಗೆ ಅಭಿವೃದ್ಧಿಯ ಸಾಧ್ಯತೆ ಇಲ್ಲ ಎಂದರೆ ಅದಕ್ಕೆ ಕಾರಣ ಅವರು ಪ್ರತ್ಯೇಕತೆಯಲ್ಲೇ ಉಳಿದಿರಲು ನಿರ್ಧರಿಸಿರುವುದು. ಆದರೆ, ಒಮ್ಮೆ ಅವರು ತಮ್ಮ ಕಾಡಿನ ಮೂಲೆಗಳಿಂದ ಹೊರ ಬಂದು ನಾಗರಿಕತೆಯಲ್ಲಿ ಪಾಲ್ಗೊಳ್ಳತೊಡಗಿದರೆ ಅವರ ಪ್ರಗತಿಯ ಹಾದಿಯಲ್ಲಿ ಕಂಟಕವಿರಲಾರದು"[೩] ಎಂದು ಆದಿವಾಸಿಗಳ ಅಭಿವೃದ್ಧಿಯ ಕುರಿತ ಅಂಬೇಡ್ಕರ್ ನಿಲುವುಗಳನ್ನು ಪ್ರಭಾಕರ್ ಅವರು ತಮ್ಮ ಪುಸ್ತಕವಾದ 'ಆದಿವಾಸಿ ಆಖ್ಯಾನದ", 'ಡಾ ಅಂಬೇಡ್ಕರ್: ಆದಿವಾಸಿಗಳ ಕುರಿತು' ಲೇಖನದಲ್ಲಿ ತಿಳಿಸಿದ್ದಾರೆ.

ನಮ್ಮ ಭಾರತದ ಹಸಿರು ನೆಲದಲ್ಲಿ ಶತ ಶತಮಾನಗಳಿಂದ ಬಾಳಿರುವ ನಮ್ಮ ಮುಗ್ಧ ಬುಡಕಟ್ಟು ಸಮುದಾಯಗಳನ್ನು, ಗುಡ್ಡಗಾಡು ಜನರನ್ನು ಆಧುನಿಕ ಅರ್ಥವ್ಯವಸ್ಥೆಯಲ್ಲಿ ಹೆಚ್ಚು ಶೋಷಣೆಗೆ ಗುರಿ ಮಾಡುತ್ತಿದ್ದೇವೆ. ಆದಿವಾಸಿಗಳನ್ನು ನಾಗರಿಕತೆಗೆ ತರುವುದೆಂದರೆ, ಅವರನ್ನು **'ನಮ್ಮವರು'** ಎಂದು ಸ್ವೀಕರಿಸುವುದು. ಅವರೊಡನೆ ವಾಸಿಸುವುದು, ಜೊತೆಯವರೆಂಬ ಭಾವನೆಯನ್ನು ಬೆಳೆಸಿಕೊಳ್ಳುವುದು, ಮತ್ತು ಅವರನ್ನು ಪ್ರೀತಿಸುವುದು ಎಂದು ಅಂಬೇಡ್ಕರ್‌ರವರು ಅಭಿಪ್ರಾಯಪಟ್ಟಿದ್ದಾರೆ.

## ಕರ್ನಾಟಕದ ಬುಡಕಟ್ಟು ಸಮುದಾಯಗಳು

ಕರ್ನಾಟಕ ರಾಜ್ಯ ತನ್ನ ಒಡಲಲ್ಲಿ ಅಡಗಿಸಿಕೊಂಡಿರುವ ಸಾಮಾಜಿಕ, ಸಾಂಸ್ಕೃತಿಕ ಅಚ್ಚರಿಗಳ ಪೈಕಿ ಬುಡಕಟ್ಟು ಸಮುದಾಯವೂ ಒಂದು. ನಮ್ಮ ರಾಜ್ಯದಲ್ಲಿ ಒಟ್ಟು ೫೦ ಬುಡಕಟ್ಟುಗಳನ್ನು ಗುರುತಿಸಲಾಗಿದೆ. ಇವುಗಳಲ್ಲಿ ಎರಡು ಆದಿಮ ಬುಡಕಟ್ಟುಗಳಿವೆ. ಅವುಗಳೆಂದರೆ, ಜೇನುಕುರುಬ ಮತ್ತು ಕೊರಗ. ಇವನ್ನು ಸಮಾಜ ವಿಜ್ಞಾನಿಗಳು ನಿರ್ವಹಿಸುವ ಬುಡಕಟ್ಟು ಲಕ್ಷಣಗಳಿಗೆ ಹೋಲಿಸಲು ಸಾಧ್ಯವೇ ಇಲ್ಲ ಎನ್ನುವಷ್ಟು ದೂರದಲ್ಲಿವೆ ಎಂದು ಹೇಳುತ್ತಾರೆ. "ನಗರಗಳಲ್ಲಿ, ಹಳ್ಳಿಗಳಲ್ಲಿ ವಾಸ ಮಾಡುವ ಜನರನ್ನು ಬಿಟ್ಟು ಉಳಿದಂತೆ ಸಾಗರಗಳ ನಡುವಣ ದ್ವೀಪಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ,

ಕಾಡುಗಳಲ್ಲಿ, ಮರಳುಗಾಡುಗಳಲ್ಲಿ ಉಳಿದೆಲ್ಲ ಜನರಿಂದಲೂ ದೂರವಾಗಿ, ಪ್ರತ್ಯೇಕವಾಗಿ ಸಂಸ್ಕೃತಿಯಯಳ್ಳ ಜನರ ಸಮಾಜಗಳನ್ನು ಬುಡಕಟ್ಟುಗಳು ಎಂದು ಕರೆಯಲಾಗಿದೆ. ಈ ಸಮಾಜಗಳಲ್ಲಿ ರಕ್ತಸಂಬಂಧ ಅತ್ಯಂತ ಮುಖ್ಯವಾಗಿದ್ದು, ವ್ಯಕ್ತಿ–ವ್ಯಕ್ತಿಗಳ ಸಂಬಂಧಗಳು ಗಾಢವಾಗಿದ್ದು, ಸಾಂಸ್ಕೃತಿಕವಾಗಿ ಅತ್ಯಂತ ಬಿಗಿಯಾದ ನಿಯಮಗಳಿದ್ದು, ಹೊರಗಿನವರನ್ನು ಅನುಮಾನದಿಂದಲೇ ನೋಡುವ ಪ್ರವೃತ್ತಿ ಇವರಲ್ಲಿದೆ. ಈ ಸಾಮಾಜಿಕ ವರ್ಗಗಳ ಸಂಸ್ಕೃತಿ, ನಗರ ಮತ್ತು ಗ್ರಾಮೀಣ ಸಂಸ್ಕೃತಿಗಳಿಗಿಂತ ತೀರಾ ಭಿನ್ನವಾಗಿದ್ದು, ಅನಾಗರಿಕವೆಂಬಂತೆ ಕಾಣುತ್ತದೆ. ಈ ಜನರಿಗೆ ಪ್ರತ್ಯೇಕವಾದ ಭಾಷೆ ಮತ್ತು ಜೀವನ ಕ್ರಮಗಳಿರುತ್ತವೆ"

**ಚಾಮರಾಜನಗರ ಜಿಲ್ಲೆ :** ಚಾಮರಾಜನಗರ ಜಿಲ್ಲೆಯು ಮೈಸೂರು ಜಿಲ್ಲೆಯಲ್ಲಿ ೧೯೯೭ರವರೆಗೂ ಒಂದು ತಾಲೂಕು ಕೇಂದ್ರವಾಗಿತ್ತು. ೧೯೯೭ರ ಆಗಸ್ಟ್ ೧೫ರಂದು ಮೈಸೂರು ಜಿಲ್ಲೆಯಿಂದ ಪ್ರತ್ಯೇಕಗೊಂಡು ಸ್ವತಂತ್ರ ಜಿಲ್ಲೆಯಾಯಿತು. ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಹೋಲಿಸಿದರೆ ಚಾಮರಾಜನಗರ ಜಿಲ್ಲೆಯ ಆರ್ಥಿಕವಾಗಿ ಹಿಂದುಳಿದಿದೆ. ಇತರ ಜಿಲ್ಲೆಗಳ ಪ್ರಗತಿಯನ್ನು ನೊಡಿದಾಗ ಜಿಲ್ಲೆ ತುಲನಾತ್ಮಕವಾಗಿ ಅಭಿವೃದ್ಧಿಯಲ್ಲಿ ಕೊನೆಯ ಜಿಲ್ಲೆಯಾಗಿದೆ. ಜಿಲ್ಲೆಯಲ್ಲಿ ಗ್ರಾಮೀಣ ಸಂಸ್ಕೃತಿಯ ಮೆರುಗನ್ನು ಕಾಣುತ್ತೇವೆ. ಇಂದಿಗೂ ಇಲ್ಲಿಯ ಜನರು ಅನುಸರಿಸಿಕೊಂಡು ಬರುತ್ತಿರುವ ಜನಪದ ಕಲೆ, ಸಂಸ್ಕೃತಿ, ಆದಿವಾಸಿ ಸಂಸ್ಕೃತ, ಸಂಪ್ರದಾಯಗಳಲ್ಲಿ ಜೀವಂತಿಕೆಯ ಮೆರುಗಳನ್ನು ಕಾಣುತ್ತೇವೆ.

ಇತಿಹಾಸ ಪ್ರಸಿದ್ಧ ಮಹಾದೇಶ್ವರ ಬೆಟ್ಟ, ಬಿಳಿರಂಗನ ಬೆಟ್ಟ, ಹಿಮವದ್ ಗೋಪಾಲಸ್ವಾಮಿ ಇಂದಿಗೂ ತನ್ನ ಭಕ್ತಿಯ ಪರಕಾಷ್ಠೆಯನ್ನು ಉಳಿಸಿಕೊಂಡಿದೆ. ಅಲ್ಲದೆ ಸೋಲಿಗರೆ ಹೆಚ್ಚಾಗಿ ವಾಸಿಸುವ ಬಿಳಿಗಿರಿರಂಗನ ಬೆಟ್ಟದಲ್ಲಿ ಹಾಗೂ ಜಿಲ್ಲೆಯ ತುಂಬಾ ಶುದ್ಧ ಜನಪದೀಯ ಅಚ್ಚರಿಗಳು ಸಿಗುತ್ತವೆ.

ಕೇರಳ ಹಾಗೂ ತಮಿಳುನಾಡಿಗೆ ಸಂಪರ್ಕ ಕಲ್ಪಿಸುವ ಈ ಜಿಲ್ಲೆ ಎರಡು ರಾಜ್ಯಗಳ ಸೌಹಾರ್ದ ದ್ಯೋತಕವಾಗಿ ನೆಲೆನಿಂತಿದೆ. ಸಹಬಾಳ್ವೆಯೇ ನಮ್ಮ ಮೂಲಮಂತ್ರ ಎಂಬಂತೆ ಇಲ್ಲಿಯ ಜನರು ಅನ್ಯೋನ್ಯತೆಯಿಂದ ಜೀವಿಸುತ್ತಾರೆ. ರೇಷ್ಮೆಯಂತೆ ನವಿರಾಗಿರುವ ಇಲ್ಲಿಯ ಜನರ ಸಂಸ್ಕೃತಿ ಜಿಲ್ಲೆಯ ಪ್ರಸಿದ್ಧಿಗೆ ದ್ಯೋತಕವಾಗಿದೆ.

ಚಾಮರಾಜನಗರ ತಾಲೂಕಿನ ಪೂರ್ವ ಮತ್ತ ದಕ್ಷಿಣದ ಗಡಿಗಳಲ್ಲಿ ಬಿಳಿಗಿರಿರಂಗನ ಬೆಟ್ಟ ಶ್ರೇಣಿಯಿದ್ದು ತುಂಬಾ ದಟ್ಟವಾದ ಅರಣ್ಯ ಪ್ರದೇಶವಿದೆ. ಈ ಪ್ರದೇಶದ ಮುಖ್ಯ ನದಿ ಸುವರ್ಣಾವತಿ ಸೂರ್ಯನ ಹೊಂಗಿರಣದ ರಾಶಿಯಿಂದ ಹೊಳೆಯುವ ಇದನ್ನು ಹೊನ್ನಹೊಳೆ ಎನ್ನುತ್ತಾರೆ. ಇದು ದಕ್ಷಿಣ ಗಡಿಯಾಚೆ ನೀಲಗಿರಿ ಬೆಟ್ಟ ಸಾಲಿನಲ್ಲಿ ದಿಂಬಂ ಎಂಬಲ್ಲಿ ಹುಟ್ಟಿ ಈಶಾನ್ಯಾಭಿಮುಖವಾಗಿ ಹರಿದು ರಾಮಸಮುದ್ರ, ಹೆಬ್ಬಸೂರು, ಆಲೂರು, ಅಂಬಳೆ, ಯಳಂದೂರುಗಳ ಮೂಲಕ ಕೊಳ್ಳೇಗಾಲವನ್ನು ಸೇರಿ ಕೊನೆಗೆ ತಮಿಳುನಾಡನ್ನು ಸೇರುತ್ತದೆ. ಚಿಕ್ಕಹೊಳೆ ಇದರ ಉಪನದಿ. ತಾಲ್ಲೂಕಿನ ಬಹುಭಾಗ ಕಣ ಶಿಲೆಗಳ ಕಣಜವೆಂದೇ ಪ್ರಸಿದ್ಧವಾಗಿದೆ. ಕಪ್ಪು ಮತ್ತು ಕೆಂಪು ಮಣ್ಣಿನಿಂದ ಕೂಡಿದ ನುರುಜು ಮಿಶ್ರಿತ ಫಲವತ್ತಾದ ಮಣ್ಣಿನಿಂದ ಕೂಡಿದೆ. ಈ ಪ್ರದೇಶದ ಭೂ ಭಾಗದಲ್ಲಿ ಕರಿಕಲ್ಲಿನ ನಿಕ್ಷೇಪವಿದೆ. ಸುವರ್ಣಾವತಿ ಬಳಿ ಚೌಳು ಮಣ್ಣು ವಿಶೇಷವಾಗಿದೆ. ಈ ಜಿಲ್ಲೆಯಲ್ಲಿ ಐತಿಹಾಸಿಕ ಮಹತ್ವ ಪಡೆದಿರುವ ಅನೇಕ ಸ್ಥಳಗಳಿವೆ. ಈ ಜಿಲ್ಲೆಯಲ್ಲಿ ಹಬ್ಬ, ಹುಣ್ಣಿಮೆ, ಜಾತ್ರೆ, ಉತ್ಸವಗಳನ್ನು ಆಯಾಯ ಜನವರ್ಗಗಳು ಇಂದಿಗೂ ಮುಂದುವರಿಸಿಕೊಂಡು ಬರುತ್ತಿವೆ. ಈ ಜಿಲ್ಲೆಯಲ್ಲಿ ಸಾಹಿತ್ಯ ಸಂಪತ್ತೇ ತುಂಬಿದೆ.

ಇಷ್ಟೆಲ್ಲಾ ಭೌಗೋಳಿಕ ಹಿನ್ನೆಲೆಯನ್ನು ಹೊಂದಿರುವ ಚಾಮರಾಜನಗರದ ಹಿಂದಿನ ಹೆಸರು 'ಶ್ರೀಹರಿ ಕೊಠಾರ' ಎಂಬುದಾಗಿತ್ತು. ಇದರ ಅರ್ಥ ಧರ್ಮಾರ್ಥವಾದ ಸಾಮಗ್ರಿಗಳ ಸಂಗ್ರಹ ಶಾಲೆ. ಮುಮ್ಮಡಿ ಕೃಷ್ಣರಾಜ ಒಡಯರ್ ತಂದೆಯವರಾದ ಜಯಚಾಮರಾಜೇಂದ್ರ ಒಡೆಯರು ಕ್ರಿ.ಶ. ೧೭೭೬ರಲ್ಲಿ 'ಶ್ರೀಹರಿ ಕೊಠಾರ'ದಲ್ಲಿ ಜನಸಿದ್ದರಿಂದ ಕೃಷ್ಣರಾಜ ಒಡೆಯರು ತಮ್ಮ ತಂದೆಯ ನೆನಪಿಗಾಗಿ ಈ ಶ್ರೀಹರಿ ಕೊಠಾರವನ್ನು **"ಚಾಮರಾಜನಗರ"** ಎಂದು ನಾಮಕರಣ ಮಾಡಲಾಯಿತು. ಅವರ ನೆನಪಿಗಾಗಿ ಚಾಮರಾಜೇಶ್ವರಿ ದೇವಾಲಯವನ್ನು ಕಟ್ಟಿಸಿದರು.

ಇಂದು ಚಾಮರಾಜೇಂದ್ರ ಒಡೆಯರು ಜನಿಸಿದ "ಜನನ ಮಂಟಪ" ಹಳೆ ಬಸ್ ನಿಲ್ದಾಣದ ಪಕ್ಕದಲ್ಲಿ ಇಂದಿನ ಸ್ಮಾರಕವಾಗಿ ಉಳಿದಿದೆ. ಹೀಗೆ ಚಾಮರಾಜನಗರ ಜಿಲ್ಲೆ ಇತಿಹಾಸ ಗರ್ಭದಲ್ಲಡಗಿ ತನ್ನ ಒಳಪುಟಗಳನ್ನು ಇನ್ನು ಉಳಿಸಿಕೊಂಡಿದೆ. ಒಂದು ತಾಲೂಕು ಕೇಂದ್ರವಾಗಿದ್ದ ಚಾಮರಾಜನಗರ ಇಂದು ಜಿಲ್ಲಾ ಕೇಂದ್ರವಾಗಿ ಮಾರ್ಪಾಡು ಹೊಂದಿ ಸರ್ಕಾರದ ಕೆಲವು ಶಾಸನೀಯ ಸವಲತ್ತುಗಳ ಕಡೆ ಮುಖಮಾಡಿ ನಿಂತು ಬಯಲುನಾಡು. ಗಡಿನಾಡು ಹಾಗೂ ಜಿಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳ ಬೆಳವಣಿಗೆಯಲ್ಲಿ ಸೇರ್ಪಡೆಯಾಗಿ ತನ್ನ ಬೆಳೆವಣಿಗೆಯ ಹಾದಿಯನ್ನು ಕಾಣುತ್ತಿದೆ.

**ಚಾಮರಾಜನಗರ ಜಿಲ್ಲೆಯ ಮೇಲ್ಮೈ ಲಕ್ಷಣ:** ಚಾಮರಾಜನಗರ ಜಿಲ್ಲೆಯು ಸಮುದ್ರ ಮಟ್ಟದಿಂದ ೫೯೧ ಅಡಿ ಎತ್ತರದಲ್ಲಿದೆ. ಈ ಜಿಲ್ಲೆಯ ಸುತ್ತಲೂ ಬೆಟ್ಟಗುಡ್ಡಗಳು, ದಟ್ಟವಾದ ಅರಣ್ಯ ಪ್ರದೇಶವು ಆಕ್ರಮಿಸಿಕೊಂಡು ಕರ್ನಾಟಕದ ದಕ್ಷಿಣ ತುತ್ತತುದಿಯಲ್ಲಿದೆ. ಮಂಡ್ಯ, ಮೈಸೂರು ಮತ್ತು ನೆರರಾಜ್ಯಗಳಾದ ತಮಿಳುನಾಡಿನ ನೀಲಗಿರಿ ಮತ್ತು ಕೊಯಮತ್ತೂರು ಹಾಗೂ ಕೇರಳದ ಕಣ್ಣಾನೂರನ್ನು ನೆರೆಯನ್ನಾಗಿ ಹೊಂದಿದೆ. ಜಿಲ್ಲೆಯು ಕೊಳ್ಳೇಗಾಲ, ಯಳಂದೂರು, ಚಾಮರಾಜನಗರ ಮತ್ತು ಗುಂಡ್ಲುಪೇಟೆ ಈ ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿದೆ. ಹವಾಮಾನ ಹಿತಕರವಾಗಿದ್ದು, ಪ್ರಾಕೃತಿಕ ಸಂಪತ್ತು ಹೇರಳವಾಗಿ ಬುಡಕಟ್ಟುಗಳ ಜೀವನ ನಿರ್ವಹಣೆಗೆ ಅನುಕೂಲಕರವಾಗಿರುವುದರಿಂದಲೇ ಚಾಮರಾಜನಗರ ಜಿಲ್ಲೆಯಲ್ಲಿ ಸೋಲಿಗ ಸಮುದಾಯದವರು ಹೆಚ್ಚಾಗಿ ವಾಸವಾಗಿದ್ದಾರೆ.

**ಈ ಜಿಲ್ಲೆಯ ಪ್ರಾಕೃತಿಕ ಸಂಪತ್ತು:** ಚಾಮರಾಜನಗರ ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಶೇ. ೫೦ರಷ್ಟು ದಟ್ಟವಾದ ಅರಣ್ಯ ಪ್ರದೇಶದಿಂದ ಕೂಡಿದ್ದು, ಬೆಟ್ಟಗುಡ್ಡಗಳಿಂದ ಆವೃತಗೊಂಡಿದೆ. ಅರಣ್ಯದಲ್ಲಿ ಬೆಲೆಬಾಳುವಂತಹ ತೇಗ, ಹೊನ್ನೆ, ಬೀಟೆ, ಸಾಗುವಾನಿ, ನಂದಿ, ಶ್ರೀಗಂಧ ಮುಂತಾದ ಅತ್ಯಂತ ಬೆಲೆಬಾಳುವಂತಹ ಮರಗಳಲ್ಲದೇ ಕಾಡು ಜಾತಿಯ ವೈವಿಧ್ಯಮಯ ಔಷಧಿಯ ಗುಣಗಳನ್ನುಳ್ಳ ಗಿಡ, ಮರ, ಬಳ್ಳಿಗಳಿಂದ ಆವರಿಸಿದೆ. ಅಲ್ಲದೆ ಕಾಡಿನಲ್ಲಿ ದೊರೆಯುವಂತಹ ಅರಣ್ಯೋತ್ಪನ್ನಗಳಾದ ನೆಲ್ಲಿಕಾಯಿ, ಹಲಸಿನ ಹಣ್ಣು, ಬಿದಿರು, ನೇರಳೆಹಣ್ಣು, ಪಾಸೆ(ಪಾಚಿ), ಜೇನುತುಪ್ಪ, ಮೇಣ, ಮಾವು, ಅಂಟವಾಳ, ಅರಳೆಕಾಯಿ, ಹುಣಸೆಹಣ್ಣು, ಕಾಡುಅರಿಶಿಣ, ಕಾಡುಶುಂಠಿ, ಬೂರಗದ ಮೊಗ್ಗು, ಮೊಗಳಿ ಬೇರು, ಸೊಗದೆ ಬೇರು, ಮುಂತಾದ ಅರಣ್ಯ ಕಿರು ಉತ್ಪನ್ನಗಳಿಂದ ಚಾಮರಾಜನಗರ ಜಿಲ್ಲೆಯ ಅರಣ್ಯ ಪ್ರದೇಶವು ಬುಡಕಟ್ಟು ಜನರ ಬದುಕಿನ ಜೀವನಾಧಾರವಾಗಿದೆ. ವ್ಯವಸಾಯಕ್ಕೆ ಯೋಗ್ಯವಾದ ಸಮತಟ್ಟಾದ ಭೂಮಿ ಹೆಚ್ಚಾಗಿ ಕಂಡುಬರುವುದಿಲ್ಲ.

ಚಾಮರಾಜನಗರ ಜಿಲ್ಲೆಯು ಸೋಲಿಗರ ತವರೂರು ಆಗಿದೆ. ಈ ಜಿಲ್ಲೆಯಲ್ಲಿ ಸೋಲಿಗರನ್ನು ಬಿಟ್ಟರೆ ಜೇನುಕುರುಬರು, ಕಾಡುಕುರುಬರು(ಬೆಟ್ಟಕುರುಬರು), ಹಕ್ಕಿಪಿಕ್ಕಿ, ಮೇದ ಇನ್ನು ಮುಂತಾದ

ಸಮುದಾಯಗಳು ವಾಸಿಸುತ್ತವೆ. ಪಾಶ್ಚಿಮಾತ್ಯದ ಗಂಧಾಗಾಳಿಯೂ ಬೀಸದ, ಹಳೆಯ ಸೊಗಡಿನ ಜನಪದ ಸಂಸ್ಕತಿಯ ಜನ ಜೀವನವನ್ನು ಈ ಜಿಲ್ಲೆಯಲ್ಲಿ ಮಾತ್ರ ಕಾಣಲು ಸಾಧ್ಯ. ಇಲ್ಲಿ ಹೆಚ್ಚಾಗಿ ಬುಡಕಟ್ಟು ಜನರಿದ್ದಾರೆ ಅವರು ವಾಸಿಸುವ ಪೋಡು, ಹಾಡಿ, ಕಾಲೋನಿಗಳಲ್ಲಿ ಅಲ್ಲಿನ ಸಂಸ್ಕೃತಿ ಇದೆ. ಅವರ ರೂಢಿ-ಸಂಪ್ರದಾಯಗಳು, ಹಬ್ಬ-ಆಚರಣೆಗಳು, ಹಾಡು, ನೃತ್ಯ ಒಟ್ಟಾರೆಯಾಗಿ ಅವರ ಸಂಸ್ಕೃತಿ ಎಲ್ಲರನ್ನು ನಿಬ್ಬೆರಗುಗೊಳಿಸುತ್ತದೆ. ಚಾಮರಾಜನಗರ ಜಿಲ್ಲೆಯ ಒಟ್ಟು ಬುಡಕಟ್ಟು ಜನಸಂಖ್ಯೆಯಲ್ಲಿ ಪ್ರಮುಖ ಬುಡಕಟ್ಟುಗಳಾದ ಸೋಲಿಗರು, ೨೦೧೧ರ ಪ್ರಕಾರ ೧೬,೧೬೩ ಜನಸಂಖ್ಯೆಯನ್ನು ಹೊಂದಿದ್ದಾರೆ.

**ಕೋಷ್ಟಕ ೧.೧. ಚಾಮರಾಜನಗರ ಜಿಲ್ಲೆಯ ತಾಲೂಕುವಾರು ವಿವಿಧ ಬುಡಕಟ್ಟು ಕುಟುಂಬಗಳ ವಿವರ**

| ಕ್ರಸಂ. | ತಾಲೂಕು | ಕುಟುಂಬಗಳ ಸಂಖ್ಯೆ | | | |
|---|---|---|---|---|---|
| | | ಸೋಲಿಗರು | ಜೇನು ಕುರುಬರು | ಕಾಡು ಕುರುಬ | ಒಟ್ಟು |
| ೧ | ಚಾಮರಾಜನಗರ | ೧೪೦೩ | - | - | ೧೪೦೩ |
| ೨ | ಕೊಳ್ಳೇಗಾಲ | ೨೯೪೯ | - | - | ೨೯೪೯ |
| ೩ | ಗುಂಡ್ಲುಪೇಟೆ | ೮೮೯ | ೩೮೮ | ೧೦೮ | ೧೩೮೫ |
| ೪ | ಯಳಂದೂರು | ೬೬೯ | - | - | ೬೬೯ |
| **ಒಟ್ಟು** | | **೫೯೧೦** | **೩೮೮** | **೧೦೮** | **೬೪೦೬** |

ಮೂಲ: ಸರ್ಕಾರಿ ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಚಾಮರಾಜನಗರ, ೨೦೧೪-೧೫

**ಸೋಲಿಗರು:** ೨೦೧೧ರ ಜನಗಣತಿಯ ಪ್ರಕಾರ ಒಟ್ಟು ೩೩,೮೧೯ ಆದಿವಾಸಿಗಳಿದ್ದಾರೆ. ಕರ್ನಾಟಕದಲ್ಲಿ ವಿಶೇಷವಾಗಿ ಮೈಸೂರು, ಚಾಮರಾಜನಗರ, ಕೊಡಗು ಜಿಲ್ಲೆಗಳಲ್ಲಿ ಅರಣ್ಯ ಮತ್ತು ಬೆಟ್ಟಗುಡ್ಡಗಳು ಹೆಚ್ಚಾಗಿದ್ದು ಈ ಪ್ರದೇಶವು ಸೋಲಿಗರು ಸಮುದಾಯದ ನೆಲೆಗಳಾಗಿದೆ. ಕೊಳ್ಳೇಗಾಲ, ಯಳಂದೂರು, ಚಾಮರಾಜನಗರ, ಗುಂಡ್ಲುಪೇಟೆ ತಾಲ್ಲೂಕುಗಳಲ್ಲಿ ಅರಣ್ಯ ಹಾಗೂ ಬೆಟ್ಟ-ಗುಡ್ಡ ಪ್ರದೇಶಗಳಲ್ಲಿ ಅರಣ್ಯವಾಸಿ ಸೋಲಿಗ ಸಮುದಾಯವು(Forest Based Tribes) ಹೆಚ್ಚಾಗಿ ಕಂಡುಬರುತ್ತಾರೆ. ಚಾಮರಾಜನಗರ ಜಿಲ್ಲೆಯು **ಸೋಲಿಗರ ತವರೂರು** ಎಂದರೆ ತಪ್ಪಾಗಲಾರದು. ಅತೀ ಹೆಚ್ಚಿನ ಸಂಖ್ಯೆಯ ಸೋಲಿಗರು ಚಾಮರಾಜನಗರ ಜಿಲ್ಲೆಯಲ್ಲಿ ವಾಸವಾಗಿದ್ದಾರೆ.

ಸೋಲಿಗ ಸಮುದಾಯದವರು ಮೂಲತಃ ಒಂದೆಡೆ ನೆಲೆನಿಂತು ವ್ಯವಸಾಯವನ್ನು ಮಾಡಿ ಜೀವನವನ್ನು ಸಾಗಿಸಿದವರಲ್ಲ. ಹಿಂದೆ ಕುಮ್ರಿ ಬೇಸಾಯವನ್ನು ಮಾಡುತ್ತಾ, ಯಾರ ಒಡೆತನಕ್ಕೂ ಸೇರದೆ ಇದ್ದಂತಹ ಅರಣ್ಯ ಪ್ರದೇಶಗಳಲ್ಲಿ ಪ್ರಕೃತಿದತ್ತ ಉತ್ಪನ್ನಗಳಾದ ಗೆಡ್ಡೆ-ಗೆಣಸು, ಹಣ್ಣು-ಕಾಯಿ, ಜೇನುತುಪ್ಪ ಮುಂತಾದವುಗಳನ್ನು ಸಂಗ್ರಹಿಸಿ, ಕೆತ್ಲು ಬೇಸಾಯ ಮಾಡಿಕೊಂಡು ಬದುಕಿ ಬಾಳಿದ ಸಮುದಾಯವಿದು. ವರ್ತಮಾನದ ಅಗತ್ಯಕ್ಕೆ ಮಾತ್ರ ಹೆಚ್ಚಿನ ಕಾಳಜಿ ವಹಿಸುವ ಇವರು, ಭವಿಷ್ಯದ ಪ್ರಯೋಜನಕ್ಕಾಗಿ ಸಂಪತ್ತನ್ನು ಕೂಡಿ ಹಾಕುವವರಲ್ಲ. ಇಂದಿನ ಸರ್ಕಾರದ ಹಾಗೂ ಅರಣ್ಯ ಇಲಾಖೆಯ ಕಟ್ಟುನಿಟ್ಟಿನ ಕ್ರಮದಿಂದಾಗಿ ಒಂದೆಡೆ ನೆಲೆನಿಂತು ಕೃಷಿಕರಾಗಿ, ಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಿದ್ದಾರೆ.

ಸೋಲಿಗರು ಬುಡಕಟ್ಟು ತನ್ನದೇ ಆದ ನಿರ್ದಿಷ್ಟ ವಾಸಸ್ಥಾನ, ಸಾಮಾಜಿಕ, ಆರ್ಥಿಕ ರಚನೆ, ಭಾಷೆ, ಉಡುಗೆ ತೊಡುಗೆ, ಆಚಾರ-ವಿಚಾರ, ವಿಧಿ-ನಿಷೇಧಗಳನ್ನು ಹೊಂದಿದೆ. ಮೂಲತಃ ಮಾತೃ ಪ್ರಧಾನ ವ್ಯವಸ್ಥೆಯನ್ನು ಹೊಂದಿದ್ದು ಇತರ ಸಮುದಾಯಗಳ ಸಂಪರ್ಕದಿಂದ ಪಿತೃಪ್ರಧಾನ ವ್ಯವಸ್ಥೆಗೆ ಜಾರಿದೆ. ಆಧುನಿಕ ಜಗತ್ತು ಈ ಸಮುದಾಯದ ಮೇಲೆ ಹೇಗೆ ಪ್ರಭಾವ ಬೀರಿದೆ, ಅದರ ಸ್ವರೂಪವೇನು ಎಂಬುದನ್ನು ನೋಡಬೇಕಾದ ಅವಶ್ಯಕತೆ ಇದೆ. ಆರ್ಥಿಕ, ಶೈಕ್ಷಣಿಕವಾಗಿ ಹಿಂದುಳಿದ ಇವರು ಹಲವು ಬಗೆಯ ಸಾಮಾಜಿಕ ಹಿನ್ನಡೆಯನ್ನು ಅನುಭವಿಸುತ್ತಿದ್ದಾರೆ. ಈ ಕಾರಣಕ್ಕಾಗಿ ಚಾಮರಾಜನಗರ ಜಿಲ್ಲೆಯ ಸೋಲಿಗರು ಬುಡಕಟ್ಟು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಈ ಅಧ್ಯಯನದಲ್ಲಿ ಅಧ್ಯಯನ ಮಾಡಲಾಗಿದೆ.

## ೧.೨. ಅಧ್ಯಯನದ ಉದ್ದೇಶಗಳು

೧. ಚಾಮರಾಜನಗರ ಜಿಲ್ಲೆಯಲ್ಲಿ ನೆಲೆಸಿರುವ ಸೋಲಿಗರು ಸಮುದಾಯದ ಹಿನ್ನೆಲೆ ಮತ್ತು ಪುರಾಣ, ಕಥೆಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

೨. ಸೋಲಿಗರು ಸಮುದಾಯದ ಸಾಂಸ್ಕೃತಿಕ ವ್ಯವಸ್ಥೆ, ಸಾಮಾಜಿಕ ರಚನೆಯ ಬಗ್ಗೆ ಅಧ್ಯಯನ ಮಾಡಲಾಗಿದೆ.

೩. ಸೋಲಿಗರು ಸಮುದಾಯದ ಧಾರ್ಮಿಕ ವ್ಯವಸ್ಥೆ ಕುರಿತು ಅಧ್ಯಯನ ಮಾಡಲಾಗಿದೆ.

೪. ಸೋಲಿಗರ ಆರ್ಥಿಕ ಸ್ಥಿತಿ ಅಧ್ಯಯನ ಮಾಡಲಾಗಿದೆ.

೫. ಸೋಲಿಗರ ಶೈಕ್ಷಣಿಕ ಮತ್ತು ಜಾಗತಿಕ ಸ್ಥಿತಿಯ ಸಾಧಕ-ಬಾಧಕಗಳನ್ನು ಅಧ್ಯಯನ ಮಾಡಲಾಗಿದೆ.

## ೧.೩. ಅಧ್ಯಯನ ವ್ಯಾಪ್ತಿ

ಪ್ರಸ್ತುತ ಅಧ್ಯಯನ ಕ್ಷೇತ್ರವು ಚಾಮರಾಜನಗರ ಜಿಲ್ಲೆಯ ಭೌಗೋಳಿಕ ಪ್ರದೇಶವಾಗಿದೆ. ಈ ಪ್ರದೇಶದ ಅರಣ್ಯಗಳ ಅಂಚು, ಅರಣ್ಯದೊಳಗೆ ಪೋಡು, ಕಾಲೋನಿಗಳಲ್ಲಿ ವಾಸಿಸುತ್ತಿರುವ ಸೋಲಿಗರು ಬುಡಕಟ್ಟಿನ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ವ್ಯವಸ್ಥೆಗೆ ಸಂಬಂಧಿಸಿದೆ.

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಅರಣ್ಯದಲ್ಲಿ ವಾಸಿಸುತ್ತಿರುವ ಸೋಲಿಗರ ಸ್ಥಿತಿಯನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ. ಸಂಶೋಧನ ಅಧ್ಯಯನಕ್ಕೆ ಸೋಲಿಗರ ತವರೂರಾದ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ, ಯಳಂದೂರು, ಚಾಮರಾಜನಗರ, ಗುಂಡ್ಲುಪೇಟೆ ತಾಲೂಕುಗಳು ಈ ಅಧ್ಯಯನದ ವಾಪ್ತಿಗೆ ಸೇರಿವೆ.

## ೧.೪. ಅಧ್ಯಯನದ ಮಹತ್ವ

ಭಾರತ ಒಂದು ಕಾಲಕ್ಕೆ ಪರ್ವತಾರಣ್ಯಗಳಿಂದ ಕೂಡಿದ್ದು, ಅಲ್ಲಿಯ ಮೂಲನಿವಾಸಿಗಳು ಭಾರತೀಯ ಇತಿಹಾಸಕ್ಕೆ ಯಾವ ಆಕರಗಳನ್ನೂ ಒದಗಿಸಲು ಅಸಮರ್ಥರಾಗಿರುವುದೇ ಆಗಿದೆ. ಈ ಹಿನ್ನೆಲೆಯಲ್ಲಿ ಇನ್ನೂ ಆದಿಮ ಬುಡಕಟ್ಟಾಗಿ ಉಳಿದಿರುವ ಸೋಲಿಗ ಸಮಾಜದ ವಿವಿಧ ಆಯಾಮಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಕೆಳಸ್ತರದ, ನಿರ್ಲಕ್ಷಿತ ಸಮುದಾಯದ ಒಂದು ಹೊಸ ಶಿಸ್ತಿನ

ವಿಸ್ತರಣೆಯಾಗಿ, ನೂರಾರು ವರ್ಷಗಳಿಂದ ಅರಣ್ಯವನ್ನು ಅವಲಂಬಿಸಿ ಬದುಕನ್ನು ನಡೆಸುತ್ತಿರುವ ಸೋಲಿಗರ ಸಾಮಾಜಿಕ ಸಂಗತಿಗಳನ್ನು ಅಧ್ಯಯನ ಮಾಡಲಾಗಿದೆ. ಸೋಲಿಗರ ಮೂಲ, ಸಾಮಾಜಿಕ ವ್ಯವಸ್ಥೆ, ಕುಟುಂಬ, ವಿವಾಹ, ಪಾರಂಪರಿಕ ಜ್ಞಾನ, ಸ್ಥಳೀಯ ಜ್ಞಾನ, ಪಂಚಾಯ್ತಿ ಪದ್ಧತಿಯಲ್ಲಿ ಯಜಮಾನ, ಕೋಲುಕಾರ, ಪಟ್ಟಕಾರ, ಇವರುಗಳ ಪಾತ್ರ, ಪ್ರಕೃತಿಯೊಂದಿಗಿನ ಸಂಬಂಧಗಳು– ಹೀಗೆ ಸೋಲಿಗರ ಸಾಮಾಜಿಕ ವ್ಯವಸ್ಥೆಯನ್ನು ಅಧ್ಯಯನ ಮಾಡುವುದು.

ಸೋಲಿಗ ಸಮುದಾಯದ ನಂಬಿಕೆ, ಆಚರಣೆಗಳು, ಪ್ರಕೃತಿಯ ನಡುವಿನ ಸಂಬಂಧ ಹಾಗೂ ಹಬ್ಬಗಳಾದ ರೊಟ್ಟಿಹಬ್ಬ, ಹೊಸ ರಾಗಿಹಬ್ಬ, ಸಂಕ್ರಾಂತಿ ಹಬ್ಬ ಹಾಗೂ ಧಾರ್ಮಿಕ ವ್ಯವಸ್ಥೆ ಪಾರಂಪರಿಕತೆಯಿಂದ ಆಧುನಿಕತೆಯೆಡೆಗೆ ಸಾಗುತ್ತಿರುವುದರ ಬಗ್ಗೆ ಅಧ್ಯಯನ ಮಾಡುವುದು ಮಹತ್ವವಾಗಿದೆ.

ಜಗತ್ತಿನ ಜೀವ ಮೂಲಗಳು, ನಾಗರಿಕತೆಗಳು ಹುಟ್ಟಿರುವುದೇ ನದಿ ಕೊಳ್ಳಗಳಲ್ಲಿ. ಜೊತೆಗೆ ನಮ್ಮೆಲ್ಲ ನಾಗರಿಕತೆಗಳಿಗೂ ಕಾಡುಗಳೇ ಮೂಲಸ್ಥಾನ. ಕಾಡು ಎಂಬ ಕಲ್ಪನೆ ಆಧುನಿಕ ಮಾನವನಿಗೆ ರೋಚಕತೆ, ಮೋಜು, ಮನರಂಜನೆ, ಅಧ್ಯಯನ ವಸ್ತುವಾಗಿದೆ. ಆದರೆ ಈ ಕಾಡು ಬುಡಕಟ್ಟು ಜನರ ಜೀವನದ ಮೂಲ ಎಂಬುದನ್ನು ಮರೆಯಲಾಗಿದೆ. ಪ್ರಾಣಿ–ಪಕ್ಷಿಗಳನ್ನು, ಗಿಡ–ಮರಗಳನ್ನು ದೇವರೆಂದು ಭಾವಿಸಿ ಅವುಗಳೊಂದಿಗೆ ಅನ್ಯೋನ್ಯವಾಗಿ ಬದುಕಿದ್ದವರ ಬದುಕನ್ನು ದಾಖಲಿಸಲಾಗಿದೆ.

ಪ್ರಸ್ತುತದಲ್ಲಿ ಸೊಲಿಗ ಸಮುದಾಯದ ಆರ್ಥಿಕ ವ್ಯವಸ್ಥೆ, ವ್ಯವಸಾಯ, ಸುಸ್ಥಿರ ಜೀವನದ ಬದುಕನ್ನು ತಿಳಿದುಕೊಳ್ಳುವುದು, ಕಿರುಅರಣ್ಯ ಸಂಗ್ರಹಣೆ, ಕೂಲಿ, ವಲಸೆ ಕೂಲಿ, ಅರಣ್ಯ ಇಲಾಖೆಯಲ್ಲಿನ ಕೆಲಸ ಇತ್ಯಾದಿ ಆರ್ಥಿಕ ಮೂಲಗಳ ಬಗ್ಗೆ ಅಧ್ಯಯನ ಮಾಡಿ ಅವರ ವಾಸ್ತವ ಆರ್ಥಿಕ ಸ್ಥಿತಿಗತಿಯ ಬಗ್ಗೆ ತಿಳಿಯುವುದು ಈ ಅಧ್ಯಯನದ ಮಹತ್ವದ್ದಾಗಿದೆ.

ಸೋಲಿಗರು ಮೊದಲಿನಿಂದಲೂ ಕುಮ್ರಿ ಬೇಸಾಯ(Shifting cultivation) ಅವಲಂಬಿತರು. ಇವರು ಅನಾದಿಕಾಲದಿಂದಲೂ ಪೋಡು ವ್ಯವಸ್ಥೆ, ವ್ಯವಸಾಯಕ್ಕಾಗಿ ಬೆಟ್ಟ, ಗುಡ್ಡ, ಕಾನನಗಳ ಮಧ್ಯೆ, ತಪ್ಪಲಿನಲ್ಲಿ ರಾಗಿ, ಜೋಳ, ಅವರೆ, ಕೀರೆ, ಸಾಸಿವೆ ಹೀಗೆ ಹಲವಾರು ಬೆಳೆಗಳನ್ನು ಹಣ್ಣು,ಹಂಪಲುಗಳನ್ನು ಬೆಳೆದು ಜೀವನ ಸಾಗಿಸಿದವರು. ಈ ಕಾರಣದಿಂದ ಪ್ರಸ್ತುತ ಅಧ್ಯಯನವು ಸೋಲಿಗ ಬುಡಕಟ್ಟು ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಮತ್ತು ಆರ್ಥಿಕ ಸ್ಥಿತಿಗತಿ ಹಾಗೂ ಬದಲಾವಣೆ ಕುರಿತು ಸಮಾಜಶಾಸ್ತ್ರಿಯ ದೃಷ್ಟಿಯಿಂದ ಮುಖ್ಯವಾದದ್ದು ಮತ್ತು ಮಹತ್ವವಾದದ್ದು.

**೧.೫. ಅಧ್ಯಯನ ವಿಧಾನ**

ಸೋಲಿಗರು ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದ ಅದರಲ್ಲೂ ಚಾಮರಾಜನಗರ ಜಿಲ್ಲೆಯ ಅರಣ್ಯ ಮತ್ತು ಬೆಟ್ಟಗುಡ್ಡಗಳ ಕಾಡ ಅಂಚಿನಲ್ಲಿರುವ ಈ ಬುಡಕಟ್ಟು ಪ್ರದೇಶಗಳಲ್ಲಿ ತಿರುಗಾಟ ಮಾಡಿ ಈ ವಿಷಯ ಬಗೆಗಿನ ಲೇಖನಗಳು, ಅನುಭವಗಳು ಹಾಗೂ ವಿಷಯಗಳನ್ನು ಅರಿತುಕೊಂಡು, ಸಂಪನ್ಮೂಲ ವ್ಯಕ್ತಿಗಳಿಂದ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

**ಅವಲೋಕನ ವಿಧಾನ**

ಸೋಲಿಗರು ಬುಡಕಟ್ಟುಗಳ ಮಾಹಿತಿ ಪಡೆಯಲು ಕ್ಷೇತ್ರಕಾರ್ಯದಲ್ಲಿ ಅವಲೋಕನ ವಿಧಾನ

ಪ್ರಮುಖವಾದುದು. ಈ ಬುಡಕಟ್ಟುಗಳ ಜೊತೆ ಸಹಭಾಗಿಯಾಗಿ ಬುಡಕಟ್ಟುಗಳ ಅಂತರಾಳದಲ್ಲಿ ಹುದುಗಿರುವ ಜ್ಞಾನವನ್ನು ಮತ್ತು ಅವರ ಬದುಕಿನ ಸವಾಲುಗಳನ್ನು ಕುರಿತು ಮಾಹಿತಿಯನ್ನು ಪಡೆದು ಚರ್ಚಿಸಿ ಅಧ್ಯಯನಕ್ಕೆ ಪೂರಕವಾಗುವಂತೆ ರೂಪಿಸಿಕೊಳ್ಳಲಾಗಿದೆ. ಚಾಮರಾಜನಗರ ಜಿಲ್ಲೆಗಳಲ್ಲಿ ಕಂಡು ಬರುವ ಸೋಲಿಗ ಸಮುದಾಯದ ೩೨೪ ಮನೆಗಳನ್ನು ಸಮೀಕ್ಷೆ ಮಾಡುವುದರ ಮೂಲಕ ಅಗತ್ಯವಾದ ಮಾಹಿತಿಗಳನ್ನು ಸಂಪೂರ್ಣವಾಗಿ ಸಂಗ್ರಹಿಸಿಕೊಂಡು ಸಮುದಾಯಗಳ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮತ್ತು ಅವಲೋಕನ ಮಾಡಲು ತುಂಬಾ ಸಹಾಯಕಾರಿಯಾಗಿದೆ.

**ಪ್ರಶ್ನಾವಳಿ ವಿಧಾನ**

ಚಾಮರಾಜನಗರ ಜಿಲ್ಲೆಯ ಪ್ರದೇಶದಲ್ಲಿ ನೆಲೆಸಿರುವ ಸೋಲಿಗರ ಬುಡಕಟ್ಟನ್ನು ಅಧ್ಯಯನ ಮಾಡಲು ಹಾಗೂ ಮಾಹಿತಿ ಪಡೆಯಲು ಪ್ರಶ್ನಾವಳಿಯು ಮುಖ್ಯ ಪಾತ್ರವಹಿಸುತ್ತದೆ. ಹಾಗಾಗಿ ಸಮುದಾಯಕ್ಕೆ ಸಂಬಂಧಿಸಿದಂತೆ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಪ್ರಮುಖ ಪ್ರಶ್ನೆಗಳ ಜೊತೆಗೆ ಸಂದರ್ಭಕ್ಕನುಸಾರವಾಗಿ ಪ್ರಶ್ನೆಗಳನ್ನು ಕೇಳಿ ಮಾಹಿತಿ ಪಡೆಯಲಾಗಿದೆ.

**ಸಂದರ್ಶನ ವಿಧಾನ**

ಸೋಲಿಗರು ಸಮುದಾಯ ದುಡಿಮೆ ಇಲ್ಲದೆ ಖಾಲಿ ಕುಳಿತುಕೊಳ್ಳುವ ಸಮುದಾಯವಲ್ಲ. ಆದ್ದರಿಂದ ಬದುಕಿನಲ್ಲಿ ಸ್ವಾವಲಂಬಿಗಳಾಗಬೇಕೆಂಬ ತವಕದಿಂದ ದಿನನಿತ್ಯ ಹೋರಾಟದಲ್ಲಿಯೇ ಜೀವನ ಸಾಗಿಸುವವರಾಗಿದ್ದಾರೆ. ಅದಕ್ಕಾಗಿ ಅವರು ಅರಣ್ಯ ಪ್ರದೇಶಗಳಲ್ಲಿ ಸಿಗುವ ಕಿರು ಉತ್ಪಾನ, ಕೂಲಿ ಕೆಲಸ, ವಲಸೆ ಕೂಲಿ, ಕೃಷಿ ಕೂಲಿಕಾರರಾಗಿ ಜೀವಿಸುತ್ತಿದ್ದಾರೆ. ಇಂತಹ ಬುಡಕಟ್ಟನ್ನು ಕುರಿತು ವಿಶಿಷ್ಟ ರೀತಿಯಲ್ಲಿ ಸಂದರ್ಶನ ಮಾಡಿ ಮಾಹಿತಿ ಪಡೆಯಲಾಗಿದೆ.

**ಸಂಖ್ಯಾಶಾಸ್ತ್ರೀಯ ವಿಧಾನ**

ಸಮುದಾಯಕ್ಕೆ ಸಂಬಂಧಿಸಿದಂತೆ ಅದರಲ್ಲೂ ಮುಖ್ಯವಾಗಿ ಜಿಲ್ಲೆ, ರಾಜ್ಯ ಮತ್ತು ಇತರೆ ಸ್ವರೂಪದ ಅಂಕಿಅಂಶಗಳನ್ನು ಉಪಯೋಗಿಸಿಕೊಂಡು ಈ ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿಯನ್ನು ಪಡೆದು ಮಹಾಪ್ರಬಂಧವನ್ನು ಕಟ್ಟಿಕೊಡಲಾಗಿದೆ.

**ಚಾರಿತ್ರಿಕ ವಿಧಾನ**

ಸೋಲಿಗರು ರಾಜ್ಯದಲ್ಲಿಯೇ ಚಿಕ್ಕ ಸಮುದಾಯಗಳಲ್ಲಿ ಒಂದಾಗಿದ್ದು ವಿಶಿಷ್ಟ ಸಮುದಾಯವಾಗಿದೆ. ಆದ್ದರಿಂದ ಐತಿಹಾಸಿಕವಾಗಿ ಈ ಸಮುದಾಯವನ್ನು ನೋಡಲು ಇವರ ಕುರಿತು ಇರುವ ಕೆಲವು ಕೃತಿಗಳಿಂದ ವಿದ್ವಾಂಸರ ಸಂದರ್ಶನದಿಂದ, ಪತ್ರಿಕಾ ಲೇಖನಗಳಿಂದ ಮತ್ತು ಸರ್ಕಾರಿ ಪ್ರಕಟಣೆಗಳಿಂದ ಮಾಹಿತಿ ಪಡೆದುಕೊಂಡು ಅಧ್ಯಯನ ವಿಷಯ ಸತ್ವಯುತವಾಗಿ ಕಟ್ಟಿಕೊಡಲಾಗಿದೆ.

**ಮಾದರಿ ನಮೂನೆ ಆಯ್ಕೆ**

ಸೋಲಿಗರ ಬುಡಕಟ್ಟು ಚಾಮರಾಜನಗರ ಜಿಲ್ಲೆಯಲ್ಲಿ ನೆಲೆಗೊಂಡಿದೆ. ಆದ್ದರಿಂದ ಸಂಶೋಧನಾ ವ್ಯಾಪ್ತಿಗೆ ಸಂಬಂಧಿಸಿದಂತೆ ಈ ಸಮುದಾಯವು ಜಿಲ್ಲೆಯ ಚಾಮರಾಜನಗರ, ಕೊಳ್ಳೇಗಾಲ, ಯಳಂದೂರು ಮತ್ತು ಗುಂಡ್ಲುಪೇಟೆ ತಾಲೂಕಿನಲ್ಲಿ ದಟ್ಟವಾಗಿ ನೆಲೆಗೊಂಡಿದೆ. ಈ ನಾಲ್ಕು ತಾಲೂಕುಗಳಲ್ಲಿ ಪ್ರತಿ

ತಾಲೂಕಿಗೆ ೨ ಪೋಡು/ಕಾಲೋನಿಗಳನ್ನು ಸೋಲಿಗರ ನೆಲೆಗಳನ್ನು ಯಾದೃಚ್ಛಿಕ ನಮೂನೆಯ ಮೂಲಕ ಆಯ್ಕೆ ಮಾಡಿಕೊಂಡು ಕುಟುಂಬಗಳ ಸಮೀಕ್ಷೆಯನ್ನು ಮಾಡಿ ಅಧ್ಯಯನ ಮಾಡಲಾಗಿದೆ.

**ಧ್ವನಿಮುದ್ರಣ ಮತ್ತು ಛಾಯಾಚಿತ್ರ ವಿಧಾನ**

ಮೂಲ ಬುಡಕಟ್ಟು ಸಮುದಾಯವಾದ ಸೋಲಿಗರು ಬುಡಕಟ್ಟು ಕುರಿತು ಮಾಹಿತಿ ಪಡೆಯುವ ಸಮಯದಲ್ಲಿ ಇವರು ಬದುಕಿನಲ್ಲಿ ಅನುಭವಿಸಿದ ಬವಣೆಗಳನ್ನು ಮತ್ತು ಇವರು ಇತರೆ ಸಮುದಾಯದೊಂದಿಗೆ ಹೊಂದಿರುವ ಸಂಬಂಧಗಳು, ವಸತಿ ವ್ಯವಸ್ಥೆ, ವೇಷಭೂಷಣ, ಕೆಲಸದ ಸ್ಥಿತಿಗತಿ, ಮತ್ತಿತರ ವಿಷಯಗಳ ಧ್ವನಿ ಮುದ್ರಣ ಮಾಡಿ ಪರಿಷ್ಕರಿಸಿ ಅಧ್ಯಯನಕ್ಕೆ ಪೂರಕವಾಗುವಂತಹ ಅಂಶಗಳನ್ನು ತೆಗೆದುಕೊಂಡು ಮಹಾಪ್ರಬಂಧ ರಚಿಸಲಾಗಿದೆ.

**ಆನುಷಂಗಿಕ ವಿಧಾನ**

ಈ ಅಧ್ಯಯನದಲ್ಲಿ ಸೋಲಿಗರು ಬುಡಕಟ್ಟು ಕುರಿತು ಇಲ್ಲಿಯವರೆಗೆ ಬಂದಿರುವ ಕೃತಿಗಳು, ಗೆಜೆಟಿಯರ್‌ಗಳು, ಪತ್ರಿಕೆಗಳು, ಬಿಡಿ ಲೇಖನಗಳು, ಜನಗಣತಿ ವರದಿಗಳು, ಮಾನವಾಭಿವೃದ್ಧಿ ವರದಿ, ಪಂಚಾಯತ್ ರಾಜ್ ವ್ಯವಸ್ಥೆಯ ಸಾಮಾನ್ಯ ಮಾಹಿತಿಗಳು, ಹಾಗೂ ಪರಿಶಿಷ್ಟ ಪಂಗಡಗಳ ಕುರಿತಾಗಿ ಬಂದಿರುವ ವರದಿಗಳು ಹಾಗೂ ಇತರ ಮೂಲಗಳಿಂದ ಮಾಹಿತಿಗಳನ್ನು ಪಡೆಯಲಾಗಿದೆ. ಚಾಮರಾಜನಗರ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಸೋಲಿಗರು ಬುಡಕಟ್ಟು ಕುಟುಂಬಗಳು ನೆಲೆಸಿವೆ. ಸೋಲಿಗ ಸಮುದಾಯದ ಬಹುತೇಕ ಸದಸ್ಯರನ್ನು ನೇರವಾಗಿ ಸಮೀಕ್ಷಿಸಿ ಸಂದರ್ಶನ ನಡೆಸಲಾಯಿತು. ಈ ಅಧ್ಯಯನದಲ್ಲಿ ಮಾಹಿತಿಯನ್ನು ಪಡೆಯಲು ಮುಖ್ಯವಾಗಿ ಎರಡು ವಿಧಗಳನ್ನು ಅನುಸರಿಸಲಾಗಿದೆ. ಮೊದಲನೆಯದಾಗಿ ಅಧ್ಯಯನಕ್ಕಾಗಿ ಆಯ್ದ ಪೋಡು/ಕಾಲೋನಿಗಳಲ್ಲಿ ಸೋಲಿಗ ಸಮುದಾಯದ ವಿವಿಧ ವಯೋಮಾನದವರನ್ನು ಸಂದರ್ಶಿಸಿ ಮಾಹಿತಿ ಪಡೆಯಲಾಯಿತು. ಈ ರೀತಿ ಕ್ರೋಢಿಕರಿಸಿದ ಮಾಹಿತಿಗಳನ್ನು ತುಲನಾತ್ಮಕವಾಗಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

## ೧.೬. ಕ್ಷೇತ್ರಕಾರ್ಯ ಮತ್ತು ಕ್ಷೇತ್ರಾನುಭವ

ಕ್ಷೇತ್ರಕಾರ್ಯ ಅಧ್ಯಯನಕ್ಕೆ ಲಭ್ಯವಿರುವ ೪ ತಾಲ್ಲೂಕುಗಳ ಒಟ್ಟು ೮ ಹಾಡಿಗಳನ್ನು ತಾಲ್ಲೂಕಿಗೆ ಎರಡರಂತೆ ಆಯ್ಕೆ ಮಾಡಿಕೊಂಡಿರುತ್ತೇನೆ. ಗುಂಡ್ಲುಪೇಟೆ ತಾಲ್ಲೂಕಿನಿಂದ ಮದ್ದೂರು ಕಾಲೋನಿ ಮತ್ತು ಕಾರೆಮಾಳ, ಯಳಂದೂರು ತಾಲ್ಲೂಕಿನಿಂದ ಹೊಸಪೋಡು ಮತ್ತು ಮುತ್ತುಗದಗದ್ದೆ, ಕೊಳ್ಳೇಗಾಲ ತಾಲ್ಲೂಕಿನಿಂದ ಕೆರೆದಿಂಬ ಮತ್ತು ಜಡೆಸ್ವಾಮಿದೊಡ್ಡಿ, ಚಾಮರಾಜನಗರದಿಂದ ಕುಂಟಗುಡಿ ಪೋಡು ಮತ್ತು ಮುನೇಶ್ವರ ಕಾಲೋನಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಸೋಲಿಗ ಸಮುದಾಯದೊಡನೆ ಕ್ಷೇತ್ರಾನುಭವ ಆರಂಭಗೊಂಡಿದ್ದು ೨೦೧೩ರಲ್ಲಿ ಉತ್ಸಾಹ ಭೀತಿ, ಆತಂಕದಿಂದಲೇ ಇದು ಆರಂಭವಾಯಿತು. ವಾಸ್ತವ ಅಂಕಿ-ಅಂಶಗಳನ್ನು, ಅವರ ಸಮಸ್ಯೆಗಳನ್ನು ವಾಸ್ತವವಾಗಿ ವೀಕ್ಷಿಸಲು ಕ್ಷೇತ್ರಕಾರ್ಯವನ್ನು ಪ್ರಾರಂಭಿಸಿದೆ. ಕರ್ನಾಟಕ ರಾಜ್ಯದ ಚಾಮರಾಜನಗರ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯವನ್ನು ಮಾಡಲು ೨ ವರ್ಷಗಳಲ್ಲಿ ಸತತವಾಗಿ ಸಮುದಾಯದವರನ್ನು ಭೇಟಿಯಾಗಿ, ಕೆಲವು ಸಲ ಅವರ ಮನೆಯಲ್ಲಿಯೇ ಉಳಿದುಕೊಂಡು ಸಮುದಾಯದವಳಾಗಿ ಅವರಲ್ಲಿ ಒಬ್ಬಳಾಗಿ ಸಮುದಾಯದವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಮಾಹಿತಿಯನ್ನು ಸಂಗ್ರಹಿಸಿದೆ. ಪ್ರಾರಂಭದಲ್ಲಿ

ನನಗೆ ಅನೇಕ ಗೊಂದಲಗಳಿದ್ದರೂ ಅವುಗಳನ್ನು ಮಾರ್ಗದರ್ಶಕರ ಸಹಾಯದಿಂದ ನನ್ನ ಸಂಶೋಧನನೆಗೆ ಮಾಹಿತಿಯನ್ನು ಸಂಗ್ರಹಿಸತೊಡಗಿದೆ.

ಮೊದಲಿಗೆ ಕ್ಷೇತ್ರಕಾರ್ಯಕ್ಕೆ ತೆರಳಿದ ಪೋಡುಗಲ್ಲಿ, ಕಾಲೋನಿಗಳಲ್ಲಿ ಮುಖಂಡರು, ಮಹಿಳೆಯರು, ವಯಸ್ಸಾದವರನ್ನು ಮೊದಲು ಭೇಟಿ ಮಾಡಿ ನಾನು ಪೋಡಿಗೆ ಬಂದಿರುವ ವಿಷಯವನ್ನು ತಿಳಿಸಲಾಗುತ್ತಿತ್ತು. ಅವರ ಪೋಡಿಗೆ ಬಂದಿರುವ ಉದ್ದೇಶವನ್ನು ತಿಳಿಸಿ ಸಮುದಾಯದವರು ಪರಿಚಿತರಿರುವುದರಿಂದ ಸಂಜೆ ಮತ್ತು ಬೆಳಗಿನ ಸಮಯದಲ್ಲಿ ಹಾಡಿಗೆ ತೆರಳಿ ಮಾಹಿತಿಯನ್ನು ಸಂಗ್ರಹ ಮಾಡಲಾಗುತ್ತಿತ್ತು. ವಿಷಯ ಸಂಗ್ರಹ ಮಾಡಲು ತೆರಳಿದಾಗಲೆಲ್ಲ ಸಮುದಾಯದವರು ಹಲವಾರು ಮೂಲಭೂತ ಸಮಸ್ಯೆಗಳನ್ನು ಮತ್ತು ಕಷ್ಟ–ಸುಖಗಳನ್ನು ನನ್ನ ಜೊತೆ ಹೇಳಿಕೊಳ್ಳುತ್ತಿದ್ದರು. ಪೋಡಿನ ಜನರು ತೋಟ–ಗದ್ದೆಗಳಲ್ಲಿ ಕೆಲಸ ಮಾಡಿ ಅಥವಾ ಕಾಡಿನಲ್ಲಿ ಅಲೆದು ಮನೆಯತ್ತ ಬರುವಾಗ ಇವರು ತುಂಬಾ ಬಳಲಿ ಮದ್ಯಪಾನ ಮಾಡಿ ಬರುತ್ತಿದ್ದರು. ಆ ಹೊತ್ತಿನಲ್ಲಿ ಪ್ರಶ್ನೆಗಳನ್ನು ಕೇಳಿ ವಿವರ ಪಡೆಯುವುದು ಕಷ್ಟವಾಗುತ್ತಿತ್ತು. ಕಾಲಕ್ರಮೇಣ ಇವರ ಪರಿಚಯ ಮತ್ತು ಒಡನಾಟದಿಂದ ಆತ್ಮೀಯತೆ ಹೆಚ್ಚಾಗಿ ಮಾಹಿತಿ ಪಡೆಯಲು ಅನುಕೂಲವಾಯಿತು.

ನನ್ನ ಮೊದಲನೆಯ ಭೇಟಿಯಲ್ಲಿಯೇ ಸಮುದಾಯದವರಿಗೆ ನನ್ನ ಸಂದರ್ಶನದ ಕಾರಣಗಳನ್ನು ಅವರಿಗೆ ಮನದಟ್ಟು ಮಾಡಿ, ಅವರು ನನ್ನನ್ನು ಅವರಲ್ಲೊಬ್ಬಳಂತೆ ಭಾವಿಸಿ ಮಾಹಿತಿಯನ್ನು ನೀಡುತ್ತಿದ್ದರು. ಕೆಲವು ಹಾಡಿಯ ಜನರು ನನಗೆ ಯಾವುದೇ ಮಾಹಿತಿಯನ್ನು ನೀಡದೇ ಮನೆಯ ಬಾಗಿಲನ್ನು ಮುಚ್ಚಿಕೊಳ್ಳುತ್ತಿದ್ದರು. ಆದರೆ ಶಾಲೆಯ ಶಿಕ್ಷಕರನ್ನು ಕರೆದುಕೊಂಡು ನಾನು ಬಂದಿರುವ ವಿಷಯ ಅವರಿಗೆ ತಿಳಿಸಿ ಮಹಾಪ್ರಬಂಧವನ್ನು ಬರೆಯುತ್ತಿರುವುದರ ಬಗ್ಗೆ ವಿವರಿಸಿ, ಇದೊಂದು ಶೈಕ್ಷಣಿಕ ಕೆಲಸ, ಸಂಶೋಧನೆಯ ಕೆಲಸ ಎಂದು ಅವರಿಗೆ ಹೇಳಿದಾಗ, ಇದರಿಂದ ನಮಗೇನು ಪ್ರಯೋಜನ ಎಂದು ಕೆಲವರು ಕೇಳುತ್ತಿದ್ದರು. ಅವರಿಗೆ ನಿಮ್ಮ ಸಮಸ್ಯೆಗಳನ್ನು ಅಂದರೆ, ಕಾಡಿನಿಂದ ಹೊರಗೆ ಬಂದು ನೀವು ಜೀವನ ನಡೆಸುತ್ತಿರುವ ಬಗ್ಗೆ ಹಾಗೂ ಹಿಂದಿನ ಸೋಲಿಗರ ಜೀವನ ವ್ಯವಸ್ಥೆ, ಪಾರಂಪರಿಕ ಜ್ಞಾನ, ಸಮುದಾಯದಲ್ಲಿರುವ ಒಳ್ಳೆಯ ಅಂಶಗಳು ಹಾಗೂ ಪ್ರಸ್ತುತ ಪರಿಸ್ಥಿತಿ ಇವುಗಳನ್ನು ದಾಖಲಿಸುವುದು ಮತ್ತು ಈ ವಿಷಯವನ್ನು ಓದುವುದರ ಮೂಲಕ, ಸರ್ಕಾರವು ಒದಗಿಸುತ್ತಿರುವ ಸೌಲಭ್ಯಗಳಿಂದ ನಿಮಗಾಗಿರುವ ಪ್ರಯೋಜನ ಮತ್ತು ಅವುಗಳ ಉಪಯೋಗವನ್ನು ಸರ್ಕಾರದ ಗಮನಕ್ಕೆ ತರುವ ಕಾರ್ಯ ಇದಾಗಿದೆ ಎಂದಾಗ ಸಂತೋಷವಾಗಿ ಸಮಗ್ರ ಮಾಹಿತಿಯನ್ನು ನೀಡುವ ಪ್ರಸಂಗಗಳು ಅಧಿಕವಾಗಿದೆ. ಆದರೂ ಕೆಲವು ವಿದ್ಯಾವಂತ ಯುವಕರು ನಮ್ಮ ಜೀವನ ಚರಿತ್ರೆ ಬರೆದು ನೀವು ಅನುಕೂಲ ಪಡೆಯುತ್ತೀರಿ ಇದರಿಂದ ನಮಗೆ ಯಾವುದೇ ರೀತಿಯ ಪ್ರಯೋಜನ ವಾಗುವುದಿಲ್ಲ ಎಂದು ಮಾಹಿತಿಯನ್ನು ನೀಡಲು ನಿರಾಕರಿಸಿರುವುದು ಇದೆ.

ಕ್ಷೇತ್ರಕಾರ್ಯದಲ್ಲಿ ಗಮನಕ್ಕೆ ಬಂದ ವಿಷಯವೇನೆಂದರೆ, ಪ್ರಸ್ತುತ ದಿನಗಳಲ್ಲಿಯೂ ಸಹ ಸೋಲಿಗ ಕುಟುಂಬಗಳಿಗೆ ಇನ್ನೂ ಮೂಲಭೂತ ಸೌಲಭ್ಯ ದೊರಕಿರುವುದಿಲ್ಲ. ಸರ್ಕಾರದಿಂದ ಲಭ್ಯವಿರುವ ಎಲ್ಲಾ ಕಲ್ಯಾಣ ಕಾರ್ಯಕ್ರಮಗಳ ಪ್ರಯೋಜನವನ್ನು ಇನ್ನೂ ಕೆಲವು ಹಾಡಿಯ ಜನರು ಪಡೆದಿರುವುದಿಲ್ಲ. ಇಂತಹ ಕೊರತೆ ಇದ್ದಾಗಿಯೂ ತಾಳ್ಮೆಯಿಂದ ಈ ಸಮುದಾಯದವರನ್ನು ಸಂದರ್ಶಿಸಿ ವಿಷಯ

ಸಂಗ್ರಹಣೆ ಮಾಡುವಲ್ಲಿ ಸಾಕಷ್ಟು ಯಶಸ್ಸು ಸಾಧಿಸಲಾಗಿದೆ. ಈ ಅಧ್ಯಯನಕ್ಕೆ ಅವಶ್ಯಕವಾದ ಮಾಹಿತಿಗಳನ್ನು ಸಾಕಷ್ಟು ತೊಂದರೆಯ ನಡುವೆಯೂ ಸಂಗ್ರಹಿಸಿಕೊಂಡಿರುತ್ತೇನೆ.

**ವಿಷಯ ನಿರೂಪಣೆ**

ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿದೆ. ಬ್ರಿಟೀಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲಿಯೂ ಧಕ್ಕೆ ಬಂದಿರಲಿಲ್ಲ. ಮುಸಲ್ಮಾನ ದೊರೆಗಳ ನೂರಾರು ವರ್ಷಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟುಗಳು ಸ್ವತಂತ್ರವಾಗಿದ್ದವು ಬ್ರಿಟಿಷರು ಭಾರತಕ್ಕೆ ಬಂದ ನಂತರ ಭಾರತದಾದ್ಯಂತ ಏಕ ರೀತಿಯ ಆಳ್ವಿಕೆಯ ಕ್ರಮ ಜಾರಿಗೆ ಬಂತು. ಕಾಲಕ್ರಮೇಣ ಕೈಗಾರಿಕಾ ಕ್ರಾಂತಿಯಿಂದಾಗಿ ಬ್ರಿಟೀಷರು ಭಾರತದಾದ್ಯಂತ ರೈಲ್ವೆ ಸಂಪರ್ಕ ಏರ್ಪಡಿಸಲು ಸಾರಿಗೆ ಸಂಪರ್ಕ ಆರಂಭಿಸಲು ಸಂಚಾರಕ್ಕಾಗಿ ಕಾಡುಗಳನ್ನು ಕಡಿಯಲೇಬೇಕಾಯಿತು. ಇದರಿಂದ ಬುಡಕಟ್ಟು ಜನರ ಮೇಲೆ ತೀವ್ರ ಪರಿಣಾಮ ಉಂಟಾಯಿತು. ಬುಡಕಟ್ಟು ಜನರ ಸ್ಥಳಾಂತರ ಬೇಸಾಯಕ್ಕೆ(Shifting Cultivation) ಕಡಿವಾಣ ಬಿತ್ತು. ಬುಡಕಟ್ಟು ಜನರು ಸ್ವತಂತ್ರವಾಗಿ ಸಂಚರಿಸುತ್ತಿದ್ದ, ಪರ್ವತಾರಣ್ಯ ಪ್ರದೇಶಗಳಲ್ಲಿ ದೊರೆಯುತ್ತಿದ್ದ ನೈಸರ್ಗಿಕ ಸಂಪನ್ಮೂಲಗಳನ್ನು ಮತ್ತು ಭೂಮಿಯನ್ನು ಕಳೆದುಕೊಂಡರು. ಅಲ್ಲಿ  ಬ್ರಿಟೀಷರ ಟೀ, ಕಾಫಿ, ತೋಟಗಳು ತಲೆ ಎತ್ತಿ ನಿಂತವು. ಬುಡಕಟ್ಟು ಜನರು ಕೂಲಿಗಳಾಗಿ ಬ್ರಿಟೀಷರ ಅಧೀನದಲ್ಲಿ ದುಡಿಯುವಂತಾಯಿತು. ತಮ್ಮ ಪ್ರದೇಶ ಪರಕೀಯರ ವಶವಾಯಿತೆಂದು ಪರಕೀಯ ಪ್ರಜ್ಞೆ ಜಾಗೃತವಾಗಿ ತಮ್ಮ ಹಕ್ಕುಗಳನ್ನುಳಿಸಿಕೊಳ್ಳಲು ದಂಗೆಗಳನ್ನು ನಡೆಸಿದರು. ಕೆಲವು ಬುಡಕಟ್ಟು ಜನ ದರೋಡೆಗೆ ತೊಡಗಿದರು. ಇಂತಹ ಬುಡಕಟ್ಟುಗಳನ್ನು ಅಪರಾಧಿ ಬುಡಕಟ್ಟುಗಳೆಂದು ಪರಿಗಣಿಸಿ ಬ್ರಿಟೀಷ್ ಸರ್ಕಾರ ಇವರ ಮೇಲೆ ವಿಶೇಷ ರಕ್ಷಣಾ ಕಾಯ್ದೆಯನ್ನು ಜಾರಿಗೆ ತಂದು ಕ್ರಮ ಕೈಗೊಂಡಿತು. ಅಸ್ಸಾಂ, ಒರಿಸ್ಸಾ, ಈಶಾನ್ಯ ರಾಜ್ಯಗಳ ಗುಡ್ಡಗಾಡು ಪ್ರದೇಶಗಳನ್ನು ಆಕ್ರಮಿಸಿಕೊಂಡರು. ಆದಿವಾಸಿಗಳು ಇಲ್ಲೆಲ್ಲ ಗುಲಾಮರಾಗಿ, ಕೂಲಿಗಳಾಗಿ ನೇಮಕಗೊಂಡರು. ಈ ಕಾಲಘಟ್ಟದಲ್ಲಿ ಕರ್ನಾಟಕದ ಪಶ್ಚಿಮಘಟ್ಟ ಪ್ರದೇಶದಲ್ಲಿ ಯಾವ ಸಂಘರ್ಷಗಳು ಸಂಭವಿಸಲಿಲ್ಲವೆಂದಲ್ಲ. ಆದರೆ ಈಶಾನ್ಯ ಭಾರತ ಮತ್ತು ಉತ್ತರ ಭಾರತದ ಆದಿವಾಸಿಗಳಂತೆ ದೊಡ್ಡ ಪ್ರಮಾಣದ ಹೋರಾಟಗಳಲ್ಲಿ ಇಲ್ಲಿನ ಆದಿವಾಸಿಗಳು ತೊಡಗಿಸಿಕೊಳ್ಳಲಾಗಲಿಲ್ಲ. ಆದರೆ ದಕ್ಷಿಣ ವಲಯದ ಆದಿವಾಸಿಗಳು ಸಹ ಬ್ರಿಟೀಷರ ಶೋಷಣೆಗೆ ಒಳಗಾಗಿದ್ದನ್ನು ಕಾಣುತ್ತೇವೆ. ಆಗ ಮದ್ರಾಸ್ ಸರ್ಕಾರದ ವ್ಯಾಪ್ತಿಯಲ್ಲಿದ್ದ ದಕ್ಷಿಣ ಪ್ರಾಂತ್ಯದ ಕೆಲವು ತಾಲ್ಲೂಕುಗಳು ಮದ್ರಾಸ್ ಪ್ರಾಂತ್ಯದ ಆಡಳಿತಕ್ಕೊಳ ಪಟ್ಟಿದ್ದು ಅಲ್ಲಿನ ಬುಡಕಟ್ಟು ಜನರನ್ನು ಅತ್ಯಂತ ಶೋಚನೀಯ ಸ್ಥಿತಿಯಲ್ಲಿ ಕಡಿಮೆ ಕೂಲಿಗೆ ನೇಮಿಸಿಕೊಂಡಿದ್ದರು. ಅಂದಿನಿಂದ ಕರ್ನಾಟಕದ ಸೋಲಿಗರು ನಾನಾ ರೀತಿಯ ತೊಂದರೆಗಳನ್ನು ಅನುಭವಿಸಬೇಕಾಯಿತು. ಸ್ವಾತಂತ್ರ್ಯಾನಂತರ ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿಯು ತೀವ್ರಗತಿಯಲ್ಲಿ ಬದಲಾವಣೆ ಹೊಂದುತ್ತಿದೆ. ಹೊಸ ಆರ್ಥಿಕ ನೀತಿ ಹಾಗೂ ದೇಶದ ಆರ್ಥಿಕಾಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆಗಳನ್ನು ರಾಷ್ಟ್ರದ ಸರ್ವತೋಮುಖ ಪ್ರಗತಿ ಸಾಧಿಸುವ ಉದ್ದೇಶದಿಂದ ಜಾರಿಗೆ ತಂದಿತು. ಪಂಚವಾರ್ಷಿಕ ಯೋಜನೆಗಳು ಈ ಬುಡಕಟ್ಟು ಜನರಿಗೆ ಆರ್ಥಿಕವಾಗಿ ನೆರವು ನೀಡುವಲ್ಲಿ ಇಂದಿಗೂ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ವಿವಿಧ ಪಂಚವಾರ್ಷಿಕ ಯೋಜನೆಗಳಿಂದ ಮುಂದುವರಿದ ಸಮುದಾಯವು ಆರ್ಥಿಕ ಪ್ರಯೋಜನ ಪಡೆದುಕೊಂಡು ಶ್ರೀಮಂತರಾಗಿದ್ದಾರೆ. ಇದಲ್ಲದೇ, ಇವರೆಲ್ಲರೂ ಹಿಂದುಳಿದ ಮತ್ತು

ಬುಡಕಟ್ಟು ಸಮುದಾಯಕ್ಕೆ ಒದಗಬೇಕಾಗಿದ್ದ ಸವಲತ್ತುಗಳನ್ನು ಸಹಾ ಪಡೆದುಕೊಂಡು ತಾವೇ ಅನುಭವಿಸುತ್ತಿದ್ದಾರೆ. ಆದ್ದರಿಂದಲೇ ಸೋಲಿಗ ಬುಡಕಟ್ಟು ಜನರು ಇಂದಿಗೂ ಆರ್ಥಿಕವಾಗಿ, ಸಾಮಾಜಿಕ ವಾಗಿ, ರಾಜಕೀಯವಾಗಿ, ಮಾನಸಿಕವಾಗಿ ಗೊಂದಲಕ್ಕೀಡಾಗಿ ಹಿಂದುಳಿದಿದ್ದಾರೆ.

ಇಂದಿನ ಪರಿಸ್ಥಿತಿಯಲ್ಲಿ ಸೋಲಿಗ ಸಮುದಾಯಕ್ಕೆ ಸ್ಥಾನಮಾನ ಬರುವುದು ಅವರ ಆರ್ಥಿಕಾಭಿವೃದ್ಧಿ ಯಿಂದ ಎಂದರೆ ತಪ್ಪಾಗಲಾರದು. ಆರ್ಥಿಕಾಭಿವೃದ್ಧಿ ಎಂದರೆ ಕೇವಲ ಹಣ ಮಾತ್ರವಲ್ಲ ಸೋಲಿಗರ ಕಲೆ, ಸಂಸ್ಕೃತಿ, ಪರಿಸರದೊಡಗಿನ ಸಂಬಂಧ, ಪಾರಂಪರಿಕವಾದ ಜ್ಞಾನ, ಸರಳತೆ, ಹಂಚಿ ತಿನ್ನುವ ಸ್ವಭಾವ ಸಹಬಾಳ್ವೆ ಮುಂತಾದ ವಿಷಯಗಳನ್ನು ಉಪಯೋಗಿಸಿಕೊಂಡು ಸೋಲಿಗ ಸಮುದಾಯದಲ್ಲಿ ಅಡಗಿರುವ ಪಾರಂಪರಿಕ ಜ್ಞಾನವನ್ನು ಹೊರತಂದು ಅವರಿಗೆ ಅವಶ್ಯಕವಾಗಿರುವ ಬೇಕು–ಬೇಡಗಳನ್ನು ಪಟ್ಟಿ ಮಾಡಿ ಅಂತಹ ಸೌಲಭ್ಯಗಳನ್ನು ಕೊಡುವುದರ ಮೂಲಕ ಸರಳ, ಸುಸ್ಥಿರ ಬದುಕನ್ನು ಮಾಡಲು ಅವಕಾಶ ಕಲ್ಪಿಸಿಕೊಡಬೇಕು. ಬುಡಕಟ್ಟು ಜನರ ಸಮಗ್ರ ಅಭಿವೃದ್ಧಿಯಾಗಬೇಕಾದರೆ, ಮೊದಲು ಈ ನೆಲದ ಮಕ್ಕಳು ಸೋಲಿಗರು ಎಂದು ಪರಿಗಣಿಸುವಂತಾಗಬೇಕು. ಸೋಲಿಗರನ್ನು ಸ್ವತಂತ್ರವಾಗಿ ಬದುಕಲು ಬಿಡಬೇಕು. ಸೋಲಿಗರ ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕು. ಸಮುದಾಯ ದವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು, ಅವರ ಅಭಿವೃದ್ಧಿಗೆ ಏನು ಅಗತ್ಯ ಎಂಬುದರ ಬಗ್ಗೆ ಅವರಿಂದಲೇ ಯೋಜನೆ ತಯಾರಿ ಜನಪ್ರತಿನಿಧಿಗಳು ಹಾಗೂ ಸರ್ಕಾರದ ಅಧಿಕಾರಿಗಳು ಕಾರ್ಯರೂಪಕ್ಕೆ ತರಬೇಕು. ಇಲ್ಲಿಯವರೆಗೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅಧ್ಯಯನಗಳು ನಡೆದಿವೆಯಾದರೂ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ತರುವಲ್ಲಿ ಈವರೆಗೂ ಅಧ್ಯಯನವು ತಳಮಟ್ಟದಲ್ಲಿ ಪರಿಪೂರ್ಣವಾಗಿ ನಡೆದಿಲ್ಲವೆಂದೇ ನನ್ನ ಭಾವನೆ. ಆದ್ದರಿಂದ ಈ ಸಮುದಾಯಗಳ ಎಲ್ಲಾ ಸತ್ಯವನ್ನು ಹೊರತಂದು ಮುಂದೆ ಕೈಗೊಳ್ಳಬೇಕಾದಂತಹ ಪ್ರಯತ್ನಗಳನ್ನು ಸಹ ಇಲ್ಲಿ ವಿವರಿಸುವುದು ಉದ್ದೇಶವಾಗಿದೆ. ಸಂಶೋಧನಾ ವಿದ್ಯಾರ್ಥಿಯಾದ ನಾನು ಈ ಸೋಲಿಗ ಸಮುದಾಯದ ಸಾಮಾಜಿಕ ವ್ಯವಸ್ಥೆ ಮತ್ತು ಆರ್ಥಿಕ ಸ್ಥಿತಿಗತಿ, ಬದಲಾವಣೆ, ಸ್ಥಿತ್ಯಂತರ ಇವುಗಳಿಗೆ ಪೂರಕವಾದ ಮಾಹಿತಿ ಪಡೆದು ಈ ಬಗ್ಗೆ ಸವಿಸ್ತಾರವಾದ ಅಧ್ಯಯನ ಕೈಗೊಳ್ಳಲು ಇಲ್ಲಿ ಶ್ರಮಿಸಿದ್ದೇನೆ. ಹೀಗೆ ಹಲವಾರು ವಿಧಾನಗಳನ್ನು ಬಳಸಿಕೊಂಡು ಕ್ಷೇತ್ರಕಾರ್ಯವನ್ನು ನಡೆಸಿ ಸೋಲಿಗ ಸಮುದಾಯದಲ್ಲಿ ನನ್ನ ವಿಷಯಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿಯನ್ನು ಸಂಗ್ರಹ ಮಾಡಿದ್ದೇನೆ.

ಕರ್ನಾಟಕ ರಾಜ್ಯ
ಸಮೀಕ್ಷೆಗೊಳಪಟ್ಟ ಜಿಲ್ಲಾವಾರು
ಸೋಲಿಗರು ಬುಡಕಟ್ಟು ನೆಲೆಗಳು





# ಚಾಮರಾಜನಗರ ಜಿಲ್ಲೆ

## ಸಮೀಕ್ಷೆಗೊಳಪಟ್ಟ ತಾಲೂಕುವಾರು ಸೋಲಿಗರು ಬುಡಕಟ್ಟು ನೆಲೆಗಳು

೧. ಚಾಮರಾಜನಗರ ತಾಲ್ಲೂಕು






೩. ಯಳಂದೂರು ತಾಲ್ಲೂಕು




೪. ಕೊಳ್ಳೇಗಾಲ ತಾಲ್ಲೂಕು



## ೧.೭. ಸೋಲಿಗರು ಬುಡಕಟ್ಟು ಕುರಿತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದಲ್ಲಿ ಬುಡಕಟ್ಟುಗಳನ್ನು ಕುರಿತು ಗಂಭೀರ ಅಧ್ಯಯನ ತೀರಾ ಇತ್ತೀಚೆಗೆ ಆರಂಭವಾಯಿತಾದರೂ, ಮಾಹಿತಿ ಸಂಗ್ರಹ ಕಾರ್ಯವು ಬಹುಹಿಂದೆಯೇ ಆರಂಭವಾಯಿತು. ಬ್ರಿಟೀಷ್ ವಸಾಹತು ಕಾಲದಲ್ಲಿಯೇ ಬುಡಕಟ್ಟು ಹಾಗೂ ಇತರೆ ಸಮುದಾಯಗಳ ಕುರಿತು ಮಾಹಿತಿ ಸಂಗ್ರಹಣೆಯ ಕಾರ್ಯವನ್ನು ಪ್ರಾರಂಭಿಸಲಾಯಿತು. ಆದಿವಾಸಿ ಸಮುದಾಯಗಳ ಬಗ್ಗೆ ಆಳವಾದ ಸಂಶೋಧನೆಯನ್ನು ನಡೆಸಿ ಆ ಜನರ ಬಗ್ಗೆ ಮಾಹಿತಿಯನ್ನು ಹೊರಗಿನ ಪ್ರಪಂಚಕ್ಕೆ ಪರಿಚಯಿಸಿದ ಕೀರ್ತಿ ವಿದ್ವಾಂಸರಾದ ಥರ್ಸ್ಟನ್, ವೆರಿಯರ್ ಎಲ್ವಿನ್, ಮಿಲ್ಸ್, ಸ್ಮಿತ್, ಲೂಯಿಸ್ ಎ.ಡಿ.ಕೆ. ರಂಗಾಚಾರಿ, ಮಜುಂದಾರ್ ಡಿ.ಎಮ್. ಮತ್ತು ನಂಜುಂಡಯ್ಯ ಹೆಚ್.ವಿ, ಅವರಿಗೆ ಸಲ್ಲುತ್ತದೆ. ೧೯೦೯ರಲ್ಲಿ ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿ ಅವರು ಸಂಗ್ರಹಿಸಿದ "Castes and Tribes of Southern India" ಎಂಬ ಬೃಹತ್ ಸಂಪುಟಗಳಲ್ಲಿ ಬುಡಕಟ್ಟುಗಳ ಬಗ್ಗೆ ಪ್ರಕಟಿಸಿದರು. ಈ ಅಧ್ಯಯನವು ಏಳು ಸಂಪುಟಗಳಲ್ಲಿ ಅಧ್ಯಯನಕ್ಕಿಂತ ಹೆಚ್ಚಾಗಿ ಯಾವ ಪ್ರಾಂತ್ಯದಲ್ಲಿ ಯಾವ ಸಮುದಾಯಗಳು ವಾಸಿಸುತ್ತಿವೆ; ಅವುಗಳ ಸ್ಥಿತಿ ಯಾವ ಸ್ಥರದಲ್ಲಿವೆ ಮತ್ತು ಅವರ ಸಾಂಸ್ಕೃತಿಕ ಬದುಕು ಯಾವುದು ಎಂಬುದನ್ನು ತಿಳಿಸುತ್ತವೆ. **ಎಡ್ಗರ್ ಥರ್ಸ್ಟನ್** ಮತ್ತು ಕೆ ರಂಗಾಚಾರಿ ಅವರಿಗೆ ಬುಡಕಟ್ಟುಗಳು ಮತ್ತು ವಿವಿಧ ಸಮುದಾಯ ಕುರಿತು ತಿಳಿಯುವ ಕುತೂಹಲ ಹೆಚ್ಚಾಗಿತ್ತೆಂದು ಅವರ ಸಂಪುಟಗಳಲ್ಲಿನ ಮಾಹಿತಿ ಸಂಗ್ರಹಣೆಯ ಆಧಾರದ ಮೇಲೆ ತಿಳಿಯಬಹುದಾಗಿದೆ. ಅದು ಏನೇ ಇರಲಿ ದೇಶೀಯ ಪ್ರಭುತ್ವಗಳು ಶತಮಾನಗಳಿಂದ ನಿರ್ಲಕ್ಷಿಸಿದ್ದಂತಹ ಅನೇಕ ಸಮುದಾಯಗಳು **ಥರ್ಸ್ಟನ್** ಮತ್ತು **ಕೆ. ರಂಗಾಚಾರಿ** ಅವರ ಕ್ಷೇತ್ರಕಾರ್ಯದಿಂದ ಬೆಳಕಿಗೆ ಬಂದವು ಎಂಬುದನ್ನು ಮರೆಯುವಂತಿಲ್ಲ. ಹಾಗೂ ಸೋಲಿಗರ ಸಮುದಾಯದ ಬಗ್ಗೆ ಪೂರ್ವದಿಂದ ಹಿಡಿದು ಪ್ರಸ್ತುತದಲ್ಲಿ ಎಲ್ಲರಿಗೂ ತಳಸಮುದಾಯದ ಬಗ್ಗೆ ಅಧ್ಯಯನ ಮಾಡಿರುವ ಕೀರ್ತಿ ಇವರಿಗೆ ಸಲ್ಲುತ್ತದೆ.

**Buchanan Francis (1807), 'A Journey From Madras Through The Countries of Mysore' 'Canara and Malbar'** ಎಂಬ ಪುಸ್ತಕದಲ್ಲಿ ಬಿಳಿಗಿರಿರಂಗನ ಬೆಟ್ಟದ ಸುತ್ತಲಿನ ಪ್ರದೇಶಗಳಲ್ಲಿ ಸೋಲಿಗರು ಆಡುತಿದ್ದ ಭಾಷೆ, ಉಡುಪು, ಗೃಹವ್ಯವಸ್ಥೆಯನ್ನು ಕುರಿತಾಗಿ ಬರೆದಿದ್ದಾರೆ. ಇವರು ಹೇಳುವಂತೆ ಇಂದಿಗೂ ಸೋಲಿಗ ಜನರು ತುಂಡು ಬಟ್ಟೆಗಳಿಂದ ದೇಹವನ್ನು ಮುಚ್ಚಿಕೊಳ್ಳುತ್ತಾರೆ. ಇವರಲ್ಲಿ ವಯಸ್ಸಾದವರು ಕೇವಲ ಒಂದು ತುಂಡು ಬಟ್ಟೆಯಿಂದ ಜೀವನ ಸಾಗಿಸುತ್ತಾರೆ ಎಂದು ತಿಳಿಸಿದ್ದಾರೆ.[೫]

ಸೋಲಿಗರು ಸರಳ ಜೀವಿಗಳು; ಇವರು ತಮ್ಮ ಜೀವನದ ಅವಶ್ಯಕತೆಗೆ ಬೇಕಾಗುವ ಆಹಾರ, ಬಟ್ಟೆ, ಇತರೇ ವಸ್ತುಗಳನ್ನು ಮಿತವಾಗಿ ಬಳಸುತ್ತಾರೆ. ಕಾರಣ ಸೋಲಿಗರು ಕಾಡಿನಲ್ಲಿ ಸಿಗುವ ಪದಾರ್ಥಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದವರು, ಮೈಯನ್ನು ಮುಚ್ಚುವುದಕ್ಕೆ ತುಂಡು ಬಟ್ಟೆ ಇದ್ದರೆ ಸಾಕು; ಕಾರಣ ಬಟ್ಟೆಯನ್ನು ಹೊರಗಡೆಯಿಂದ ಅಂದರೆ ಪೇಟೆ, ನಗರಗಳಲ್ಲಿ ಕೊಂಡು ಕೊಳ್ಳಬೇಕಾಗಿತ್ತು ಅಲ್ಲದೆ ಅವುಗಳನ್ನು ಹಣ ಕೊಟ್ಟು ಪಡೆಯಬೇಕಾಗಿತ್ತು. ಸೋಲಿಗರಿಗೆ ಆಗಿನ ಪರಿಸ್ಥಿತಿಯಲ್ಲಿ ಹಣದ ಬಳಕೆ ಮತ್ತು ಸಂಪಾದನೆ ಕಡಿಮೆಯಾದುದರಿಂದ ಅವರಿಗೆ ಹೊಸ ಬಟ್ಟೆಗಳನ್ನು ತೆಗೆದುಕೊಳ್ಳುವುದಕ್ಕೆ ಆಗುತ್ತಿರಲಿಲ್ಲ. ಇಂಗ್ಲೀಷರ ಕೋಟುಗಳು, ಹರಾಜಿನ ಬಟ್ಟೆಗಳು– ಇವುಗಳನ್ನು ಕಡಿಮೆ ಬೆಲೆಗೆ ಖರೀದಿಸಿಕೊಂಡು ಧರಿಸುತ್ತಿದ್ದರು. ಆದಕಾರಣ ಸೋಲಿಗರು ಹಿಂದಿನ ಕಾಲದಲ್ಲಿ ಹೆಚ್ಚು ತುಂಡು

ಬಟ್ಟೆಗಳನ್ನು ತೊಡುತ್ತಿದ್ದರು. ಸೋಲಿಗರು ಕಾಡಿನಲ್ಲಿ ವಾಸ ಮಾಡುತ್ತಿದ್ದುದರಿಂದ ಕಾಡಿನ ಕೆಲಸ ಮಾಡುವಾಗ ಮೈ ತುಂಬ ಬಟ್ಟೆ ಧರಿಸಿದರೆ ಕೆಲಸಕ್ಕೆ ಅದು ತಡೆಯಾಗುತ್ತದೆ. ಪ್ರಾಣಿ ಪಕ್ಷಿಗಳಿಂದ ರಕ್ಷಿಸಿಕೊಳ್ಳುವ ಕಾರಣಗಳಿಂದ ಸೋಲಿಗರು ತಮ್ಮ ದೇಹ ಮುಚ್ಚಿಕೊಳ್ಳಲು ತುಂಡು ಬಟ್ಟೆಯನ್ನು ಹಾಕಿಕೊಳ್ಳುತ್ತಿದ್ದರು ಎಂಬುದು ತಿಳಿದು ಬಂದಿದೆ. ಒಟ್ಟಾರೆಯಾಗಿ ಹೇಳುವುದಾದರೆ ಶಿಷ್ಟ ಪರಂಪರೆಯ ಸೋಂಕಿಲ್ಲದೆ ಮೂಲ ಜನಾಂಗದ ಲಕ್ಷಣಗಳೊಂದಿಗೆ ಬದುಕುತ್ತಿರುವ ಇವರು ಭಾರತದ ಮೂಲ ನಿವಾಸಿಗಳ ವರ್ಗಕ್ಕೆ ಹತ್ತಿರವಾದ ಸಮುದಾಯವೆಂಬುದು ಸತ್ಯಸಂಗತಿ.

**ಥರ್ಸ್ಟನ್ ಇ, (೧೯೦೯), ಅವರ 'Castes and Tribe of Southern India'** ಎಂಬ ಗ್ರಂಥದಲ್ಲಿ "ಸೋಲಿಗರ ಕುಲ ಪರಿಚಯದ ಬಗ್ಗೆ ಮಾಹಿತಿಗಳನ್ನು ನೀಡಿರುವುದಲ್ಲದೇ, ಕುಮ್ರಿ ಬೇಸಾಯದ ಬಗ್ಗೆ, ಬೇಟೆ, ಕಾಡಿನಲ್ಲಿ ಗೆಡ್ಡೆ-ಗೆಣಸುಗಳನ್ನು ಅಗೆದು ತಿನ್ನುವ ಅವರ ಜೀವನ ಕ್ರಮ ಮುಂತಾದವುಗಳ ಬಗ್ಗೆ ವಿವರಿಸಿದ್ದಾರೆ. ಬುಡಕಟ್ಟುಗಳ ಕುಲಶಾಸ್ತ್ರೀಯ ಅಧ್ಯಯನವನ್ನು ಮಾಡಿರುವ ಅಧ್ಯಯನದಿಂದ ತಿಳಿದು ಬಂದಿದ್ದು ಇದು ಇವರ ಸಾಧನೆಯೇ ಸರಿ. ಥರ್ಸ್ಟನ್.ಇ. ಅವರು ಸೋಲಿಗರು ದಟ್ಟವಾದ ಕಾಡಿನಲ್ಲಿ ವಾಸ ಮಾಡುತ್ತಿದ್ದರು. ಇವರು ಕಾಡಿನಲ್ಲಿ ಹೇರಳವಾಗಿ ದೊರಕುವ ಗೆಡ್ಡೆ-ಗೆಣಸನ್ನು ಆಹಾರವನ್ನಾಗಿ ಉಪಯೋಗಿಸುತ್ತಿದ್ದರೆಂದು"[೬] ತಿಳಿಸಿದ್ದಾರೆ.

**ಅನಂತಕೃಷ್ಣ ಅಯ್ಯರ್ (೧೯೩೧), ಅವರ "The Mysore Tribes and Castes"** ಎಂಬ ಗ್ರಂಥದ ನಾಲ್ಕು ಸಂಪುಟಗಳಲ್ಲಿ ವಿವರವಾದ ಕ್ಷೇತ್ರಕಾರ್ಯಾಧಾರಿತ ಮಾಹಿತಿಗಳನ್ನು ವೈಜ್ಞಾನಿಕವಾಗಿ ಸಂಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಸೋಲಿಗರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಬಗ್ಗೆ ಮಾಹಿತಿ ನೀಡಿದ್ದಾರೆ. ಅದರಲ್ಲಿ ಸೋಲಿಗರ ಬಾಲ್ಯ, ಯೌವನ, ಮದುವೆ, ಅಂತ್ಯ ಸಂಸ್ಕಾರ ಮುಂತಾದ ಆಚರಣೆಗಳ ಬಗ್ಗೆಯಲ್ಲದೇ ಸಾಮಾಜಿಕ ಹಾಗೂ ಆರ್ಥಿಕ ಜೀವನದ ಬಗ್ಗೆಯೂ ಅರ್ಥಪೂರ್ಣವಾಗಿ ತಿಳಿಸಿದ್ದಾರೆ.[೭] ಸೋಲಿಗರ ಧಾರ್ಮಿಕ ಹಿನ್ನೆಲೆ ಹಾಗೂ ಪುರಾಣ ಪುರುಷರ ಬಗ್ಗೆ ಅಧ್ಯಯನಕಾರರಿಗೆ ಕೆಲವು ಕುರುಹುಗಳು ದೊರಕುತ್ತವೆ. ಸೋಲಿಗರ ಬಗ್ಗೆ ಮಾಹಿತಿಗಳು ಅವರ ನಾಲ್ಕು ಸಂಪುಟಗಳಲ್ಲಿವೆ. ಒಟ್ಟಾರೆ ಸೋಲಿಗರ ಸಂಸ್ಕೃತಿಯ ಬಗ್ಗೆ ಅಧ್ಯಯನ ನಡೆಸುವವರಿಗೆ ಇದೊಂದು ಉಪಯುಕ್ತ ಗ್ರಂಥವಾಗಿದೆ.

**Nanjundaiah H.V., and Anantha Krishna Iyer L.K., (1961), "*The Mysore Tribes and Castes*"** ಈ ಗ್ರಂಥದಲ್ಲಿ ಸೋಲಿಗರು ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನ, ಬಿಳಿಗಿರಿರಂಗನ ಬೆಟ್ಟ, ಮಹದೇಶ್ವರನಬೆಟ್ಟ ಹಾಗು ಹೆಗ್ಗಡೆದೇವನಕೋಟೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ ಎಂದು ತಿಳಿಸಿದ್ದಾರೆ. ಮುಂದುವರೆದು ಸೋಲಿಗರ ಜೀವನ ಬಾಲ್ಯ, ಯೌವನ, ಮದುವೆ, ಅಂತ್ಯ ಸಂಸ್ಕಾರ ಮುಂತಾದ ಆಚರಣೆಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.[೮]

**Luiz (1963), 'Tribs of Mysore'** ಇವರು ತಮ್ಮ ಗ್ರಂಥದಲ್ಲಿ The name "Sholaga" is the corruption of the Tamil word **"Colai"** or **"Solai"** means **"Thiket"**, and hence refer to the dense thickets amidst which they live" ಎಂದು ಸೋಲಿಗರ ಬಗ್ಗೆ ತಿಳಿಸಿದ್ದಾರೆ. ಸೋಲಿಗರು ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಸಿಸುತ್ತಾರೆ. ಇವರ ಭಾಷೆಯು

ತಮಿಳು ಮಿಶ್ರಿತ ಕನ್ನಡ ಪದವಾಗಿದ್ದು, ಇವರ ಭಾಷೆಯು ಸಾಮಾನ್ಯವಾಗಿ ಸುಲಭವಾಗಿ ಅರ್ಥವಾಗುವುದಿಲ್ಲ ಎಂದಿದ್ದಾರೆ.[೯]

ಲೂಯಿಜ್ ಅವರ ಈ ಮಾಹಿತಿಯನ್ನು ಗಮನಿಸಿದಾಗ ಸೋಲಿಗರ ಭಾಷೆಯ ಮೇಲೆ ತಮಿಳು ಭಾಷೆಯ ಪ್ರಭಾವ ಉಂಟಾಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಕಾರಣ ಚಾಮರಾಜನಗರ ಜಿಲ್ಲೆಯ ಸುತ್ತಮುತ್ತಲಿನ ಸೋಲಿಗರು ವಾಸಿಸುವ ನೆಲೆಗಳು ತಮಿಳುನಾಡಿನ ಗಡಿಭಾಗಕ್ಕೆ ಹೊಂದಿಕೊಂಡಂತೆ ಇವೆ. ಗಾಜನೂರು, ಗದ್ದೆಸಾಲು, ಸತ್ಯಮಂಗಲ ಭಾಗದ ಪ್ರದೇಶಗಳು ಮತ್ತೊಂದೆಡೆ ಕೊಳ್ಳೇಗಾಲ ಮಲೆಮಹದೇಶ್ವರ ಬೆಟ್ಟದ ಸುತ್ತಮುತ್ತಲ ನೆಲೆಗಳಾದ ಪಾಲಾರ್, ಕುಂಬುಡ್ಕಿ ಪ್ರದೇಶ, ರಾಮೇಗೌಡನ ಪೋಡು ಮತ್ತು ಮೆಲ್ಲಗಣ್ಣ ಪೋಡುಗಳು ಹಾಗೂ ಗುಂಡ್ಲುಪೇಟೆ ತಾಲ್ಲೂಕಿನ ಬಂಡೀಪುರ ಅರಣ್ಯದ ಅಂಚಿನಲ್ಲಿರುವ ಕಣಿಯನಪುರ ಕಾಲೋನಿ, ಚೆನ್ನಿಕಟ್ಟೆ, ಬೂರುದೇವರಹುಂಡಿ, ಮಂಗಲ, ಕಾರೆಮಾಳ, ಕೆಕ್ಕನಹಳ್ಳ ಈ ಭಾಗಗಳು ತಮಿಳುನಾಡಿನ ಗಡಿಭಾಗಕ್ಕೆ ಸೇರಿಕೊಂಡಿದೆ. ಜೊತೆಗೆ ತಮಿಳುನಾಡಿನ ಮಸನಿಗುಡಿ, ಮಾವಿನಹಳ್ಳ, ಗೂಡಲೂರು, ತೆಪ್ಪಕಾಡು, ಬೊಕ್ಕಾಪುರ ಈ ಭಾಗಗಳಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿರುವ ಸೋಲಿಗ ಸಮುದಾಯದ ಸಂಬಂಧಿಕರು ಈ ಸ್ಥಳಗಳಲ್ಲಿರುವುದು ಕಂಡು ಬರುತ್ತದೆ. ಅದಲ್ಲದೇ ಸೋಲಿಗರು ಸಾಮಾನ್ಯವಾಗಿ ಕೂಲಿಯನ್ನು ಅರಸಿ ಹತ್ತಿರವಿರುವ ತಮಿಳುನಾಡಿಗೆ ಹೋಗುವುದರಿಂದ ಸೋಲಿಗರು ಸಾಮಾನ್ಯವಾಗಿ ತಮಿಳು ಮಿಶ್ರಿತ ಕನ್ನಡ ಭಾಷೆಯನ್ನು ಮಾತನಾಡುತ್ತಾರೆ.

**ಮೊರಾಬ್ ಎಸ್ ಜಿ, (೧೯೭೭),** ಅವರು ತಮ್ಮ ಗ್ರಂಥವಾದ "The Soliga of Biligirangana Hills" ನಲ್ಲಿ ಆರ್ಥಿಕ ವ್ಯವಸ್ಥೆಯ ಬಗ್ಗೆ ಈ ರೀತಿಯಾಗಿ ಹೇಳಿದ್ದಾರೆ. "The traditional economy of the Soliga is mostly based on Shifting Cultivation and Collection of Minor Forest Produce. There are also other minor ecocomic activities, like hunting, rapping, fishing and honey collecting"[10] ಮುಂಗಾರು ಮಳೆ ಮತ್ತು ಹಿಂಗಾರು ಮಳೆ ಎಂಬುದಾಗಿ ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳುತ್ತಾರೆ ಎಂದು ತಿಳಿಸಿದ್ದಾರೆ. ಸೋಲಿಗರು ವ್ಯವಸಾಯ ಆರಂಭವಾಗುವ ಮೊದಲು ತಮ್ಮ ಜಮೀನಿಗೆ ಮರದ ತರಗೆಲೆ ರೆಂಬೆಗಳನ್ನು ಕಡಿದು ಸುಟ್ಟು ಬೂದಿ ಮಾಡಿ ಅದನ್ನು ಮೇ ಮತ್ತು ಜೂನ್ ತಿಂಗಳಿನಲ್ಲಿ ಬೀಳುವ ಮಳೆಯಲ್ಲಿ ಭೂಮಿಗೆ ಸೇರುವಂತೆ ಮಾಡುತ್ತಾರೆ. ಆನಂತರದಲ್ಲಿ ಅಶ್ವಿನಿ ಮಳೆಯಿಂದ, ರೇವತಿ ಮಳೆಯವರೆಗೆ ಮಧ್ಯ ಬೀಳುವ ಮಳೆಯನ್ನು ಮುಂಗಾರು ಎಂದು ಕರೆಯುತ್ತಾರೆ ಎಂದು ತಿಳಿಸಿ ಚಾಮರಾಜನಗರದ ಬಿಳಿಗಿರಿರಂಗನಬೆಟ್ಟದ ಸುತ್ತಮುತ್ತಲ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಸೋಲಿಗರ ನೆಲೆ, ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ಜೀವನ, ರೂಢಿ ಸಂಪ್ರದಾಯ, ಆಚರಣೆಗಳು ಮತ್ತು ಸೋಲಿಗರ ಸಮಸ್ಯೆಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಸೋಲಿಗರ ಮುಖ್ಯ ಆಹಾರ ರಾಗಿ. ಸೋಲಿಗರು ಪ್ರಕೃತಿಯ ಜೊತೆಯಲ್ಲಿ ತಮ್ಮ ಜೀವನವನ್ನು ಕಟ್ಟಿಕೊಂಡು ಕುಮ್ರಿ ಬೇಸಾಯ ಮಾಡುತ್ತಾ ಬಂದಿರುವುದರಿಂದ ಇವರ ವ್ಯವಸಾಯ ಪದ್ಧತಿಯು ಸರಳವಾದದ್ದು ಮತ್ತು ಪಾರಂಪರಿಕವಾದದ್ದು ಹಾಗೂ ಯಾವುದೇ ರೀತಿಯ ರಾಸಾಯನಿಕ ಗೊಬ್ಬರಗಳನ್ನು ಬಳಸದೇ ಸುಸ್ಥಿರವಾದ ಜೀವನವನ್ನು ಸಾಗಿಸುತ್ತಾರೆಂದು ತಮ್ಮ ಪುಸ್ತಕದಲ್ಲಿ ತಿಳಿಸಿದ್ದಾರೆ.

**ಸೋಮಸುಂದರಂ. ಎಚ್ ಎನ್., ಕಿಬೆ ಆರ್ ವಿ, (೧೯೯೦),** ಇವರು ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟದಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ

ಕೇಂದ್ರದ ವತಿಯಿಂದ ಹೊರತಂದ "Soliga, the Tribe and its Pride" ಎಂಬ ಗ್ರಂಥದಲ್ಲಿ ಸೋಲಿಗರ ಬದುಕು ಮತ್ತು ಅವರ ಸ್ಥಳೀಯ ಸಂಘ–ಸಂಸ್ಥೆಗಳ ಬಗ್ಗೆ, ವ್ಯವಸಾಯ ಪದ್ಧತಿ, ಹಬ್ಬಗಳ ಆಚರಣೆ, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ ವತಿಯಿಂದ ಗಿರಿಜನರಿಗೆ ಲಭ್ಯವಾಗಿರುವ ಸೌಲಭ್ಯಗಳ ಮಾಹಿತಿಯನ್ನೊಳಗೊಂಡಂತೆ ಆ ಪ್ರದೇಶದಲ್ಲಿ ಸೋಲಿಗರಲ್ಲಿ ಕಂಡುಬರುವ **"ಸಿಕಲ್ ಸೆಲ್ ಅನೀಮಿಯಾ"** ಹಾಗೂ ಸೋಲಿಗ ಮಕ್ಕಳ ಶಿಕ್ಷಣವಿಲ್ಲದೇ ಕಾಲಘಟ್ಟದಲ್ಲಿ ಸೋಲಿಗರಲ್ಲಿ ಆದ ಬೆಳವಣಿಗೆಯ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.[೧೧] ಇದು ಸೋಲಿಗರ ಬಗ್ಗೆ ಮಾಹಿತಿ ನೀಡುವ ಉಪಯುಕ್ತವಾದಂತಹ ಕಿರು ಹೊತ್ತಿಗೆಯಾಗಿದೆ. ಸೋಲಿಗರ ಮಕ್ಕಳು ಕಾಡಿನ ಪರಿಸರದಲ್ಲಿ ಬೆಳೆಯುತ್ತಾ ಹನ್ನರಡನೇ ವಯಸ್ಸಿಗೆ ಕಾಡಿನಲ್ಲಿರುವ ಸುಮಾರು ೨೬೦ಕ್ಕಿಂತಲೂ ಹೆಚ್ಚಿನ ಮರ–ಗಿಡಗಳ ಪರಿಚಯವನ್ನು, ಪ್ರತಿಯೊಂದು ವಿಷಯಗಳ ಬಗ್ಗೆ ತಿಳಿದುಕೊಂಡಿರುತ್ತಾರೆ ಎಂದು ತಿಳಿಸಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಸೋಲಿಗ ಮಕ್ಕಳಿಗೆ ಈ ರೀತಿಯ ಶಿಕ್ಷಣವು ಕಡಿಮೆಯಾಗುತ್ತಿದೆ. ಅದರಲ್ಲೂ ಕಾಡಿನ ಪ್ರಾಣಿ–ಪಕ್ಷಿಗಳು, ಮರ, ಗಿಡಗಳ ಬಗ್ಗೆ ತಿಳಿದುಕೊಳ್ಳುವುದು ಸಹ ಕಡಿಮೆಯಾಗುತ್ತಿದೆ. ಕಾರಣ ಈಗಾಗಲೇ ಸೋಲಿಗ ಸಮುದಾಯವು ಕಾಡಿನಿಂದ ಹೊರ ಬಂದಿದೆಯಲ್ಲದೇ ಅರಣ್ಯ ಇಲಾಖೆಯವರು ಸೋಲಿಗರನ್ನು ಕಾಡಿನ ಒಳಗೆ ಬಿಡಲು ಅವಕಾಶ ಮಾಡಿಕೊಡದೇ ಭಯದ ವಾತಾವರಣ ನಿರ್ಮಾಣವಾಗಿದ್ದು, ಈ ಹಿಂದೆ ಇದ್ದಂತಹ ಸ್ವಾತಂತ್ರ್ಯವೂ ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗುತ್ತಿದೆ ಎಂದು ತಿಳಿಸಿದ್ದಾರೆ.

**ಜಡೇಗೌಡ ಎಂ, (೨೦೦೦),** ಅವರು Effect of Farm Yard Manure on Maize and Finger millet Based Intercropping ಎಂಬ ತಮ್ಮ ಅಪ್ರಕಟಿತ ಮಹಾಪ್ರಬಂಧದಲ್ಲಿ ಸೋಲಿಗರ ಸುಸ್ಥಿರ ಬೇಸಾಯಗಳಾದ ರಾಗಿ, ಜೋಳ, ನವಣೆ, ಸಜ್ಜೆ ಹಾಗೂ ಇತರೆ ಸಿರಿಧಾನ್ಯಗಳ ಬಗ್ಗೆ ಕುರಿತು ಸೋಲಿಗರ ವ್ಯವಸಾಯದ ಪದ್ಧತಿಗಳ ವಿಶ್ಲೇಷಣೆಗಳೊಂದಿಗೆ ಉಪಯುಕ್ತ ಮಾಹಿತಿಗಳನ್ನು ತಿಳಿಸಿದ್ದಾರೆ.[೧೨]

**ಮೇತ್ರಿ ಕೆ ಎಂ, (೨೦೦೨), 'ಬುಡಕಟ್ಟು ಕುಲಕಸುಬುಗಳು',** ಇವರು ತಮ್ಮ ಪುಸ್ತಕದಲ್ಲಿ ಬುಡಕಟ್ಟಿನ ಪ್ರತಿಯೊಂದು ಜನಾಂಗದವರಿಗೂ ಅವರದೇ ಆದ ಕುಲಕಸುಬಿದೆ. ಅದೇ ರೀತಿ ಸೋಲಿಗರಿಗೂ ಸಹ ಅವರದ್ದೇ ಆದ ಪಾರಂಪರಿಕವಾದ ಕಸುಬಿದೆ ಎಂದಿದ್ದಾರೆ. ಈ ಕುರಿತು ವಿವರವಾದ ಮಾಹಿತಿಗಳನ್ನು ಕಲೆಹಾಕಲಾಗಿದೆ. ಕುಲಕಸುಬಿನ ವಿಷಯದ ಕುರಿತು ಮೇತ್ರಿ ಅವರ **"ಬುಡಕಟ್ಟು ಕುಲ ಕಸುಬುಗಳು"** ಎಂಬ ಪುಸ್ತಕದಲ್ಲಿ ಸೋಲಿಗರ ಕಸುಬುಗಳನ್ನೂ ಉಲ್ಲೇಖಿಸಿದ್ದಾರೆ. "ಕರ್ನಾಟಕದ ಸೋಲಿಗರು ಮೂಲತಃ ಕುಮ್ರಿ ಬೇಸಾಯ, ಕಾಡಿನ ಉತ್ಪನ್ನಗಳ ಸಂಗ್ರಹಣೆ, ಬೇಟೆಯನ್ನು ಅವಲಂಬಿಸಿ ದವರಾಗಿದ್ದವರು. ಇಂದಿಗೂ ಪ್ರಾಣಿ, ಮೀನು, ಜೇನು ಸಂಗ್ರಹಣೆ ಇವರಲ್ಲಿ ಚಾಲ್ತಿಯಲ್ಲಿರುವುದು. ಕಾಡಿನಲ್ಲಿ ಬಿದಿರು ಹೇರಳವಾಗಿ ಲಭ್ಯವಾಗುವುದರಿಂದ ಬಿದಿರಿನಿಂದ ಬುಟ್ಟಿ, ಕುಕ್ಕೆ, ಮೊರ, ರೇಷ್ಮೆಯ ತಟ್ಟೆ ಚಂದ್ರಿಕೆ ಮುಂತಾದ ಸಾಮಾನುಗಳನ್ನು ತಯಾರಿಸುವುದು ಇವರ ಪೂರಕ ವೃತ್ತಿಗಳಲ್ಲಿ ಒಂದಾಗಿದೆ"[೧೩] ಎಂದು ದಾಖಲಿಸಿದ್ದಾರೆ. ಸೋಲಿಗರು ಮೂಲತಃ ಪೋಡುಗಳನ್ನು ಕಟ್ಟಿಕೊಂಡು ಕುಮುರಿ ಬೇಸಾಯ ಮಾಡುತ್ತಿದ್ದವರು ಎಂದು ತಿಳಿಸಿದ್ದಾರೆ.

ಇಂದಿಗೂ ಸಹ ಸೋಲಿಗರು ವಿಶೇಷವಾಗಿ ತಮ್ಮದೇ ಆದ ಕೆಲವು ಕಸುಬುಗಳನ್ನು ಮಾಡುತ್ತಾರೆ. ಅವುಗಳಲ್ಲಿ ಕಾಡಿನ ಉತ್ಪನ್ನಗಳ ಸಂಗ್ರಹಣೆ, ಜೇನು ಸಂಗ್ರಹಣೆ ಇತ್ಯಾದಿ ವಿಶಿಷ್ಟವಾಗಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಸೋಲಿಗರಲ್ಲಿ ಬಿದಿರಿನಿಂದ ಮೊರ, ಕುಕ್ಕೆ ರೇಷ್ಮೆಯ ತಟ್ಟೆಗಳನ್ನು ಮಾಡುವುದು

ಕಡಿಮೆಯಾಗಿದೆ. ಕಾರಣ, ಚಾಮರಾಜನಗರ ಜಿಲ್ಲೆ ಹಾಗು ಮೈಸೂರಿನ ಅರಣ್ಯಗಳಲ್ಲಿ ಕಾಡಿನಲ್ಲಿ ಬಿದಿರು ಕಡಿಮೆಯಾಗಿರುವುದರಿಂದ ಹಿಂದೆ ಮಾಡುತ್ತಿದ್ದ ಕುಲ ಕಸುಬುಗಳು ಮರೆತುಹೋಗಿದೆಯಲ್ಲದೇ ಜೇನುಬೇಟೆ, ಕಾಡುತ್ಪನ್ನಗಳ ಸಂಗ್ರಹವೂ ಪ್ರಸ್ತುತದಲ್ಲಿ ಕಡಿಮೆಯಾಗಿರುವುದು ಕಂಡುಬಂದಿದೆ. ಸೋಲಿಗರ ಕುಲಕಸುಬು ಕಡಿಮೆಯಾಗಿ ಇತ್ತೀಚೆಗೆ ಕೂಲಿಯನ್ನು ಹೆಚ್ಚಾಗಿ ಅವಲಂಬಿಸಿರುವುದನ್ನು ಕಾಣುತ್ತೇವೆ.

**ಕೇಶವನ್ ಪ್ರಸಾದ್ ಕೆ, (೨೦೦೫), ಅವರು 'ಸೋಲಿಗರು ಹಾಡಿದ ಬಿಳಿಗಿರಿರಂಗನ ಕಾವ್ಯ'** ಎಂಬ ಪುಸ್ತಕದಲ್ಲಿ ತಿಳಿಸಿದ್ದಾರೆ. ಅವರ ಪ್ರಕಾರ ಪಾರ್ವತಿ ಪರಮೇಶ್ವರನ ಕಥೆ. "ಪಾರ್ವತಿ ಪರಮೇಶ್ವರರು ತಮ್ಮ ಬೆವರಿನಿಂದ ಎರಡು ಗೊಂಬೆಗಳನ್ನು ಮಾಡಿ ಅದಕ್ಕೆ ಜೀವತುಂಬಿ ಒಂದು ನೀಲಯ್ಯನಾಯಿತು. ಮತ್ತೊಂದು ಸಂಕಮ್ಮನಾಯಿತು. ಇವರಿಂದ ವಂಶಾವಳಿ ಬೆಳೆಯಿತು. **ಇವರ ಮಕ್ಕಳು ಸೋಲನ ಹಂಬಿನ ಗೆಡ್ಡೆಯನ್ನು ತಿಂದು ಜೀವಿಸುತ್ತಿದ್ದರು.** ಹೀಗೆ ಅವರು ಗೆಡ್ಡೆಯನ್ನು ಕಿತ್ತು ಬೇಯಿಸುತ್ತಾ ತಿನ್ನುತ್ತಲೇ ಮುಪ್ಪಾದರು. ಆದರೆ ಸೋಲನ ಹಂಬು ಮಾತ್ರ ಮತ್ತೆ ಮತ್ತೆ ಚಿಗುರಿ ಹೊಸ ಹೊಸ ಗೆಡ್ಡೆಯನ್ನು ಬಿಡುತ್ತಿತ್ತು. ಒಮ್ಮೆ ಆ ಮುದುಕ ಗೆಡ್ಡೆಯನ್ನು ಕೀಳಲು ಹೋದಾಗ ಸೋಲನ ಹಂಬು ಹೇಳಿತು; ನಿನ್ನ ಕೈಯಿಂದ ನನ್ನ ಗೆಡ್ಡೆಯನ್ನು ಸಾಯುವವರೆಗೂ ಕಿತ್ತರೂ ನನ್ನನ್ನು ನೀನು ಸೋಲಿಸಲಿಕ್ಕೆ ಆಗುವುದಿಲ್ಲ. ಆದ್ದರಿಂದ ನನ್ನ ಗೆಡ್ಡೆಯನ್ನು ಕಿತ್ತು ಸೋತವನು ನೀನು 'ಸೋಲಿಗ' ಎಂದು ಹೇಳಿತು. ಆದರೆ ಇವೆಲ್ಲ ಕಲ್ಪಿತ ಕಥೆಗಳು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ"[೧೪] ಎಂದು ಹೇಳುತ್ತಾರೆ.

**ಚಂದ್ರು ಕಾಳೇನಹಳ್ಳಿ, (೨೦೦೬), 'ಸೋಲಿಗ ಸಂಸ್ಕೃತಿ'** ಎಂಬ ತಮ್ಮ ಕೃತಿಯಲ್ಲಿ ಸೋಲಿಗರ ಪೋಡು, ಕಾಲೋನಿಗಳಲ್ಲಿ ಬದಲಾವಣೆಯ ಗಾಳಿ ಬೀಸಿದೆ ಎನ್ನುತ್ತಾರೆ. ಅಲ್ಲದೆ ಅನೇಕ ಸಾಂಸ್ಕೃತಿಕ ಪರಿವರ್ತನೆ ಜನಾಂಗದ ಮೇಲೆ ಉಂಟಾಗಿದೆ. ಇಷ್ಟಾಗಿಯೂ ಸೋಲಿಗ ಸಮುದಾಯವು ತಮ್ಮ ಮೂಲ ಸೆಲೆಯನ್ನು ಬಿಟ್ಟುಕೊಡದೇ ಬದುಕುತ್ತಿದೆ. ಆದುದರಿಂದ ಅಂದಿನ ಹಾಗೂ ಇಂದಿನ ಸೋಲಿಗರು ಬುಡಕಟ್ಟನ್ನು ತೌಲನಿಕವಾಗಿ ಅಧ್ಯಯನ ನಡೆಸುವುದು ಓದುಗರಿಗೆ ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಸೋಲಿಗ ಸಂಸ್ಕೃತಿಯಲ್ಲಿ ಸೋಲಿಗರು ಹೆಸರಿನ ವೈಶಿಷ್ಟ್ಯ ಸಾಮಾಜಿಕ, ಆರ್ಥಿಕ, ಜಾನಪದ ಆಚರಣೆ, ಸೋಲಿಗರ ವಾಚಿಕ ಸಾಹಿತ್ಯ (ಪುರಾಣ, ಐತಿಹ್ಯ, ಕಥೆಗಳು) ಸೋಲಿಗರ ಭೌತಿಕ ಸಂಸ್ಕೃತಿ, ಸೋಲಿಗರ ಪ್ರದರ್ಶನ ಕಲೆಗಳು ಈ ಎಲ್ಲಾ ವಿಷಯಗಳನ್ನು ಅಧ್ಯಯನ ಮಾಡಿ ಬರವಣಿಗೆಯ ರೂಪದಲ್ಲಿ ತಿಳಿಸಿದ್ದಾರೆ.[೧೫]

**ಬೋರಲಿಂಗಯ್ಯ ಹಿ ಚಿ (ಸಂ), (೨೦೦೬), ತಮ್ಮ 'ಗಿರಿಜನ ಕಾವ್ಯ ಹಲವು ತೊರೆಗಳ ತಪ್ತ ಪ್ರವಾಹ'**ದಲ್ಲಿ ಇದರ ಮಹತ್ವ ಕುರಿತು ತಿಳಿಸಿದ್ದಾರೆ. "ಮಾತಿಗಿಂತ ಮೊದಲು ಸಂಗೀತವಿತ್ತು ಎಂಬುದು ಒಂದು ನಂಬಿಕೆ. ಗಿರಿಜನರ ವಿಚಾರದಲ್ಲೂ ಇದು ಸತ್ಯ. ಇವರಲ್ಲಿ ಇಂದಿಗೂ ಮಾತಿಗಿಂತ ಹಾಡಿಗೆ ಮತ್ತು ಸಂಗೀತಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಅವರ ಮಾತೇ ಕಾವ್ಯ ಎಂಬುದನ್ನು ನಾವು ಅರಿಯಬೇಕಾದಲ್ಲಿ, ಕಾಡುಗೊಲ್ಲರ ಜುಂಜಪ್ಪನ ಕಾವ್ಯವನ್ನು ನೋಡಬೇಕಾಗುತ್ತದೆ. ಅಕ್ಷರ ಕಲಿತ ಶಿಷ್ಟ ಕವಿಗಳು ಪ್ರಜ್ಞಾಪೂರ್ವಕವಾಗಿ ಎಚ್ಚರಿಕೆಯಿಂದ ಪೂರ್ವೋದ್ದೇಶಗಳಿಂದ ಭಾಷೆಯನ್ನು ಬಳಸುತ್ತಾರೆ. ಆದ್ದರಿಂದಲೇ ದೇಶೀ ಪರಂಪರೆಯ ಇಂಥ ಜೀವಂತ ಅಂಶಗಳು ನಮ್ಮ ಹೊಸ ಸಾಹಿತ್ಯ ಪ್ರಕಾರಗಳಿಗೆ ವಿಶಿಷ್ಟವಾದ ಸೊಗಡನ್ನು ಕೊಡುವ ಪ್ರಕ್ರಿಯೆಯನ್ನು ನಾವು ಕಾಣಬಹುದು"[೧೬] ಎಂದು ತಿಳಿಸಿದ್ದಾರೆ. ಗಿರಿಜನರು ವಾಸಿಸುವ ಜಗತ್ತು ಚಿಕ್ಕದಾದರೂ ಅವರು ತಮ್ಮ ಕಾವ್ಯದಲ್ಲಿ ಸೃಷ್ಟಿಸಿಕೊಂಡು ವಾಸಿಸುವ ಜಗತ್ತು ಅನಂತವಾದದ್ದು. ಅದೇ ರೀತಿಯಲ್ಲಿ ಮಾತಿಗಿಂತ ಮೊದಲು ಸಂಗೀತವಿತ್ತು ಎಂಬುದೊಂದು ನಂಬಿಕೆ ಸೋಲಿಗರಲ್ಲಿಯೂ

ಇರುವುದನ್ನು ಕಾಣುತ್ತೇವೆ. ಸೋಲಿಗರ ಕಾಡಿನ ಪರಿಸರದ ಜೊತೆಗೆ ತಮ್ಮ ಇಡೀ ಜೀವನದ ಸಾರವನ್ನು ಮೌಖಿಕ ಸಾಹಿತ್ಯದ ಮೂಲಕ ಹೆಣೆದುಕೊಂಡು ಹಾಡು ಮತ್ತು ಸಂಗೀತಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾರೆ ಎಂದು ತಿಳಿಸಿದ್ದಾರೆ. ಅದೇ ರೀತಿಯಲ್ಲಿ ಸೋಲಿಗರು ಸಹ ಮೌಖಿಕ ಸಾಹಿತ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಇದಕ್ಕೆ ನಿದರ್ಶನವೆಂಬಂತೆ ಸೋಲಿಗರೇ ಕಾಡಿನ ಪರಿಸರಕ್ಕೆ ಕಟ್ಟಿಕೊಂಡ ಆಡುಕೆ, ಕಗ್ಗದ ಸಾಲುಗಳು, ಓಲಗ ಮತ್ತು ಹಾಡುಗಳು ಅವರ ಜೀವನ, ಕಾಡಿನ ಪರಿಸರ, ಪ್ರಾಣಿ–ಪಕ್ಷಿಗಳ ಚಿತ್ರಣ, ಅವರ ಬದುಕಿನ ರೀತಿ–ನೀತಿ ಇನ್ನು ಮುಂತಾದುವುಗಳನ್ನು ತಿಳಿಸಿದ್ದಾರೆ.

**ವಿಜಯಲಕ್ಷ್ಮಿ ಆರ್, (೨೦೦೬), 'ಕರ್ನಾಟಕದ ಬುಡಕಟ್ಟು ನೆಲೆಗಳು' (ಸಂ) ಆದಿವಾಸಿ ಆಖ್ಯಾನ** ಈ ಲೇಖನದಲ್ಲಿ ಶೋಲಗ ಮತ್ತು ಸೋಲಿಗರು ಸಮುದಾಯದ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಸೋಲಿಗರು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುಣಸೂರು, ಚಾಮರಾಜನಗರ, ಕೊಳ್ಳೇಗಾಲ, ಯಳಂದೂರು, ಬಿಳಿಗಿರಿರಂಗನಬೆಟ್ಟ, ಮಹದೇಶ್ವರಬೆಟ್ಟದ ಪರಿಸರದಲ್ಲಿ ಯಥೇಚ್ಛವಾಗಿ ಹಳೆ ಮೈಸೂರು ರಾಜ್ಯದ ಇತರೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಹಾಗೂ ಹಾಸನ, ಬಳ್ಳಾರಿ, ಚಿಕ್ಕಮಗಳೂರು, ಮಂಡ್ಯ, ತುಮಕೂರು, ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಸೋಲಿಗರು ದಾಖಲಾಗಿದ್ದಾರೆ. "ಸೋಲಿಗರ ಕುಮ್ರಿ ಬೇಸಾಯ, ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಪಶುಪಾಲನೆ, ಕೃಷಿಕೂಲಿ, ಬುಟ್ಟಿ ಹೆಣೆಯುವಿಕೆಯನ್ನು ಸೋಲಿಗರು ಮುಖ್ಯ ವೃತ್ತಿಯನ್ನಾಗಿ ಹೊಂದಿದ್ದಾರೆ"[೧೭] ಎಂದು ತಿಳಿಸಿದ್ದಾರೆ.

**ನಾಗೇಶ್ ಹೆಗಡೆ, (೨೦೦೮), 'ವನ ಸಂಜೀವಿನಿ' ಶಿಕ್ಷಕರ ಕೈಪಿಡಿ** ಎಂಬ ಪುಸ್ತಕದಲ್ಲಿ ಸೋಲಿಗರ ಹಬ್ಬಗಳ ಕುರಿತು ಚರ್ಚಿಸಿದ್ದಾರೆ. ಸೋಲಿಗರು ಮತ್ತು ಅವರ ವಾಸದ ಮನೆ, ಪೋಡುಗಳು ವರ್ಷವಿಡೀ ನಡೆಯುವ ಹಬ್ಬ ಹರಿದಿನಗಳ ಹಾಡು, ಆದಿವಾಸಿಗಳೆಂದರೆ ಯಾರು ಎಂಬುದರ ಬಗ್ಗೆ ಚರ್ಚಿಸಿದ್ದಾರೆ. ಸಾಂಪ್ರದಾಯಿಕವಾಗಿ ಸೋಲಿಗರ ಮನೆ ಎಂದರೆ ಒಂದು ಕೋಣೆಯ ಹಟ್ಟಿ, ತೆಳುವಾದ ಕಟ್ಟಿಗೆ ಪಟ್ಟಿಗಳನ್ನು ನೇಯ್ದು ಮಣ್ಣನ್ನು ಮೆತ್ತಿದರೆ ಅದೇ ಗೋಡೆ. ಬಿಳಿ ಮಣ್ಣನ್ನು ಮೆತ್ತಿದರೆ ಬಿಳಿ ಗೋಡೆ, 'ಬಾಣೆಹುಲ್ಲು' ಎಂಬುದನ್ನು ಜೋಡಿಸಿ ಮನೆಗೆ ಹೊದಿಸಿದರೆ ಅದೇ ಛಾವಣಿ."[೧೮] ಈ ರೀತಿಯಾಗಿ ಸೋಲಿಗರ ವಾಸದ ಮನೆ ಮತ್ತು ಒಟ್ಟಾರೆ ಜೀವನದ ಬಗ್ಗೆ ಈ ಪುಸ್ತಕದಲ್ಲಿ ತಿಳಿಸಿದ್ದಾರೆ.

**ಸೋಮಸುಂದರ್ ಎಂ ಎಚ್, (೨೦೦೯), 'ಸೋಲಿಗರ ಸಿರಿ"** ಕೃತಿಯಲ್ಲಿ ವಿವರಿಸಿರುವಂತೆ ಆಹಾರ ಸಂಗ್ರಹಣೆ ಆದಿವಾಸಿಗಳಲ್ಲಿ ಮೊದಲಿನಿಂದಲೂ ಬಂದಿರುವ ಪದ್ಧತಿ. ಸಂಗ್ರಹಣೆ ಎಂದರೆ ಕೂಡಿಡುವುದಲ್ಲ. ಕಾಡಿಗೆ ಹೋಗಿ ಸಂಗ್ರಹಿಸಿ ತರುವುದು. ಗೆಡ್ಡೆ–ಗೆಣಸು, ಹಣ್ಣು–ಕಾಯಿಗಳನ್ನು ಉಪಯೋಗಿಸುವರು. ಏಳು ಬಗೆಯ ಗೆಣಸನ್ನು ಹೆಸರಿಸುವರು. ಹಲಸಿನಕಾಯಿ, ಬಿದಿರಿನ ಕಳಲೆ, ಕಾಡು ಸೊಪ್ಪುಗಳು ಮುಂತಾದವನ್ನು ತರುವರು. ಜೇನು ಇವರಿಗೆ ಬಹಳ ಪ್ರಿಯವಾದ ಆಹಾರ. ಸೋಲಿಗ ಹುಡುಗರು ಕಾಡಿಗೆ ಹೋದರೆ ಜೇನಿನ ಸವಿ ನೋಡಿಯೇ ಬರುವುದು. ಜೊತೆಗೆ ರಾಗಿ, ಜೋಳ ಬೆಳೆಯುವರು. ಜೋಳದ ಕಾಲದಲ್ಲಿ ಸೋಲಿಗ ಮಕ್ಕಳಿಗೆ ಜೋಳ ತಿನ್ನುವುದು ಅತ್ಯಂತ ಸಂತಸ ಎಂದು ತಿಳಿಸಿದ್ದಾರೆ."[೧೯]

**ವೀರಭದ್ರನಾಯಕ ಪಿ, (೨೦೧೦),** "ಶಿಕ್ಷಣ ಮತ್ತು ಬುಡಕಟ್ಟು ಅಭಿವೃದ್ಧಿ: ಚಾಮರಾಜನಗರ ಜಿಲ್ಲೆಯ ಆಶ್ರಮ ಶಾಲೆಗಳ ಒಂದು ವಿಮರ್ಶಾತ್ಮಕ ಅಧ್ಯಯನ" ಎಂಬ ಮಹಾಪ್ರಬಂಧದಲ್ಲಿ ಸೋಲಿಗ ಮಕ್ಕಳು ಕಲಿಯುತ್ತಿರುವ ಆಶ್ರಮ ಶಾಲೆಗಳ ಶಿಕ್ಷಣ ವ್ಯವಸ್ಥೆ ಮತ್ತು ಅವರ ಪರಿಸರ, ಮೂಲಭೂತ ಸೌಲಭ್ಯಗಳು ಇನ್ನೂ ಮುಂತಾದ ವಿಷಯಗಳನ್ನು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ.[೨೦]

**ಮರಳುಸಿದ್ದಯ್ಯ ಹೆಚ್ ಎಂ, (೨೦೧೦), 'ಪರಿವರ್ತನೆಯ ಹಾದಿಯಲ್ಲಿ ಮದ್ದೂರು ಕಾಲೋನಿಯ ಸೋಲಿಗರು'** ಎಂಬ ತಮ್ಮ ಲೇಖನದಲ್ಲಿ ಸೋಲಿಗರ ಉಡುಗೆ-ತೊಡುಗೆ ಬಗ್ಗೆ ಹೇಳಿದ್ದಾರೆ. ಕಾಡಿನಲ್ಲಿ ವಾಸವಾಗಿದ್ದ ಇವರಿಗೆ ಬಹುತೇಕ ಕಡಿಮೆ ಬಟ್ಟೆ ಇದ್ದರೆ ಸಾಕು ಮತ್ತು ಹೆಂಗಸರು ಎದೆಯ ಮೇಲಿಂದ ಮುಸುಕು ಹಾಕಿಕೊಂಡು ಅದರ ತುದಿಯನ್ನು ಇನ್ನೊಂದು ತುದಿಯಿಂದ ಗಂಟು ಹಾಕಿ ಸೀರೆಯನ್ನು ಉಡುತ್ತಿದ್ದರು ಎಂದು ತಿಳಿಸಿದ್ದಾರೆ.[೨೧]

**ವಸಂತಮ್ಮ ಎಚ್ ಎಮ್, (೨೦೧೧)**, ಇವರು ವೆರಿಯರ್ ಎಲ್ವಿನ್ ಗಿರಿಜನರ ಬಗ್ಗೆ ಹೇಳಿದ ಸಂದೇಶವನ್ನು 'ಸಮಾಜಶಾಸ್ತ್ರಜ್ಞರು' ಎಂಬ ತಮ್ಮ ಪುಸ್ತಕದಲ್ಲಿ ಹೀಗೆ ತಿಳಿಸಿದ್ದಾರೆ. ಗಿರಿಜನರಲ್ಲಿರುವ ವೈವಿಧ್ಯವನ್ನು ಕಾಪಾಡುವುದು ಅಗತ್ಯ. ಅವರ ಸಂಸ್ಕೃತಿ, ಕಲೆ, ಬಹಳ ಅಮೂಲ್ಯವಾದುವು; ಅವನ್ನು ಗೌರವಿಸಬೇಕು ಅವರೂ ಈ ದೇಶದ ಪ್ರಜೆಗಳೆಂಬ ಭಾವನೆಯನ್ನು ಬೆಳೆಸಬೇಕು. ಗಿರಿಜನರು ತಮ್ಮ ವಿಶಿಷ್ಟ ಜೀವನ ಆನಂದಗಳನ್ನು ಉಳಿಸಿಕೊಳ್ಳಲು ಸಹಾಯ ಮಾಡುವುದು ಅಗತ್ಯ. ಅವರಿಗೆ ಅನ್ನ, ಆರೋಗ್ಯ, ಸಂಚಾರ ಸೌಲಭ್ಯ, ತಿಳುವಳಿಕೆ ನಾಗರಿಕತೆಗಳ ಅಗತ್ಯವಿದೆ. ಅವನ್ನೊದಗಿಸಿ ಅವರ ಸಂಸ್ಕೃತಿಯನ್ನು ರಕ್ಷಿಸಿ ಪೋಷಿಸುವ ಅಗತ್ಯವೂ ಇದೆ. ಸೋಲಿಗರು ಕಾಡಿನ ಮಕ್ಕಳು; ಪರಿಸರದೊಟ್ಟಿಗೆ ಬದುಕನ್ನು ಕಟ್ಟಿಕೊಂಡಿದ್ದಾರೆ. ಆದುದರಿಂದ ಅವರ ಪರಿಸರ ಜೀವನಕ್ಕೆ ತೊಂದರೆ ಕೊಡದೆ ಪೋಷಿಸುವುದು ಅಗತ್ಯವಾಗಿದೆ. ಅದೇ ರೀತಿಯಲ್ಲಿ ಸೋಲಿಗರು ತಮ್ಮದೇ ಆದ ಶ್ರೀಮಂತ ಕಲೆ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದು ಪ್ರಸ್ತುತ ದಿನಗಳಲ್ಲಿ ಮಹತ್ತರವಾದ ಜವಾಬ್ದಾರಿಯಾಗಿದೆ.[೨೨]

'ಸಮಾಜಶಾಸ್ತ್ರದ ಪಿತಾಮಹರಾದ ಅಗಸ್ಟ್ ಕಾಮ್ಟ್' ಅವರು ತಮ್ಮ ಬರಹದಲ್ಲಿ ಹೇಳಿರುವ ಕೆಲವು ವಿಷಯಗಳನ್ನು ತಿಳಿಯಬಹುದಾಗಿದೆ. ಸಮಾಜಶಾಸ್ತ್ರವು ಅತ್ಯಂತ ಉಪಯುಕ್ತವಾದ ಹಾಗೂ ಪ್ರಮುಖ ವಿಜ್ಞಾನ. ಮಾನವರು ಹೇಗೆ ಪ್ರಕೃತಿಯ ನಿಯಮಗಳನ್ನು ಗ್ರಹಿಸಿ ತನಗೆ ಬೇಕಾದ ರೀತಿಯಲ್ಲಿ ನಿಯಂತ್ರಿಸಿ ಕೊಂಡಿದ್ದಾರೆಯೋ ಅಂತೆಯೇ ಸಾಮಾಜಿಕ ತತ್ವಗಳನ್ನು ಅರಿತು ಸಮಾಜ ಜೀವನವನ್ನು ಸರಿಯಾದ ರೀತಿಯಲ್ಲಿ ನಿಯಂತ್ರಿಸಲು ಸಮಾಜಶಾಸ್ತ್ರದಿಂದ ಸಾಧ್ಯ. ಸಮಾಜಶಾಸ್ತ್ರದ ಅಧ್ಯಯನದ ಅವಶ್ಯಕತೆ ಎಷ್ಟಿದೆ ಎಂದರೆ, ಸಾಮಾಜಿಕ ವ್ಯವಸ್ಥೆಯಲ್ಲಿ ಮೂಲಭೂತ ನಿಯಮಗಳನ್ನು ತಿಳಿದುಕೊಳ್ಳದೇ ಜನರು ಮಾಡುತ್ತಿರುವ ತಪ್ಪುಗಳನ್ನು ತಿದ್ದಿಕೊಳ್ಳಲು ಸಮಾಜಶಾಸ್ತ್ರದ ಅಧ್ಯಯನ ಅವಶ್ಯಕ ಎಂದಿದ್ದಾರೆ. ಸಾಮಾಜಿಕ ಪ್ರಗತಿಯು ಜನರ ಬೌದ್ಧಿಕ ಪ್ರಗತಿಯನ್ನು ಆಧರಿಸಿರುವುದರಿಂದ ಬೌದ್ಧಿಕ ಪ್ರಗತಿಯಾಗಬೇಕಾದರೆ ಸಮಾಜಶಾಸ್ತ್ರದಂತಹ ವಿಜ್ಞಾನಗಳು ಅವಶ್ಯಕ ಎಂದಿದ್ದಾರೆ. "ಸಮಾಜಶಾಸ್ತ್ರ ಬೇರೆಲ್ಲ ವಿಜ್ಞಾನಗಳ ತಾಯಿಯಾಗಿ ಸಂಯೋಜನಾ ಶಾಸ್ತ್ರವಾಗಿ ಪರಿಣಮಿಸಿದೆ. ಜೊತೆಗೆ ಮುಂದೇನಾಗ ಬಹುದೆಂಬ ಭವಿಷ್ಯದ ಬಗ್ಗೆ ಬೆಳಕು ಚೆಲ್ಲುವ ಅರ್ಹತೆ ಸಮಾಜಶಾಸ್ತ್ರಕ್ಕಿದೆ. ಸಮಾಜಶಾಸ್ತ್ರ ಒಂದು ವಿಜ್ಞಾನವಾಗಿರದೇ ಸಾಮಾಜಿಕ ಪುನರ್‌ರಚನೆ, ಸಾಮಾಜಿಕ ಸಮಸ್ಯೆಗಳ ಬಗೆಹರಿಸುವಿಕೆ, ಸಾಮಾಜಿಕ ಪ್ರಗತಿ ಹಾಗೂ ನೈತಿಕ ಜಾಗೃತಿಗೆ ಅವಶ್ಯಕ ಮಾಹಿತಿಯನ್ನು ನೀಡುತ್ತದೆ. ಇವರ ಬರಹಗಳು ಪ್ರಸ್ತುತ ಸಮಾಜದಲ್ಲಿಯೂ ಸಹ ಹೆಚ್ಚು ಉಪಯುಕ್ತವಾದುದಾಗಿದೆ". ಸೋಲಿಗ ಸಮುದಾಯದ ಸಾಮಾಜಿಕ ವ್ಯವಸ್ಥೆಯನ್ನು ತಿಳಿಯುವಲ್ಲಿ ಮೊದಲಿಗರಾಗಿ ಸೋಲಿಗರು ಪ್ರಕೃತಿಯ ಆರಾಧಕರು; ಅದೇ ರೀತಿಯಲ್ಲಿ ಮೂಲಭೂತವಾದ ಹಾಗೂ ಸಮುದಾಯದ ಒಳಿತಿಗಾಗಿ ಇವರು ತಿಳಿಸಿರುವ ಎಲ್ಲಾ ವಿಷಯಗಳನ್ನು

ಅಳವಡಿಸಿಕೊಂಡು ಒಟ್ಟಾರೆ ಸಮುದಾಯದ ಒಂದು ಅಧ್ಯಯನವನ್ನು ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ಅಭ್ಯಸಿಸಿ ಕಟ್ಟುವುದು ಅತ್ಯವಶ್ಯಕವಾಗಿದೆ.

**ಸುನಂದಮ್ಮ ಎನ್, (೨೦೧೧), "ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಬುಡಕಟ್ಟು ಜನಾಂಗಗಳ ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು– ಒಂದು ವಿಮರ್ಶಾತ್ಮಕ ಅಧ್ಯಯನ".** ಎಂಬ ಮಹಾಪ್ರಬಂಧದ ಅಧ್ಯಯನದ ಕೃತಿಯಲ್ಲಿ ಸೋಲಿಗರ ಆಚಾರ ವಿಚಾರಗಳು, ಅವರ ಉಪ ಪಂಗಡಗಳು, ಮದುವೆ, ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ತಿಳಿಸಿದ್ದಾರೆ. ಸರ್ಕಾರದಿಂದ ಸೋಲಿಗರು ಪಡೆಯುತ್ತಿರುವ ಸೌಲಭ್ಯಗಳ ಬಗ್ಗೆ ವಿವರಿಸಿದ್ದಾರೆ.[೨೩]

**ರವಿ ಯು ಎಂ, (೨೦೧೧), 'ಅರಣ್ಯದಂಚಿನ ಬದುಕು',** ಎಂಬ ಸಂಶೋಧನಾ ಕೃತಿಯಲ್ಲಿ ಸರ್ವಚೇತನ ವಾದಿಗಳಾದ ಸೋಲಿಗರು ಬಿಳಿಗಿರಿರಂಗಯ್ಯನನ್ನು ಪೂಜಿಸುತ್ತಾರೆ. ಸೋಲಿಗರ ಬೊಮ್ಮೇಗೌಡನ ಮಗಳು ಕುಸುಮಾಲೆಯನ್ನು ರಂಗಸ್ವಾಮಿ ಮದುವೆಯಾಗಿದ್ದರಿಂದ ರಂಗಸ್ವಾಮಿ ತಮಗೆ ಭಾವನಾಗಬೇಕು ಎನ್ನುತ್ತಾರೆ. ಮತ್ತೊಂದೆಡೆ ಮೌಖಿಕ ಪರಂಪರೆಯಲ್ಲಿ ಸೋಲಿಗರ ಹೆಣ್ಣೊಬ್ಬಳನ್ನು ಬಿಳಿಗಿರಿರಂಗಯ್ಯ ಸಂಬಂಧ ಹೊಂದಿದ್ದ. ಅವಳನ್ನು ರಂಗಿ ಎಂದು ರಂಗನಿಗೆ ಸಂಬಂಧಿಯಾಗಿ ಕರೆಯಲಾಗಿದೆ. ಹೀಗೆ ಸೋಲಿಗರ ಮೌಖಿಕ ಸಾಹಿತ್ಯ ಹಾಗು ಸೋಲಿಗರು ವೈಷ್ಣವ ಆರಾಧಕರಾದುದರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ.[೨೪]

**ನಾಗೇಶ ಹೆಗಡೆ, (೨೦೧೨),** ಬರೆದಿರುವ **'ವನ ಸಂಜೀವನ'** ಶಿಕ್ಷಕರಿಗಾಗಿ ಪರಿಸರ ಕೈಪಿಡಿ, ಬಿ.ಆರ್.ಟಿ ಅಭಯಾರಣ್ಯ, ಕರ್ನಾಟಕ ಕೃತಿಯಲ್ಲಿ ಬದುಕಿನ ಕಲಿಕೆ, ನಿಸರ್ಗವೇ ನಮ್ಮ ಗುರು, ಮನಸ್ಸು ಹೃದಯ ಮತ್ತು ಕೈಗಳ ಮೂಲಕ ವಿದ್ಯೆಯ ಆವಾಹನೆ ಬಗ್ಗೆ ತಿಳಿಸುತ್ತಾ ಸೋಲಿಗ ಸಮುದಾಯದ ಮಕ್ಕಳ ಶಿಕ್ಷಣ ಎಂದರೆ ಅದು ಹೇಗಿರಬೇಕು, ಯಾವುದನ್ನು ಮೊದಲು ಕಲಿಯಬೇಕು ಎಂಬುದನ್ನು ತಿಳಿಸಿದ್ದಾರೆ. "ಬಿಳಿಗಿರಿರಂಗನ ಬೆಟ್ಟ ಶ್ರೇಣಿಗಳು ಪರಿಸರ ದೃಷ್ಟಿಯಿಂದ ತೀರಾ ಸೂಕ್ಷ್ಮ ಎನಿಸಿದ ಪಶ್ಚಿಮ ಘಟ್ಟ ಮತ್ತು ಪೂರ್ವ ಘಟ್ಟಗಳನ್ನು ಬೆಸೆಯುವ ಕೊಂಡಿಯಂತಿವೆ. ಈ ಅರಣ್ಯ ಪ್ರದೇಶದಲ್ಲಿ ಚಿಕ್ಕ ಗುಡಿಸಲು ಹಾಕಿಕೊಂಡು ವಲಸೆ ಕೃಷಿ ಮಾಡಿಕೊಂಡು ಸೋಲಿಗ ಮೂಲ ನಿವಾಸಿಗಳು ಬದುಕುತ್ತಿದ್ದರು. ೧೯೭೪ರಲ್ಲಿ ಇಡೀ ಅರಣ್ಯ ಪ್ರದೇಶವನ್ನು **'ಅಭಯಾರಣ್ಯ'** ಎಂದು ಘೋಷಿಸಿದ ನಂತರ ತಮ್ಮ ಬದುಕಿನ ವಿಧಾನ ವನ್ನು ಬದಲಿಸಿಕೊಂಡು, ವಲಸೆ ಕೃಷಿಯನ್ನು ಕೈಬಿಟ್ಟು ಒಂದೆಡೆ ನೆಲೆಸಬೇಕಾಯಿತು. ಇಂದು ವಿಜಿಕೆಕೆ ಶಾಲೆಯಲ್ಲಿ ಕಲಿಯುತ್ತಿರುವ ಅನೇಕ ಮಕ್ಕಳು ಸೋಲಿಗರ ಈ ಕುಟುಂಬಗಳಿಂದಲೇ ಬರುತ್ತಿದ್ದಾರೆ."[೨೫]

**ಕೇಶವನ್ ಪ್ರಸಾದ್ ಕೆ ಮರಟ್ಟಿ, (೨೦೧೩),** ಇವರು ತಮ್ಮ 'ಅರಣ್ಯವಾಸಿ ಬುಡಕಟ್ಟುಗಳು' ಲೇಖನದಲ್ಲಿ ಬುಡಕಟ್ಟುಗಳ ಹಿನ್ನೆಲೆಯನ್ನು ಚರ್ಚಿಸಿದ್ದಾರೆ. ಮಾನವ ಸಮುದಾಯವೇ ಬುಡಕಟ್ಟು ಸ್ಥಿತಿಯಿಂದ ಕ್ರಮೇಣ ಆಧುನಿಕತೆಯ ಹಂತವನ್ನು ತಲುಪಿದೆ ಎಂಬುದು ಸಾರ್ವಕಾಲಿಕ ಸತ್ಯ. ಅದೇ ರೀತಿಯಲ್ಲಿ ಸೋಲಿಗರ ಬಗ್ಗೆ, ಅವರು ಪರಿಸರದ ಜೊತೆಗಿನ ಸಂಬಂಧದ ನಡುವಿನ ಒಡನಾಟ, ಕಾಡಿನಲ್ಲಿ ಸೋಲಿಗರು ನೆಲೆ ಕಂಡುಕೊಂಡ ವ್ಯವಸ್ಥೆ, ಒಟ್ಟಾರೆಯಾಗಿ ಸೋಲಿಗರ ಕಾಡಿನ ಪರಿಸರದ ಜೀವನವನ್ನು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.[೨೬]

**ಮಾದೇಗೌಡ ಸಿ. (೨೦೧೩),** ಅವರು Study on Life Style of Soliga Tribes at Biligiri Rangaswamy Temple Wildlife Sanctuary A Social Work Perspective ತಮ್ಮ ಅಪ್ರಕಟಿತ ಮಹಾಪ್ರಬಂಧ ಗ್ರಂಥದಲ್ಲಿ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ಎದುರಿಸುತ್ತಿರುವ ಸಮಸ್ಯೆ ಹಾಗೂ ಅವರ ಜೀವನದ ಬಗ್ಗೆ ತಿಳಿಸುತ್ತಾ, ಸೋಲಿಗರ ಕಿರು ಅರಣ್ಯ ಉತ್ಪಾದನೆಯ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡಿರುತ್ತಾರೆ.[೨೭]

**ವೀರಣ್ಣ ಎಂ ಡಿ, (೨೦೧೫), ಗಿರಿಜನ ವೈದ್ಯ ಪದ್ಧತಿ** (ಸೋಲಿಗ ಬುಡಟಕಟ್ಟು ಜನಾಂಗಕ್ಕೆ ಸಂಬಂಧಿಸಿದಂತೆ) ಕರ್ನಾಟಕ ಸಾಹಿತ್ಯ ಅಕಾಡೆಮಿ ಫೆಲೋಶಿಫ್‌ಗಾಗಿ ಮಂಡಿಸಿದ ಪ್ರಬಂಧ. ಈ ಸಂಶೋಧನಾ ಗ್ರಂಥದಲ್ಲಿ ಸೋಲಿಗ ಮಕ್ಕಳು ಮತ್ತು ಮಹಿಳೆಯರಿಗೆ ಸಂಬಂಧಿಸಿದ ವೈದ್ಯ ಪದ್ಧತಿಗಳು, ಸೋಲಿಗ ಮಾಂತ್ರಿಕ ವೈದ್ಯ ಪದ್ಧತಿ ಅಂದರೆ, ಗಿಡಮೂಲಿಕೆ ಔಷಧಿಗಳನ್ನು ಬಳಸುವಾಗ ಅವುಗಳನ್ನು ಮಂತ್ರದ ಮೂಲಕ ಮಂತ್ರಿಸಿ ಬಳಸಿದರೆ ಬೇಗ ಗುಣ ಹೊಂದುತ್ತಾರೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಇವರ ವೈದ್ಯ ಪದ್ಧತಿಯ ಮಂತ್ರವನ್ನು ಯಾರು ಬೇಕಾದರೂ ಕಲಿಯಬಹುದು. ಅದಕ್ಕೆ ವಯಸ್ಸಿನ ಅಂತರವಾಗಲಿ ಹೆಣ್ಣು-ಗಂಡು ಎಂಬ ಭೇದ ಇರುವುದಿಲ್ಲ ಎಂದು ಮಾಹಿತಿಗಳನ್ನು ನೀಡಿದ್ದಾರೆ.[೨೮]

**ಮೇತ್ರಿ ಕೆ ಎಂ, (೨೦೧೭),** ಇವರು ತಮ್ಮ "ಸೂಕ್ಷ್ಮ ಆದಿವಾಸಿಗಳು" ಪುಸ್ತಕದಲ್ಲಿ ಸೋಲಿಗರ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಸೋಲಿಗರು ಮೈಸೂರು ಜಿಲ್ಲೆಯ ಚಾಮರಾಜನಗರ, ಮೈಸೂರು, ಹೆಚ್.ಡಿ.ಕೋಟೆ, ಹುಣಸೂರು, ಪಿರಿಯಾಪಟ್ಟಣ, ಗುಂಡ್ಲುಪೇಟೆ, ಕೊಳ್ಳೇಗಾಲ, ನಂಜನಗೂಡು, ಯಳಂದೂರು ತಾಲ್ಲೂಕುಗಳಲ್ಲಿ ಹಾಗೂ ಬಿಳಿಗಿರಿರಂಗನಬೆಟ್ಟ, ಮಹದೇಶ್ವರಬೆಟ್ಟ ಸುತ್ತಮುತ್ತ ದಟ್ಟವಾಗಿಯೂ ಮತ್ತು ಹಳೆ ಮೈಸೂರು ರಾಜ್ಯದ ಮಂಡ್ಯ, ರಾಮನಗರ, ತುಮಕೂರು ಕೊಡಗು, ಹಾಸನ, ಬೆಂಗಳೂರು ನಗರ ಹಾಗೂ ಗ್ರಾಮಾಂತರ, ಕೋಲಾರ ಜಿಲ್ಲೆಗಳಲ್ಲಿ ಚದುರಿದಂತೆಯೂ ಹರಡಿಕೊಂಡಿದ್ದಾರೆ. ಇವರು ಮೂಲತಃ ಪೋಡು ಬೇಸಾಯಗಾರರು. ಇವರ ನೆಲೆಗಳಿಗೆ **'ಪೋಡು'** ಎಂದು ಕರೆಯಲಾಗುತ್ತದೆ. ಕನ್ನಡ ಭಾಷೆ ಮತ್ತು ಲಿಪಿಯನ್ನು ಬಳಸುವರು. ೨೦೧೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಸೋಲಿಗರು ಬುಡಕಟ್ಟಿನ ಜನಸಂಖ್ಯೆ ೩೩,೮೧೯ ಇದೆ ಎಂದು ತಿಳಿಸಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದ ಸೋಲಿಗ ಬುಡಕಟ್ಟಿನ ಜನಸಂಖ್ಯೆ ೩೩,೮೧೯ (ಪುರುಷರು ೧೬,೮೬೦ ಮತ್ತು ಸ್ತ್ರೀಯರು ೧೬,೯೫೯, ಲಿಂಗಾನುಪಾತ ೧,೦೦೬) ಹಾಗು ಸೋಲಿಗರ ಜಿಲ್ಲಾವಾರು ಜನಸಂಖ್ಯೆ ಮಾಹಿತಿಯನ್ನು ಈ ಪುಸ್ತಕದಲ್ಲಿ ತಿಳಿಸಿದ್ದಾರೆ.[೨೯]

ಈ ಮೇಲಿನ ಗ್ರಂಥಾವಲೋಕನದಲ್ಲಿ ವಿಮರ್ಶೆ ಮಾಡಿದ ಎಲ್ಲಾ ಗ್ರಂಥಗಳಲ್ಲಿಯೂ ಮತ್ತು ಲೇಖನಗಳಲ್ಲಿಯೂ ಸೋಲಿಗ ಬುಡಕಟ್ಟು ಸಮುದಾಯದ ಪರಿಚಯ, ಸಾಮಾಜಿಕ, ಸಾಂಸ್ಕೃತಿಕ ವಿವರಗಳು, ಕೃಷಿ ವಿಚಾರಗಳ ಬಗ್ಗೆ ಮಾತ್ರ ಉಲ್ಲೇಖಗಳಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಸಮುದಾಯದ ಐತಿಹಾಸಿಕ ಹಿನ್ನೆಲೆ, ಅವರ ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ಸಂಪ್ರದಾಯಗಳು, ಆರ್ಥಿಕ ವ್ಯವಸ್ಥೆ ಮತ್ತು ಅಭಿವೃದ್ಧಿ ಹಾಗೂ ಅವರ ಕಸುಬಿಗೆ ಸಂಬಂಧಿಸಿದಂತೆ ವಿವರಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ತಿಳಿಸಲಾಗಿದೆ.

## ೧.೮. ಅಧ್ಯಯನದ ವಿನ್ಯಾಸ

**'ಸೋಲಿಗ ಬುಡಕಟ್ಟು: ಸಮಾಜಶಾಸ್ತ್ರೀಯ ಅಧ್ಯಯನ'** ಎಂಬ ಶೀರ್ಷಿಕೆ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದ್ದು ಅಧ್ಯಯನದಲ್ಲಿ ಹಲವು ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಶ್ನಾವಳಿ, ಸಂದರ್ಶನ, ವ್ಯಕ್ತಿ ಅಧ್ಯಯನ(ಏಕ ವಿಷಯ), ಅವಲೋಕನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದ್ದು, ಅದನ್ನು ಸಂಶೋಧನಾ ಚೌಕಟ್ಟಿನೊಳಗೆ ಜೋಡಿಸಲು ಸಂಶೋಧನಾ ವಿನ್ಯಾಸವನ್ನು ರಚಿಸಿಕೊಳ್ಳಲಾಯಿತು. ಆ ಮೂಲಕವಾಗಿ ಮಾಹಿತಿಯನ್ನು ಎಂಟು ಅಧ್ಯಾಯಗಳಲ್ಲಿ ಕ್ರಮಾನುಸಾರವಾಗಿ ಜೋಡಿಸಲಾಗಿದೆ.

**ಅಧ್ಯಾಯ-೧** ಅಧ್ಯಯನದ ಪ್ರವೇಶವಾಗಿದ್ದು, ಇದರಲ್ಲಿ ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅನುಸರಿಸಿರುವ ವಿಧಾನ, ಅಧ್ಯಯನದ ಸ್ವರೂಪ, ಅಧ್ಯಯನದ ಮಹತ್ವ ಹಾಗೂ ಇದುವರೆಗೆ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಎಂಬ ಉಪಶೀರ್ಷಿಕೆಗಳಲ್ಲಿ ಸಂಶೋಧನಾ ವಿಧಾನಗಳನ್ನು ತಿಳಿಸಲಾಗಿದೆ.

**ಅಧ್ಯಾಯ-೨** ಸೋಲಿಗರು ಸಮುದಾಯದ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ, ಭೌಗೋಳಿಕ ನೆಲೆಗಳು, ಪದನಿಷ್ಪತ್ತಿ ಮತ್ತು ಭಾಷೆ, ಕುಲ ಮತ್ತು ಕಸುಬುಗಳು, ಸೋಲಿಗ ಸಮುದಾಯ ಒಳಪಂಗಡಗಳು, ಚಹರೆಯನ್ನು ಬೆಡಗು, ಆಚರಣೆ ಮತ್ತು ಸಂಪ್ರದಾಯಗಳ ಹಿನ್ನೆಲೆಯಲ್ಲಿ ಆನುಷಂಗಿಕ ಕುಲಶಾಸ್ತ್ರೀಯ ಅಧ್ಯಯನಗಳು ಮತ್ತು ಕ್ಷೇತ್ರಕಾರ್ಯ ಮಾಹಿತಿಯಿಂದ ದೃಢಪಡಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ-೩** ಸೋಲಿಗರು ಸಾಮಾಜಿಕ ವ್ಯವಸ್ಥೆ ಈ ಅಧ್ಯಾಯದಲ್ಲಿ ಸಮುದಾಯದ ಕೌಟುಂಬಿಕ ವ್ಯವಸ್ಥೆ, ವಾಸಿಸುವ ಮನೆಗಳ ರಚನೆ, ವಿವಾಹ, ಜನನ, ಮರಣ, ನ್ಯಾಯ ಪದ್ಧತಿ, ಯಜಮಾನ, ಪಟ್ಟೆಗಾರ, ಕೋಲುಕಾರ, ದಳವಾಯಿ ಇತ್ಯಾದಿ ಕುರಿತಂತೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ-೪** ಸೋಲಿಗರು ಆರ್ಥಿಕ ವ್ಯವಸ್ಥೆ; ಈ ಅಧ್ಯಾಯದಲ್ಲಿ ಬುಡಕಟ್ಟುಗಳ ಆರ್ಥಿಕ ವ್ಯವಸ್ಥೆಯನ್ನು ಕುರಿತು ಕೃಷಿ ವ್ಯವಸ್ಥೆ, ಕಿರು ಅರಣ್ಯ ಉತ್ಪಾದನೆ, ಜೇನು ಬೇಟೆ ಮತ್ತು ಕೂಲಿ, ಅರಣ್ಯ ಇಲಾಖೆಯ ಕೆಲಸಗಳು ಇತ್ಯಾದಿ ಕುರಿತಂತೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ-೫** ಸೋಲಿಗರು ಸಮುದಾಯದ ಧಾರ್ಮಿಕ ಹಿನ್ನೆಲೆ; ಮುಖ್ಯವಾಗಿ ಹಿರಿಯರ ಆರಾಧನೆ, ಪ್ರಕೃತಿಯ ಆರಾಧನೆ, ಶೈವ ಧರ್ಮ, ವೈಷ್ಣವ ಧರ್ಮ- ಇವುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ-೬** ಸೋಲಿಗರ ನಂಬಿಕೆ ಮತ್ತು ಆಚರಣೆಗಳು ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ, ಜಡೆಸ್ವಾಮಿ ಹಬ್ಬ ಮತ್ತು ಸೋಲಿಗರು ನಂಬುವ ವೈದ್ಯ ಪದ್ಧತಿಯಲ್ಲಿ ದೇವರು ಕೇಳುವುದು, ಸಗ್ಗದ ಮನೆಯವರು, ನಾರು-ಬೇರು ಔಷಧಿ, ನಾಟಿ ಔಷಧಿಗಳ ಬಗ್ಗೆ ಸಮುದಾಯದಲ್ಲಿ ನುರಿತ ವ್ಯಕ್ತಿಗಳಿಂದ, ನಾಟಿ ವೈದ್ಯರುಗಳಿಂದ, ತಮ್ಮಡಿಗಳಿಂದ, ಪ್ರಾಥಮಿಕ ಹಾಗೂ ಮಾಧ್ಯಮಿಕ ಮೂಲಗಳಿಂದ ಮಾಹಿತಿ ಪಡೆದು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ–೭** ಸ್ಥಿತ್ಯಂತರಗಳು: ಸೋಲಿಗರು ಹಿಂದಿನಿಂದ ಹಿಡಿದು ಪ್ರಸ್ತುತದಲ್ಲಿನ ವ್ಯವಸ್ಥೆಯಲ್ಲಿನ ಆರ್ಥಿಕ ಸ್ಥಿತ್ಯಂತರ, ಶೈಕ್ಷಣಿಕ ಸ್ಥಿತ್ಯಂತರ, ಜಾಗತೀಕರಣ ಇವುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ–೮** ಸಮಾರೋಪ : ಅಧ್ಯಯನದ ಫಲಿತಗಳನ್ನು ನೀಡಲಾಗಿದೆ. ಸಲಹೆಗಳು ಅಧ್ಯಯನದ ಮುಂದಿನ ಸಾಧ್ಯತೆಗಳನ್ನು ನೀಡಲಾಗಿದೆ.

ಅನುಬಂಧದಲ್ಲಿ ಆಧಾರ ಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳು, ವಕ್ತೃಗಳ ವಿವರವನ್ನು ನೀಡಲಾಗಿದೆ. ಒಟ್ಟು ಏಳು ಅಧ್ಯಾಯಗಳಲ್ಲಿ ಸೋಲಿಗ ಸಮುದಾಯದ ಚಿತ್ರಣವನ್ನು ಸಾಮಾಜಿಕವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

**ಕೊನೆಟಿಪ್ಪಣಿ**

೧. ವಸಂತಮ್ಮ ಎಚ್ ಎಮ್, ೨೦೧೧, ಸಮಾಜಶಾಸ್ತ್ರಜ್ಞರು (ಸಂ), ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೧೬

೨. ಮರಿಸ್ವಾಮಿ ಆರ್, ೨೦೧೪, *ಸೋಲಿಗ ಸಮಾಜೋಭಾಷಿಕ ಅಧ್ಯಯನ* (ಭಾಷಾ ವಿಜ್ಞಾನದಲ್ಲಿ ಅಪ್ರಕಟಿತ ಪಿ ಎಚ್‌ಡಿ ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೧೩

೩. ಪ್ರಭಾಕರ ಎ ಎಸ್, ೨೦೦೬, ಡಾ ಅಂಬೇಡ್ಕರ್: ಆದಿವಾಸಿಗಳ ಕುರಿತು (ಲೇ.) (ಸಂ: ಪ್ರಭಾಕರ ಆದಿವಾಸಿ ಆಖ್ಯಾನ), ಸಿದ್ದಾರ್ಥ ಪ್ರಕಾಶನ, ಹೊಸಪೇಟೆ, ಪು. ೧೯೭

೪. ರಾಮಕೃಷ್ಣ ಆರ್. ೨೦೧೭, *ಕರ್ನಾಟಕ ಬುಡಕಟ್ಟುಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಪು. ೪೫*

೫. Buchanan Francis, 1807, A Journey from Madras through the Countries of Mysore, Canara, and Malabar: (Cambridge Library Collection-South Asian History) Pub.Cambridge University Press. 2, p 590.

6. Thurston E, 1909, *Caste and Tribes of Southern India,* Madras Government Press, Madras, Vol.4, P. 379

7. Anantha Krishna Iyer L K, 1931, The Mysore Tribes And Castes, Mysore University Mysore, P. 316

8. Nanjundaiah H V, and Anantha Krishna Iyer L K, 1961, The Mysore Tribes and Castes, Vol-3-4, Mysore University, Mysore, P. 213

9. Luiz.A.A.D., 1963, Tribes of Mysore, G.S.Viswa & Co. Bangalore, P.192

10. Morab S G, 1977, The Soliga of Biligirirangana Hills, Anthropology Survey Of India, Calcutta, P. 36

೧೧. Somasundaram M and Kibe R V, 1990, Soliga The Tribe and its Stride, Vivekananda Girijan Kalyana Kendra, Biligirirangana Hills,Chamarajanagara, P. 11

12. Jadeyegowda, 2000, Effect of Farm Yard Manure on Maize and Finger Millet Based Intercropping, M.Sc.(Agri.) Thesis, submitted to the University of Agricultural Sciences, Bangalore P. 37-33

೧೩. ಮೈತ್ರಿ ಕೆ ಎಂ, ೨೦೦೨, *ಬುಡಕಟ್ಟು ಕುಲಕಸುಬುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೨೧

೧೪. ಕೇಶವನ್ ಪ್ರಸಾದ್ ಕೆ, ೨೦೦೫, *ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೪

೧೫. ಚಂದ್ರು ಕಾಳೇನಹಳ್ಳಿ, ೨೦೦೬, *ಸೋಲಿಗರ ಸಂಸ್ಕೃತಿ*, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೩೨

೧೬. ಬೋರಲಿಂಗಯ್ಯ ಹಿ ಚಿ, ೨೦೦೬, ಅರಣ್ಯದೊಳಗಿನ ಬುಡಕಟ್ಟುಗಳು, ಒಂದು ವಿವೇಚನೆ (ಲೇ), ಪ್ರಭಾಕರ ಎ ಎಸ್ (ಸಂ), ಆದಿವಾಸಿ ಅಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೯

೧೭. ವಿಜಯಲಕ್ಷ್ಮಿ ಆರ್, ೨೦೦೬, ಕರ್ನಾಟಕ ಬುಡಕಟ್ಟು ನೆಲೆಗಳು (ಲೇ), ಪ್ರಭಾಕರ ಎ ಎಸ್ (ಸಂ), ಆದಿವಾಸಿ ಅಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೧೫೬

೧೮. ನಾಗೇಶ್ ಹೆಗಡೆ, ೨೦೦೮, ವನಸಂಜೀವನ, *ಶಿಕ್ಷಕರಿಗಾಗಿ ಪರಿಸಯ ಕೈಪಿಡಿ*, ಬಿ ಆರ್ ಟಿ ಅಭಯಾರಣ್ಯ ಕರ್ನಾಟಕ ಪಬ್ಲಿಕೇಷನ್ ಪ್ರೈವೈಟ್ ಲಿಮಿಟೆಡ್, ಬೆಂಗಳೂರು, ಪು. ೧೫

೧೯. ಸೋಮಸುಂದರಮ್ ಎಚ್ ಎನ್, ೨೦೦೯, *ಸೋಲಿಗ ಸಿರಿ*, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಬಿಳಿಗಿರಿರಂಗನ ಬೆಟ್ಟ ಚಾಮರಾಜನಗರ, ಪು. ೧೬, ೧೮

೨೦. ವೀರಭದ್ರನಾಯಕ ಪಿ, ೨೦೧೦, *ಶಿಕ್ಷಣ ಮತ್ತು ಬುಡಕಟ್ಟು ಅಭಿವೃದ್ಧಿ ಚಾಮರಾಜನಗರ ಜಿಲ್ಲೆಯ ಆಶ್ರಮ ಶಾಲೆಗಳ ಒಂದು ವಿಮರ್ಶಾತ್ಮಕ ಅಧ್ಯಯನ*, ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಸಮಾಜಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪು. ೧೦೮

೨೧. ಮರಳು ಸಿದ್ಧಯ್ಯ, ೨೦೧೦, ಪರಿವರ್ತನೆಯ ಹಾದಿಯಲ್ಲಿ ಮದ್ದೂರು ಕಾಲೋನಿಯ ಸೋಲಿಗರು (ಲೇ), ಮೈತ್ರಿ ಕೆ ಎಂ (ಸಂ), *ಬುಡಕಟ್ಟು ಕುಲಕಸುಬುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೧-೨೨

೨೨. ವಸಂತಮ್ಮ ಎಚ್ ಎಮ್, ೨೦೧೧, *ಸಮಾಜಶಾಸ್ತ್ರಜ್ಞರು* (ಸಂ), ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೬೫

೨೩. ಸುನಂದಮ್ಮ ಎಸ್, ೨೦೧೧, *ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು: ಒಂದು ವಿಮಾರ್ಶಾತ್ಮಕ*

ಅಧ್ಯಯನ, ಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ ಮೈಸೂರು, ಪು. ೪೩

೨೪. ರವಿ ಯು ಎಂ, ೨೦೧೧, *ಅರಣ್ಯದಂಚಿ ಬದುಕು*, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ಪು.

೨೫. ಹೆಗಡೆ ನಾಗೇಶ್, ೨೦೧೨, *ವನಸಂಜೀವನ*, ಶಿಕ್ಷಕರಿಗಾಗಿ ಪರಿಸರ ಕೈಪಿಡಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು, ೪

೨೬. ಕೇಶವನ್ ಪ್ರಸಾದ್ ಕೆ ಮರಟ್ಟಿ, ೨೦೧೩, 'ಅರಣ್ಯವಾಸಿ ಬುಡಕಟ್ಟುಗಳು' (ಲೇಖನ) ಬುಡಕಟ್ಟು ಅಧ್ಯಯನ ಸಂಪುಟ-೩ ಸಂಚಿಕೆ-೧, ಪು. ೯

೨೭. Madegowda C, 2013, Study on Life Style of Soliga Tribes at Biligiri rangaswamy Temple Wildlife Sanctuary a Social Work Perspective. PhD Thesis submitted to the University of Mysore, p. 248-298.

೨೮. ವೀರಣ್ಣ ಎಂ ಡಿ, ೨೦೧೫, ಗಿರಿಜನ ವೈದ್ಯ ಪದ್ಧತಿ (ಸೋಲಿಗ ಬುಡಕಟ್ಟು ಜನಾಂಗಕ್ಕೆ ಸಂಬಂಧಿಸಿದಂತೆ), ಕರ್ನಾಟಕ ಸಾಹಿತ್ಯ ಅಕಾಡೆಮಿ ಫೆಲೋಶಿಪ್‌ಗಾಗಿ ಮಂಡಿಸಿದ ಪ್ರಬಂಧ ಬೆಂಗಳೂರು, ಪು. ೯

೨೯. ಮೈತ್ರಿ ಕೆ ಎಂ, ೨೦೧೭, ಸೂಕ್ಷ್ಮ ಆದಿವಾಸಿಗಳು, ಕರ್ನಾಟಕ ಆದಿವಾಸಿ ರಕ್ಷಣಾ ಪರಿಷತ್ತು, ಬೆಂಗಳೂರು, ಪು. ೧೬೪

ಅಧ್ಯಾಯ ಎರಡು

# ಸೋಲಿಗರು ಬುಡಕಟ್ಟಿನ ಸಮುದಾಯದ ಹಿನ್ನೆಲೆ

೨.೧. ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ

೨.೨. ಸೋಲಿಗರಲ್ಲಿ ಕಂಡುಬರುವ ಒಳಪಂಗಡಗಳು

೨.೩. ಭೌಗೋಳಿಕ ನೆಲೆಗಳು

೨.೪. ಪದ ನಿಷ್ಪತ್ತಿ ಮತ್ತು ಭಾಷೆ

೨.೫. ಸೋಲಿಗರು ಬುಡಕಟ್ಟಿನ ಕುಲ ಪದ್ಧತಿ

ಅಧ್ಯಾಯ ಎರಡು

# ಸೋಲಿಗರು ಬುಡಕಟ್ಟಿನ ಹಿನ್ನೆಲೆ

## ೨.೧. ಮೂಲ ಮತ್ತು ಚಾರಿತ್ರಿಕ ಹಿನ್ನೆಲೆ

ಸೋಲಿಗ ಸಮುದಾಯವು ಕರ್ನಾಟಕದ ಪ್ರಮುಖ ಬುಡಕಟ್ಟುಗಳಲ್ಲಿ ಒಂದಾಗಿದೆ. ಇವರು ಕರ್ನಾಟಕದ ೩೦ ಜಿಲ್ಲೆಗಳಲ್ಲಿ ಕಂಡುಬಂದರೂ ಸಹ ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಗಳಲ್ಲಿ ಕ್ರಮವಾಗಿ ಕೊಳ್ಳೇಗಾಲ, ಯಳಂದೂರು, ಗುಂಡ್ಲುಪೇಟೆ, ನಂಜನಗೂಡು, ಹುಣಸೂರು, ಹೆಗ್ಗಡದೇವನ ಕೋಟೆ, ಪಿರಿಯಾಪಟ್ಟಣ ತಾಲೂಕುಗಳಲ್ಲಿ ಮತ್ತು ಕೊಡಗು ಜಿಲ್ಲೆಯಲ್ಲಿ ನೆಲೆಸಿರುವುದು ಕಂಡುಬರುತ್ತಾರೆ. ಸೋಲಿಗರು ಬಿಳಿಗಿರಿರಂಗನಬೆಟ್ಟ, ಮಹದೇಶ್ವರಬೆಟ್ಟದ ಪರಿಸರದಲ್ಲಿ ದಟ್ಟವಾಗಿಯೂ, ಹಳೆ ಮೈಸೂರು ರಾಜ್ಯದ ಇತರೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಹಾಗೂ ಹಾಸನ, ಬಳ್ಳಾರಿ, ಚಿಕ್ಕಮಗಳೂರು, ಮಂಡ್ಯ, ತುಮಕೂರು ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ವಾಸವಾಗಿದ್ದಾರೆ. ತುಮಕೂರು, ಮಂಡ್ಯ, ರಾಮನಗರ, ಕೋಲಾರ ಇನ್ನೂ ಮುಂತಾದ ಜಿಲ್ಲೆಗಳಲ್ಲಿ ಕಡಿಮೆ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಸೋಲಿಗ ಸಮುದಾಯವು ಬುಡಕಟ್ಟು ಮೂಲನಿವಾಸಿಗಳಾಗಿದ್ದು, ಸಾಂಸ್ಕೃತಿಕವಾಗಿ ವಿಶಿಷ್ಟವಾದ ಲಕ್ಷಣಗಳನ್ನು ಹೊಂದಿದ್ದು, ಭೌಗೋಳಿಕವಾಗಿ ಸ್ಥಳಾಂತರಗೊಂಡ ಮತ್ತು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತಮ್ಮದೇ ಆದ ಆಚಾರ, ವಿಚಾರಗಳನ್ನು ಹೊಂದಿದ್ದಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ಸೋಲಿಗರ ಸಾಮಾಜಿಕ ಕೌಟುಂಬಿಕ ರಚನೆ ಕೂಡ ಭಿನ್ನವಾಗಿರುತ್ತದೆ. ದಕ್ಷಿಣ ವಲಯದ (ಆಂಧ್ರಪ್ರದೇಶ, ಕರ್ನಾಟಕ, ಕೇರಳ, ತಮಿಳುನಾಡು) ಆದಿವಾಸಿ ಸಮುದಾಯಗಳೆಂದರೆ ನೀಲಗಿರಿ, ಚಂಚೂ, ಕೋಯಾ, ಇರುಳಿಗರು, ಕಾಟುನಾಯಕ, ಊರಾಳಿಗರು, ಜೇನುಕುರುಬ, ಯರವ. ಈ ಗುಂಪುಗಳಲ್ಲಿ ಸೋಲಿಗ ಸಮುದಾಯವೂ ಸಹ ಕರ್ನಾಟಕದಲ್ಲಿ ಮೂಲ ಅರಣ್ಯವಾಸಿ ಸಮುದಾಯವಾಗಿದೆ.

ಸೋಲಿಗರು ವಾಸಿಸುವ ಸ್ಥಳಗಳು ಭೌಗೋಳಿಕವಾಗಿ ವಿಶೇಷತೆಯನ್ನು ಹೊಂದಿದ್ದು, ದಟ್ಟವಾದ ಅರಣ್ಯ ಪ್ರದೇಶಗಳಲ್ಲಿ ಬೆಟ್ಟಗುಡ್ಡ ಹಾಗೂ ಕಾಡಂಚಿನ ಪ್ರದೇಶಗಳಲ್ಲಿದ್ದು, ಅನೇಕ ಕುಟುಂಬಗಳು ಮೂಲ ಸೌಕರ್ಯಗಳಿಂದ ವಂಚಿತವಾಗಿವೆ. ಸೋಲಿಗ ಬುಡಕಟ್ಟು ಸಮುದಾಯಗಳು ಭೌಗೋಳಿಕವಾಗಿ ಸ್ಥಳಾಂತರಗೊಳ್ಳುವ ಮೊದಲು ಅರಣ್ಯ ಉತ್ಪನ್ನಗಳ ಮೇಲೆ ಅವಲಂಬಿತವಾಗಿದ್ದು ಸ್ವಾವಲಂಬಿಗಳಾಗಿ ಬದುಕುತ್ತಿದ್ದರು. ಹೀಗೆ ಸ್ವಾವಲಂಬಿಗಳಾಗಿ ಬದುಕುತ್ತಿದ್ದ ಬುಡಕಟ್ಟು ಸಮುದಾಯಗಳನ್ನು ಕಾಫಿ ಪ್ಲಾಂಟೇಶನ್ ಹಾಗೂ ರೈಲ್ವೆ ಹಳಿಗಳ ನಿರ್ಮಾಣ ಹಾಗೂ ಅಭಿವೃದ್ಧಿ ನೆಪದಲ್ಲಿ, ಬೃಹತ್ ಅಣೆಕಟ್ಟುಗಳ ನಿರ್ಮಾಣ, ರಾಷ್ಟ್ರೀಯ ಉದ್ಯಾನವನ ಹಾಗೂ ಕಾಯ್ದಿರಿಸಿದ ಅರಣ್ಯಪ್ರದೇಶಗಳನ್ನು ಸಂರಕ್ಷಣಾ ವಲಯಗಳೆಂದು ಘೋಷಿಸಿ ಸೋಲಿಗ ಬುಡಕಟ್ಟು ಸಮುದಾಯಗಳನ್ನು ಅವರ ಮೂಲ ನೆಲೆಯಿಂದ ಒಕ್ಕಲೆಬ್ಬಿಸಲಾಯಿತು. ತಮ್ಮ ಮೂಲ ನೆಲೆಯಿಂದ ಸ್ಥಳಾಂತರಗೊಂಡ ಸೋಲಿಗ ಬುಡಕಟ್ಟು ಸಮುದಾಯವು

ಬಹುತೇಕ ಕೂಲಿ ಕೆಲಸಗಳನ್ನು ಹಾಗೂ ಕೆಲವು ಕುಟುಂಬಗಳು ವ್ಯವಸಾಯವನ್ನು ಅಲವಂಬಿಸಿ ಜೀವನ ಸಾಗಿಸುತ್ತಿದೆ. ಅರಣ್ಯ ಉತ್ಪನ್ನಗಳ ಮೇಲಿನ ಅವಲಂಬನೆ, ವಲಸೆ ಮುಂತಾದ ಅಂಶಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಬುಡಕಟ್ಟು ಸಮುದಾಯಗಳ ಮಕ್ಕಳ ಶಿಕ್ಷಣದ ಮೇಲೆ ಪ್ರಭಾವ ಬೀರಿದ್ದು, ಅವರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಗಿದೆ.

ಸೋಲಿಗ ಸಮುದಾಯದವರು ಪ್ರತ್ಯೇಕವಾಗಿ ಕಾಡುಗಳಲ್ಲಿ ನೆಲೆಸಿ ವಿಶಿಷ್ಟವಾದಂತಹ, ಅನನ್ಯವಾದಂತಹ ಗುಣಲಕ್ಷಣಗಳನ್ನು ಹೊಂದಿದ್ದಾರೆ.

**೨.೧.೧. ಸೋಲಿಗ ಬುಡಕಟ್ಟಿನ ಲಕ್ಷಣಗಳು**

ಪ್ರಪಂಚದಾದ್ಯಂತ ಬುಡಕಟ್ಟು ಸಮುದಾಯಗಳನ್ನು ಬೇರೆ ಬೇರೆ ರೀತಿಯಲ್ಲಿ ಹೆಸರಿಸಲಾಗುತ್ತಿದ್ದು, ಆಸ್ಟ್ರೇಲಿಯಾದಲ್ಲಿ 'ಅಬೋರಿಜನಲ್ಸ್', ನ್ಯೂಜಿಲ್ಯಾಂಡ್‌ನಲ್ಲಿ 'ಮಾಮೋರಿ', ಕೆನಡಾದಲ್ಲಿ 'ಫಸ್ಟ್‌ನೇಷನ್ಸ್', ಅಮೇರಿಕಾದಲ್ಲಿ 'ಇಂಡಿಜೀನಸ್', ಎಂಬ ಹೆಸರುಗಳಿಂದ ಇವರನ್ನು ಗುರುತಿಸಲಾಗುತ್ತದೆ. ವೆರಿಯರ್ ಎಲ್ವಿನ್ ಬುಡಕಟ್ಟು ಸಮುದಾಯಗಳನ್ನು 'ಮೂಲನಿವಾಸಿಗಳು', ಥಕ್ಕರ್ ಬಾಬಾ 'ಆದಿಪ್ರಜಾ' ಮತ್ತು ಗಾಂಧೀಜಿ 'ಗಿರಿಜನ' ಎಂದು ಕರೆದಿದ್ದಾರೆ.

ಭಾರತ ಸಂವಿಧಾನದ ೩೪೨ನೇ ವಿಧಿಯ ಪ್ರಕಾರ ಬುಡಕಟ್ಟು ಸಮುದಾಯವನ್ನು ಜನಜಾತಿ, ವನವಾಸಿ, ಆದಿವಾಸಿ ಅಥವಾ ಮೂಲನಿವಾಸಿ, ಪರಿಶಿಷ್ಟ ಪಂಗಡ, ಸಮುದಾಯಗಳೆಂದು ಗುರುತಿಸಲಾಗಿದೆ. ವಿವಿಧ ರಾಜ್ಯಗಳಲ್ಲಿ ವಿವಿಧ ಸಮುದಾಯಗಳ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಪರಿಶಿಷ್ಟ ಪಂಗಡ ಎಂಬ ಸ್ಥಾನವನ್ನು ನೀಡಬೇಕೆಂದು ಕೇಂದ್ರಕ್ಕೆ, ರಾಜ್ಯ ಸರ್ಕಾರದಿಂದ ಶಿಫಾರಸ್ಸು ಮಾಡಲಾಗುತ್ತದೆ. ಭಾರತದಲ್ಲಿ ಒಟ್ಟು ೬೯೮ ಬುಡಕಟ್ಟುಗಳನ್ನು ಪರಿಶಿಷ್ಟ ಪಂಗಡಗಳೆಂದು ಗುರುತಿಸಲಾಗಿದೆ. ಇವರಲ್ಲಿ ೭೫ ಬುಡಕಟ್ಟು ಗುಂಪುಗಳನ್ನು ಮೂಲ ಆದಿವಾಸಿ ಬುಡಕಟ್ಟುಗಳೆಂದು ಕರೆಯಲಾಗುತ್ತದೆ. ಅವುಗಳಲ್ಲಿ ಸೋಲಿಗ ಸಮುದಾಯವೂ ಸಹ ಒಂದಾಗಿದೆ. ಸೋಲಿಗ ಸಮುದಾಯವು ವಿಶಿಷ್ಟವಾದಂತಹ ಗುಣಲಕ್ಷಣಗಳನ್ನು ಹೊಂದಿದ್ದು ಕಾಡು ಮತ್ತು ಕಾಡಂಚಿನಲ್ಲಿ ಪ್ರತ್ಯೇಕವಾಗಿ ನೆಲೆಸಿದೆ.

**೨.೧.೧.೧. ನಿರ್ದಿಷ್ಟ ಭೂ ಪ್ರದೇಶ**

ಪ್ರತಿಯೊಂದು ಆದಿವಾಸಿ ಸಮುದಾಯವು ತನ್ನದೇ ಆದ ನಿರ್ದಿಷ್ಟ ಭೂ ಪ್ರದೇಶವನ್ನು ಹೊಂದಿರುತ್ತದೆ. ಅದೇ ರೀತಿಯಲ್ಲಿ ಸೋಲಿಗರು ತಮ್ಮದೇ ಆದ ಭೂಪ್ರದೇಶವನ್ನು ಹೊಂದಿ ತಮ್ಮ ನೆಲೆಯ ಬಗ್ಗೆ ಅಪಾರವಾದ ಅಭಿಮಾನವನ್ನು ಹೊಂದಿರುವರು. ಅವರ ನೆಲೆಯನ್ನು ಯಾರಾದರೂ ಅತಿಕ್ರಮಿಸಿದಾಗ ಅದನ್ನು ಸಹಿಸದೇ ಅದಕ್ಕೋಸ್ಕರ ಹೋರಾಟ ಮಾಡುವಂತಹ ಮನೋಭಾವವನ್ನು ಹೊಂದಿರುತ್ತಾರೆ. ನಿರ್ದಿಷ್ಟ ಭೂ ಪ್ರದೇಶವು ಅವರಲ್ಲಿ ಆತ್ಮೀಯತೆ ಹಾಗೂ ಸಹಕಾರವನ್ನು ಬೆಳೆಸುತ್ತದೆ. ಸೋಲಿಗರು ವರ್ಷದ ಇಂತಿಷ್ಟು ಕಾಲ ಆಹಾರ ಸಂಗ್ರಹಣೆಗಾಗಿಯೇ ಕಾಡನ್ನು ಅವಲಂಬಿಸಿದ್ದಾರೆ. ಕೂಲಿಗಾಗಿ ಕೊಡಗು, ತಮಿಳುನಾಡು, ಕೇರಳ ಇನ್ನಿತರ ಭಾಗಗಳಿಗೆ ಜೀವನೋಪಾಯಕ್ಕಾಗಿ ಸಂಚರಿಸಿದರೂ ಹುಟ್ಟಿದ, ವಾಸಿಸುವ ಪ್ರದೇಶದ ಬಗೆಗೆ ಸಾಮುದಾಯಿಕ ಭಾವನೆಗಳು ಅವರಲ್ಲಿ ಸದಾ ಜಾಗೃತವಾಗಿರುತ್ತವೆ.

### ೨.೧.೧.೨. ಮುಖ್ಯಸ್ಥನ ಅಧಿಕಾರ

ಪ್ರತಿಯೊಂದು ಆದಿವಾಸಿ ಪಂಗಡಕ್ಕೂ ಅವರದೇ ಆದ ರಾಜಕೀಯ ವ್ಯವಸ್ಥೆ ಇರುತ್ತದೆ. ಅದು ಸಮುದಾಯದ ಮುಖ್ಯಸ್ಥನ ಅಧಿಕಾರವಾಗಿರುತ್ತದೆ. ಅದೇ ರೀತಿ ಸೋಲಿಗರಲ್ಲಿ ಕುಲಪಂಚಾಯಿತಿ ವ್ಯವಸ್ಥೆಯು ಮುಖ್ಯವಾದುದು. ಕುಟುಂಬಕ್ಕೆ ಹೆದರದವನು ಕುಲಕ್ಕೆ ಹೆದರಿ ನಡೆಯುತ್ತಾನೆ. ಸೋಲಿಗರು ಸಾಮಾಜಿಕ ಸಂರಕ್ಷಣೆ ಹಾಗೂ ಭದ್ರತೆಗೆ ಹೆಚ್ಚಿನ ಮಹತ್ವ ಕೊಡುತ್ತಾರೆ. ಭೂ, ಹಣ ಘೋಷಣೆ ಹಾಗೂ ಆಂತರಿಕ ಕಲಹಗಳ ಬಗ್ಗೆ ಎಚ್ಚರಿಕೆ ವಹಿಸುತ್ತಾರೆ. ಪ್ರತಿಯೊಂದು ಪಂಗಡಕ್ಕೂ ಒಂದೊಂದು ಪಂಚಾಯಿತಿ ಇದ್ದು ಅದು ನ್ಯಾಯಗಳನ್ನು ಬಗೆಹರಿಸುವ ಮತ್ತು ತಪ್ಪಿತಸ್ಥನನ್ನು ಶಿಕ್ಷಿಸುವ ಕಾರ್ಯಗಳಲ್ಲಿ ಮುಖ್ಯಸ್ಥರಿಗೆ ನೆರವು ನೀಡುತ್ತದೆ. ಈ ಬಗೆಯ ವ್ಯವಸ್ಥೆಯು ಅವರ ಕಟ್ಟುನಿಟ್ಟಾದ ರಾಜಕೀಯ ಸಂಘಟನೆಯ ಕುರುಹಾಗಿದೆ.

### ೨.೧.೧.೩. ವಿಶಿಷ್ಟ ನಾಮಾಂಕಿತ

ಪ್ರತಿಯೊಂದು ಸಮುದಾಯಕ್ಕೂ ತಮ್ಮದೇ ಆದಂತಹ ನಾಮಾಂಕಿತವಿರುತ್ತದೆ. ಸೋಲಿಗರು ಜಡೆಯ, ಮಾದ, ಕೇತಿ, ಕಾರನ ಸಿದ್ದೆಗೌಡ, ಬಸವಿ, ಅಡವಿನಂಜೇಗೌಡ, ಜಂಗು, ಜಡೇಮಾದ ಮಸಣಿಯಮ್ಮ ಸುಂಡೇಮಾದಮ್ಮ ಇತ್ಯಾದಿ ಹೆಸರುಗಳನ್ನು ಪರಿಸರಕ್ಕೆ ತಕ್ಕ ಹಾಗೆ ಇಟ್ಟುಕೊಂಡಿರುತ್ತಾರೆ.

### ೨.೧.೧.೪. ಸಾಮಾನ್ಯ ಸಂಸ್ಕೃತಿ

ಪ್ರತಿಯೊಂದು ಆದಿವಾಸಿ ಸಮುದಾಯವು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುತ್ತದೆ. ಅದೇ ರೀತಿಯಲ್ಲಿ ಸೋಲಿಗ ಸಮುದಾಯವು ಸಹ ತಮ್ಮದೇ ಆದ ವೇಷಭೂಷಣ, ರೂಢಿ ಸಂಪ್ರದಾಯ, ಜನನ ಸಂಸ್ಕಾರಗಳು ಮದುವೆ ಆಚರಣೆಗಳು, ಅಂತ್ಯ ಸಂಸ್ಕಾರ, ನ್ಯಾಯ ವಿಧಾನ, ನೈತಿಕ ನಿಯಮಗಳು, ನಂಬಿಕೆ, ಆಚಾರ ವಿಚಾರಗಳ ವಿಧಾನಗಳಲ್ಲಿ ಏಕರೂಪತೆ ಇರುತ್ತದೆ. ಇವರು ನಿಸರ್ಗಾರಾಧಕರು, ಸರ್ವಚೇತನವಾದಿಗಳು, ಬುರುಡೆ ಕರೆಯುವುದು, ಅರಳುಶಾಸ್ತ್ರ, ಭೂತ–ಪ್ರೇತ, ಮಾಟ–ಮಂತ್ರಗಳ ಬಗ್ಗೆ ನಂಬಿಕೆಯುಳ್ಳವರು. ಇತ್ತೀಚಿನ ದಿನಗಳಲ್ಲಿ ಮೂರ್ತಿ ಆರಾಧಕರಾಗಿ ಪೂಜಿಸುತ್ತಿರುವುದು. ಹೀಗೆ ಇವರ ಸಂಸ್ಕೃತಿಯು ವೈಶಿಷ್ಟ್ಯತೆಯಿಂದ ಕೂಡಿದೆ.

ಬುಡಕಟ್ಟು ಸಮುದಾಯಗಳು ತಮ್ಮ ಜೀವನದಲ್ಲಿ ಗಾಯನ, ನೃತ್ಯ, ಅಲಂಕಾರ, ಗೋರುಕಾನ, ಪೀನಾಸಿ ನೃತ್ಯ, ಓಲಗ, ಹಾಡುಗಾರಿಕೆ, ಕಗ್ಗ, ಹೊಸರಾಗಿ ಹಬ್ಬ, ಕೂಳೆಮಾರಿ ಹಬ್ಬ, ಕಾಡಿನ ದೇವರುಗಳ ಹಬ್ಬ ಮುಂತಾದವುಗಳನ್ನು ಆಚರಿಸುತ್ತಾರೆ. ಇವರ ಸಾಮುದಾಯಿಕ ಹಬ್ಬ-ಆಚರಣೆಗಳಲ್ಲಿ ವೈಶಿಷ್ಟ್ಯಪೂರ್ಣ ಸಂಸ್ಕೃತಿಯನ್ನು ಕಾಣುತ್ತೇವೆ.

### ೨.೧.೧.೫. ಐಕ್ಯತಾ ಭಾವನೆ

ಬುಡಕಟ್ಟು ಸಮುದಾಯಗಳಲ್ಲಿ ಸಹಕಾರ, ಒಗ್ಗಟ್ಟು, ಸಾಮುದಾಯಿಕ ಭಾವನೆ ಮತ್ತು ಐಕ್ಯತಾ ಭಾವನೆಗಳು ಎದ್ದು ಕಾಣುತ್ತವೆ. ಅಪಾಯ, ಸಂಕಟ, ಸಮಸ್ಯೆಗಳು ಎದುರಾದಾಗ ಎಲ್ಲರೂ ಒಟ್ಟಾಗಿ ಸೇರಿ ಬಗೆಹರಿಸಿಕೊಳ್ಳುತ್ತಾರೆ. ಸಮುದಾಯದ ಹಿತಕ್ಕೋಸ್ಕರ ಎಂತಹ ತ್ಯಾಗಕ್ಕೂ ಸಿದ್ಧರಿರುತ್ತಾರೆ. ಭೌಗೋಳಿಕ ನೆಲೆ, ಸಾಮಾನ್ಯ ಭಾಷೆ ಅವರಲ್ಲಿ ಐಕ್ಯತೆ ಭಾವನೆಯನ್ನು ಬೆಳೆಸಲು ಸಹಕಾರಿಯಾಗಿದೆ.

### ೨.೧.೧.೬. ಒಂದೇ ರೀತಿಯ ಸರಳ ರಾಜಕೀಯ ವ್ಯವಸ್ಥೆ

ಸೋಲಿಗರು ತಮ್ಮದೇ ಆದ ಪ್ರಜಾಪ್ರಭುತ್ವ ಮಾದರಿಯ ಆಡಳಿತ ಕ್ರಮವನ್ನು ಸಾಂಪ್ರದಾಯಿಕವಾಗಿ ಉಳಿಸಿಕೊಂಡಿದ್ದಾರೆ. ಕುಲದ ನ್ಯಾಯ ಪಂಚಾಯಿತಿಯಲ್ಲಿ ಯಜಮಾನನ ಪಾತ್ರ ಬಹಳ ಮುಖ್ಯವಾದುದು. ನಾಗರಿಕ ಸಮಾಜದಂತೆ ಕಟ್ಟುನಿಟ್ಟಿನ ನ್ಯಾಯವ್ಯವಸ್ಥೆ ಹಾಗೂ ಲಿಖಿತ ರೂಪದ ಆಡಳಿತ ವ್ಯವಸ್ಥೆ ಬುಡಕಟ್ಟುಗಳಲ್ಲಿರದಿದ್ದರೂ ತಮ್ಮದೇ ಆದ ಸರಳ ರಾಜಕೀಯ ವ್ಯವಸ್ಥೆಯನ್ನು ಅವರು ಹೊಂದಿದ್ದಾರೆ. ಪ್ರತಿಯೊಂದು ಸಮುದಾಯದಲ್ಲೂ ಒಬ್ಬೊಬ್ಬ ಮುಖಂಡನಿದ್ದು, ಈತ ಸಮುದಾಯದ ಇತರ ಸದಸ್ಯರ ವರ್ತನೆಗಳ ಮೇಲೆ ನಿಯಂತ್ರಣವನ್ನು ಹೊಂದಿರುತ್ತಾನೆ. ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸುವ, ನ್ಯಾಯ ತೀರ್ಮಾನ ಮಾಡುವ ದಂಡ ವಿಧಿಸುವ, ಬಹಿಷ್ಕಾರ ಹಾಕುವ ವಿಶೇಷ ಅಧಿಕಾರವನ್ನು ಈ ನಾಯಕ ಹೊಂದಿದ್ದು ಸಮೂಹದ ಗೌರವಾದರಗಳಿಗೆ ಪಾತ್ರನಾಗಿರುವ ವ್ಯಕ್ತಿಯಾಗಿದ್ದು, ಸಮೂಹದ ಕಲ್ಯಾಣದ ಹೊಣೆ ಹೊತ್ತಿರುತ್ತಾನೆ.

### ೨.೧.೧.೭. ಧಾರ್ಮಿಕ ನಂಬಿಕೆಗಳು

ಸೋಲಿಗರು ಧಾರ್ಮಿಕ ನಿಷ್ಠೆಯುಳ್ಳವರು. ಪ್ರಕೃತಿ ಪೂಜೆ, ಪಿತೃಪೂಜೆ ಮತ್ತು ಕುಲದೇವತಾರಾಧನೆ, ಅಲ್ಲದೇ ಸಜೀವವಾದಲ್ಲಿಯೂ ಇವರು ನಂಬಿಕೆ ಇಟ್ಟಿರುವರು. ಗಿಡ, ಮರ, ಬಳ್ಳಿ, ಪ್ರಾಣಿ ಪಕ್ಷಿಗಳನ್ನು ಪೂಜಿಸುವರು. ಈ ಹಿನ್ನೆಲೆಯಲ್ಲಿ ಸೋಲಿಗರು ಮೂಲತಃ ಪ್ರಕೃತಿಯ ಆರಾಧಕರು.

ಸಾಮಾಜಿಕ ರಾಜಕೀಯ ವ್ಯವಸ್ಥೆಗಳು ಅವರ ಧಾರ್ಮಿಕ ವ್ಯವಸ್ಥೆಯನ್ನು ಆಧರಿಸಿ ನಿಂತಿವೆ ಎನ್ನಬಹುದು. ಸೋಲಿಗರ ಜೀವನವು ಪ್ರಕೃತಿಯ ಧರ್ಮದೊಂದಿಗೆ ಲೀನವಾಗಿದೆ. ಇದನ್ನು ಸೋಲಿಗರು ಪಾಲಿಸುವ ಧಾರ್ಮಿಕ ಆಚರಣೆಗಳು. ಪಾಲಿಸುವಂತಹ ಕಟ್ಟುಪಾಡುಗಳು, ರೂಢಿ ಸಂಪ್ರದಾಯ–ಆಚರಣೆಗಳನ್ನು ನೋಡಿ ತಿಳಿಯಬಹುದು. ಸೋಲಿಗರ ಧಾರ್ಮಿಕ ನಂಬುಗೆಯ ನಿದರ್ಶನವೆಂಬಂತೆ ಇವರು **'ದೊಡ್ಡ ಸಂಪಿಗೆ'** ಮರವನ್ನು ಇಂದಿಗೂ ಪೂಜಿಸುತ್ತಾರೆ. ಇವರ ಮುಖ್ಯ ಆರಾಧ್ಯ ದೈವಗಳೆಂದರೆ ಬಸವೇಶ್ವರ ಕ್ಯಾತೇದೇವರು, ಬೆಟ್ಟದ ದೇವರು, ಬೆಟ್ಟದ ಚಿಕ್ಕಮ್ಮ, ಮಾರಮ್ಮ, ಹಾಗೆಯೇ ಮನೆ ದೇವತೆಗಳೆಂದು ಚಿಕ್ಕಮ್ಮ ಮಾರಮ್ಮ, ಗೂರಲ್ ತಾಯಿ, ದೊಡ್ಡ ಮಾಸಲೆ, ಸಣ್ಣ ಮಾಸಲೆ ಇತ್ಯಾದಿ ದೇವರುಗಳನ್ನು ಪೂಜಿಸುತ್ತಾರೆ.

### ೨.೧.೧.೮. ಒಳ ಬಾಂಧವ್ಯ ವಿವಾಹ

ಆದಿವಾಸಿಗಳಲ್ಲಿ ಒಳ ಬಾಂಧವ್ಯ ವಿವಾಹ ಪದ್ಧತಿಯನ್ನು ಕಾಣಬಹುದು. ಅವರು ಸಮೂಹದ ಪಾವಿತ್ರ್ಯತೆ, ಪ್ರತ್ಯೇಕತೆ, ಆಸ್ತಿ ಇವುಗಳನ್ನು ಉಳಿಸಿಕೊಳ್ಳಲಿಕ್ಕಾಗಿ ಈ ವಿವಾಹ ನಿಯಮಗಳನ್ನು ಅನುಸರಿಸುತ್ತಾರೆ. ಸೋಲಿಗರಲ್ಲಿ ಒಳ ಬಾಂಧವ್ಯ ಅಸ್ತಿತ್ವದಲ್ಲಿದ್ದು, ತಂದೆಯ ಅಕ್ಕನ ಮಗಳು ಇಲ್ಲವೇ ತಂಗಿಯ ಮಗಳನ್ನು ಮದುವೆಯಾಗುತ್ತಾರೆ.

### ೨.೧.೧.೯. ರಕ್ತ ಸಂಬಂಧದ ಬಾಂಧವ್ಯ

ಸೋಲಿಗ ಸಮುದಾಯದಲ್ಲಿ ಬಂಧುತ್ವದ ಸಂಬಂಧ ಅಥವಾ ರಕ್ತ ಸಂಬಂಧ ಅಥವಾ ವೈವಾಹಿಕ ಸಂಬಂಧಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಅವರ ಕುಟುಂಬ, ವಂಶ, ಏಕ ರಕ್ತ ಸಂಬಂಧ ಮುಂತಾದವುಗಳು ರಕ್ತ ಸಂಬಂಧದ ಆಧಾರದ ಮೇಲೆ ನಿರ್ಧರಿತವಾಗುತ್ತದೆ. ಇದರಿಂದ ಅವರಲ್ಲಿ ಭ್ರಾತೃ ಪ್ರೇಮ, ಒಗ್ಗಟ್ಟನ್ನು ಕಾಣಬಹುದು.

### ೨.೧.೧.೧೦. ಪೂರ್ವಜರಲ್ಲಿ ನಂಬಿಕೆ

ಸೋಲಿಗ ಸಮುದಾಯದ ಸದಸ್ಯರೆಲ್ಲರೂ ತಾವು ಒಬ್ಬ ಸ್ತ್ರೀ ಅಥವಾ ಪುರುಷ ಪೂರ್ವಜರಿಂದ ಜನ್ಮ ತಾಳಿದ್ದೇವೆಂಬ ನಂಬಿಕೆಯನ್ನು ಹೊಂದಿದವರಾಗಿದ್ದಾರೆ. ಈ ಪೂರ್ವಜರನ್ನು ಪೂಜಿಸುವ ಕ್ರಮ ಅವರ ಆಚರಣೆಯಲ್ಲಿದೆ. ಪೂರ್ವಜರಿಂದ ಆದಿವಾಸಿ ಕುಟುಂಬ ಕುಲ ಅಥವಾ ವಂಶವನ್ನು ಗುರುತಿಸುವ ಪದ್ಧತಿಯನ್ನು ಕಾಣಬಹುದು. ಸೋಲಿಗರು ತಮ್ಮ ಪೂರ್ವಜರನ್ನು ಸಗ್ಗದವರು, ಕಲ್ಲುಗುಡಿಯವರು ಎಂದು ಬಹಳವಾಗಿ ನಂಬಿ ಬದುಕುತ್ತಾರೆ.

### ೨.೧.೧.೧೧. ಸರಳ ಸ್ವಯಂಪರಿಪೂರ್ಣ ಸಮೂಹ

ಸೋಲಿಗ ಸಮುದಾಯವು ಅತ್ಯಂತ ಸರಳವಾದ ಮತ್ತು ಸಂಕೀರ್ಣತೆ ಇಲ್ಲದ ಸಮುದಾಯ. ಆಧುನಿಕ ಜಗತ್ತಿನ ವೈವಿಧ್ಯಮಯ ಜೀವನದಿಂದ ಸೋಲಿಗರು ಬಹಳ ದೂರವಿರುವರು. ಪ್ರಕೃತಿಯೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುವ ಜೀವನ ಅವರದು. ವಂಚನೆ, ಮೋಸ, ಅವರಿಗೆ ತಿಳಿಯದು. ಆದಿವಾಸಿಗಳು ಬಹುಮಟ್ಟಿಗೆ ಸ್ವಯಂ ಪರಿಪೂರ್ಣತೆಯನ್ನು ಹೊಂದಿರುವರು. ಇವರು ತಮ್ಮ ಬದುಕಿಗೆ ಅನುಗುಣವಾಗಿ ಸರಳ ಸೀಮಿತ ಬೇಡಿಕೆಗಳನ್ನು ತಮ್ಮ ಕ್ಷೇತ್ರದಲ್ಲಿಯೇ ಪೂರೈಸಿಕೊಂಡು ಸಂತೃಪ್ತ ಜೀವನವನ್ನು ಸಾಗಿಸುವವರು. ಇರುವುದರಲ್ಲಿಯೇ ತೃಪ್ತಿ ಪಟ್ಟು ಸ್ವತಂತ್ರ ಜೀವನ ನಿರ್ವಹಣೆಯ ಸರಳ ಸ್ವಭಾವದ ಸಂವೇದನಾಶೀಲರು ಆಗಿದ್ದಾರೆ. ಸೋಲಿಗರು ಸರಳ ಜೀವನವನ್ನು ನಡೆಸುತ್ತಾರೆ.

೨೦೧೧ರ ಜನಗಣತಿಯ ಪ್ರಕಾರ ಚಾಮರಾಜನಗರ ಜಿಲ್ಲೆಯಲ್ಲಿ ೧೮,೧೬೩ ಸೋಲಿಗರು ವಾಸವಾಗಿದ್ದಾರೆ. ಸೋಲಿಗ ಬುಡಕಟ್ಟು ಜನರಿಗೆ ಅನೇಕ ಶತಮಾನಗಳಿಂದ ಆಶ್ರಯ ನೀಡಿದ ಅರಣ್ಯ ಪ್ರದೇಶವೆಂದರೆ **"ಬಿಳಿಗಿರಿರಂಗಸ್ವಾಮಿ ದೇವಾಲಯದ ಅಭಯಾರಣ್ಯ"**. ಈ ಅಭಯಾರಣ್ಯದ ಒಳಗೆ ಹಾಗೂ ಅಂಚಿನಲ್ಲಿ ಅಲ್ಲಲ್ಲಿ ಚದುರಿದಂತೆ ಪುಟ್ಟ ಪುಟ್ಟ ಪೋಡುಗಳಲ್ಲಿ ಸೋಲಿಗರು ವಾಸಿಸುತ್ತಿದ್ದಾರೆ. ಇವರು ವಾಸಿಸುವ ಪ್ರದೇಶಕ್ಕೆ ಪೋಡು, ದೊಡ್ಡಿ, ಹಾಡಿ ಹಾಗೂ ಕಾಲೋನಿ ಎಂದೂ ಕರೆಯುತ್ತಾರೆ. ಮಾತನಾಡಲು ಬಳಸುವ ಇವರ ಭಾಷೆಯನ್ನು **'ಸೋಲಿಗ ನುಡಿ'** ಎಂದು ಕರೆಯುತ್ತಾರೆ ಹಾಗೂ ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯನ್ನು ಉಪಯೋಗಿಸುತ್ತಾರೆ.

## ೨.೨. ಸೋಲಿಗರಲ್ಲಿ ಕಂಡುಬರುವ ಒಳಪಂಗಡಗಳು

**ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್** ಅವರು ತಮ್ಮ ಪುಸ್ತಕವಾದ 'The Mysore Tribes and Castes' (೧೯೩೦)ರಲ್ಲಿ ಕರ್ನಾಟಕ ಮತ್ತು ತಮಿಳುನಾಡಿನಲ್ಲಿ ಕಂಡುಬರುವ ಸೋಲಿಗರ ಒಳಪಂಗಡಗಳನ್ನು ಹೀಗೆ ವಿಭಾಗಿಸಿದ್ದಾರೆ. ಊರಾಳಿ ಸೋಲಿಗರು–ಊರಾಳಿ ಸೋಲಿಗರು, ಚಾಮರಾಜನಗರ ಮತ್ತು ಸತ್ಯಮಂಗಲದ ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಮಲೈ ಸೋಲಿಗರು–ಬೆಟ್ಟದ ಮೇಲೆ ವಾಸಿಸುವ ಸೋಲಿಗರು. ಕಾಡು ಸೋಲಿಗರು ಕಾಡುಗಳಲ್ಲಿ ವಾಸಿಸುವ ಸೋಲಿಗರು. ಊರುಬತ್ತಿ ಸೋಲಿಗರು–(ದಾಸಯ್ಯ ಸೋಲಿಗರು) ಇವರನ್ನು ಕಾಕನಕೋಟೆಯಲ್ಲಿ ಬುರುಡೆ ಸೋಲಿಗರು ಎಂದೂ ಕರೆಯುತ್ತಾರೆ. ಕೊಳ್ಳೇಗಾಲ ತಾಲ್ಲೂಕಿನ ಸುತ್ತಮುತ್ತಲ ಭಾಗಗಳಲ್ಲಿ ಕಂಡುಬರುತ್ತಾರೆ."[೧]

ಸೋಲಿಗರು ತಮ್ಮ ಪರಿಸರಕ್ಕೆ ತಕ್ಕ ಹಾಗೆ ತಾವು ವಾಸಿಸುವ ಭೌಗೋಳಿಕ ಪರಿಸರಕ್ಕೆ ಹೊಂದಿಕೊಂಡಂತೆ ತಮ್ಮ ಪಂಗಡಗಳನ್ನು ಗುರುತಿಸಿಕೊಂಡಿದ್ದಾರೆ. ಆಯಾಯ ಪ್ರದೇಶಗಳ ವಾತಾವರಣಕ್ಕೆ

ತಕ್ಕ ಹಾಗೆ ಅಲ್ಲಿನ ಸೋಲಿಗರು ತಮ್ಮ ಜೀವನವನ್ನು ಕಟ್ಟಿಕೊಂಡಿದ್ದಾರೆ. ಆಯಾ ವಾತಾವರಣಕ್ಕೆ ಅನುಗುಣವಾಗಿಯೇ ಅವರ ಜೀವನ ನಿರ್ವಹಣೆ ಕಸುಬು, ವ್ಯವಸಾಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚಟುವಟಿಕೆಗಳು ಧಾರ್ಮಿಕ ವ್ಯವಸ್ಥೆ ಇತ್ಯಾದಿಗಳನ್ನು ಆಯಾ ಭೂಪ್ರದೇಶಗಳ ಹಿನ್ನೆಲೆಯಲ್ಲಿಯೇ ನೋಡಬಹುದಾಗಿದೆ.

ಸೋಲಿಗರು ತಮಿಳುನಾಡಿನ ಮಸಣಿ ಗುಡಿ, ಬಾಳೆ ತೋಟ, ಗುಡಲೂರು, ತೆಪ್ಪಕಾಡು, ಬೊಕ್ಕಾಪುರ, ಕೋತಗಿರಿ, ಗದ್ದೆಸಾಲು, ಗಟ್ಟೋಡಿ, ಗದ್ದೆ ಹಟ್ಟಿ, ಬಣ್ಣಾರಿ ದೇವಾಲಯದ ಸುತ್ತ-ಮುತ್ತಲಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆದಾಗ ಅವರಲ್ಲಿ ಕೊಟ್ಟು-ತರುವ ಮದುವೆ ಸಂಬಂಧಗಳನ್ನು ಬೆಳೆಸಿದ್ದೇವೆ ಎಂದು ತಿಳಿಸಿದರು. ಇದನ್ನು ನೋಡಿದಾಗ **ಶೋಲಗರು** ಎನ್ನುವ ಸಮುದಾಯವು **ಸೋಲಿಗರೇ** ಆಗಿದ್ದು, ಇವರು ಬುರುಡೆ ಸೋಲಿಗರು ಎಂದು ಕಂಡುಬರುತ್ತದೆ. ಸೋಲಿಗರ ಉಪಪಂಗಡಗಳು, ಸಾಮಾಜಿಕ ವ್ಯವಸ್ಥೆ, ವೃತ್ತಿ, ಕಲೆ, ಆಚಾರ-ವಿಚಾರಗಳ ಬಗ್ಗೆ ಯಾವುದೇ ಮಾಹಿತಿ ಲಭ್ಯವಿಲ್ಲದಿರುವುದು ಕಂಡುಬರುತ್ತದೆ. ಬುರುಡೆ ಸೋಲಿಗರು ಹೆಚ್.ಡಿ.ಕೋಟೆ ತಾಲ್ಲೂಕಿನಲ್ಲಿ ವಾಸಿಸುತ್ತಿರುತ್ತಾರೆ ಎಂದಿದ್ದಾರೆ. ಆದರೆ, ಬುರುಡೆ ಸೋಲಿಗರು ಮುಖ್ಯವಾಗಿ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಕಂಡುಬರುತ್ತಾರೆ. ದೇವ ಸೋಲಿಗ ನೀಲಯ್ಯ ಎಂದೇ ಹೆಸರಾದ, ದೇವಸೋಲಿಗರು ಮಹದೇಶ್ವರ ಬೆಟ್ಟದ ಸುತ್ತಮುತ್ತಲ ಪ್ರದೇಶಗಳಲ್ಲಿಯೂ ಸಹ ಕಂಡುಬರುತ್ತಾರೆ.

ಈ ಅಧ್ಯಯನದಲ್ಲಿ ಸೋಲಿಗರ ಉಪಪಂಗಡಗಳ ಬಗ್ಗೆ ಕ್ಷೇತ್ರಕಾರ್ಯದ ನಂತರ ಕೆಲವೊಂದು ಮಾಹಿತಿಗಳನ್ನು ಇಲ್ಲಿ ದಾಖಲಿಸಲಾಗಿದೆ.

ಸೋಲಿಗರಲ್ಲಿ ಐದು ಉಪ ಪಂಗಡಗಳಿವೆ ಅವುಗಳೆಂದರೆ,

**೨.೨.೧. ಮಲೆ ಸೋಲಿಗರು: 'ಮಲೆ'** ಎಂದರೆ **'ಬೆಟ್ಟ'**. ಮೂಲತಃ ಬೆಟ್ಟ ಎಂದರೆ, ಚಿತ್ರಣ ಮೊದಲಿಗೆ ಬರುವುದು ಮಲೆಮಹದೇಶ್ವರ ಬೆಟ್ಟ, ಬಿಳಿಗಿರಿರಂಗಪ್ಪನ ಬೆಟ್ಟ. ಆದುದರಿಂದ, **"ಬೆಟ್ಟದ ಮೇಲೆ ವಾಸಿಸುವ ಇವರನ್ನು ಮಲೆಯ ಸೋಲಿಗರು"** ಎಂದು ಕರೆಯುತ್ತಾರೆ. ಇವರು ಕರ್ನಾಟಕದ ಚಾಮರಾಜನಗರ ಜಿಲ್ಲೆಯ ಬಿಳಿಗಿರಿರಂಗನಬೆಟ್ಟದ ಸುತ್ತಮುತ್ತ ಹಾಗೂ ಮಲೆ ಮಹದೇಶ್ವರ ಬೆಟ್ಟದ ಕಡೆಗಳಲ್ಲಿ ವಾಸಿಸುತ್ತಾರೆ. ಇವರು ಗಿರಿ ಕಂದರ ಪ್ರದೇಶದಲ್ಲಿ ಪಾರಂಪರಿಕ ಬೇಸಾಯ ಮಾಡಿಕೊಂಡು ಮತ್ತು ಕಾಡಿನ ಸಂಪನ್ಮೂಲಗಳ ಮೇಲೆ ಜೀವನ ಸಾಗಿಸುತ್ತಿದ್ದಾರೆ. ಇವರು **'ಸೋಲಿಗ ನುಡಿ'** ಭಾಷೆಯನ್ನು ಮಾತನಾಡುತ್ತಾರೆ. ಯಳಂದೂರಿನ ಒಂಬತ್ತು ಪೋಡುಗಳ ವ್ಯಾಪ್ತಿಯಲ್ಲಿ ಹಾಗೂ ಕೊಳ್ಳೇಗಾಲ ತಾಲ್ಲೂಕಿನ ಕೆರೆದಿಂಬ, ಗೊಂಬೆಗಲ್ಲು, ಚಾಮರಾಜನಗರ ತಾಲ್ಲೂಕಿನ ಬೇಡಗುಳಿ, ಕನ್ನೇರಿ ಕಾಲೋನಿ, ಭೂತಾಣಿ ಪೋಡು, ಹಾವಿನಮೂಲೆ, ಜಡೆಸ್ವಾಮಿದೊಡ್ಡಿ ಹೀಗೆ ಇನ್ನೂ ಕಾಡಿನ ಒಳಗೆ ಮತ್ತು ಕಾಡಂಚಿನಲ್ಲಿ ವಾಸ ಮಾಡುತ್ತಾರೆ. ಇವರು ಪ್ರಕೃತಿಯ ಮಡಿಲಲ್ಲಿ ಬೆಳೆದು ಅವರದೇ ಆದ ಕಾಡಿನ ಪರಿಸರದಲ್ಲಿ ವಿಶಿಷ್ಟವಾದ ಭಾಷೆಯನ್ನು ಹೊಂದಿದ್ದು, ಇವರಿಗೆ ಬೇರೆ ಭಾಷೆಯ ಜೊತೆ ಹೆಚ್ಚಿನ ಸಂಪರ್ಕವಿಲ್ಲದಿರುವ ಕಾರಣ ಹೊರಗಿನ ಸಮುದಾಯಗಳ ಜೊತೆ ಬೆರೆಯುವುದು ಕಡಿಮೆ. ಸಾಮಾನ್ಯವಾಗಿ ಇವರ ಭಾಷಾ ವೈಶಿಷ್ಟ್ಯತೆಯು ಈ ರೀತಿಯಲ್ಲಿ ಇದೆ. ದೇಖಡೋ, ದೇನಾಕುನ್ನಿ, ಎಲ್ಲಿಗವ್ವೇ

ಹೋಗುರ್ದ್ರೇ, ಸೆಂದಾಗಿದ್ದಾಯಾವ್ವೆ ಇದೆನಲೋ ಕಲ್ಲಕಿದಣ್ಣಿಲಿ ಆನೆಗಾ ಸರಾಗಿ ತುಂಬುರವೇ, ಹೀಗೆ ಹೇಳುತ್ತಾ ಮಲೆ ಸೋಲಿಗರು ಕಾಡಿನ ದೇವರಿಗೆ ಬೇಡುತ್ತಾರೆ 'ಮಂದಾನದ ಕರ್ತು! ಹೂವುವಿನ ಕೊಂಬು ಮುರಿಯಾದೆ, ಮೊಗ್ಗಿನ ಕೊಂಬು ಬಾಡದೆ ಮೊಗ್ಗು ಮೊಗರೆಲ್ಲ ಕಾಪಿಟ್ಟು ಮಡಗುಮಾಕ್ಕು ನನ್ನೊಡೆಯಾ'(ಅಂದರೆ ಐರಾವತದಲ್ಲಿ ಬರುವ ಕೇತಪ್ಪ ಸ್ವಾಮಿ ನೀನು ಚಿಕ್ಕ ಮಗುವಿನಿಂದ ಹಿಡಿದು, ಕಿರಿಯರು, ಮಹಿಳೆಯರು, ಹಿರಿಯರು, ಮತ್ತು ಸಕಲ ಜೀವಿಗಳನ್ನು ಸಂರಕ್ಷಿಸಿ ಕಾಪಾಡಬೇಕೆಂದು ಈ ಮೂಲಕ ಕಣ್ಣು ಮುಚ್ಚಿ ಧ್ಯಾನದಲ್ಲಿ ದೇವರನ್ನು ನೆನಸದೆ ಪ್ರಕೃತಿಯಲ್ಲಿ ಕಾಣುವ ಕಲ್ಲು, ಮರ, ಗಿಡ, ವೃಕ್ಷಗಳಿಗೆ ದೇವರೇ ಎಂದು ಪರಿಗಣಿಸಿ ನೇರವಾಗಿ ದೇವರ ಎದುರಿಗೆ ಮಾತನಾಡುವ ಹಾಗೆ ಧೈರ್ಯ ಮತ್ತು ಹೆಮ್ಮೆಯಿಂದ ಅಡವಿ ದೇವರಿಗೆ ಪ್ರಾರ್ಥಿಸುತ್ತಾರೆ. ಹೀಗೆ ಮಲೆ ಸೋಲಿಗರು ವನದೇವತೆಯ ಜೊತೆಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ. ಮಲೆ ಸೋಲಿಗರಲ್ಲಿ ಕಂಡುಬರುವ ವೈಶಿಷ್ಟ್ಯತೆಗಳೆಂದರೆ ಮೊದಲಿಗೆ ಭಾಷೆ ಉದಾ: ಇವರು ಚಂದ್ರನು ಉದಯಿಸುವುದನ್ನು ಹೀಗೆನ್ನುತ್ತಾರೆ– 'ಎರ್ರೆ ಮೂಡಿದಾದೆಲಾ' ಬಾನು ಸೆಂದಾಗಿದೆಲೊ, ಐದಾ ಸರಿಯಾಗಿ ನೀರಾ ಎಡಾಕಿಕಿತ್ತು. ಈ ಅಯ್ಯಾ ಸರಾಗಿ ಬಂಗಿ ಎಡಕಿಕಿ ತೂರೂರು ಹೋದಾದೆ, ಕೆಡೆಯಾದಿಲ್ಲೆಯಾಡೋ(ಹಾಗೆಯೇ ಆಕಾಶವನ್ನು ಕುರಿತು ಹೀಗೆ ಹೇಳುತ್ತಾರೆ ಬೆಳದಿಂಗಳಿನಲ್ಲಿ ಆಕಾಶ ಬಹಳ ಸುಂದರವಾಗಿದೆ, ಹುಡುಗ ನೀರನ್ನು ಹೆಚ್ಚಾಗಿ ಸೇವಿಸಿದ್ದಾನೆ. ಈ ಅಜ್ಜನು ಭಂಗಿಯನ್ನು ಯಥೇಚ್ಚವಾಗಿ ಸೇವಿಸಿ ತೂರಾಡಿಕೊಂಡು ಚಲಿಸುತ್ತಿದ್ದಾನೆ. ಮಲಗಿ ಕೊಳ್ಳುವುದಿಲ್ಲವೇನೋ ಹುಡುಗ) ಹೀಗೆ ಮಲೆ ಸೋಲಿಗರು ತಮ್ಮದೇ ಆದ ಭಾಷೆಯಲ್ಲಿ ಸಂಭೋದಿಸುತ್ತಾರೆ. ಹಾಗೂ ಸಂಸ್ಕೃತಿಯಲ್ಲಿಯೂ ಸಹ ಅನೇಕ ವಿಶೇಷತೆಗಳು ಕಂಡುಬರುತ್ತವೆ.

ಸೋಲಿಗರ ಸಾಂಸ್ಕೃತಿಕ ಜ್ಞಾನವನ್ನು ಅವಲೋಕಿಸಿದಾಗ ಮುಖ್ಯವಾಗಿ ನಾಲ್ಕು ವಿಧಗಳಲ್ಲಿ ನೋಡಬಹುದು. ೧ ಗೋರುಕ, ೨ ಹಾಡುಕೆ, ೩ ಓಲಗ, ೪ ಕಗ್ಗ– ಇದರಲ್ಲಿ ಮೊದಲಿಗೆ ಗೋರುಕಾನ ಎಂಬ ಜಾನಪದ ಸಾಹಿತ್ಯವು ಹೀಗಿದೆ. 'ಗೋರು ಗೋರುಕಾ ಗೋರುಕಾನ ಗೋರು ಗೋರುಕಾ ಗೋರುಕಾನ ಹಳ್ಳ ಹಳ್ಳದ ಪಿಗ್ಗಾನಕ್ಕಿ ಹಳ್ಳಾದ ನೀರಿಗಾ ನೀ ಸೋತೆಲಾ'. 'ಕೋಡಾನ ಬೆಟ್ಟ ದಾರಿಯಲ್ಲಿ ಕೋಡಾನ ಬೋಗ ಘನ ಬೋಗಾಲೋ'.(ಸೋಲಿಗರು ವನಸಿರಿಯನ್ನು ಹೀಗೆ ವರ್ಣಿಸುತ್ತಾರೆ ಘೋರ ಕಾನನದ ನಡುವೆ ಜೇಡರ ಬಲೆಯಂತಿರುವ ಜೀವ ಜಗತ್ತಿನಲ್ಲಿ(ಭೂಮಿಯಲ್ಲಿ) ವಾಸಿಸುವ ಪಿಗ್ಗನ ಹಕ್ಕಿಯೇ (ಎಲ್ಲೋ ವ್ಯಾಗ್‌ಟೈಲ್ ಒಂದು ತರದ ಹಳ್ಳದಂಚಿನಲ್ಲಿರುವ ಪಕ್ಷಿ) ನೀನು ಯಾವಾಗಲೂ ಹಳ್ಳದ ಪ್ರದೇಶದಲ್ಲಿ ಜಲಚರ ಜೀವಿಗಾಗಿ ನೀ ನೀರಿಗೆ ನಿನ್ನ ಜೀವನ ಹೊಂದಿಕೊಂಡಿದೆ. ಹಾಗೆಯೇ ಈ ಜಾನಪದ ಗೀತೆಯು ಮುಂದುವರೆದು ದಟ್ಟವಾದ ಕಾಡಿನ ಬೆಟ್ಟ ಪ್ರದೇಶದಲ್ಲಿ ಕಾಡು ಕೋತಿಗಳು ಯಥೇಚ್ಛವಾಗಿ ತುಂಬಿ ಹೋಗಿ ಇವುಗಳ ಕಲರವ ಕಾಡೆಲ್ಲ ಪಸರಿಸಿದೆ. ಹೀಗೆ ಸೋಲಿಗರು ತಮ್ಮ ಕಾಡಿನಲ್ಲಿರುವ ಜೀವ ವೈವಿಧ್ಯತೆಯನ್ನು ವರ್ಣಿಸುವ ರೀತಿಯಾಗಿದೆ. ಸಾಮಾನ್ಯವಾಗಿ ಎಲ್ಲರೂ ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಮಲೆ ಸೋಲಿಗರು ಪೋಡುಗಳಲ್ಲಿದ್ದರೆ ಸೋಲಿಗ ನುಡಿಯನ್ನು ಮಾತನಾಡುತ್ತಾರೆ, ಹೊರಗೆ ಬಂದಾಗ ಮತ್ತು ನಾಡವರ ಜೊತೆಯಲ್ಲಿ ಯಳಂದೂರು, ಕೊಳ್ಳೇಗಾಲ, ಚಾಮರಾಜನಗರ, ಗುಂಡ್ಲುಪೇಟೆ, ಮೈಸೂರು ಇತ್ಯಾದಿ ಕಡೆಗಳಲ್ಲಿ ಬಂದಾಗ ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಇವರು ಹೆಚ್ಚಾಗಿ ತಲೆಯ ಕೂದಲನ್ನು ಮಹಿಳೆಯರ ತರಹ ಪುರುಷರೂ ಸಹ ಬಿಟ್ಟುಕೊಂಡಿರುತ್ತಾರೆ. ಇಂಥವರಲ್ಲಿ ಹೆಚ್ಚಿಗೆ ತಮ್ಮಡಿಗಳಾಗಿರುತ್ತಾರೆ ಹಾಗೂ ಇವರು

ಸಾಮಾನ್ಯವಾಗಿ ಕಾಲಿಗೆ ಚಪ್ಪಲಿಯನ್ನು ಹಾಕದೇ ಓಡಾಡುತ್ತಾರೆ. ಕಾರಣ ಈ ಕಾಡನ್ನು, ಭೂಮಿತಾಯಿಯನ್ನು, ಕಾಲಿನಿಂದ ತುಳಿಯಬಾರದು ಎಂದು ನಂಬಿಕೆ ಇವರಲ್ಲಿದೆ. ಮಲೆ ಸೋಲಿಗರ ಹೆಸರುಗಳು ಬಹಳ ವ್ಯತ್ಯಾಸವಾಗಿದ್ದು ಈ ರೀತಿಯಾಗಿವೆ. ಕಾಡನ ಮಾದೇಗೌಡ, ಬೆಂಡೆತೊಕ್ಕೆ ನಂಜಯ್ಯಾ, ಕಾರನ ಕೇತಯ್ಯಾ, ತಂತ್ರ ನಂಜ, ಕೋಂಬೇ ಸಿದ್ದಯ್ಯಾ ಲಕುಮನಾ ಮಾದಯ್ಯಾ, ಮೆಟ್ಟಣ್ಣಿ ನಂಜ, ಕೆಂಪಿ ಸಿದ್ದಯ್ಯ ತುಪಾಕಿ ಸಿದ್ದ, ಭಂಗಿ ರಂಗಯ್ಯಾ, ಮುಳ್ಳಂದಿ ರಂಗಯ್ಯಾ, ಸಾರಿ ಜಡೇಗೌಡ, ತೋಟದ ನಂಜೇಯ್ಯ, ಕೊಳ್ಳದ ಕೇತ, ತುಡುವೆ ಸಿದ್ದ, ಶಿಕಾರಿ ಮಾದಯ್ಯ, ಸುಂಡೆ ಮಾದಮ್ಮ, ಜಲ್ಲೆ ಸಿದ್ದಮ್ಮ, ಸಾರಿಕೇತಮ್ಮ, ಸಾರಿ ಬಸಮ್ಮ, ಜಂಗು, ತೂರಾಡಿ ನಂಜ, ಉದ್ದ ಕೇತ, ಬಸವಿ, ಲಕುಮ, ಲಕುಮಿ, ಕೇತಿ, ಜಡೆಯ ಬೊಮ್ಮ, ಕುಂಬನ ಮಾದ, ಕೀರ ಜಡೆಯಾ, ಕೋಟೆ ಶವನಯ್ಯಾ, ವಡಕನ ಶವನ, ಕಾಡೋಡಿ ಕೊಲ್ಲ, ಅಂಗಡಿ ಸಿದ್ದಯ್ಯ, ಕಾನನ ರಂಗ, ಹಾಲುಗೆಡ್ಡೆ ರಂಗ, ಸಿದ್ದಿ ಇತ್ಯಾದಿ ಹೆಸರುಗಳನ್ನು ಕಾಣಬಹುದು.

**೨.೨.೨. ಊರಾಳಿ ಸೋಲಿಗ:** ಊರಾಳಿ ಸೋಲಿಗರು ಕೊಳ್ಳೇಗಾಲದ ಕೊಂಬುಡ್ಕಿ ಮತ್ತು ಸುತ್ತ ಮುತ್ತ ಹಾಗೂ ಚಾಮರಾಜನಗರ ತಾಲ್ಲೂಕಿನ ಮುನೇಶ್ವರ ಕಾಲೋನಿ, ಬಾನವಾಡಿ, ಸಾತನೂರು, ಹೊಸಪೋಡುಗಳಲ್ಲಿ ವಾಸಿಸುತ್ತಾರೆ. ಇವರು ಸತ್ಯಮಂಗಲದ ಗಡಿಭಾಗಗಳಲ್ಲಿ ಹಾಗೂ ಮಹದೇಶ್ವರನ ಬೆಟ್ಟದ ತಮಿಳುನಾಡಿಗೆ ಹೊಂದಿಕೊಂಡಂತಿರುವ ಕಡೆಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಇವರಲ್ಲಿ ಒಂದು ವಿಶೇಷವಾದ ಕಲೆ ಇದೆ **"ಪೀನಾಸಿ ನುಡಿಸುವುದು"**. ಇವರು ಇತರೆ ಊರು ಊರುಗಳಿಗೆ ಸಮಾರಂಭಗಳಿಗೆ ವಾದ್ಯ ನುಡಿಸಲು ಹಾಗೂ **"ದಂಬಡಿ ಅಥವಾ ಮದ್ದಳೆ ಬಾರಿಸಲು"** ಹೋಗುವುದರಿಂದ ಇವರನ್ನು ಊರಾಳಿ ಸೋಲಿಗರು ಎಂದು ಕರೆಯುತ್ತಾರೆ. ಅಲ್ಲದೇ ಇವರನ್ನು **'ತರಗು'** ಸೋಲಿಗರೂ ಎಂದೂ ಕರೆಯುತ್ತಾರೆ. ಕಾರಣ ಇವರು ತಮ್ಮ ಮನೆಯನ್ನು, ಗುಡಿಸಲು ಕಟ್ಟುವುದಕ್ಕೆ ತರಗೆಲೆಯನ್ನು ಬಳಸುತ್ತಾರೆ. ಆದುದರಿಂದ ಇವರನ್ನು **'ತರಗು'** ಸೋಲಿಗರೂ ಎಂದು ಕರೆಯುತ್ತಾರೆ. ಇವರು ಶ್ರಮಜೀವಿಗಳು ಎಂತಹ ಕೆಲಸವನ್ನಾದರೂ ಮಾಡುತ್ತಾರೆ.

ಸಾಮಾನ್ಯವಾಗಿ ಕಪ್ಪುಮಿಶ್ರಿತ ಬಣ್ಣದಿಂದ ಕೂಡಿದ್ದು ಬಲಿಷ್ಠರಾಗಿರುತ್ತಾರೆ. ಇವರು ಮಲೆ ಸೋಲಿಗರ ರೊಟ್ಟಿ ಹಬ್ಬ, ಇತರೆ ಹಬ್ಬಗಳಲ್ಲಿ, ಸಮಾರಂಭಗಳಲ್ಲಿ ವಾದ್ಯ ಪರಿಕರಗಳನ್ನು ನುಡಿಸುತ್ತಾರೆ. ಇದನ್ನು ಇವರ ಜೀವನದ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ಇವರು ಹೆಚ್ಚು ಶ್ರಮಜೀವಿಗಳು. ದೇವರ ಮುಂದೆ ಸಾಂಸ್ಕೃತಿಕ ಕಾರ್ಯಕ್ರಮವನ್ನು ನೀಡುತ್ತಾರೆ. ಕೆಲವರಿಗೆ ವ್ಯವಸಾಯ ಮಾಡಲು ಅಲ್ಪಸ್ವಲ್ಪ ಭೂಮಿ ಇದ್ದರೆ, ಬಹು ಮಂದಿಗೆ ಭೂಮಿ ಇಲ್ಲ. ಇವರು ಕೂಲಿಯನ್ನು ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಕಟ್ಟಿಗೆಯನ್ನು ಮಾರಿ ಜೀವನ ಸಾಗಿಸುವುದು, ಕಾಡಿನಲ್ಲಿ ಸಿಗುವ ಕಸಬರಿಕೆ ಕಡ್ಡಿಯನ್ನು ಕಟ್ಟಿ ವ್ಯಾಪಾರ ಮಾಡಿ ಜೀವನ ಸಾಗಿಸುತ್ತಾರೆ. ಬೇರೆಯವರ ಹೊಲ, ಗದ್ದೆ, ತೋಟಗಳಲ್ಲಿ ಕೂಲಿ ಮಾಡಿ ಜೀವನ ಸಾಗಿಸುತ್ತಾ, ಹಬ್ಬ, ವಿಶೇಷ ಸಮಾರಂಭಗಳಿಗೆ ಕರೆದರೆ ತಂಡವಾಗಿ ಬಂದು ಕಾರ್ಯಕ್ರಮ ನೀಡಿ ಹಣವನ್ನು ಪಡೆದು ಹೋಗುತ್ತಾರೆ.

**೨.೨.೩. ದೇವ ಸೋಲಿಗರು(ಪೂಜಾರಿ ಸೋಲಿಗರು):** ಹಿಂದೆ ಇವರೇ ಮಹದೇಶ್ವರನಿಗೆ ಪೂಜೆಯನ್ನು ಮಾಡುತ್ತಿದ್ದರು. ಆದುದರಿಂದ ಈ ಸೋಲಿಗರಿಗೆ "ಪೂಜಾರಿ ಸೋಲಿಗರು" ಎಂದು ಕರೆಯುತ್ತಾರೆ. ಇವರು ಮಹದೇಶ್ವರ ಬೆಟ್ಟದ ಸುತ್ತಮುತ್ತಲ ಪ್ರದೇಶಗಳಲ್ಲಿ ಹಾಗೂ ಕೊಳ್ಳೇಗಾಲದ ಗಡಿಯ ಭಾಗಗಳಲ್ಲಿ

ರಾಮೇಗೌಡನದೊಡ್ಡಿ, ಹುಯಿಯಲನತ್ತ, ಕುಂಬಡ್ಕಿಬೆಟ್ಟದ ಸುತ್ತಲ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಈ ಸೋಲಿಗರನ್ನು **'ನೀಲಾ ಸೋಲಿಗ'** ಎಂದೂ ಸಹ ಕರೆಯುತ್ತಾರೆ. ಕಾರಣ ಮಹದೇಶ್ವರನ ವರಪ್ರಸಾದದಿಂದ ನೀಲಯ್ಯನ ಮತ್ತು ಸಂಕಮ್ಮನಿಗೆ ಹುಟ್ಟಿದ ಮಕ್ಕಳಾದ ನೀಲಯ್ಯ ಮತ್ತು ಕಾರಯ್ಯ ಇವರು ದೇವರ ಮಕ್ಕಳು, ಇವರು ಮಹದೇಶ್ವರನಿಗೆ ಪ್ರತಿದಿನ ಪೂಜೆಯನ್ನು ಸಲ್ಲಿಸುತ್ತಿದ್ದರು. ಈಗಲೂ ಸಹ ಮಹದೇಶ್ವರನಿಗೆ ಭಕ್ತಿಯಿಂದ ತಪ್ಪದೇ ಪೂಜಿಸುತ್ತಾರೆ. ಇವರೂ ಸಹ **'ಸೋಲಿಗ ನುಡಿ'** ಭಾಷೆಯನ್ನು ಮಾತನಾಡುತ್ತಾರೆ.

**೨.೨.೪. ಕಾಡು ಸೋಲಿಗರು:** ಹಿಂದೆ ಬಂಡೀಪುರದ ಕಾಡಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಗುಂಡ್ಲುಪೇಟೆ ತಾಲ್ಲೂಕಿನ ಗೋಪಾಲಸ್ವಾಮಿ ಬೆಟ್ಟದ ಸುತ್ತ ಬೆಟ್ಟದ ಅಂಚಿನಲ್ಲಿ, ಬಿಳಿಗಿರಿರಂಗನಬೆಟ್ಟದ ಸುತ್ತಲ ಪ್ರದೇಶಗಳಲ್ಲಿ, ಬಂಡೀಪುರದ ಹತ್ತಿರವಿರುವ ಕೆಕ್ಕನಹಳ್ಳದಲ್ಲಿ ವಾಸಿಸುತ್ತಾರೆ. ೧೯೭೪ರ ನಂತರದಲ್ಲಿ ವನ್ಯಜೀವಿ ಸಂರಕ್ಷಣೆಯ ಕಾಯ್ದೆಯ ನಂತರ ಈ ಭಾಗ ತಮಿಳುನಾಡಿಗೆ ಸೇರಿಕೊಂಡಿದೆ. ಬಂಡೀಪುರದ ಕಾಡಿನ ಒಳಗೆ ವಾಸಿಸುತ್ತಿದ್ದವರನ್ನು ಕಲ್ಲೀಗೌಡನಹಳ್ಳಿ, ಕಣಿಯನಪುರ, ಕಣಿಯನಪುರ ಕಾಲೋನಿ, ಕಾಡಿನ ಅಂಚಿನಲ್ಲಿ ಪುನರ್ವಸತಿ ಕಲ್ಪಿಸಲಾಗಿದೆ. ಅಂತಹ ಪೋಡು ಕಾಲೋನಿಗಳೆಂದರೆ, ಬೂರುದೇವರ ಹುಂಡಿ, ಚೆನ್ನಿಕಟ್ಟೆ, ಕಾರೆಮಾಳ, ಮೇಲುಕಾಮನಹಳ್ಳಿ, ಮಗುವಿನಹಳ್ಳಿ, ಹಗ್ಗದಹಳ್ಳ ಇನ್ನು ಮುಂತಾದುವು.

ಕಾಡುಸೋಲಿಗರು ಜೀವನ ನಿರ್ವಹಣೆಗಾಗಿ ಬಂಡೀಪುರದ ಅಕ್ಕ ಪಕ್ಕದಲ್ಲಿರುವ ರೆಸಾರ್ಟ್‌ಗಳಲ್ಲಿ ಕೂಲಿ ಕೆಲಸ, ಹೊಲ ತೋಟಗಳಲ್ಲಿ ಕೂಲಿಕೆಲಸ, ಶುಂಠಿಯ ಕೆಲಸ, ಅರಿಶಿಣ, ಚೆಂಡು ಹೂವು ಬಿಡಿಸುವ ಕೆಲಸ, ಕಟ್ಟಿಗೆ ಮಾರಾಟದಿಂದ ಜೀವನ ಸಾಗಿಸುತ್ತಾರೆ. ಅಲ್ಲದೇ ವರ್ಷದಲ್ಲಿ ಕೇರಳ, ತಮಿಳುನಾಡು, ಕೊಡಗು ಜಿಲ್ಲೆಗಳಿಗೆ ಎಸ್ಟೇಟ್ ಕೆಲಸಗಳಿಗಾಗಿ ತೆರಳುತ್ತಾರೆ. ಅಂದರೆ ಮಾರ್ಚ್, ಏಪ್ರಿಲ್, ಮೇ ಜೂನ್ ತಿಂಗಳವರೆಗೂ ಕೂಲಿ ಅರಸಿ ವಲಸೆ ಹೋಗುತ್ತಾರೆ.

**೨.೨.೫. ಬುರುಡೆ ಸೋಲಿಗ:** ಗುಂಡ್ಲುಪೇಟೆಯ ಮದ್ದೂರು ಕಾಲೋನಿ, ಚೆನ್ನಮಲ್ಲಿಪುರ, ಹೆಗ್ಗಡದೇವನಕೋಟೆ ತಾಲ್ಲೂಕಿನ ಮೊತ್ತ, ಅಣ್ಣೂರು ಸುತ್ತಮುತ್ತ, ನಂಜನಗೂಡಿನ ಚೆನ್ನಗುಂಡಿ, ನಗನಪುರ ಮತ್ತು ಕೊಳ್ಳೇಗಾಲ ತಾಲ್ಲೂಕಿನ ಗೇರುಮಾಳದ ಭಾಗಗಳಲ್ಲಿ ನೆಲೆಸಿದ್ದಾರೆ. ಮುಖ್ಯವಾಗಿ ಇವರು ತಮ್ಮ ಧಾರ್ಮಿಕ ವ್ಯವಸ್ಥೆಯಲ್ಲಿ ಮತ್ತು ಶವಸಂಸ್ಕಾರದ ಆಚರಣೆಯಲ್ಲಿ ಬುರುಡೆಯನ್ನು ಕರೆಯುವುದರಿಂದ ಇವರಿಗೆ **'ಬುರುಡೆ ಸೋಲಿಗರು'** ಎಂದು ಕರೆಯುತ್ತಾರೆ. ಬುರುಡೆ ಸೋಲಿಗರು ಸಾಮಾನ್ಯವಾಗಿ ಕನ್ನಡ ಹಾಗೂ ತಮಿಳು ಭಾಷೆಯನ್ನು ಮಾತನಾಡುತ್ತಾರೆ. ಬುರುಡೆ ಸೋಲಿಗರು ಹುಟ್ಟಿನಿಂದ ಸಾಯುವವರೆಗೂ ಸಹ ಬುರುಡೆಯನ್ನು ಕರೆಯುವುದರ ಮೂಲಕ ತಮ್ಮ ಸಗ್ಗದವರು, ದೇವರು, ಕಾಡಿನ ದೇವರು ಅಯ್ಯಾ ಇವರುಗಳಗಳನ್ನು ಆರಾಧಿಸುತ್ತಾರೆ. ಬುರುಡೆ ಸೋಲಿಗರು ೧೯೭೪ರ ವನ್ಯಜೀವಿ ಅರಣ್ಯ ಕಾಯ್ದೆಯ ಪ್ರಕಾರ ಬಂಡೀಪುರದ ಸುತ್ತಮುತ್ತಲ ಪ್ರದೇಶ ಹಾಗು ಗೋಪಾಲಸ್ವಾಮಿ ಬೆಟ್ಟದ ಸುತ್ತಮುತ್ತಲ ಪ್ರದೇಶ, ಮೂಳೆಹೊಳೆ, ಚೆಮ್ಮನ ಹಳ್ಳ ಕಾಡಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಇವರನ್ನು ಸರಕಾರವು ಅರಣ್ಯ ಇಲಾಖೆಯ ವತಿಯಿಂದ ಬಲವಂತವಾಗಿ ಸ್ಥಳಾಂತರಿಸಲಾಯಿತು. ಆ ಸಮಯದಲ್ಲಿ ಸರಕಾರದ ವತಿಯಿಂದ ಗುಂಡ್ಲುಪೇಟೆ ಭಾಗದ ಆಗಿನ ಪ್ರಜಾ ಪ್ರತಿನಿಧಿಗಳಾಗಿದ್ದ ಕೆ.ಎಸ್.ನಾಗರತ್ನಮ್ಮನವರು, ಮಾನ್ಯ ಸಚಿವರು, ಕರ್ನಾಟಕ ಸರ್ಕಾರ, ನಜೀರ್ ಸಾಬ್ (ನೀರಿನ ಸಚಿವರೆಂದೇ ಹೆಸರಾಗಿದ್ದರು) ಇವರ ಕಾಲದಲ್ಲಿ ಬುರುಡೆ ಸೋಲಿಗರನ್ನು

ಈ ಭಾಗದಲ್ಲಿ ಸ್ಥಳಾಂತರಿಸಿ, ಇವರಿಗೆ ಪುನರ್ವಸತಿ ಕಲ್ಪಿಸಿ ಅಲ್ಲಿಯೇ ಸಿಗುವ ಕಾಡಿನ ಮರಮುಟ್ಟುಗಳನ್ನು ಕಡಿದು ಒಳ್ಳೆಯ ಮನೆಗಳನ್ನು ಕಟ್ಟಿಕೊಟ್ಟು ಅವುಗಳಿಗೆ ಕಾಲೋನಿಗಳು ಎಂದು ಕರೆದರು. ಕಾಡಿನಿಂದ ಪುನರ್‌ವಸತಿ ಪಡೆದ ಬುರುಡೆ ಸೋಲಿಗರು ಆ ಕಾಲದಲ್ಲಿ ೧೯೬೫ರಿಂದ-೧೯೭೪ರ ಸುಮಾರಿಗೆ ತಮ್ಮ ಜೀವನ ನಿರ್ವಹಣೆಗಾಗಿ ಕೂಲಿಯನ್ನು ಅರಸಿ ಕೆಲವರು ಕೇರಳ, ತಮಿಳುನಾಡು, ಜಮೀನ್ದಾರರ ಹೊಲ ಮತ್ತು ಗದ್ದೆ, ತೋಟಗಳಲ್ಲಿ ಕೂಲಿ ಕೆಲಸ, ದನ-ಕರುಗಳನ್ನು ಮೇಯಿಸಲು ನೇಮಕವಾದರು. ಇವರಿಗೆ ಒಂದು ವರ್ಷಕ್ಕೆ ಪಡಿಯನ್ನು ಕೊಡುವುದು. ಅಂದರೆ ವರ್ಷಕ್ಕೆ ಒಂದು ಬಾರಿ ಅವರ ಜಮೀನುಗಳಲ್ಲಿ ಬೆಳೆದ ಧವಸ ಧಾನ್ಯಗಳಾದ ರಾಗಿ, ಜೋಳ, ಮೆಣಸಿನ ಕಾಯಿ, ಕಾಳು ಇತ್ಯಾದಿ ಆಹಾರ ಪದಾರ್ಥಗಳನ್ನು ಕೊಡುತ್ತಿದ್ದರು. ಜೊತೆಗೆ ವರ್ಷಕ್ಕೆ ಸುಮಾರು ೧೦೦ರಿಂದ ೧೦೦೦ ವರೆಗೆ ಹಣ ಹಾಗೂ ಪ್ರತಿ ದಿನ ದನ ಮೇಯಿಸುವವರಿಗೆ ಊಟದ ವ್ಯವಸ್ಥೆ ಮಾಡುತ್ತಿದ್ದರು. ಹೀಗೆ ಬುರುಡೆ ಸೋಲಿಗರು ಹಿಂದೆ ಹೆಚ್ಚಿನ ರೀತಿಯಲ್ಲಿ ಜೀತ ಮಾಡುತ್ತಿದ್ದರು. ಪ್ರಸ್ತುತದಲ್ಲಿ ಜೀತ ಮಾಡುವುದು ಕಡಿಮೆಯಾಗಿದೆ. ಆದರೂ ಸಹ ಕೆಲವು ಕಡೆಗಳಲ್ಲಿ ಇನ್ನೂ ಈ ಜೀತ ಪದ್ಧತಿ ಜೀವಂತವಾಗಿರುವುದು ಕಂಡುಬರುತ್ತದೆ. ಬುರುಡೆ ಸೋಲಿಗರು ಸಾಮಾನ್ಯವಾಗಿ ಈ ರೀತಿಯಲ್ಲಿ ಮಾತನಾಡುತ್ತಾರೆ. ಉಡೆ ಕೂಸು ಬಾರುಡೆ, ಎತ್ತಾಗೆ ಹೋದಯಾಡಾ?. ಕಾಡಿಗವಾ ನಾನು ಬತ್ತೀನಿ ಹೋಗಾವು ಇರಾಡಾ. ಅವ್ವಾ ಹೊಟ್ಟೆ ಹಸಿತಾಯಿದೆ ಇಟ್ಟಾಯ್ತಾ,? ಉದುಕ ಏನಾ? ಸೆಂದಾಗಿದ್ದಾದ? ಆ ಈರು ಮುದಿಯಾನ ಅಯ್ಯನಾ ಕರಿಯಮ್ಮಿ ಈ ಕೂಸಿಗಾ ಹಳ್ಳು ಬಿಡಿಸಾಕು, ಬುರುಡೆಕರಿಸಾಕು, ದೇವಾರು ಕೇಳಾಕು ಅಂದರೆ ಏ ಮಗು ಇಲ್ಲಿಗೆ ಬಾ ಎಲ್ಲಿಗೆ ಹೋಗ್ತಾ ಇದ್ದೀಯಾ, ಕಾಡಿಗೆ ಹೋಗ್ತಾ ಇದ್ದೀಯಾ ನಾನು ಬರುತ್ತೀನಿ ಇರು ಇಬ್ಬರು ಹೋಗೋಣ, ಅಮ್ಮ ಊಟ ಆಯ್ತಾ ಹೊಟ್ಟೆ ಹಸಿತಾಯಿದೆ, ಸಾಂಬಾರು ಏನು ಮಾಡಿದ್ದೀಯಾ? ಚೆನ್ನಾಗಿದಿಯಾ?, ಆ ಈರು ತಾತನನ್ನು ಕರೆ ಮಗುವಿಗೆ ಹುಷಾರಿಲ್ಲ ಅದಕ್ಕೆ ಹಳ್ಳು ಬಿಡಿಸಿ ನಮ್ಮ ದೈಯಾ ದೇವರ ಕೇಳಿ ಹುಷಾರು ಮಾಡಬೇಕು ಎಂದು ಈ ರೀತಿಯಾಗಿ ತಮ್ಮ ಭಾಷೆಯಲ್ಲಿ ಮಾತನಾಡುತ್ತಾರೆ.

ಮಲೆಸೋಲಿಗ, ಬುರುಡೆಸೋಲಿಗ, ಕಾಡುಸೋಲಿಗ, ದೇವಸೋಲಿಗ ಊರಾಳಿಸೋಲಿಗ ಇವರಲ್ಲಿ ಮದುವೆಯ ಸಂಬಂಧಗಳು ನಡಯುತ್ತವೆ. ಹಿಂದೆ ಈ ಪಂಗಡಗಳಲ್ಲಿ ಮದುವೆಯು ಬಹಳ ಕಟ್ಟುನಿಟ್ಟಿನಿಂದ ಕೂಡಿತ್ತು. ಮಲೆ ಸೋಲಿಗರು ನಾವು ನಿಜವಾದ ಸೋಲಿಗರು ಎನ್ನುತ್ತಿದ್ದರೆ, ಬುರುಡೆ ಸೋಲಿಗರು ನಾವು ಮೇಲಿನವರು ಎನ್ನುತ್ತಿದ್ದರು ಮತ್ತು ದೇವಸೋಲಿಗ, ಊರಾಳಿಸೋಲಿಗರು ನಾವೂ ಹೆಚ್ಚು ನಿಜವಾದ ಸೋಲಿಗರು ಎನ್ನುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಉಪ ಪಂಗಡಗಳಲ್ಲಿ ಸಂಬಂಧ ಬೆಳೆಸುವ ಹಾಗೂ ಅವರೇ ಪ್ರೀತಿಸಿ ಮದುವೆಯಾಗುವುದು ಕಂಡುಬರುತ್ತಿದೆ. ಇವರೆಲ್ಲರೂ ಮೂಲತಃ ಪ್ರಕೃತಿಯ ಆರಾಧಕರು. ಮೂಲಪುರುಷ ಕಾರಯ್ಯ, ಬಿಲ್ಲಯ್ಯ, ಇವರೂ ಸಹ ಮಹದೇಶ್ವರ, ಬಿಳಿಗಿರಿರಂಗಪ್ಪನನ್ನು ಆರಾಧಿಸುತ್ತಾರೆ. ಆದರೆ ಓದಿದ ಪುಸ್ತಕಗಳಿಂದ ತಿಳಿದಾಗ ಸೋಲಿಗರಾದ ಊರುಬತ್ತಿ ಸೋಲಿಗ ಮತ್ತು ದೇವರುಸೋಲಿಗ ಇವರು ನನ್ನ ಅಧ್ಯಯನದಲ್ಲಿ ಹೆಚ್ಚಾಗಿ ಕಂಡುಬಂದಿಲ್ಲ. ದೇವ ಸೋಲಿಗರು ಹಿಂದೆ ಮಾದೇಶ್ವರ ಬೆಟ್ಟದ ಭಾಗಗಳಿಂದ ವಲಸೆ ಬಂದಿದ್ದರೆ ಅವರನ್ನು ದೇವ ಸೋಲಿಗರು ಎಂದಿರುವ ಸಾಧ್ಯತೆಯಿಂದ ದೇವ ಸೋಲಿಗ ಹೋಗಿ ದೇವ ಸೋಲಿಗರಾಗಿರಬಹುದು. ಊರು ಬುಟ್ಟಿ ಅಥವಾ ಊರುಬತ್ತಿ ಸೋಲಿಗರ ಬಗ್ಗೆ ಈ ಮೇಲಿನ ಐದು ಗುಂಪುಗಳ ಸೋಲಿಗರಲ್ಲಿ

ಮಾಹಿತಿ ಕೇಳಿದಾದ ನಮಗೆ ಅವರು ಗೊತ್ತಿಲ್ಲ ಎಲ್ಲಿಂದ ಬಂದರೋ ತಿಳಿದಿಲ್ಲ. ಆದರೆ, ನಮಗೂ ಅವರಿಗೂ ಇದುವರೆಗೂ ಸಂಬಂಧಗಳು ನಡೆದಿಲ್ಲ ಎಂದು ಹೇಳುತ್ತಾರೆ. ಮತ್ತೊಂದೆಡೆ ಊರುಬುಟ್ಟಿ ಸೋಲಿಗರೇ ಬುರುಡೆ ಸೋಲಿಗರೆಂದು ಹೇಳಿದ್ದಾರೆ. ಹಾಗಾದರೆ ಕಾಕನಕೋಟೆಯ ಭಾಗದಲ್ಲಿ ವಾಸಿಸುವ ಸೋಲಿಗರು ತಮ್ಮ ವೃತ್ತಿಯನ್ನು ಬುಟ್ಟಿ ಹೆಣೆಯುತ್ತಿದ್ದುದರ ಪರಿಣಾಮವಾಗಿ ಅವರಿಗೆ ಊರುಗಳಲ್ಲಿ ಬುಟ್ಟಿಯನ್ನು ಹೆಣೆದು ಮಾರಾಟ ಮಾಡುತ್ತಿದ್ದುದರ ಪರಿಣಾಮವಾಗಿ ಊರುಬುಟ್ಟಿ ಸೋಲಿಗರು ಎಂದೂ ಕರೆದಿರುವ ಸಾಧ್ಯತೆ ಇರುತ್ತದೆ. ಅದೇನೇ ಆದರೂ ಸಹ ಸೋಲಿಗರು ಕಾಡಿನ ಮಕ್ಕಳು ಕಾಡೇ ಸೋಲಿಗರ ಜೀವಾಳ, ಇವರು ಕಾಡನ್ನು ತಮ್ಮ ದೇವರೆಂದು ನಂಬಿ ಪೂಜಿಸುತ್ತ ತಮ್ಮ ಬದುಕನ್ನು ಸಾಗಿಸುತ್ತಾರೆ.

**೨.೨.೬. ಸೋಲಿಗರು ಸಮುದಾಯದ ಪೋಡುಗಳ ಬಗ್ಗೆ ಮಾಹಿತಿ**

ಕರ್ನಾಟಕದ ರಾಜ್ಯದಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳಲ್ಲಿ ಸೋಲಿಗ ಸಮುದಾಯವೂ ಒಂದಾಗಿದೆ. ಇವರು ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಕಂಡುಬಂದರೂ ಚಾಮರಾಜನಗರ, ಮೈಸೂರು ಹಾಗೂ ಕೊಡಗು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ತಮಿಳುನಾಡಿನ ಸತ್ಯಮಂಗಲ ಕಾಡು ಪ್ರದೇಶದಲ್ಲೂ ವಾಸಿಸುತ್ತಿದ್ದಾರೆ. ಅದರಲ್ಲೂ **ಚಾಮರಾಜನಗರ ಸೋಲಿಗರ ತವರುಜಿಲ್ಲೆಯಾಗಿದೆ**. ಇಲ್ಲಿ ಸೋಲಿಗರು ಹೆಚ್ಚಾಗಿ ವಾಸಿಸುತ್ತಾರೆ.

ಕರ್ನಾಟಕ ರಾಜ್ಯದ ದಕ್ಷಿಣದ ತುತ್ತ ತುದಿಯಲ್ಲಿರುವ ಚಾಮರಾಜನಗರ ಜಿಲ್ಲೆಯು ಇತಿಹಾಸದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದರ ಹಿಂದಿನ ಹೆಸರು ***"ಅರೆಕುತಾರ",*** ಒಡೆಯನೂರು" "ವಿದ್ಯಾನಗರಿ" ಇಲ್ಲಿ ಮೈಸೂರಿನ ಹೆಸರಾಂತ ಅರಸರಾದ ಶ್ರೀ ಚಾಮರಾಜ ಒಡೆಯರ್‌ರವರು ೧೭೭೪ನೇ ಇಸವಿ ಮಾರ್ಚ್ ೧ ರಂದು ಹಿಂದೆ ಅರಮನೆ ಪ್ರದೇಶ ಎಂದು ಹೆಸರಾದ ಈ ವಿಶಿಷ್ಟ ಮಂಟಪದಲ್ಲಿ ಜನಿಸಿದ್ದುದರಿಂದ ಈ ಸ್ಥಳಕ್ಕೆ ಚಾಮರಾಜನಗರ ಎಂದು ನಾಮಕರಣವಾಯಿತು. ಈ ಪ್ರದೇಶವು ಶತ್ರುಗಳಿಂದ ಸಂರಕ್ಷಣೆಯ ತಾಣವಾಗಿಯೂ, ಬಿಳಿಗಿರಿರಂಗನ ಬೆಟ್ಟ ಹಾಗೂ ಬಂಡಿಪುರದಲ್ಲಿ ಬೇಟೆ ಹಾಗೂ ಆನೆಗಳನ್ನು ಪಳಗಿಸುವ ಖೆಡ್ಡಾ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು ಎಂಬ ವಿಚಾರಗಳಿವೆ. ಚಾಮರಾಜನಗರ ಜಿಲ್ಲೆಯು ಮೈಸೂರು ಜಿಲ್ಲೆಯಿಂದ ೧೯೯೭ರಲ್ಲಿ ಹೊಸದಾಗಿ ಕರ್ನಾಟಕ ರಾಜ್ಯದಲ್ಲಿ ಸ್ಥಾಪಿತವಾದ ೭ ಜಿಲ್ಲೆಗಳಲ್ಲಿ ಒಂದಾಗಿ ಮೈಸೂರು ಜಿಲ್ಲೆಯಿಂದ ಬೇರ್ಪಡಿಸಲ್ಪಟ್ಟಿದೆ. ಚಾಮರಾಜನಗರ ಜಿಲ್ಲೆಯು ಈ ಕೆಳಕಂಡ ನಾಲ್ಕು ತಾಲೂಕುಗಳನ್ನು ಒಳಗೊಂಡಿದೆ.

೧. ಯಳಂದೂರು ತಾಲ್ಲೂಕು ೧೦ ಪೋಡುಗಳು

೨. ಕೊಳ್ಳೇಗಾಲ ತಾಲೂಕು ೮೦ ಪೋಡುಗಳು

೩. ಚಾಮರಾಜನಗರ ತಾಲ್ಲೂಕು ೨೫ ಪೋಡುಗಳು

೪. ಗುಂಡ್ಲುಪೇಟೆ ತಾಲ್ಲೂಕು ೩೩ ಪೋಡುಗಳು

ಚಾಮರಾಜನಗರ ಜಿಲ್ಲೆಯ ಬಿಳಿಗಿರಿರಂಗನ ಬೆಟ್ಟ, ಮಲೆಮಹದೇಶ್ವರ ಬೆಟ್ಟ, ಗೋಪಾಲಸ್ವಾಮಿ ಬೆಟ್ಟ, ಸುತ್ತಮುತ್ತಲಿನಲ್ಲಿರುವ ಅರಣ್ಯ ಪ್ರದೇಶದೊಳಗೆ ಹಾಗೂ ಅರಣ್ಯದಂಚಿನಲ್ಲಿ ವಾಸಿಸುತ್ತಿರುವ

ಸೋಲಿಗ ಬುಡಕಟ್ಟು ಸಮುದಾಯವು ತನ್ನದೇ ಆದ ಆಚರಣೆ, ಸಂಪ್ರದಾಯ, ನಂಬಿಕೆ, ಸಂಸ್ಕೃತಿ, ಭಾಷೆ ಮತ್ತು ಜೀವನಶೈಲಿಗಳಿಗೆ ಹೆಸರುವಾಸಿಯಾಗಿದ್ದು, ನಾಗರಿಕರ ಗಮನವನ್ನು ತಮ್ಮೆಡೆಗೆ ಸೆಳೆಯುತ್ತಿದ್ದಾರೆ. ಜಿಲ್ಲೆಯಾದ್ಯಂತ ಸೋಲಿಗರು ಒಟ್ಟು ೭೨೦೦ ಕುಟುಂಬಗಳಿದ್ದು ಸುಮಾರು ೪೫,೦೦೦ ಜನಸಂಖ್ಯೆಯನ್ನು ಹೊಂದಿದ್ದಾರೆ.

ಸೋಲಿಗ ಬುಡಕಟ್ಟು ಜನರಿಗೆ ಅನೇಕ ಶತಮಾನಗಳಿಂದ ಆಶ್ರಯ ನೀಡಿದ ಅರಣ್ಯ ಪ್ರದೇಶವೆಂದರೆ **'ಬಿಳಿಗಿರಿರಂಗಸ್ವಾಮಿ ದೇವಾಲಯದ ಅಭಯಾರಣ್ಯ'** ಈ ಅಭಯಾರಣ್ಯದ ಒಳಗೆ ಹಾಗೂ ಅಂಚಿನಲ್ಲಿ ಅಲ್ಲಲ್ಲಿ ಚದುರಿದಂತೆ ಸೋಲಿಗರು ವಾಸಿಸುತ್ತಿದ್ದಾರೆ. ಬಿಳಿಗಿರಿರಂಗನ ಬೆಟ್ಟವೆಂದರೆ ಅದರ ಹೆಚ್ಚಿನ ಪ್ರದೇಶವು ಬಿಳಿಗಿರಿರಂಗಸ್ವಾಮಿ ದೇವಾಲಯದ ಅಭಯಾರಣ್ಯವಾಗಿದೆ. ಈ ವನ್ಯಧಾಮವು ಕರ್ನಾಟಕದ ಆಗ್ನೇಯ ದಿಕ್ಕಿನಲ್ಲಿದ್ದು, ಎರಡು ದಿಬ್ಬಗಳು ದಕ್ಷಿಣೋತ್ತರವಾಗಿ ಚಾಚಿಕೊಂಡಿದ್ದು, ೨೦೦೦ ಮೀಟರ್‌ಗಳಷ್ಟು ಎತ್ತರಕ್ಕಿವೆ. ಸುತ್ತಲೂ ಸಣ್ಣಪುಟ್ಟ ಗುಡ್ಡಗಳ ಸರಮಾಲೆಯೇ ಇದ್ದು, ಇದರ ಕೆಳಗಿನ ಬಯಲು ಭೂಮಿಯಿಂದ ನೋಡಿದರೆ ವಿಶಾಲ ಹಸಿರು ರಾಶಿಯ ಮಧ್ಯ ಒಂದು ಕಡಿದಾದ ಕಂದರದ ಮೇಲೆ ಅಚ್ಚ ಬಿಳಿ ಬಣ್ಣದಂತೆ ಕಾಣುವ ಪುರಾತನ **"ರಂಗಸ್ವಾಮಿ ದೇವರಗುಡಿ"** ಇರುವುದರಿಂದ ಈ ವನ್ಯಧಾಮಕ್ಕೆ **'ಬಿಳಿರಂಗಸ್ವಾಮಿ ದೇವಾಲಯದ ಅಭಯಾರಣ್ಯ'**ಎಂದು ಹೆಸರು ಬಂದಿದೆ.

**ಕೋಷ್ಟಕ: ೨.೨.೧. ಚಾಮರಾಜನಗರ ತಾಲೂಕಿನ ಸೋಲಿಗರ ಪೋಡುಗಳವಾರು ಕೌಟುಂಬಿಕ ಜನಸಂಖ್ಯೆ**

| ಕ್ರಸಂ | ಕಾಲೋನಿ/ಹಾಡಿ/ಪೋಡುಗಳ ಹೆಸರು | ಕುಟುಂಬಗಳು | ಜನಸಂಖ್ಯೆ |
|---|---|---|---|
| ೧ | ಕುಂಟುಗುಡಿ ಕಾಲೋನಿ | ೨೫ | ೨೦೦ |
| ೨ | ಕೆಬ್ಬೆಪಾಳ್ಯ | ೯ | ೬೦ |
| ೩ | ಶನಿವಾರಮುಂಟಿ | ೧೩ | ೬೫ |
| ೪ | ಬೆಲ್ಲತ್ತ | ೩೪ | ೨೦೦ |
| ೫ | ಮುರುಟಿಪಾಳ್ಯ | ೩೫ | ೪೦೦ |
| ೬ | ಹಿತ್ತಲಗುಡ್ಡ | ೨೯ | ೨೦೫ |
| ೭ | ಕಾಳಿಕಾಂಬ ಕಾಲೋನಿ | ೧೩ | ೮೦ |
| ೮ | ಅಟ್ಟುಗುಳಿಪುರ ಕಾಲೋನಿ | ೩೭ | ೨೧೦ |
| ೯ | ಕುಳ್ಳೂರು | ೫೧ | ೩೧೬ |
| ೧೦ | ಗೋಡೆಮಡುವಿನದೊಡ್ಡಿ | ೪೪ | ೩೦೦ |
| ೧೧ | ಬಾನವಾಡಿ | ೬೫ | ೩೯೦ |
| ೧೨ | ಹೊಸಪೋಡು | ೩೦ | ೨೧೫ |

| | | | |
|---|---|---|---|
| ೧೩ | ಶ್ರೀನಿವಾಸಪುರ ಕಾಲೋನಿ | ೬೭ | ೩೩೫ |
| ೧೪ | ಮುನೇಶ್ವರ ಕಾಲೋನಿ | ೭೦ | ೧೮೦ |
| ೧೫ | ಪುಣಜೂರು ಕಾಲೋನಿ | ೨೮ | ೧೮೦ |
| ೧೬ | ಕನ್ನೇರಿಕಾಲೋನಿ | ೧೦೦ | ೪೮೦ |
| ೧೭ | ಭೂತಾಣಿ ಪೋಡು | ೦೫ | ೨೮೦ |
| ೧೮ | ಬೂದಿಪಡಗ | ೧೦೬ | ೫೦೧ |
| ೧೯ | ಎತ್ತೇಗೌಡನದೊಡ್ಡಿ | ೫೬ | ೩೮೫ |
| ೨೦ | ಬೇಡಗುಳಿ ಕಾಲೋನಿ | ೮೦ | ೪೦೬ |
| ೨೧ | ಮಾರಿಗುಡಿ ಪೋಡು | ೩೭ | ೧೫೫ |
| ೨೨ | ರಾಮಯ್ಯನ ಪೋಡು | ೧೮ | ೮೪ |
| ೨೩ | ಕಾಡಿಗೆರೆ ಪೋಡು | ೨೭ | ೧೦೯ |
| ೨೪ | ಮೊಣಕ್ಕೈ ಪೋಡು | ೧೦ | ೧೫೦ |
| | ಒಟ್ಟು | ೯೮೯ | ೫೮೮೬ |

ಕೋಷ್ಟಕ: ೨.೨.೨. ಗುಂಡ್ಲುಪೇಟೆ ತಾಲೂಕಿನ ಸೋಲಿಗರ ಪೋಡುಗಳವಾರು ಕೌಟುಂಬಿಕ ಜನಸಂಖ್ಯೆ

| ಕ್ರಸಂ | ಕಾಲೋನಿ/ಹಾಡಿ/ಪೋಡುಗಳ ಹೆಸರು | ಕುಟುಂಬಗಳು | ಜನಸಂಖ್ಯೆ |
|---|---|---|---|
| ೧ | ದೇಶಿಪುರ ಕಾಲೋನಿ | ೩೬ | ೮೦ |
| ೨ | ಹಂಗಳ | ೩ | ೧೨ |
| ೩ | ದೇವರಂಳ್ಳಿ | ೬ | ೧೬ |
| ೪ | ಕುನಗಳ್ಳಿ | ೬೦ | ೩೦೦ |
| ೫ | ಲಕ್ಕಿಪುರ | ೮ | ೪೦ |
| ೬ | ಬೇರಂಬಾಡಿ | ೨೧ | ೭೫ |
| ೭ | ಮದ್ದೂರು ಕಾಲೋನಿ | ೧೩೦ | ೬೨೫ |
| ೮ | ಚನ್ನಮಲ್ಲಿಪುರ | ೧೦ | ೨೫ |
| ೯ | ಜಕ್ಕಳ್ಳಿ | ೧೬ | ೭೫ |
| ೧೦ | ಕಣಿಯನಪುರ ಕಾಲೋನಿ | ೧೦ | ೪೦ |
| ೧೧ | ಮಂಗಲ | ೧೩೫ | ೬೦೦ |
| ೧೨ | ಮಗುವಿನಹಳ್ಳಿ | ೨ | ೮ |

| | | | |
|---|---|---|---|
| ೧೩ | ಚಲುರಾಯನಪುರ | ೧೨ | ೩೦ |
| ೧೪ | ಹಗ್ಗದಹಳ್ಳ | ೪೦ | ೧೨೦ |
| ೧೫ | ಮೇಲುಕಾಮನಹಳ್ಳಿ | ೬೦ | ೩೦೦ |
| ೧೬ | ಮುಕ್ತಿ ಕಾಲೋನಿ | ೧೧೫ | ೪೫೦ |
| ೧೭ | ಬೂರ್‌ದಾರಹುಂಡಿ | ೨೨ | ೮೦ |
| ೧೮ | ಕಣಿಯನಪುರ | ೧೦ | ೩೦ |
| ೧೯ | ಮೂಲೆಹೊಳ | ೧೦ | ೩೫ |
| ೨೦ | ಉಪಕಾರ ಕಾಲೋನಿ | ೨೪ | ೬೦ |
| ೨೧ | ಕುಂದಕೆರೆ | ೧೨ | ೭೦ |
| ೨೨ | ಮಗುವಿನಹಾಡಿ | ೩೫ | ೧೧೦ |
| ೨೩ | ಮೂಕಳ್ಳಿ ಕಾಲೋನಿ | ೧೦೨ | ೨೨೫ |
| ೨೪ | ಹಂಗಳಪುರ | ೮ | ೨೩ |
| ೨೫ | ಕಿಕ್ಕೆಲಚಟ್ಟಿ | ೨೬ | ೭೫ |
| ೨೬ | ಗುಡ್ಡೇಕೇರಿ | ೨೮ | ೧೧೦ |
| ೨೭ | ಆಡಿನಕಣಿವೆ | ೪೦ | ೧೨೦ |
| ೨೮ | ಆನಂಜಿಹುಂಡಿ | ೨೨ | ೭೦ |
| ೨೯ | ನವಿಲುಗುಂದಿ | ೩೦ | ೧೨೦ |
| ೩೦ | ಕಾರೇಮಾಳ | ೯೦ | ೪೦೦ |
| ೩೧ | ಚೆನ್ನಿಕಟ್ಟೆ | ೨೨ | ೮೦ |
| ೩೨ | ಬಂಡೀಪುರ | ೨೦ | ೪೭ |
| | ಒಟ್ಟು | ೧೧೬೫ | ೪೪೫೧ |

**ಕೋಷ್ಟಕ: ೨.೨.೩. ಯಳಂದೂರು ತಾಲೂಕಿನ ಸೋಲಿಗರ ಪೋಡುಗಳವಾರು ಕೌಟುಂಬಿಕ ಜನಸಂಖ್ಯೆ**

| ಕ್ರಸಂ | ಕಾಲೋನಿ/ಹಾಡಿ/ಪೋಡುಗಳ ಹೆಸರು | ಕುಟುಂಬಗಳು | ಜನಸಂಖ್ಯೆ |
|---|---|---|---|
| ೧ | ಕೆ ದೇವರಹಳ್ಳಿ | ೫೭ | ೧೩೨ |
| ೨ | ಈರಣ್ಣನಕಟ್ಟೆ | ೫ | ೧೮ |
| ೩ | ಬಂಗ್ಲೇ ಪೋಡು | ೯೪ | ೨೫೭ |
| ೪ | ಹೊಸ ಪೋಡು | ೯೫ | ೨೨೬ |
| ೫ | ಮುತ್ತುಗದಗದ್ದೆ | ೧೦೨ | ೨೭೦ |
| ೬ | ಯರಕನಗದ್ದೆ ಪೋಡು | ೧೨೦ | ೨೩೪ |
| ೭ | ಕಲ್ಲಾಣಿ ಪೋಡು | ೨೬ | ೬೬ |

| | | | |
|---|---|---|---|
| ೮ | ಮಂಜಿಗುಂಡಿ ಪೋಡು | ೧೫ | ೫೦ |
| ೯ | ಸೀಗೆಬೆಟ್ಟ ಪೋಡು | ೩೯ | ೧೦೦ |
| ೧೦ | ಪುರಾಣಿ ಪೋಡು | ೧೨೧ | ೧೩೨ |
| | ಒಟ್ಟು | ೬೭೪ | ೧೪೮೫ |

ಕೋಷ್ಟಕ: ೨.೨.೪. ಕೊಳ್ಳೇಗಾಲ ತಾಲೂಕಿನ ಸೋಲಿಗರ ಪೋಡುಗಳವಾರು ಕೌಟುಂಬಿಕ ಜನಸಂಖ್ಯೆ

| ಕ್ರಸಂ | ಕಾಲೋನಿ/ಹಾಡಿ/ಪೋಡುಗಳ ಹೆಸರು | ಕುಟುಂಬಗಳು | ಜನಸಂಖ್ಯೆ |
|---|---|---|---|
| ೧. | ರಾಚಪ್ಪಾಜಿ ನಗರ | ೧೦೩ | ೪೧೨ |
| ೨. | ಹೊಹಳ್ಳಿ | ೪ | ೩೦ |
| ೩. | ಜಡೆಸ್ವಾಮಿದೊಡ್ಡಿ(ಕೋ.ಕೆರೆ) | ೨೨ | ೨೪೦ |
| ೪. | ಕೋಣನಕೆರೆ | ೧೭೯ | ೧೦೨೫ |
| ೫. | ಯಲಚಿಕೆರೆ | ೫ | ೨೦ |
| ೬. | ನಾಲ್‌ರೋಡ್ | ೨೫ | ೧೫೦ |
| ೭ | ಆಸ್ತೂರು | ೯೧ | ೪೦೦ |
| ೮. | ಗುಂಡಿಸೀಡು | ೨೮ | ೧೮೦ |
| ೯. | ಸೀರ್‍ನಹಳ್ಳಿ | ೯ | ೫೪ |
| ೧೦. | ಮರಿಯಾಣಿ | ೫ | ೩೫ |
| ೧೧. | ಬೂದಿಹೊಲ | ೨೮ | ೧೬೮ |
| ೧೨. | ಗೊಟ್ಟದಿಂಬ | ೧೫ | ೧೦೫ |
| ೧೩. | ರಾಮೇಗೌಡನಹಳ್ಳಿ | ೮೬ | ೫೦೦ |
| ೧೪. | ದೋಣಿಮಡುವಿನದೊಡ್ಡಿ | ೩೦ | ೨೦೦ |
| ೧೫. | ಮರೂರು ಕ್ವಾಟ್ರಸ್ | ೨೨ | ೧೩೦ |
| ೧೬. | ಈಚಲಕೆಬ್ಬೆದೊಡ್ಡಿ | ೪೭ | ೨೮೦ |
| ೧೭. | ಕೊಂಬುದುಕಿ | ೨೮ | ೧೬೮ |
| ೧೮. | ಆಣೆಹೊಲ | ೬೨ | ೪೨೦ |
| ೧೯. | ಶಾಂತಿನಗರ | ೧೬ | ೧೦೦ |
| ೨೦. | ಕೀರನಹೊಲ | ೧೨ | ೮೫ |
| ೨೧. | ಗೊರಸಾಣೆ | ೭೫ | ೪೫೦ |
| ೨೨. | ಪಾಲಾರ್ | ೨೮ | ೧೬೮ |
| ೨೩. | ಆಲ್ಲಿಪಾಳ್ಯ | ೪೯ | ೩೦೦ |
| ೨೪. | ಕಲ್ಲಿಟ್ಟಬಯಲು | ೩೨ | ೧೯೨ |

| | | | |
|---|---|---|---|
| ೨೫. | ಸೂಳೆಕೋಬೆ | ೫೭ | ೩೪೨ |
| ೨೬. | ಬೆಂದೋಡ್ಡಿಬೈಲು | ೭ | ೫೦ |
| ೨೭. | ನಕ್ಕುಂದಿ | ೫೩ | ೩೩೦ |
| ೨೮. | ಕರಳೆಮಡುವಿನದೊಡ್ಡಿ | ೯ | ೮೦ |
| ೨೯. | ಕೆ ಎಸ್ ದೊಡ್ಡಿ | ೧೧ | ೧೦೦ |
| ೩೦. | ಕೊಪ್ಪ | ೪೮ | ೩೦೦ |
| ೩೧. | ಸತ್ತಿಮಂಗಲ | ೩೫ | ೨೧೦ |
| ೩೨. | ಬೋರೆದೊಡ್ಡಿ | ೩ | ೨೦ |
| ೩೩. | ಹುಯಿಲನತ್ತ | ೪೬ | ೩೦೦ |
| ೩೪. | ಜಡೆಗೌಡನದೊಡ್ಡಿ | ೨೦ | ೧೨೦ |
| ೩೫. | ಕಡುವಾಳೆದೊಡ್ಡಿ | ೨೩ | ೧೫೦ |
| ೩೬. | ಕುಳ್ಳೇಗೌಡನದೊಡ್ಡಿ | ೧೫ | ೧೧೫ |
| ೩೭. | ವಿ ಎಸ್ ದೊಡ್ಡಿ | ೨೮ | ೧೪೮ |
| ೩೮. | ಬಿ ಜಿ ದೊಡ್ಡಿ | ೧೩ | ೭೮ |
| ೩೯. | ಹಂಡೆಕುರುಬನದೊಡ್ಡಿ | ೪೦ | ೨೪೦ |
| ೪೦. | ಅರೆಕಡುವಿನದೊಡ್ಡಿ | ೪೦ | ೨೪೦ |
| ೪೧. | ಸೊಪ್ಪಿನಗುಡ್ಡೆ | ೧೫ | ೯೦ |
| ೪೨. | ಕಂಬಿಗುಡ್ಡೆದೊಡ್ಡಿ | ೬೦ | ೩೬೦ |
| ೪೩. | ಅರ್ಧನಾರಿಪುರ | ೫೪ | ೩೩೪ |
| ೪೪. | ಗುರುಮಲ್ಲಪ್ಪನದೊಡ್ಡಿ | ೧೧ | ೬೬ |
| ೪೫. | ಕಾನಮಾಳೆದೊಡ್ಡಿ | ೪೫ | ೨೭೦ |
| ೪೬. | ಹೊಸಪೋಡು | ೧೩೪ | ೮೦೪ |
| ೪೭. | ಕೆ ಕೆ ಪೋಡು | ೭೦ | ೪೨೦ |
| ೪೮. | ಹಿರಿಯಂಬಲ | ೧೨೬ | ೭೫೬ |
| ೪೯. | ಗುಳ್ಳದಬಯಲು | ೧೧೮ | ೭೦೮ |
| ೫೦. | ಬಸವನಪುರ | ೧೪ | ೮೪ |
| ೫೧. | ಹಾವಿನಮೂಲೆ | ೧೧೯ | ೭೧೪ |
| ೫೨. | ಬೂದಿಪಡಗ | ೫೭ | ೩೪೨ |
| ೫೩. | ಜಡೆಸ್ವಾಮಿದೊಡ್ಡಿ | ೪೧ | ೨೪೬ |
| ೫೪. | ಸೇಬಿನಕೋಬೆ | ೫೨ | ೩೧೨ |
| ೫೫. | ಕಗ್ಗಲಿಗುಂದಿ | ೩೪ | ೨೦೪ |
| ೫೬. | ಕಂಚಗಳ್ಳಿ | ೪೩ | ೩೫೮ |

| | | | |
|---|---|---|---|
| ೫೭. | ಪುಟ್ಟೀರಮ್ಮನದೊಡ್ಡಿ | ೪೩ | ೨೭೫ |
| ೫೮. | ಮೊಳ್ಳಾಕಟ್ಟೆ | ೨೩ | ೨೪೮ |
| ೫೯. | ಹೊಸದೊಡ್ಡಿ | ೧೮ | ೮೦ |
| ೬೦. | ದಂಟಳ್ಳಿ | ೪೩ | ೨೧೫ |
| ೬೧. | ಚಂಗಡಿ | ೧೨ | ೭೫ |
| ೬೨. | ಪಂಚಲ್ದಣೆ | ೭ | ೬೦ |
| ೬೩. | ಬೆಜಲ್ದಣೆ | ೧೦ | ೬೨ |
| ೬೪. | ಮೆಂದರೆ | ೩೦ | ೧೮೦ |
| ೬೫. | ಮೆದಗಣನೆ | ೧೫ | ೯೦ |
| ೬೬. | ಪಡಸಲನತ್ತ | ೯ | ೭೮ |
| ೬೭. | ಆಲಾಂಬಾಡಿ | ೨೫ | ೧೨೫ |
| ೬೮. | ಉದ್ದಟ್ಟಿ | ೧೧ | ೬೬ |
| ೬೯. | ಮಾವತ್ತುರು | ೫೧ | ೩೦೬ |
| ೭೦. | ಯರಗಬಾಳು | ೧೦ | ೬೫ |
| ೭೧. | ನಲ್ಲಿಕತ್ರು | ೪೬ | ೨೭೬ |
| ೭೨. | ಜೀರಿಗೆಗದ್ದೆ | ೫೩ | ೩೪೦ |
| ೭೩. | ಹೊನ್ನಮೇಟಿ | ೧೦ | ೬೦ |
| ೭೪. | ಕರೆದಿಂಬ | ೪೨ | ೨೦೩ |
| ೭೫. | ಗೊಂಬೆಗಲ್ಲು | ೩೨ | ೧೯೨ |
| ೭೬. | ಕೌಳಿಹಳ್ಳ ಡ್ಯಾಂ | ೪೬ | ೨೭೬ |
| ೭೭. | ಕರಳಕಟ್ಟೆ | ೫೫ | ೩೩೦ |
| ೭೮. | ಯರಕಟ್ಟೆ | ೨೫ | ೧೫೦ |
| | ಒಟ್ಟು | ೩೦೮೭ | ೧೭೫೮೭ |

ಕೋಷ್ಟಕ ೨.೨.೫. ೨೦೧೪–೧೫ನೇ ಸಾಲಿನ ಚಾಮರಾಜನಗರ ಜಿಲ್ಲೆಯ ತಾಲ್ಲೂಕುವಾರು ಹಾಡಿ/ಪೋಡು, ಕಾಲೋನಿಗಳ ಸೋಲಿಗರ ಕುಟುಂಬ, ಜನಸಂಖ್ಯೆಯ ಕೌಟುಂಬಿಕ ವಿವರ

| ಕ್ರಸಂ | ತಾಲ್ಲೂಕು | ಸೋಲಿಗರು | ಒಟ್ಟು |
|---|---|---|---|
| ೧ | ಚಾಮರಾಜನಗರ | ೧೪೦೩ | ೧೪೦೩ |
| ೨ | ಕೊಳ್ಳೇಗಾಲ | ೨೯೪೯ | ೨೯೪೯ |
| ೩ | ಗುಂಡ್ಲುಪೇಟೆ | ೮೮೯ | ೮೮೯ |
| ೪ | ಯಳಂದೂರು | ೬೬೯ | ೬೬೯ |
| | ಒಟ್ಟು | ೫೯೧೦ | ೫೯೧೦ |

ಕೋಷ್ಟಕದಲ್ಲಿ ತೋರಿಸಿರುವಂತೆ ಚಾಮರಾಜನಗರ ಜಿಲ್ಲೆಯು ಒಟ್ಟು ೪ ತಾಲ್ಲೂಕುಗಳನ್ನು ಒಳಗೊಂಡಿದೆ. ಚಾಮರಾಜನಗರ, ಕೊಳ್ಳೇಗಾಲ, ಗುಂಡ್ಲುಪೇಟೆ, ಯಳಂದೂರು. ಅತೀ ಹೆಚ್ಚು ಸೋಲಿಗರು ವಾಸಿಸುವ ಸ್ಥಳವೆಂದರೆ ಕೊಳ್ಳೇಗಾಲ ಅತೀ ಕಡಿಮೆ ಸೋಲಿಗರು ವಾಸಿಸುವ ಸ್ಥಳವೆಂದರೆ ಯಳಂದೂರು ತಾಲ್ಲೂಕು. ಉಳಿದೆರಡು ತಾಲ್ಲೂಕುಗಳಲ್ಲಿಯೂ ಸೋಲಿಗರು ವಾಸಿಸುತ್ತಿದ್ದು ಚಾಮರಾಜನಗರಕ್ಕೆ ಹೋಲಿಸಿದರೆ, ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಕಡಿಮೆ ಸೋಲಿಗ ಜನಸಂಖ್ಯೆಯನ್ನು ಕಾಣಬಹುದು.

**ಕೋಷ್ಟಕ: ೨.೨.೬. ಪ್ರಸ್ತುತ ಅಧ್ಯಯನಕ್ಕೆ ಕ್ಷೇತ್ರಕಾರ್ಯದ ಮಾಡಿದ ಲಿಂಗವಾರು ವಿವರ**

| | | | |
|---|---|---|---|
| ೧ | ಪುರುಷರು | ೮೬೪ | ೪೯.೯೫ |
| ೨ | ಮಹಿಳೆಯರು | ೮೬೬ | ೫೦.೦೫ |
| | ಒಟ್ಟು | ೧೭೩೦ | ೧೦೦ |

ಕೋಷ್ಟಕ: ೧.೩.ರಲ್ಲಿ ತೋರಿಸಿರುವಂತೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸುಮಾರು ೩೨೪ ಕುಟುಂಬಗಳನ್ನು ಚಾಮರಾಜನಗರ ಜಿಲ್ಲೆಯಾದ್ಯಂತ ಆಯ್ಕೆ ಮಾಡಿಕೊಳ್ಳಲಾಗಿದ್ದು, ಅದರಂತೆ ಪುರುಷರ ಸಂಖ್ಯೆಯು ೮೬೪ ಮತ್ತು ಮಹಿಳೆಯರ ಸಂಖ್ಯೆ ೮೬೬ ಆಗಿರುತ್ತದೆ.

**ಕೋಷ್ಟಕ: ೨.೪.೭. ೨೦೧೪ರ ಪ್ರಕಾರ ಜಿಲ್ಲಾವಾರು ಸೋಲಿಗ ಬುಡಕಟ್ಟು ಜನಸಂಖ್ಯಾ ಮಾಹಿತಿ**

| ಕ್ರಸಂ. | ಜಿಲ್ಲೆಯ ಹೆಸರು | ಜನಸಂಖ್ಯೆ | | |
|---|---|---|---|---|
| | | ಒಟ್ಟು | ಪುರುಷರು | ಮಹಿಳೆಯರು |
| ೧ | ಬೆಳಗಾವಿ | ೬ | ೪ | ೨ |
| ೨ | ಬಾಗಲಕೋಟೆ | - | - | - |
| ೩ | ವಿಜಯಪುರ | ೧ | ೧ | - |
| ೪ | ಬೀದರ್ | ೪ | ೩ | ೧ |
| ೫ | ರಾಯಚೂರು | ೨೪ | ೧೧ | ೧೩ |
| ೬ | ಕೊಪ್ಪಳ | ೫ | ೩ | ೨ |
| ೭ | ಗದಗ | ೧೪ | ೫ | ೯ |
| ೮ | ಧಾರವಾಡ | ೭ | ೪ | ೩ |
| ೯ | ಉತ್ತರ ಕನ್ನಡ | ೭ | ೫ | ೨ |
| ೧೦ | ಹಾವೇರಿ | - | - | - |
| ೧೧ | ಬಳ್ಳಾರಿ | ೮ | ೫ | ೩ |
| ೧೨ | ಚಿತ್ರದುರ್ಗ | ೨ | ೧ | ೩ |

| | | | | |
|---|---|---|---|---|
| ೧೩ | ದಾವಣಗೆರೆ | ೧ | - | ೧ |
| ೧೪ | ಶಿವಮೊಗ್ಗ | ೮೧ | ೪೧ | ೪೦ |
| ೧೫ | ಉಡುಪಿ | ೪೦ | ೨೦ | ೨೦ |
| ೧೬ | ಚಿಕ್ಕಮಗಳೂರು | ೩೯ | ೧೯ | ೨೦ |
| ೧೭ | ತುಮಕೂರು | ೭೧೭ | ೩೪೨ | ೩೭೫ |
| ೧೮ | ಬೆಂಗಳೂರು(ನಗರ) | ೮೦೩ | ೩೯೯ | ೪೦೪ |
| ೧೯ | ಮಂಡ್ಯ | ೧೦೮೮ | ೫೪೦ | ೫೪೮ |
| ೨೦ | ಹಾಸನ | ೩೭೮ | ೧೮೮ | ೧೯೦ |
| ೨೧ | ದಕ್ಷಿಣ ಕನ್ನಡ | ೩೨ | ೨೧ | ೧೧ |
| ೨೨ | ಕೊಡಗು | ೧೨೧೭ | ೫೮೬ | ೬೩೧ |
| ೨೩ | ಮೈಸೂರು | ೮೮೪೭ | ೪೪೨೦ | ೪೪೨೭ |
| ೨೪ | ಚಾಮರಾಜನಗರ | ೧೮೧೬೩ | ೯೧೪೮ | ೯೧೧೫ |
| ೨೫ | ಗುಲ್ಬರ್ಗ | - | - | - |
| ೨೬ | ಯಾದಗಿರಿ | ೩ | ೨ | ೧ |
| ೨೭ | ಕೋಲಾರ | ೪೩೮ | ೨೧೭ | ೨೨೧ |
| ೨೮ | ಚಿಕ್ಕಬಳ್ಳಾಪುರ | ೧ | - | ೧ |
| ೨೯ | ಬೆಂಗಳೂರು(ಗ್ರಾಮೀಣ) | ೩೨ | ೧೫ | ೧೭ |
| ೩೦ | ರಾಮನಗರ | ೧೮೬೦ | ೮೮೫ | ೯೭೫ |
| | ಒಟ್ಟು | ೩೩೮೧೯ | ೧೬೭೮೪ | ೧೭೦೩೫ |

ಸೌಜನ್ಯ: ಬುಡಕಟ್ಟು ಸಂಶೋಧನಾ ಸಂಸ್ಥೆ, ಮೈಸೂರು

## ಪುರಾಣ ಮತ್ತು ಐತಿಹ್ಯಗಳು ಸ್ವಾತಂತ್ರ್ಯನಂತರ ಮತ್ತು ಪ್ರಸ್ತುತ ರಾಜಕೀಯದ ಕಾಲಘಟ್ಟದಲ್ಲಿನ ಸೋಲಿಗರು

ಯಾವುದೇ ದೇಶದ ಸಮುದಾಯದ ಸಂಸ್ಕೃತಿಯ ಸಮಾಜಶಾಸ್ತ್ರೀಯ ಅಧ್ಯಯನ ಮಾಡಲು ಮತ್ತು ಅದನ್ನು ರಚಿಸಲು ಆಧಾರಗಳು ಅತ್ಯವಶ್ಯಕ ಸಮರ್ಪಕವಾದ ಆಧಾರಗಳಿಲ್ಲದೇ ಯಾವುದೇ ಅಧ್ಯಯನ ಸಾಧ್ಯವಿಲ್ಲ. ಜನಸಾಮಾನ್ಯರು ಕಾಲಕಾಲಕ್ಕೆ ಹೊರಡಿಸಿದ ಶಾಸನಗಳು, ಐತಿಹ್ಯಗಳು, ಬರೆದ ಗ್ರಂಥಗಳು, ಚಲಾವಣೆಗೆ ತಂದ ನಾಣ್ಯಗಳು, ಕಟ್ಟಿಸಿದ ವಾಸ್ತುಶಿಲ್ಪ ಸ್ಮಾರಕಗಳು, ಬಿಟ್ಟುಹೋದ ದಂತ ಕಥೆಗಳು, ಜನಪದ ಸಾಹಿತ್ಯ, ಪಳೆಯುಳಿಕೆಗಳು, ಉಡುಗೆ-ತೊಡುಗೆ, ವಸ್ತು ಉಪಕರಣಗಳು ಮುಂತಾದವುಗಳು ಅಧ್ಯಯನಕ್ಕೆ ಆಧಾರಗಳಾಗಿರುತ್ತದೆ. ಈ ಆಧಾರಗಳನ್ನು ಲಿಖಿತ ಆಧಾರಗಳು ಮತ್ತು ಅಲಿಖಿತವಾದ ಆಧಾರಗಳು ಎಂದು ಎರಡು ಭಾಗಗಳಾಗಿ ವಿಭಾಗ ಮಾಡಲಾಗಿದೆ.

ಪ್ರಪಂಚದಲ್ಲಿ ಪ್ರತಿಯೊಂದು ಸಮಾಜ ಮತ್ತು ಸಂಸ್ಕೃತಿಗೂ ತನ್ನದೇ ಆದ ಅನನ್ಯವಾದ ಸ್ಥಾನೀಯವಾದ ಕಥನ ಸಂವೇದನೆಯು ಸಮುದಾಯದ ಅಂತಃಸಾಕ್ಷಿಯಾಗಿ ಮೌಖಿಕ ಪರಂಪರೆಯಲ್ಲಿ ಸಾಗಿಬಂದಿರುತ್ತದೆ. ಅದೇ ರೀತಿಯಲ್ಲಿಯೇ ಸೋಲಿಗ ಸಮುದಾಯದ ಕಾಡಿನ ಪರಿಸರದ ಅರಿವಿನ ಜೀವನ, ಅನನ್ಯ ಸಂಬಂಧ ಇವುಗಳು ಮೂಲ ದೇಶೀಯ ಕಥನ ಬೇರುಗಳಾಗಿರುತ್ತದೆ. "ಪ್ರತಿಯೊಂದು ಸಮುದಾಯಗಳಿಗೂ ದೇಶಿ ಕಥನಗಳಿವೆ. ಇವು ಆಯಾ ಸಮುದಾಯದ ಚಹರೆಯೂ ಹೌದು. ಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ, ಜುಂಜಪ್ಪ, ಸಿರಿ, ಎಲ್ಲಮ್ಮ ಮುಂತಾದವರ ಸುತ್ತ ಬಹುರೂಪಿ ಕಥನಗಳು ವ್ಯಾಪಿಸಿಕೊಂಡಿವೆ. ಒಂದೊಂದು ದೇಶಿ ಕಥನಗಳ ಸಾಂಸ್ಕೃತಿಕ ನಾಯಕರು ಅಂತಹ ಸಾಕ್ಷಿಯನ್ನು ಪ್ರತಿನಿಧಿಸುತ್ತದೆ. ಇಲ್ಲಿನ ವಿಶೇಷವೇನೆಂದರೆ, ಈ ಎಲ್ಲಾ ಸಾಂಸ್ಕೃತಿಕ ನಾಯಕರು ಕರ್ನಾಟಕದ ತಳ ಸಮುದಾಯದಿಂದ ಬಂದವರು. ಇಡೀ ಸಮುದಾಯದ ಪುರಾಣ ಪ್ರಜ್ಞೆಯಂತೆ ಆಯಾ ಕಥನಗಳ ಸಾಂಸ್ಕೃತಿಕ ವೀರರು ಸಂಸ್ಕೃತಿನಿಷ್ಠ ಸೃಜನಶೀಲತೆಯಲ್ಲಿ ಮತ್ತೆ ಮತ್ತೆ ಮೈದಾಳುತ್ತಿರುತ್ತಾರೆ."[೨]

ಅದೇ ರೀತಿಯಲ್ಲಿ ಸೋಲಿಗರ ಸಮುದಾಯದ ಯಾವುದೇ ರಚನೆಯು ಮೌಖಿಕವಾಗಿರಲಿ ಅಥವಾ ಆಚರಣಾತ್ಮಕ ಪ್ರಕಾರದ್ದಾಗಲಿ ಎಲ್ಲವೂ ಸಹ ಸಮುದಾಯದ ಒಳಿತಿಗಾಗಿಯೇ ಸಮಷ್ಟಿ ಸ್ಮೃತಿಗಳ ಮೂಲಕವೇ ಪುನರ್‌ಸೃಷ್ಟಿಗೆ ಒಳಪಡುವುದು. ಸೋಲಿಗರಿಗೆ ಸಂಬಂಧಿಸಿದ ಐತಿಹ್ಯಗಳು, ಪುರಾಣ ದಂತಕಥೆಗಳ ಬಗ್ಗೆ ತಿಳಿಯಲಾಗಿದೆ. ಸೋಲಿಗ ಸಮುದಾಯದ ಹಿನ್ನೆಲೆಯ ಬಗ್ಗೆ ಅಧ್ಯಯನ ಮಾಡಲು ಮುಖ್ಯವಾಗಿ ಮೂಲಾಧಾರಗಳ ಸಹಾಯದಿಂದ ಅಧ್ಯಯನವನ್ನು ಮುಂದುವರಿಸಲಾಗಿದೆ. ಸೋಲಿಗರ ಬುಡಕಟ್ಟಿನ ಹುಟ್ಟಿನ ಬಗ್ಗೆ ಇರುವ ಕೆಲವೊಂದು ಐತಿಹ್ಯಗಳು ಹೀಗಿವೆ.

೧. ನೀಲಯ್ಯ ಮತ್ತು ಸಂಕಮ್ಮನ ಕಥೆ

೨. ಸೋಲಿಗರು ಬಿದಿರಿನ ಮಕ್ಕಳು (ಶಿವ-ಪಾರ್ವತಿಯ ಕಥೆ.)

೩. ಪ್ರಪಂಚ ಭೂಮಿ ಹೇಗೆ ಹುಟ್ಟಿತು

೪. ಪುಸುಮಾಲೆ ಮತ್ತು ರಂಗಭಾವನ ಕಥೆ



೫. ಸೋಲಿಗ ಹುಡುಗ ಮತ್ತು ಕಾಡೆಮ್ಮೆಯ ಕಥೆ

೬. ಮಲಕಿ ಬೆಟ್ಟ



೭. ಸೋಲನ ಗೆಡ್ಡೆಯ ಕಥೆ

೮. ಚೋಳರಾಜನ ಕಥೆ

**೧. ನೀಲಯ್ಯ ಮತ್ತು ಸಂಕಮ್ಮನ ಕಥೆ** : ನೀಲಯ್ಯ ಮತ್ತು ಸಂಕಮ್ಮ ಹೊಸದಾಗಿ ಮದುವೆಯಾದ ಗಂಡ-ಹೆಂಡತಿ ಇವರಿಬ್ಬರು ದಟ್ಟವಾದ ಕಾಡಿನ ಮಧ್ಯದಲ್ಲಿ ವಾಸ ಮಾಡುತ್ತಿದ್ದರು. ನೀಲಯ್ಯ ತನ್ನ ವೃತ್ತಿಯಾದ ಜೇನು ಸಂಗ್ರಹ ಕೆಲಸವನ್ನು ಮಾಡುತ್ತಿದ್ದನು. ಜೇನು ತರಲು ಸೋಲಿಗರು ಯಾವಾಗಲೂ ಗುಂಪಾಗಿ ಸಮುದಾಯದವರೆಲ್ಲಾ ಸೇರಿಕೊಂಡು ಹೋಗುವಾಗ ಸಂಕಮ್ಮನನ್ನು ಕಾಡಿನಲ್ಲಿ ಒಬ್ಬಂಟಿಯಾಗಿ ಬಿಟ್ಟು ಹೋಗಬೇಕಲ್ಲಪ್ಪ ಎಂದು ನೀಲಯ್ಯ ಯೋಚಿಸುತ್ತಿರುತ್ತಾನೆ. ನೀಲಯ್ಯ ಸಂಕಮ್ಮನಿಗೆ ಮಕ್ಕಳಾಗಿರಲಿಲ್ಲ ಆದ್ದರಿಂದ ಇವಳು ಹುಟ್ಟುಬಂಜೆ ಎಂದು ಹೀಯಾಳಿಸುತ್ತಿದ್ದ ಕಾರಣ ಮಾತನ್ನು ಕೇಳಲಾಗದೆ,

ನೀಲಯ್ಯ ಸಂಕಮ್ಮನನ್ನು ದಟ್ಟಾರಣ್ಯದ ಮಧ್ಯದಲ್ಲಿ ಈಗಿನ "ಕೊಕ್ಕರೆ ಕೊಂಬುಡ್ಕಿ" ಬೆಟ್ಟದಲ್ಲಿ ವಾಸ ಮಾಡುತ್ತಿದ್ದರು.

ಅರೆಯ ಮೇಲೆ ಹೆಂಡತಿಯನ್ನು ಕುಳ್ಳಿರಿಸಿ ಕವ್ವೆಗಳು, ಬಾಣೆಹುಲ್ಲು, ಸೊಪ್ಪಿನಗುಳ್ಳ ಮಾಡಿ ಅದಕ್ಕೆ ಬಿದಿರಿನ ಬಾಗಿಲು ಮಾಡಿ ಅಲ್ಲಿಯೇ ಜೀವನ ಸಾಗಿಸುತ್ತಿದ್ದಾಗ, ಒಂದು ದಿನ ಏಪ್ರಿಲ್–ಮೇ ತಿಂಗಳಿನಲ್ಲಿ ಹೆಜ್ಜೇನು ಬೇಟೆಗೆ ಸಾಮೂಹಿಕವಾಗಿ ಪೋಡಿನವರೆಲ್ಲರೂ ಹೊರಡುತ್ತಾರೆ. ಅವರು ಹೋಗಾಗ ಮೂರು ತಿಂಗ, ಜೇನು ಕುಯ್ಯಾದು ಮೂರುತಿಂಗ, ಹಿಂದಿರುಗಿ ಬರಾದು ೩ ತಿಂಗ ಒಟ್ಟಾಗಿ ಕರಾದು ನ್ಯಾಯ ಆಡಾಗ ನೀಲೆಗೌಡ ಹೇಳುತ್ತಾನೆ. "ಕೊಕ್ಕರೆ–ಕೊಂಬುಡ್ಕಿ ಬೆಟ್ಟದಲ್ಲಿ" ನನ್ನ ಹೆಂಡತಿಯ ಬಿಟ್ಟು ನಾನು ಬರಾದಿಲ್ಲೆ, ನೀವೆ ಹೋಗಿದ್ದು ಬರ್‍ರಿ ಎಂದು ಹೇಳುತ್ತಾನೆ. ಆಗ ಸಂಬಂಧಿಕರು, ಓ ನೀಲೆಗೌಡ ನೀ ಬರಲ್ಲೇ ಎಂದರೆ ನಿನ್ನ ನಮ್ಮ ಜಾತಿಯಿಂದ ಹೊರಸಾರಿ ಬಿಟ್ಟು ಬಿಡುತ್ತೀವಿ ನೀನು ಬರಾಕು ಆಗೆಂದು ಕುಲಸ್ಥರು ಹೇಳಿದರು. ಮೂರು ದಿನ ವಯಸಿಕೊಡಿ (Time ಕೊಡಿ) ನನಗೆ ಆನಂತ ಹೆಂಡತಿಯ ಹತ್ತಿರ ಹೋಗುವನೇ..... **ಹೆಂಡತಿ ಕೇಳ್ತಾಳೆ "ಹೋಗಾಗ ನಗೆ ಮಾಡ್ರು ಹೋದಿರು ಬರಾಗ ಏಕಾ ಸಪ್ಪಗಾಗಿ ಬಂದಿರು"** ಎಂದು ಹೆಂಡತಿ ಕೇಳುತ್ತಾಳೆ. ಹೇಳುತ್ತೇನೆ ಹೆಣ್ಣೆ ಸಂಕಣ್ಣೆ ಎಂದು ನಿಟ್ಟುಸಿರು ಬಿಡುತ್ತಾನೆ. ಸಂಕಮ್ಮ ಯಾಕಪ್ಪ ನಿನ್ನ ಮುಖ ಕಂದಿಕಪ್ಪಾಗಿ ಹೋಗಿದೆ ಎಂದು ಕೇಳಿದವಳೆ ಆಗ ಹೇಳಿದವನೆ ನೀಲೆಗೌಡ ನಮ್ಮ ಜಾತಿಯವರು ಕಾಡಿಗೆ ಹೋಗಾಗಿ **"ಹೆಜ್ಜೇನು ಬೇಟಿಕಾ"** ಕಡ್ಡಿಜೇನು ಬೇಟೆ, ತುಡುವೆ ಜೇನು ಬೇಟೆ, ಹೋಗಾಕ ನನ್ನ ಕರೆದವರೆ ಅದಕಾ ನಾನು ನಿನ್ನ ಒಬ್ಬಾಳವೇ ಬಿಟ್ಟಾಕಿ ಹೋಗದಕ್ಕ ಆಗದಿಲ್ಲೆ. ನಾನೇನ ಮಾಡಾದು, ನಾ ಹೋಗದಿಲ್ಲೆ ಎಂದು ಹೇಳಿದನು. ಆಗ ಹೆಂಡತಿ ಹೇಳಿದವಳೆ, ಇಲ್ಲೆ ಸಾಮಿ ನಮ್ಮ ಕುಲದ ಪದ್ಧತಿಯಂತೆ ನೀ ಹೋಗಾಕು. ನಿನ್ನ ಒಬ್ಬಳವೇ ಈ ಕಾಡು ಮಧ್ಯದಲ್ಲಿ ಹೇಗೆ ಬಿಟ್ಟು ಹೋಗಲಿ ಆಗೆಂದು ನೀಲೇಗೌಡ ಹೇಳಿದವನೆ. ಆಗ ಸಂಕಮ್ಮ ಹೇಳುತ್ತಾಳೆ, ನಾನು ಇಲ್ಲೇ ಇರುತ್ತೇನೆ ನನಗೇನು ಭಯವಿಲ್ಲ. ನಮ್ಮಪ್ಪನಾದ ಮಲೆಯ ಮಾದೇಶ್ವರ ಇರುತ್ತಾನೆ ನೀನು ಹೋಗಿದ್ದು ಬಾ ಜನ ಹೇಳಿದ ಹಾಗೆ ನಾವು ಕೇಳಬೇಕು ಎಂದು ಹೇಳಿದಾಗ ಇಲ್ಲೆ...ಇಲ್ಲೆ..., ನಾ ಹೋಗಾರೆ ನೀ ಒಬ್ಬಾಳೆ ಬುಟ್ಟಾಕಿ ನಾನೂ ನಿನ್ನ ಜೊತೇಲಿ ಇರ್‍ತೀನಿ ಎಂದು ಏಳಿದವನೆ ನೀಲೇಗೌಡ.

ಈ ಕಾಡಿನಲ್ಲಿ ನಿನ್ನ ನೋಡುವವರು ಆರುವೇ ಇಲ್ಲೇ... ಎಂದು ಹೇಳಿ ಆರಾದರೂ ಕಳ್ಳರು, ಕಾಕರು ಬಂದು ನಿನ್ನ ನೀರ ಕೊಡ, ಇಟ್ಟ ಕೊಡು(ರಾಗಿ ಮುದ್ದೆ) ಎಂದಾಗ ನೀನು ಕೊಡದೆ ಇದ್ದರೆ ನಿನಗೆ ಹೊಟ್ಟೆ 'ಸುರ್‍ರ' ಅಂತದೆ ಆಗ ನೀನು ಏನಾದಲುವೆ ತಂದು ಕೊಡುತ್ತೇವೆ. ಆಗ ನೀನೊಬ್ಬಳೆ ಕಾಡಿನ ಒಳಗೆ ಇದ್ದಾಗ ನೋಡಿಕೆ(ನೋಡಿ) ಆರಾದರೂ ನಿನ್ನ ಕರದೂರು ಹೊಟ್ಟೋಯ್ತವರೆ ಅದರಿಂದ ನಿನ್ನ ಒಬ್ಬಳವೇ ಬುಟ್ಟಾಕಿ ಹೋಗಾರೆ ಎಂದು ಗಂಡ ಹೇಳಿದವನೆ. ಮತ್ತೆ ಹೇಳುತ್ತಾನೆ. ಇಲ್ಲೆ ನಿನ್ನ ಈ ಮನೆಯಲ್ಲಿ ಬುಟ್ಟಾಕಿ ಹೋದಾಲೆ ನೀನು ನನಗೆ ಸಿಕ್ಕಾರೆ, ಆರಾದರೂ ದನಕರು,ಆಡುಕುರಿ ಮೇಯಿಸಾಗೆ ಬಂದವರು ನಿನ್ನ ಕರದೂರು ಹೊಟ್ಟು ಹೊಟ್ಟೋಯ್ತವರ ಆದ್ದರಿಂದ ನಾನು ನಿನ್ನ ಈ ಕಾಡಿನಲ್ಲಿ ಬುಡಾರೆ. ನಾನು ಜೇನು ಬೇಟೆಗೆ ಹೋಗಾರೆ ಎಂದು ನೀಲೇಗೌಡ ಹೇಳಿನ.(ಹೇಳುತ್ತಾನೆ) ಆಗ ಸಂಕಮ್ಮ ಹೆಂಡತಿ ಹೇಳುತ್ತಾಳೆ ಜಾತಿಗಿಂತ ಮೇಲಾಗಿ ನಾವಿಲ್ಲೆ, ನಾವು ನಮ್ಮ ಜಾತಿ ಹೇಳಿದ ಹಾಗೆ ಕೇಳಬೇಕು ನಮ್ಮ ಜಾತಿ ಪದ್ಧತಿ ಅದೇ ಅದೇ ನಮ್ಮ ಕುಲ ದೇವರು. "ಕುಲದೇವರಿಗಿಂತ

**ಜಗತ್ತಿನಲ್ಲಿ ದೊಡ್ಡದು ಯಾವುದೂ ಇಲ್ಲ"** ಎಂದು ನೀಲೇ ಗೌಡನಿಗೆ ಸಂಕಮ್ಮ ತಿಳಿಸುತ್ತಾಳೆ. ಮತ್ತೆ ಹೇಳುತ್ತಾನೆ ನೀಲೆಗೌಡ "ಇಲ್ಲೆ ಇಲ್ಲೆ ಅವರೇನಾದುಲುವೆ ಮಾಡುಮಲಿ ನಾನು ನಿನ್ನ ಒಬ್ಬಾಳೆವೆ ಬುಟ್ಟಾಕಿ ಹೋಗಾರೆ" ಎಂದು ಮತ್ತೇ ನೀಲೇಗೌಡ ತಿಳಿಸುತ್ತಾನೆ. ಹೆಂಡತಿ ಹೇಳುತ್ತಾಳೆ. ಇಲ್ಲೆ....ಇಲ್ಲೆ..., ನೀನು ಹೋಗೆ ಹೋಗಾಕು ನಾನು ಹೇನುವೇ ಆಗದಿಲ್ಲೆ ನಿನ್ನ ಹೆಂಡತಿಯಾಗಿ ನಾನು ಇರ್ತೀನಿ ನನ್ನ ಗಂಡನೇ ದೇವರು ಎಂದು ಪೂಜಿಸುತ್ತೇನೆ. ಎಂದು ಹೇಳುತ್ತಾಳೆ. ಆಗ ನೀಲೇಗೌಡ ಹೇಳಿದವನೆ, ನೀನು ಈ ಕಾಡಿನಲ್ಲಿ ಬುಟ್ಟಾಕಿ ಹೋದಾಗ ಆರಾದರ ಪಾಲು(ವಶ) ಆಗುತ್ತೀವೆ. ಎನ್ನುತ್ತಾನೆ. ಆಗ ಸಂಕಮ್ಮ ಹೇಳುತ್ತಾಳೆ. ಅಯ್ಯಯ್ಯೋ... ಎಂಥ ಮಾತೆಂದು ಹಾಡಿದೆ ಆ ಮಾತ ಯಾವತ್ತಿಗವೇ ಹೇಳಬೇಡ ಎನ್ನುತ್ತಾಳೆ. ಹೆಂಗಸರ ಮಾತು ಯಾವತ್ತಿಗೂ ಕೇಳಬಾರದು ಎಂದು ಹೇಳಿದವನೆ ಥೇ....ಥೇ ಎಂಥಹ ಮಾತೆಯ ಹೇಳಿದೆ ಹೆಂಗಸರು ಗಂಡನನ್ನೇ ದೇವರೆಂದು ಪೂಜಿಸಿದವರೆ ಆಗೆ ಇರಾಗ ನೀನು ಈ ರೀತಿಯಲ್ಲು ಹೇಳಬಾರದು. **"ಕೆರೆಯಲ್ಲಿ ಆಡ ಮೀನಿನ ಹೆಜ್ಜೆಯಾದಲುವೆ ಕಾಣಬಹುದು, ಹೆಂಗಿಸರ ಮರ್ಮವನ್ನು ತಿಳಿವಾದಕ್ಕಾಗದಿಲ್ಲೆ"** ಎಂದು ಹೇಳಿದವನೆ ಮತ್ತೆ ಹೇಳುತ್ತಾನೆ. ಗಂಡ ಆಗ ನಾನು ಹೆಜ್ಜೇನ ಬೇಟೆಗೆ ಹೋಗಬೇಕಾದಲೆ "ನಿನ್ನ ಬೆತ್ತಲೆ ಮಾಡಿ ಬುಟ್ಟಾಕಿ ಹೋಗಾದು, ನೀನು ಮನೆ ಒಳಗಾವೇ ನಾನು ಬರನೇಗಂಟ ಇರಾಕು" ಹಾಗಂತ ನೀಲೇಗೌಡ ಹೆಂಡತಿಗೆ ಹೇಳುತ್ತಾನೆ. ಎಂಥಾ ಮಾತೆಂದು ಹೇಳಿದೆ ಇದು ತಪ್ಪಲ್ಲಾವಾ ಎಂದು ಸಂಕಮ್ಮ ಉತ್ತರಿಸುತ್ತಾಳೆ. ಮತ್ತೆ ಹೇಳುತ್ತಾನೆ ನನಗೆ ನಂಬುಕೆ ಇಲ್ಲೆ ನೀ ಎಷ್ಟೇ ಹೇಳಿದುವೆ ನಾ ಹೇಗೆಯಪ್ಪ ಕಾಡಿನಲ್ಲಿ ನಿನೊಬ್ಬಳೆ ಬುಟ್ಟಾಕಿ ಹೋಗುವುದು ಎನ್ನುತ್ತಾನೆ. ಆಗ ಸಂಕಮ್ಮ ಹೇಳುತ್ತಾಳೆ **"ನಾವು ಕಾಡಿನ ಜನಕಾಡೇ ನಮ್ಮ ದೇವರು ಈ ಕಾಡು ನಮ್ಮದು, ಕಾಡೇ ನಮ್ಮನ್ನು ಕಾಪಾಡುತ್ತದೆ"** ಏನೂವೆ ಭಯ ಪಡಾದು ಬೇಡ ಎಂದು ಹೇಳುತ್ತಾಳೆ. ಗಂಡ ಹೇಳಿದವನೆ ಕಾಡೇ ದೇವರೆಂದುಗೊತ್ತು ಆದುಲುವೆ ಹೇಗೆಯ್ಯ ನಿನ್ನ ಒಬ್ಬಳವೆ ಬುಟಾಕಿ ಹೋಗಾದು ಎಂದು ನನ್ನ ಮನಸ್ಸು ಒಪ್ಪದಿಲ್ಲೆ ಎಂದು ಹೇಳಿದವನೆ ಆಗ ಸಂಕಮ್ಮ ಕೇಳುತ್ತಾಳೆ, **"ಮತ್ತೆದೇಕಾ ಈ ಕಾಡಿಗೆ ಕರ್ದುಬಂದೆ"** ಎಂದಾಗ ಅತ್ತಿಗೆ ಅಣ್ಣಂದಿರು ಎಲ್ಲಾ ಜಗಳವಾಡುತ್ತಿದ್ದರು ಕೋಪದಿಂದ ಅವರ ಕಣ್ಣಿನ ಮುಂದೆ ನಾವು ಇರಬಾರದು ಎಂದು ಈ ಕಾಡಿಗೆ ಬಂದಾಕಿದ್ದು **"ಹುಟ್ಟು ಬೆಳೆದಾಗ ಅಣ್ಣ ತಮ್ಮಂದರು ದೊಡ್ಡವರಾದಾಗ ದಾಯಾದಿಗಳು"** ಎಂದು ಹೇಳಿದವನೆ ನಾನು ಕಾಡಿನ ಅಡವಿಯೊಳಕವೇ ಸೇರುವುದು ಎನ್ನುತ್ತಾನೆ. ಆಗ ಸಂಕಮ್ಮ ಹೇಳುತ್ತಾಳೆ. "ಕಾಡೇ ನಮ್ಮ ದೇವರು ಎಂದು ನಾವು ಪೂಜೆ ಮಾಡಿದಾಗ ಆ ದೇವರೇ ನಮ್ಮ ಕಾಪಾಡಿದ್ದೆ ಕಾಡಿನ ಜನಕ(ಮಕ್ಕಳಿಗೆ) **"ದೇವರೇಕಾವಲು"** ನನಗೇನ ಭಯವಾ.... ನೀನು ಹೋಗಿ ಬಾ ಎಂದು ಹೇಳಿದವಳೆ.

ಲೇ ಲೇ ನನಗೆ ಅಯ್ಯೋ ಪಾಪ ಅನ್ನಿಸಿದ್ದೆ ನಾನು ನಿನ್ನ ಒಂದು ಮಾತನ್ನು ಕೇಳುತ್ತೇನೆ. ಕೇಳಿದಾಗ ಬಲದ ಕೈ ಭಾಷೆಯನ್ನು ಕೊಡು ಎನ್ನುತ್ತಾ ಮುಂದೆ ತಪ್ಪು ಆಗಲೂಬಹುದು ಎನ್ನುತ್ತಾನೆ. ನಾನು ಯಾವತ್ತಿಗೂ ತಪ್ಪು ಮಾಡುವುದಿಲ್ಲ ಎಂದು ಹೇಳುತ್ತಾಳೆ. ಸರಿ ಆಗಾ ಹುಟ್ಟಿದ ಸ್ಯಾಲೆ ಅಳಿ ತೊಟ್ಟುರ ರೋಕೆ ಅಳಿ ಉಗುನೆ ಹಂಬು(ಸೊಪ್ಪು) ಸುತ್ತುನು(ಸುತ್ತಿಕೋ) ಬಾಯಿಕ ಬೀಗ ಹಕ್ಕಿದವನೆ, ಕಣ್ಣಿಗೆ ಕಾರೆಮುಳ್ಳು ಸುಚ್ಚಿದವನೆ ಕಿವಿ ಕೇಳಗಿಲ್ಲೆ ಎಂದಾಗ 'ಮಗ್ಗಾರೆ' ಮುಳ್ಳು ಸುಚ್ಚಿದವನೆ ಆಗ **'ಹುಗುನಾ'** ಹಂಬು ಕಟ್ಟಿದವನೆ, ಕಾಲಿಕ ಕಬ್ಬಾಳೆ ಹಂಬುಕಟ್ಟಿದವನೆ ಅಂಗಾತಕಾರನೆ ಕೆಡಸಿದವನೆ (ಮಲಗಿಸಿದವನೆ) ಎದೆ ಮೇಲೆ ಬಾರಿ ಗಂಡು ಮಡಗಿದವನೆ(ಬಂಡೆ) ಆಗ ಬಾಗಿಲಿಗೆ ಗುಂಡ

ಮಡಗಿದವನೆ ಅಡಿ(ಬಾಗಿಲು) ಮಡಿಚ್ಚಾದವನೆ ೩ ಕಟ್ಟು ಹಾಕಿದವನೆ ಬಾಗಿಲಿಗೆ ಗುಂಡು ಸಾಸಿದವನೆ ೩ ಮಂಡಲ ಬರದವನೆ(ಮಾಯಾಮಂತ್ರ) ಆ ಮಂಡಲಾಗೆಲ್ಲಾ ಜಪಾ ಮಂತ್ರ ಬರೆದವನೆ "ಓಂ ಕಾಳಿ....ಕಾಡಕಾಳಿ....ವನಕಾಳಿ....ನೀನು ಈ ಕಾಡಿನಲ್ಲಿ ಒಬ್ಬಳವೆ ಬುಟ್ಟಾಕಿ ಹೋದಿವಿನಿ ನೀವು ಆರ ಬಂದಲುವೆ ಈ ಮನೆ ದಂಡಕ ಬರದಿದ್ದಾಗೆ ನೊಡುನಿ ಆದಲುವೆ ನೀನು ನಾನು ಬರಾನೆಗೆಂಟ ಯಾವಾ ಮಂತ್ರದದ ಬಂದಾಲುವೆ ಅವನ ಈ ಮನೆಯದಂಡಾಕ ಬರದಿದ್ದಾಗೆ ನೋಡುಮಕು ಎಂದು ಹೇಳಿದವನೆ. ಮಂತ್ರಾಗ ಸರಿ ನಾವು ನೋಡುರುತ್ತೀವಿ ನೀ ಹೋಗುರ್ದು ಬಾ ಎಂದು ಹೇಳಿದವೆ. ನಿಟ್ಟೂವೆ ಕಾವಲು ನಿಮ್ಮೂವೇ ನಾನು ನಂಬಿರ್ದು ಎಂದು ಹೇಳುತ್ತಾನೆ. ಆಗ ಕಾಳ ನಾಯಿ ಕರ್ದವನೆ, ಜೂಲನಾಯಿ ಕರ್ದವನೆ, ಕೊಕ್ಕೆ ಜೋಡು ಮೆಟ್ಟಿದವನೆ, ಹೊಸ ಮಡಕೆ ಕಂಕುಳಾಗ ಜೋಳಗ ಕಟ್ಟಿದವನೆ ಬಾರಿ ಬಂದೂಕ ಬಲಸಾರಿ ಹೆಗಲಿಗೆ ಮಡಗಿದವನೆ, ಆಗ ಕಾಡಿಗೆ ಪಯಣ ಮಾಡುತ್ತಾನೆ. ಆಗ ಹೋಗಿ ಅವರ ಸಮುದಾಯದ ಜನಗಳ ದಂಡಕ(ಹತ್ತಿರ) ಸೇರಿದವನೇ. ಇತ್ತ ಕಡೆ ಮನೆಯ ಒಳಗ ಸಂಕಮ್ಮ "ಇವ ಬಿದ್ದರು ಅತ್ತವಳೆ, ಅವಳ ಕಣ್ಣೀರೆಲ್ಲಾ, ಮಾದಪ್ಪನ ಪಾದಕ್ಕೆ ೩ ತೊಟ್ಟು ಹನಿ ಬಿದ್ದಿತು. ತಕ್ಷಣ ಮಾದಪ್ಪ, ಬೇಡರ ಕಣ್ಣಪ್ಪ ನನ್ನ ಕರ್ದವರೆ ಬೇಡರ ಕಣಪ್ಪ ಬಂದು, "ನನ್ನ ಕರ್ದ ಸಮಾಚಾರ ಏನು ಸಾಮಿ ಎಂದು ಕೇಳಿದಾಗ ಮಾದಪ್ಪ ಹೇಳುತ್ತಾ "ನಾನು ಹುಟ್ಟಿದ್ದು ಉತ್ತರ ದೇಶ, ಬೆಳೆದದ್ದು ಕತ್ತಲರಾಜ, ಬಂದುದು ಬಾಳೆಲೆ ಸೀಮೆ ಆದರೆ, ಯಾವದೊಂದು ಹೆಣ್ಣು ಮಗಳ ಕಣ್ಣೀರು ನನ್ನ ಪಾದಕೆ ಬಿದ್ದಿದೆ ಆ ಹೆಣ್ಣು ಮಗಳ ಕಷ್ಟವನ್ನು ನೋಡಲು ಹೋಗುತ್ತೇನೆ. ಆಗಲೂವೆ ನನಗೆ ಒಂದು ಸಣ್ಣ ಹುಲಿ ಮರಿಯ ಕರ್ದ್ರು ಬಾ ಎಂದು ಹೇಳುತ್ತಾರೆ. ಆಗ ಬೇಡರಕಣ್ಣಪ್ಪ ಹೇಳಿದವನೇ ಅವು ನನ್ನ ತಿಂದಾಕಿತವೆ ಹುಲಿ ಎಂದಲೆ ಏನು ಸುಲಭವಾ...। ನಾನು ಹೇಗೇಯೇ ಸಾಮಿ ಕರೆಯಾದು ಎಂದು ಹೇಳುತ್ತಾನೆ. ಆಗ ಮಾದಪ್ಪನ ಗುರು ಸುತ್ತೂರು ಮಠದ ಗುರು **'ಸಿದ್ದಲಿಂಗಗಾರು'** ಮಂತ್ರಿಸಿಕೊಟ್ಟ ಊಬತ್ತಿ ಜೋಳಿಗೆಯೋಳಗಡೆಯಿಂದ ಎತ್ತಿ ಕೊಡುತ್ತಾನೆ(ಕೊಟ್ಟವನೆ) ನೀನು ಹೋಗಿ ಕೂಗಿಕೆ ಇಡ್ದುರು ಬಾ ಎಂದು ಹೇಳಿದಾಗ ಆಗ ಬೇಡರ ಕಣ್ಣಪ್ಪ ಕಾಡಿಗೆ ಹೋಗುತ್ತಾನೆ. ಕಾಡಿನಲ್ಲಿ ಭಯಪಡುತ್ತಾನಾ ಹೇಗೆ ಕರೆಯುವುದು ಎನ್ನುತ್ತಾ ಮನಸ್ಸಿನಲ್ಲಿ ಯೋಚನೆ ಮಾಡುತ್ತಾನೆ. ಅಯ್ಯೋ ಮಾದಪ್ಪ ಕುಂತ್ರು(ಕುಳಿತು) ಹೋಗ ಹುಲಿ ಯಾವುದು ಎಂದು ಯೋಚಿಸುತ್ತಾ, ಸುಮ್ಮನೆ ಬಂದಾಕಿನಯಲ್ಲಾ ಛೇ...... ಎಂಥ ತಪ್ಪು ಮಾಡಿದೆ ಎಂದು ಸರಿ ಎಲ್ಲಾ ಹುಲಿಗಳನ್ನು ಕೂಗಿರ್ದು ಸರಿಯೆ ಎಂದು ಎಲ್ಲಾ ಹುಲಿಗಳನ್ನು ಕೂಗುತ್ತಾನೆ. ತದ ನಂತರ ಸಿಂಗಲ್ಲೂ ಸಿದ್ರಾಮ ಬಾ ಕೋನಾಸಿ ಕೋನಾಯ್ಯ ಬಾ, ಬರಗೂರು ಪಟ್ಟೆ ಕಿರುಬ ಬಾ ಕೊಳ್ಳೆಗಾಲದ ಬೊಟ್ಟು ಕಿರುಬ ಬಾ ಮೊತ್ತಳ್ಳಿ ಮುದ್ದು ಬರಗಾ ಬಾ ಬಿಳಿಗಿರಿರಂಗನಬೆಟ್ಟದ ಪಟ್ಟೆ ಬರಗಾ ಬಾ ಆಗೆಂದು ಬೇಡರ ಕಣ್ಣಪ್ಪ ೭೭ ಹುಲಿಯ ಕರೆದುವನೆ..... ಆಗ ಎಲ್ಲಾ ಹುಲಿ ಓಡಿ....ಓಡಿ ಬಂದವೆ. ಇವನೇ ಬೆದರಿ ಬೆಚ್ಚಿ ಬೆಟ್ಟ ಸೇರಿ ಬಿಂಡಿಗಾನ ಮರ ಹತ್ತಿದವನೆ ಕೆಳಗೆ ನೋಡಿ ಅಂಜುರವನೆ (ಅಂಜಿಕೆ) ಆಗ ಮಾದಪ್ಪ ಕೊಟ್ಟ ದೂಳ್ತಾವನ್ನು(ವಿಭೂತಿ) ಹುಲಿಗಳ ಮೇಲೆ ಹಾಕಿದಾಗ **"ಹುಲಿಗಳು ಮುದುರಿ ಮುದುರಿ ಬಿದ್ದುರವೆ"**.

ಆ ನಂತರ ಕಣ್ಣಪ್ಪ ಮರದಿಂದ ಕೆಳಗಿಳಿದು ಬಂದವನೆ ಯಾವ ಒಂದು ಹುಲಿಯನ್ನು ಪತ್ತೆ ಹಚ್ಚಿಕರೆದುಕೊಂಡು ಹೋಗಲಿ ದೇವರೆ ಎಲ್ಲಾ ಬಂದವೆ ಈಗೇನು ಮಾಡಲಿ ಎಂದು **'ಹುಗಾನೆ'**

ಹಂಬನ್ನು ಕಿತ್ತು ಎಲ್ಲಾ ಹುಲಿಗಳನ್ನು ಕಟ್ಟಿ ಮಾದಪ್ಪನ ಬಳಿ ಹೋಗುತ್ತಾನೆ. ಆಗ ಮಾದಪ್ಪ ನೋಡವನೆ ಓ....ಓ.... ಏನ್ ಬೇಡರ ಕಣ್ಣಪ್ಪಾ ಒಂದು ಹುಲಿಯ ಇಡ್ತ್ರು ಬಾ ಎಂದಲೆ.... ೭೭ ಹುಲಿಯ ಇಡ್ತ್ರು(ಹಿಡಿದುಕೊಂಡು) ಬಂದಾಕಿರೆಯಾಲೆ ಎಂದು ಹೇಳಿದಾಗ ನೀನು ಕುಂತ್ರು ಹೋಗೆ ಹುಲಿ ನನಗೇನು ಗೊತ್ತು ಅದಕಾ ಎಲ್ಲಾ ಹುಲಿಗಳ ಕೂಗಿನೆ ೭೭ ಹುಲಿಯೂ ಬಂದೊ ಬರಾಕೋ ಎಂದು ಕೂಗಿನೆ(ಕೂಗಿದೆ) ನಿವಾಗೆ ಯಾವ ಹುಲಿಬೆಕ್ಕ ಅದನ್ನು ಕರೆದಿಕೊ ಸ್ವಾಮಿ ಎನ್ನುತ್ತಾವೆ. ಆಗ ಮಾದಪ್ಪ ಹುಲಿಗಳೆಲ್ಲಾ ಅಳತೆ ಮಾಡದವನೆ ಆಗ **"ಕುಂತೂರು ಬೆಟ್ಟದ ಸಿದ್ರಾಮ ೧೨ ಮೊಳ ಇದ್ದಾ ಅವನ ಇವನೇ ನನಗೆ ಸರಿ ಎಂದು ಹೇಳಿದವನೆ"** ಇನ್ನು ೭೬ ಹುಲಿಗಳ್ಳನ್ನೂ ಕಾಡಿಗೆ ದೂರ ದೂರ ಬುಟ್ಟುರು ನನ್ನ ಬೆಟ್ಟಾಕ ಮುದುಕ ಮುದುಕಿಯರು ಘರ್‍ಯೆದವರು ಬರ್‍ತಾರ ನಡ್ತು(ನಡೆದು) ಕಂದಿ ಕಪ್ಪಾಗಿ ಬರ್‍ತಾವರೆ ಆಗ ಹುಲಿ ನೋಡುರೆ ಅಂಜುರ್‍ರ್ತಾತವರೆ ಎಂದಾಕಿ ಎತ್ರೋಗಿ(ಕರೆದುಕೊಂಡುಹೋಗಿ) ನಾಗುಮಲೆ, ನಡುಮಲೆ, ಜೇನುಮಲೆ, ಗುಂಜಿಮಲೆ, ಗುರಗಂಜಿ ಮಲೆ, ೭೭ ಮಲೆ ದಾಟಿಸಿ ಬಿಟ್ಟುಬಿಡು ನನಗೆ ಕುಂತೂರು ಬೆಟ್ಟದ ಸಿದ್ರಾಮ ಸಾಕು ಎಂದು ಹೇಳಿ ಅಡವಿ ಅರಣ್ಯದಲ್ಲಿ ಕಷ್ಟದಲ್ಲಿ ಬಿದ್ದ ಹೆಣ್ಣು ಮಗಳ ಕಾಪಾಡೋಕೆ ಹೋಗಿದ್ದು ಬರ್ತೀನಿ ಎಂದು ಮಾದಪ್ಪ ಹೇಳಿದವನೆ. (ಹೇಳುತ್ತಾನೆ).

ಆ ನಂತರ ಹುಲಿಯನ್ನು ಶೃಂಗಾರ ಮಾಡಿ ಕಡ್ಡಿ ಕರ್ಪೂರ ಹಚ್ಚಿ "ಬೆಜ್ಜುದ ಕೆಂಡ ಮಾಡಿ ದೂಪಹಾಕಿದವನೆ ಹೋಗಿದ್ದು ಬಾರಪ್ಪ ಮಾದೇಶ್ವರ ಎಂದು ಹೇಳುತ್ತಾನೆ. ಮಾದಪ್ಪ ಕೊಕ್ಕರೆ ಕೊಂಬುಡ್ಕ ಬೆಟ್ಟಕ್ಕೆ ಹೊರಡುತ್ತಾನೆ. ಅಲ್ಲಿ ಸಂಕಮ್ಮ ಅನ್ನ ನೀರು ಏನೂ ಕಾಣದೆ ಬಿದ್ದವಳೆ ಆಗ ಮಾದಪ್ಪ ಓ.... ಓ.... ನಾನು ಈ ಹುಲಿಯ ಅವಳ ಮುಂದೆ ಎತ್ರೂ ಹೋದರೆ(ಕರೆದುಕೊಂಡು ಹೋದರೆ) ಸಂಕಮ್ಮ ಅಂಜುರುತವಳೆ ಅದಕ ತಾಳು ಬೆಟ್ಟದಲ್ಲಿ ತಂಗಿ ನಾನು ಹೋಗುತ್ತೀನಿ ಎನ್ನುತ್ತಾನೆ. ಹುಲಿಗೆ ಹೇಳುತ್ತಾನೆ. ನನ್ನ ಪರಸೆಗೆ ಬರುವ ಜನರ ಕಣ್ಣಿಗೆ ಕಾಣಿಸಬೇಡ ಅವರು ಅಂಜುರುತ್ತಾರೆ. ಎಂದು ಹೇಳಿ ಸಿದ್ರಾಮ ಹೇಳುತ್ತಾ ಹೊರಡುತ್ತಾನೆ. ಸರಿ ಸ್ವಾಮಿ ಕರಡಿನಕಲ್ಲು ಮಾಡುತ್ತೀನಿ. ಹುಲಿ ಹುತ್ತ ಮಾಡ್ತೀನಿ. ಹಾವಾ, ಕಡ್ಡಿ ಮಾಡ್ತೀನಿ, ಸೇಳಾ(ಚೇಳು) –ಸೆತ್ತಿಮಾಡ್ತೀನಿ, ಆನೆ, ಬಂಡೆಮಾಡ್ತೀನಿ ಎಂದು ಮಾದಪ್ಪ ಹೇಳಿ ಸೋಲಿಗರಿಗೆ ಮನದಲ್ಲೇ ಮಾದೇವ ಎಂದು ಆರ(ಯಾರು) ನನ್ನ ನಂಬಿರುತ್ತಾರೋ ಅವರಿಗೆ **"ನಾನು ಮನೆದೇವರಾಗಿ"** ಕಾದಿರುತ್ತೇನೆ ಎಂದು ಹೇಳುತ್ತಾನೆ. ಮಲೆಯ ಸೋಲಿಗ ನೀಲೇಗೌಡ ಅವರಿಗೆ ಮನೆದೇವರಾಗಿ ಕಾದಿರುತ್ತೇನೆ. ಅಪ್ಪು ಬುದ್ದಿಹೇಳಿ ಕೊಕ್ಕರುಕಿ ಕೊಂಬಿನ ಬೆಟ್ಟಕ್ಕೆ ಹೋಗುತ್ತಾನೆ. ಹೋಗಿ ಮನೆಯ ಮುಂದೆ ನಿಂತಾಗ ೩ ಮಂಡಲವೆಲ್ಲಾ ಜೀವ ಕಂಡ ಬಂದು **"ನೀನು ದಂಡಕ ಬಂದಲೆ ನಿನ್ನ ರಸ ಕೂಡ್ತು ಹಿಪ್ಪೆ ಹಿಂಡಕಿತೀವಿ ನೀನು ಹತ್ತಿರ ಬರಬೇಡ ಎಂದು ಮಾದಪ್ಪನಿಗೆ ಹೇಳುತ್ತವೆ.** ಓ... ಓ... ನನಗಿಂತ ಮಂತ್ರವಾದಿಯೇ ನೀಲಗೌಡ ಎಂದು ಮನಸ್ಸಿನಲ್ಲಿ ನೆನೆದು ತನ್ನ ಜೋಳಿಗೆಯಲ್ಲಿದ್ದ ಬೂದಿಯನ್ನು ಅದರ ಮೇಲೆ ಎಸೆಯುತ್ತಾನೆ. ಮಂಡಲ ಎಲ್ಲವೂ ಭಸ್ಮವಾಯಿತು. ಓಂ ಭಿಕ್ಷಾಂದೇವಿ ಎಂದವನೆ ಮೂರು ಬೀಸು ಕೂಗಿದವನೆ ಮಾತನಾಡಲಿಲ್ಲ ಆಗ ನಿಜಗಣ್ಣ ಬಿಡದೆ ಅರೆಗಣಬಿಟ್ಟು ನೋಡಿದವನೆ ಅವ(ಅವಳು) ಬಿದ್ದ ವಿಚಿತ್ರವೆಲ್ಲಾ ಕಂಡದೆ(ಕಾಣ್ತಾ ಇದೆ) ಪುನಃ ಕರೆಯತ್ತಾನೆ. ಪುನಃ ಹೂಬಿತ್ತಿ ಇಟ್ಟವನೆ ಅವಳ ಕಷ್ಟ ಎಲ್ಲಾ ಸೆಂದಾಯಿತು(ಚೆನ್ನಗಾಯಿತು) ಭಿಕ್ಷೆ ಕೊಡು.......ತಾಯಿ ಆಗ ಹೇಳುತ್ತಾಳೆ, ಸಂಕಮ್ಮ "ಎತ್ತನ ನಾಡಿನ ಜುಂಗುಮನಪ್ಪಾ ನೀನು ನನ್ನ

ಕಷ್ಟಾ ಎಲ್ಲಾ ಕಾಪಾಡಿದೀಯ ಯಾರು ಹೇಳಪ್ಪ ಎಂದವಳೆ ನಿನ್ನ ಅಪ್ಪನ ಮಲೆಯ ಮಾದೇಶ್ವರ ನಾನು ನಿನ್ನ ಕಾಪಾಡೊಕೆ ಬಂದಿದೀನಿ ಏನಪ್ಪಬೇಕು ನನಗೆ ಭಿಕ್ಷೆ ಕೊಡವ್ವಾ ನಾನು ಹೋಗುತ್ತೀನಿ. ಅಪ್ಪ ನನ್ನ ಮನೆಯಲ್ಲಿ ಯಾವುದೂ ಇಲ್ಲ ೧ ರೂಪಾಯಿಯೂ ಇಲ್ಲ ನನ್ನ ಮನೆ ತೇತು(ತೇಯ್ದು) ಕೊಡಾತ್ತೀನಿ ಎಂದೆಲೆ ೫ ಪೈಸೆಯೂ ಇಲ್ಲಾ ಗಂಡ ಕಾಡಿಗೆ ಜೇನ ಬೇಟೆಕೆ ಹೋಗವನೆ ಎನ್ನುತ್ತಾಳೆ. ಮನೆಯಲ್ಲಿ ಏನೂ ಇಲ್ಲಾ ಎಂದು ಹೇಳಬೇಡ ಕಾಡ ಸೋಲಿಗರು ನೀವು ನಿಮ್ಮ ಮನೆಯಲ್ಲಿರುವ ನೀರಾದರುವೆ ಕೊಡು. ಕಾಡಿನ ದೇವರು ನಿಮ್ಮನ್ನು ರಕ್ಷಿಸುತ್ತದೆ ಎನ್ನುತ್ತಾನೆ. ಅವಳ ಕಷ್ಟ ಎಲ್ಲಾ ಪರಿಹಾರವಾಗುತ್ತದೆ. ಧನ-ದಾನ್ಯ, ಮನೆ-ಐಶ್ವರ್ಯ ಬರುತ್ತದೆ. ಎಲ್ಲವೂ ಬಂದಾಗ ಮನೆಯಿಂದ ಹೊರಗೆ ಬಂದು ದೇವರಿಗೆ ಕೈಮುಗಿ ನಮಸ್ಕರಿಸುತ್ತಾಳೆ. ಆಗ ಮಾದಪ್ಪ ನಿನಗೇನು ಬೇಕು ಕೇಳಿಕೊ ಸಂಕಮ್ಮ ವರಕೊಡುತ್ತೇನೆ ಎಂದಾಗ ಸಂಕಮ್ಮನು ನನಗೆ ಮಕ್ಕಳ ಭಾಗ್ಯ ಕರುಣಿಸೋ ತಂದೆ ಎಂದಾಗ ಆಯಿತು ಆದರೆ ನನಗೊಂದು ಸವಲತ್ತು ಆ ಮಕ್ಕಳು ನನ್ನ ಭಕ್ತರಾಗುವಂತೆ ಮಾಡಬೇಕು ಎಂದಾಗ ಆಯಿತು ತಂದೆ ಎನ್ನುತ್ತಾಳೆ. ಆ ನಂತರ ಅವಳಿಗೆ ಸಂಕಮ್ಮ ನೀಲೇಗೌಡನಿಗೆ ಕಾರಯ್ಯ ಬಿಲ್ಲಯ್ಯ ಎಂಬ ಇಬ್ಬರು ಗಂಡು ಮಕ್ಕಳು ಜನಿಸುತ್ತಾರೆ. ಮುಂದೆ ಅವರೆ ಮಲೆಯ ಮಹದೇಶ್ವರನ ಭಕ್ತರಾಗಿ ಬೆಳೆದು ಕಾರಯ್ಯ ಸೋಲಿಗರ ಮೂಲ ಪುರುಷರಾಗಿ ಬೆಳೆಯುತ್ತಾನೆ. ಈ ಕಥೆಯಲ್ಲಿ ಸೋಲಿಗರ ಮೂಲ ಪುರುಷ ಕಾರಯ್ಯ ನೀಲಯ್ಯ ಸಂಕಮ್ಮನ ಬಂಜೆತನದ ನೋವು ಕಾಡಿನಲ್ಲಿ ವಾಸ ಸಮುದ್ರದಿಂದ ದೂರ ಇದ್ದರೂ ಮುಖ್ಯವಾಗಿ **'ಕುಲಕ್ಕೆ'** ಗೌರವ ಭಯ ಅಂಜಿಕೆ ಮರ್ಯಾದೆ ಕೊಡುವುದು ಅದೇ ಮುಖ್ಯವಾಗಿ ಕಾಣುತ್ತದೆ. ಯಾವಾಗಲೂ ಸೋಲಿಗರು ಗಂಡ-ಹೆಂಡತಿ ಇಬ್ಬರು ಬಿಟ್ಟು ಇರುವುದಿಲ್ಲ. ಅವರ ಮೇಲಿನ ಅತಿಯಾದ ಪ್ರೀತಿ ಅನುಮಾನ ದೇವರ ಹೆಸರಿನಲ್ಲಿ ತಪ್ಪಾಗಿದ್ದರೂ ಕ್ಷಮಿಸುವ ಗುಣ ಹಾಗೂ ಹಂಚಿ ತಿನ್ನುವ ಪದ್ಧತಿ. ಜೇನುಬೇಟೆ, ಕುಲಕಸುಬು, ಕಾಡಿನ ಜೀವನ ಕಾಡನ್ನೇ ದೇವರೆಂದು ನಂಬಿ ಪೂಜಿಸುವುದು. ಈ ಎಲ್ಲಾ ಅಂಶಗಳನ್ನು ಈ ಕಥೆಯ ಆಳದಲ್ಲಿ ನೋಡಬಹುದಾಗಿದೆ. ಇದರಿಂದ ಕಾರಯ್ಯ ಮತ್ತು ಬಿಲ್ಲಯ್ಯ ಸೋಲಿಗರ ಮೂಲ ಪುರುಷರು ಎಂಬುದು ಗೊತ್ತಾಗುತ್ತದೆ. ಅಲ್ಲದೆ ಕಾಡನ್ನು ರಕ್ಷಿಸಿ ಪೂಜಿಸುತ್ತಾ ಕಾಡನ್ನೇ ನಂಬಿ ಇಂದಿಗೂ ಜೀವನ ಸಾಗಿಸುತ್ತಾರೆ. ನಾಡಜನರು ಸಮುದಾಯದ ಜನರಿಗೆ ನಗರ ಪ್ರದೇಶಗಳಲ್ಲಿ ಸಂತೋಷವಾಗಿ ತಿರುಗಾಡುವ ಹಾಗೆ ಸೋಲಿಗರಿಗೆ ದಿನದಲ್ಲಿ ಅಥವಾ ವಾರದಲ್ಲಿ ಎರಡು-ಮೂರು ಬಾರಿಯಾದರೂ ಕಾಡನ್ನು ಸುತ್ತಿ ಕಾನನಗಳ ನಡುವೆ ಪ್ರಯಾಣ ಮಾಡುವುದು ಅವರ ಆಹಾರ, ದೈಹಿಕ, ಮಾನಸಿಕ ಆರೋಗ್ಯದ ದೃಷ್ಟಿಯಿಂದ ತುಂಬಾ ಉಪಯುಕ್ತವಾದುದು ಎಂದು ತಿಳಿದುಬರುತ್ತದೆ.

ಮತ್ತೊಂದು ಕಡೆ **ಶಿರಾಜಪ್ಪ ಎಸ್** ಅವರು ಬರೆದಿರುವ **ಮಹದೇಶ್ವರ ಚರಿತ್ರೆ, ೨೦೧೩** ಈ ಪುಸ್ತಕದಲ್ಲಿ ಹೀಗೆ ಹೇಳುತ್ತಾರೆ. ಸಂಕಮ್ಮನು ಹೇಳುವ ಸಾಲಿನಲ್ಲಿ, "ಇವತ್ತು ನನ್ನ ಮನೆದೇವರು ಕುಲದೇವರು ಬಿಟ್ಟರೂ ಸರಿಯೇ ಬೇರೆ ದೇವರಿಗೆ ಒಕ್ಕಲಾದರೂ ಸರಿಯೇ ಭಗವಂತ ನನ್ನ ಮಗನ ಪಡೆಯೋ ದೇವರಿಗೆ ಒಕ್ಕಲಾಗುತ್ತೀನಿ"[೨] ಎಂದು ಹೇಳುತ್ತಾರೆ . ನಂತರದಲ್ಲಿ ನೀಲಯ್ಯನೂ ಮಾದಪ್ಪನನ್ನು ಪರಶಿವನೆಂದು ತಿಳಿದು ಗಂಡ ಹೆಂಡತಿ ಇಬ್ಬರೂ ಮಹದೇಶ್ವರನ್ನು ತಮ್ಮ ಮನೆ ದೇವರೆಂದು ಪೂಜಿಸತೊಡಗಿದರು. ಇಲ್ಲಿ ಆಗಿನ ಪರಿಸ್ಥಿತಿಯಲ್ಲಿ ಸೋಲಿಗರಲ್ಲಿ ಮಕ್ಕಳನ್ನು ಪಡೆಯುವುದು ಮುಖ್ಯವಾಗಿತ್ತು. ಹಾಗೆಯೇ ಭಯ ಭಕ್ತಿಯಿಂದ ಒಪ್ಪಿಕೊಳ್ಳುವ ಗುಣವನ್ನು ಸೋಲಿಗರಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ.

**ಸೋಲಿಗರು ಬಿದಿರಿನ ಮಕ್ಕಳು:** ಬಹಳ ಹಿಂದಿನ ಕಾಲದಲ್ಲಿ 'ಬಿದರಳ್ಳಿ ಸೀಮೆ' ಇತ್ತು. ಅಲ್ಲಿ ಗೊರವನಶೆಟ್ಟಿ ಎಂಬ ಗಂಡ-ಹೆಂಡತಿ ವಾಸವಾಗಿದ್ದರು. ಅವರು ಪ್ರತಿದಿನ ಕಾಡಿಗೆ ಹೋಗಿ ಬಿದಿರನ್ನು ತಂದು ನೇಯ್ದು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದರು. ತರಲು ಕಾಡಿಗೆ ಹೋದನಂತೆ ಅಲ್ಲಿ ಶಿವ-ಪಾರ್ವತಿ ಮಣ್ಣಿನಲ್ಲಿ ಒಂದು ಮಗುವನ್ನು ಮಾಡಿ ಬಿದಿರಿನ 'ವಾಟೆಯ ಒಳಗೆ ಮಡಗಿದರಂತೆ. ಗೊರವಶೆಟ್ಟಿ ಬಿದಿರನ್ನು ಕತ್ತರಿಸಿದಾಗ ಒಳಗೆ ಒಂದು ಮಗು ಇತ್ತು. ಅದನ್ನು ಕಂಡು ಸಂತೋಷಗೊಂಡು ಆ ಮಗುವನ್ನು ತೆಗೆದುಕೊಂಡು ಬಂದು ತನ್ನ ಹೆಂಡತಿಗೆ ಕೊಟ್ಟನು. ಅವಳು ಆ ಮಗುವಿಗೆ ಚೆನ್ನಾಗಿ ಉಣ್ಣಿಸಿ(ಆಹಾರ ತಿನ್ನಿಸಿ) ಬೆಳೆಸಿದಳಂತೆ. ಆ ಸ್ಥಳವು ಯಳಂದೂರಿನ ಸುತ್ತಮುತ್ತ ಇತ್ತು ಎನ್ನುತ್ತಾರೆ. ಆನಂತರ ಮಗುವನ್ನು ಕಾಡಿಗೆ ಕಳುಹಿಸಿದರಂತೆ. ಈಗಲೂ ಸಹ ಗೊರವನಶೆಟ್ಟಿಯ ಜನರು ಬಿಳಿಗಿರಿರಂಗನ ಬೆಟ್ಟಕ್ಕೆ ಬಂದು ಜಾತ್ರೆಯ ಸಮಯದಲ್ಲಿ ಪೂಜೆ ಮಾಡಿ ತೇರನ್ನು ಎಳೆಯುತ್ತಾರೆ."[೪]

ಇನ್ನೊಂದು ದೃಷ್ಟಾಂತದ ಪ್ರಕಾರ, ಆ ಮಗು ಗೊರವನಶೆಟ್ಟಿಯ ಹತ್ತಿರ ಬೆಳೆಯಿತು. ಆದರೆ ಮಗುವಿಗೆ ವಿಶೇಷವಾದ ಕಲ್ಲು ಬಳೆ ಅಂದರೆ ಮಂದವಾದ ಬಾಳೆಹಣ್ಣು ಬೇಕಂತೆ. ಅದು ಯಾವಾಗಲೂ ಹುಳಿಯಿಂದ ಕೂಡಿರುತ್ತದೆ. ಹಾಗೂ ಹೆಜ್ಜೇನು, ಕಿರುಜೇನು, ತುಡವೆ ಕಾಡಿನಲ್ಲಿ ಸಿಗುವ ಹಣ್ಣುಗಳನ್ನು ಆ ಮಗು ಹೆಚ್ಚು ಇಷ್ಟಪಡುತ್ತಿತ್ತಂತೆ. ಅಲ್ಲದೆ ಮೈಯಿಗೆ ಕಾಡಿನ ಎಲೆಗಳಿಂದ ಸಿಂಗರಿಸಬೇಕಂತೆ. ಹೀಗೆ ಮಾಡಿದರೆ ಮಾತ್ರ ಆ ಮಗು ಬದುಕುತ್ತದೆ ಎಂದು ಮಾದೇಶ್ವರ ಗೊರವನಶೆಟ್ಟಿಗೆ ಕನಸಿನಲ್ಲಿ ಬಂದು ಹೇಳಿದ. ಸನ್ಯಾಸಿಯ ರೂಪದಲ್ಲಿ ಬಂದ ಮಾದೇಶ್ವರನಿಗೆ ಈ ಮಗುವನ್ನು ಸಾಕಲಾರದೆ ಕೊಟ್ಟನು. ಮಾದೇಶ್ವರ ಆ ಮಗುವನ್ನು ತೆಗೆದುಕೊಂಡು ಹೋಗಿ ಕಾಡಿಗೆ ಬಿಟ್ಟನಂತೆ. ಆಗ ಆ ಮಗು ಕಾಡಿನಲ್ಲಿ **"ಪೋಡು ಕಟ್ಟಿ"**ಕೊಂಡು ರಾಗಿ, ಅವರೇಕಾಳು ಬೆಳೆದು **"ಕೆತ್ತಲು ವ್ಯವಸಾಯ"** ಮಾಡಿಕೊಂಡು ಜೀವನ ಮಾಡುತ್ತಿತ್ತು. ಮುಸುಕಿನ ಜೋಳದ ಹೂವಿನ ಪರಾಗವನ್ನು ನೋಡುತ್ತಿದ್ದ. ಜೇನುಹುಳು ತನ್ನ ಕಾಲಿನಲ್ಲಿ ಪರಾಗ ತೆಗೆದುಕೊಂಡು ಹೋಗುವುದನ್ನು ಈ ಮಗು ಹಾಗೆಯೇ ದೃಷ್ಟಿಸಿ ನೋಡುತ್ತದೆ. ನಂತರದಲ್ಲಿ ಅದರ ಕಾಲಿಗೆ ಒಂದು ದಾರ ಕಟ್ಟಿ ಜೇನು ಎಲ್ಲಿಗೆ ಹೋಗುತ್ತದೆ ಎಂದು ಪರೀಕ್ಷಿಸಿ ಆ ಜೇನು "ಮಾವಿನ ಮರದ(ಬುಡದಲ್ಲಿ ಅಥವಾ ಬೊಡರೆಯಲ್ಲಿ) ಬಂದು ಕುಳಿತುಕೊಂಡಿತು. ಆಗಿನ ಕಾಲದಲ್ಲಿ ಪ್ರಪಂಚದಲ್ಲಿ ನೂರಾರು ಸನ್ಯಾಸಿಗಳು ಆ ಮರದ ಕೆಳಗೆ ಕುಳಿತು ವಿಶ್ರಾಂತಿ ಪಡೆಯುತ್ತಿದ್ದರು. ಮರದಲ್ಲಿ ಜೇನು ಕುಯ್ದು ಅದನ್ನು ಮಾದೇಶ್ವರನಿಗೆ ಇಟ್ಟನಂತೆ. ಆಗ ಮಾದೇಶ್ವರ ಹೇಳುತ್ತಾನೆ ಸ್ವಲ್ಪ ಭಾಗ ನೀನು ತಿನ್ನೂ ಇನ್ನೂ ಸ್ವಲ್ಪ ಭಾಗ ಜನರಿಗೆ ಕೊಡು ಎಂದು ಹೇಳಿ ಶಿವನು ೭೭ ಮಲೆಗೆ ಹೊರಟು ಹೋಗುತ್ತಾನೆ.

ಈ ಕಥೆಯಲ್ಲಿ ಸೋಲಿಗರ ಮೂಲ **'ಶೋಲೆ'** ಅಂದರೆ ಬಿದಿರಿನಿಂದ ಸೋಲಿಗರು ಹುಟ್ಟಿದರು. ಇವರು ಕಾಡಿನಲ್ಲಿ ವಾಸಿಸುವಂತಹವರು, ಕಾಡೇ ಇವರ ಆಸ್ತಿ, ಕಾಡಿನ ಕಿರು ಉತ್ಪನ್ನವೇ ಇವರ ಆಹಾರ. ಅದರಲ್ಲೂ ಜೇನೆಂದರೆ ಇವರ ಮೂಲ ವೃತ್ತಿ ಎಂದು ತಿಳಿದು ಬರುತ್ತದೆ. ಮತ್ತೊಂದು ಪ್ರಕಾರ ಸೋಲಿಗರು ಬಹಳ ವರ್ಷಗಳ ಹಿಂದೆ ಕಾಡಿನಲ್ಲಿ ಸಿಗುವ ನೈಸರ್ಗಿಕವಾದ ಉಡುಗೆ-ತೊಡುಗೆ ಧರಿಸುತ್ತಿದ್ದರು. ಮಹದೇಶ್ವರ ಇವರ ಮನೆಯದೇವರು ಹಾಗೂ ಶಿವ-ಪಾರ್ವತಿ ಎಂದರೆ ತುಂಬಾಭಕ್ತಿ. ಮುಸುಕಿನಜೋಳ, ಜೇನು, ರಾಗಿ, ಅವರೆ ಇವರ ಪ್ರಿಯವಾದ ಆಹಾರ. ಅದರಲ್ಲಿ 'ಹಂಚಿಕೊಂಡು ತಿನ್ನುವುದು' ಇವರಲ್ಲಿ ಒಂದು ಒಳ್ಳೆಯ ಸ್ವಭಾವ ಇದು ಅವರ ಪದ್ಧತಿ ಎನ್ನುವುದು ತಿಳಿಯುತ್ತದೆ.

**ಪುಸುಮಾಲೆ ಮತ್ತು ರಂಗಭಾವನ ಕಥೆ :** ಬೊಮ್ಮೇಗೌಡನ ೬ ಜನ ಮಕ್ಕಳಲ್ಲಿ ಪುಸುಮಾಲೆ ಕೊನೆಯ ಮಗಳು. ಬೊಮ್ಮೇಗೌಡ ಬಿಳಿಗಿರಿರಂಗನ ಬೆಟ್ಟದ ಸೋಲಿಗರ ಯಜಮಾನ ಒಂದು ದಿನ ೬ ಜನ ಅಕ್ಕ-ತಂಗಿಯರು ಕಾಡಿಗೆ ಸೌದೆಯನ್ನು ತರಲು ಹೋಗುತ್ತಾರೆ. ಅದರಲ್ಲಿ ಕೊನೆಯವಳಾದ ಪುಸುಮಾಲೆ ಹಿಂದಿರುಗಲಿಲ್ಲ. ಎಲ್ಲಾ ಅಕ್ಕಂದಿರು ಮನೆಗೆ ವಾಪಾಸಾಗುತ್ತಾರೆ. ಆದರೆ ಪುಸುಮಾಲೆ ಸೌದೆಯ ಹೊರೆಯನ್ನು ಕಟ್ಟಿ ಎಲ್ಲಾ ಕಡೆ ನೋಡಿದಾಗ ಯಾರೂ ಇರುವುದಿಲ್ಲ. ಏನಪ್ಪ ಮಾಡಲಿ ಈ ಸೌದೆ ಹೊರೆಯನ್ನು ನಾನು ಹೇಗೆ ತಲೆಯ ಮೇಲೆ ಹೊತ್ತಿಕೊಂಡು ಹೋಗುವುದು. ತುಂಬಾ ಭಾರವಿದೆ ಎಂದು ಹೇಳುವಾಗ ತಕ್ಷಣ **"ಬಿಳಿಗಿರಿರಂಗಸ್ವಾಮಿಯ ರೂಪದಲ್ಲಿ ದಾಸಯ್ಯ"** ಪ್ರತ್ಯಕ್ಷನಾಗುತ್ತಾನೆ. ನಂತರ ಸಹಾಯ ಮಾಡುತ್ತಾನೆ. ಆದರೆ ನಾನು ಹೇಳಿದ ಹಾಗೆ ನೀನು ಕೇಳಬೇಕು ಎಂದು ಭಾಷೆ ಪಡೆಯುತ್ತಾನೆ. ಆನಂತರ ಪುಸುಮಾಲೆ ಈ ಮುದುಕ ದಾಸಯ್ಯ ತಾನೇ ಕೇಳು ನೀನು ಏನು ಕೇಳಿದರೂ ನಾನು ಅದನ್ನು ಒಪ್ಪುತ್ತೇನೆ. ಎಂದಾಗ "ನೀನು ನನ್ನ ಮಡದಿಯಾಗಬೇಕು" ಎನ್ನುತ್ತಾನೆ. ಆಗ ಪುಸುಮಾಲೆ ನಕ್ಕು..., ಅಯ್ಯೋ..., ನೀನು ದಾಸಯ್ಯ..., ಅದರಲ್ಲೂ ಮುದುಕನಾಗಿದ್ದೀಯ, ನೀನೆಲ್ಲಿ ಯೌವನವತಿಯಾದ ನಾನೆಲ್ಲಿ...? ಹೀಗೇಕೆ ತಮಾಷೆ ಮಾಡುತ್ತೀಯ ಎಂದು ನಗುತ್ತಾಳೆ. ತಕ್ಷಣ ಸುರದ್ರೂಪಿಯಾದ ದಾಸಯ್ಯನು ತನ್ನ ನಿಜರೂಪವನ್ನು ರಂಗಸ್ವಾಮಿ ಎಂದು ತೋರಿಸುತ್ತಾನೆ. ಆಗ, ಒಂದು ಕ್ಷಣ, ಆಕೆಗೆ ಆಶ್ಚರ್ಯವಾಗುತ್ತದೆ. ಸರಿ ಎಂದು ಮೆಚ್ಚಿ ಒಪ್ಪಿ ಇಬ್ಬರು ಮದುವೆಯಾಗಿ ಮನೆಗೆ ಬರುತ್ತಾರೆ. ಹೀಗೆ ಬಂದಾಗ ಬೊಮ್ಮೇಗೌಡನ ಮನೆಯಲ್ಲಿ ಇಬ್ಬರ ನಡುವೆ ಸಂಭಾಷಣೆ ನಡೆದು ಕೊನೆಗೆ ನಿಜಾಂಶ ತಿಳಿದು ಸೋಲಿಗರ ಬೊಮ್ಮೇಗೌಡನ ಮಕ್ಕಳು ಬಂಧುಗಳು ಮದುವೆಗೆ ಒಪ್ಪಿಕೊಳ್ಳುತ್ತಾರೆ. ಅಂದಿನಿಂದ ರಂಗಸ್ವಾಮಿಯು, **"ಸೋಲಿಗರ ರಂಗ ಭಾವನಾಗುತ್ತಾನೆ"**. ಹೀಗೆ ಕಥೆಯು ಸ್ವಾರಸ್ಯಕರವಾಗಿದೆ. ಈ ಕಥೆಯ ಸಾರಾಂಶವನ್ನು ನೋಡಿದಾಗ ಹಿಂದಿನ ಕಾಲದಲ್ಲಿ ಕಾಡಿನಲ್ಲಿ ಸೋಲಿಗರು ವಾಸ ಮಾಡುತ್ತಿರುವಾಗ ಶಂಕರಾಚಾರ್ಯರು ತಮಿಳುನಾಡಿನ ಮಾರ್ಗವಾಗಿ ಬಿಳಿಗಿರಿರಂಗನ ಬೆಟ್ಟಕ್ಕೆ ಬಂದು ರಂಗಸ್ವಾಮಿಯ ದೇವಸ್ಥಾನ ಸ್ಥಾಪನೆ ಮಾಡಿ, ಅವರ ಭಕ್ತರು ಕರ್ನಾಟಕದ ಹಲವಾರು ಕಡೆ ನೆಲೆಸಿರುವರು ಎಂದು ಹೇಳುತ್ತಾರೆ.

"ದಾಸಯ್ಯನ ವೇಷದಾರಿ ನಾರಾಯಣ ಸೋಲಿಗರ ಬೊಮ್ಮೇಗೌಡನ ಮಗಳನ್ನು ಕರೆದುಕೊಂಡು ಮೇಲುಗಿರಿಗೆ ಹೋಗುತ್ತಾನೆ. ಅಲ್ಲಿ ಎಡಭಾಗಕ್ಕೆ ಶ್ರೀ ತುಳಸಮ್ಮ ಬಲಭಾಗಕ್ಕೆ ಶ್ರೀ ಲಕ್ಷ್ಮಿದೇವಿ ಕುಳಿತಿರುವಾಗ, ಮೂವರು ಮಡದಿಯರು ಒಟ್ಟಾಗಿ ಇರುವಾಗ ಕುಸುಮಾದೇವಿಗೆ ಏನಾದರೊಂದು ಒಂದು ಮಾತನಾಡಿ ಅವಳಿಗೆ ದುಃಖ ತರುತ್ತಿರುತ್ತಾಳೆ. ಇದನ್ನು ಕಂಡ ನಾರಾಯಣ, ಮಹಾ ನವಮಿಯ ದಿನ ಜಂಬೂಸವಾರಿ ಹೋಗುವಾಗ ಸೋಲಿಗರು ಕುಂಬಳದ ಅನ್ನ, ಬೂದುಗುಂಬಳಕಾಯಿ, ಬಾಳೆಎಲೆ, ಬಾಳೆ ಕಾಯಿಯನ್ನು ತಂದು ಕೊಡಬೇಕೆಂದು ಷರತ್ತು ಮಾಡುತ್ತಾನೆ. ಬೊಮ್ಮ ಮಾವನಿಗೆ ಒಂದು ಎಡೆಯನ್ನು ಕೊಡುತ್ತೇನೆ ಎಂದು ಮಾತು ಕೊಡುತ್ತಾನೆ ಮತ್ತು ನನ್ನ ಬಾಮೈಕಳಲ್ಲಿ ಹಿರಿಯ ಬಾಮೈದ ದೊಡ್ಡ ಮಾದ ನೀವು ಏಳು ಕೋಟಿ ಬಂಗಾರಕ್ಕೆ ಬಾಧ್ಯರು ಎಂದು ಬರೆಸುತ್ತಾನೆ. ಜೊತೆಗೆ ಸೋಲಿಗ ಜಾತಿಯವರು ರಂಗಯ್ಯನ ಜಾತ್ರೆ ಉತ್ಸವದ ಸಂದರ್ಭದಲ್ಲಿ ಯಾವ ಯಾವ ಹಕ್ಕುಗಳನ್ನು ಹೊಂದಿರುತ್ತಾರೆ ಎಂದು ನೇಮಕ ಮಾಡುತ್ತಾನೆ."[೫] ಸೋಲಿಗರು ಹಾಡುವ ಬಿಳಿಗಿರಿರಂಗನ ಕಾವ್ಯದಲ್ಲಿ, ಬಿಳಿಗಿರಿ ರಂಗಸ್ವಾಮಿ ಮತ್ತು ಪುಸುಮಾಲೆಯನ್ನು ಮದುವೆಯಾದ ಪ್ರಸಂಗವನ್ನು ತಿಳಿಸಿದ್ದಾರೆ.

ಸೋಲಿಗರಿಗೆ ಬಿಳಿಗಿರಿರಂಗಪ್ಪನ ಜಾತ್ರೆಯಲ್ಲಿ ಯಾವ ರೀತಿಯ ಕೆಲಸವನ್ನು ಮಾಡುವುದು ಎಂಬುದನ್ನು ತಿಳಿಸಿರುವುದರಿಂದ ಪ್ರಸ್ತುತ ಇದನ್ನೇ ಸೋಲಿಗರು ರಂಗಪ್ಪನಿಗೆ ಬಿಟ್ಟಿ ಸೇವೆ ಮಾಡುವುದು ಎಂದು ಹೇಳುತ್ತಾರೆ.

ಅಂತರ್ಜಾತಿ, ಪ್ರೇಮಿಸಿ ಸೋಲಿಗರ ಹೆಣ್ಣು ಮಕ್ಕಳನ್ನು ಇಷ್ಟಪಟ್ಟು ಮದುವೆಯಾಗುವುದು. ಅದನ್ನು ಸೋಲಿಗ ಸಮುದಾಯದವರು, ಅವರು ದೇವರ ಮಕ್ಕಳು; ದೇವರಿಗೆ ಸಮಾನ; ಅದನ್ನು ನಾವು ತಿರಸ್ಕರಿಸಬಾರದು, ಇಲ್ಲದಿದ್ದರೆ ನಮಗೆ ತೊಂದರೆಯಾಗುತ್ತದೆ ಎಂಬ ಭಯದಿಂದಲೋ ಅಥವಾ ಎಲ್ಲ ಸಮುದಾಯದ ಒಪ್ಪಿಗೆಯಿಂದಲೇ ಎಲ್ಲರ ಸಮ್ಮತಿಯನ್ನು ಸೂಚಿಸುತ್ತಿರಬಹುದು ಎಂದು ನಾವು ತಿಳಿಯಬಹುದಾಗಿದೆ. ಈ ಕಥೆಯಲ್ಲಿ ರಂಗಸ್ವಾಮಿಯನ್ನು 'ತಿರುಪತಿಯ ಪ್ರತಿರೂಪ', ಎಂದು ಸೋಲಿಗರು ಪೂಜಿಸುತ್ತಾರೆ. ಸೋಲಿಗರು ತಮ್ಮಲ್ಲಿ ಬೆಳೆದ ಧವಸ, ಧಾನ್ಯವನ್ನು ನಾಡವರ, ಉಳ್ಳವರ ಮನೆಗಳಿಗೆ ಕೊಟ್ಟು ತಮಗೆ ಬೇಕಾದ ವಸ್ತುಗಳನ್ನು ಸಾಮಾನುಗಳನ್ನು ಪಡೆಯುತ್ತಿದ್ದುದ್ದನ್ನು ಇಲ್ಲಿ ತಿಳಿಯಬಹುದಾಗಿದೆ. ಇದರ ಕಥೆಯೂ ಪುರಾಣದಲ್ಲಿ ಸೇರಿಹೋಗಿದೆ. ಇದರಿಂದ ಸೋಲಿಗರಿಗೂ ಗೌರವ ಸಿಕ್ಕಂತಾಗಿದೆ ಎಂದು ಅವರು ಭಾವಿಸುತ್ತಾರೆ.

ಸೋಲಿಗರ ಬಗ್ಗೆ **ಬುಕಾನನ್** (೧೮೦೭) ಅವರು ತಮ್ಮ ಗ್ರಂಥದಲ್ಲಿ ಮೊದಲ ಬಾರಿಗೆ, ಸೋಲಿಗರ ಭಾಷೆ, ನಡೆ-ನುಡಿ, ಉಡುಪು, ಗೃಹವ್ಯವಸ್ಥೆ ಹಾಗೂ ಇರುವಿಕೆಯ ಬಗ್ಗೆ ತಿಳಿಸಿದ್ದಾರೆ. ಸುನಂದಮ್ಮನವರು ಹಾಗೂ ಲಕ್ಷ್ಮೀಪತಿಯವರು ಹೇಳಿರುವ ಪ್ರಕಾರ "ಸೋಲಿಗರು ಕಾಡಿನಲ್ಲಿ ಇದ್ದವರು, ಇವರ ಪುರಾಣ ಐತಿಹ್ಯಗಳು ಕಾಡಿನಿಂದ ಆರಂಭವಾಗಿ ಕಾಡಿನಲ್ಲಿಯೇ ಅಂತ್ಯವಾಗುತ್ತದೆ"[೬] ಎಂದಿದ್ದಾರೆ.

ಡಾ. ಬೋರಲಿಂಗಯ್ಯ ಅವರು ಹೇಳುವಂತೆ, ಒಂದು ಲೋಕದೃಷ್ಟಿಯನ್ನು ಸೂಕ್ಷ್ಮಾತೀಸೂಕ್ಷ್ಮವಾಗಿ ವಿವರಿಸಿದ್ದಾರೆ. "ಸೃಷ್ಟಿಯ ಸ್ಥಿತಿ, ಲಯ ಮತ್ತು ಪರಿಭಾಷಾ ಕಲ್ಪನೆಯ ಹಿನ್ನೆಲೆಯಲ್ಲಿ ಇಂದು ಬುಡಕಟ್ಟಿನ ಜೀವನ ದರ್ಶನವನ್ನು ಕಂಡುಕೊಳ್ಳಬಹುದು"[೭] ಎಂದು ಹೇಳಿದ್ದಾರೆ. ಮುಂದುವರೆದು, ಲೋಕದೃಷ್ಟಿಯ ಚರ್ಚೆಯನ್ನು ಮೊದಲು ಪ್ರಾರಂಭಿಸಿದವರೆ "ರಾರ್ಬಟ್ ರೆಡ್‌ಫೀಲ್ಡ್" ೧೯೪೧ರಲ್ಲಿ The Folk culture of yucation ಗ್ರಂಥದಲ್ಲಿ ತಿಳಿಸಿದ್ದಾರೆ. ಇದನ್ನು ಗಮನಿಸಿದಾಗ ಸೋಲಿಗರ ಪ್ರತಿಯೊಂದು ಸೃಷ್ಟಿಪುರಾಣಗಳು ಪ್ರಮುಖವಾಗಿ ಈ ಸಂಶೋಧನ ಅಧ್ಯಯನಕ್ಕೆ ಆಕರವಾಗಿ ಕಾಣಬರುವುದನ್ನು ಗುರುತಿಸಬಹುದಾಗಿದೆ.(ಬೋರಲಿಂಗಯ್ಯ ಹಿ ಚಿ: ೨೦೧೧:) ಅದೇ ರೀತಿಯಲ್ಲಿ, ಸೋಲಿಗರ ಮೂಲವನ್ನು ತಿಳಿಯಲು ಅವರೇ ಕಟ್ಟಿಕೊಂಡಿರುವ ಮೌಖಿಕ ಸಾಹಿತ್ಯವನ್ನು ಹಾಗೂ ಅವರ ಕಥೆ, ಪುರಾಣ, ಸೃಷ್ಟಿ ಪುರಾಣಗಳಿಂದ ತಿಳಿಯಲು ಇದು ಸಹಾಯಕವಾದುದಾಗಿದೆ.

### ೨.೩. ಭೌಗೋಳಿಕ ನೆಲೆಗಳು

ಆರಂಭದಲ್ಲಿ ಆದಿಮಾನವನು ಕಾಡನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡು ಜೀವನ ನಡೆಸುತ್ತಿದ್ದನು. ಕ್ರಮೇಣ ತನ್ನ ವಿವೇಚನಾಶಕ್ತಿ ಬೆಳೆದಂತೆಲ್ಲಾ ಜೀವನ ಶೈಲಿಯು ಬದಲಾಯಿತು. ಪ್ರಮುಖವಾಗಿ ಆಹಾರ ಕ್ರಮ, ವಾಸದ ನೆಲೆ ಮತ್ತು ತಾನು ರೂಢಿಸಿಕೊಂಡಿದ್ದ ಕಸುಬುಗಳು, ಗುಹೆ, ಕಲ್ಲಿನ ಪೊಟರೆಯಿಂದ ಬಯಲಿಗೆ ಬಂದು ಪ್ರಕೃತಿಯಲ್ಲಿ ಲಭ್ಯವಿರುವ ಸೊಪ್ಪು, ಬಿದಿರು, ನಾರು-ಬೇರುಗಳನ್ನು ಬಳಸಿ ಗುಡಿಸಲು ನಿರ್ಮಿಸಿಕೊಂಡನು. ಹಣ್ಣು-ಹಂಪಲುಗಳು ಕಡಿಮೆಯಾದಾಗ

ಬೇಟೆಯಾಡಲು ಕಲಿತನು. ಕೃಷಿಗೆ ಪೂರಕವಾಗಿ ಪಶುಪಾಲನೆಯನ್ನು ಅವಲಂಬಿಸಿದನು. ಸಣ್ಣ ಸಣ್ಣ ಗುಂಪುಗಳಲ್ಲಿ ವಾಸಿಸುವುದರ ಬದಲು ಹೆಚ್ಚಿನ ಸಂಖ್ಯೆಯಲ್ಲಿ ವಿವಿಧ ವೃತ್ತಿಯನ್ನು ಮಾಡುವವರೆಲ್ಲರೂ ಒಂದೆಡೆ ಬದುಕುವಂತಾಯಿತು. ಹೀಗೆ ಕಾಡಿನಿಂದ ನಾಡಿನ ಬದುಕು ನಾಗರಿಕ ಬದುಕಿಗೆ ಪ್ರವೇಶ ಪಡೆಯಿತು. ಆಗ ಕಾಡು ಆತನಿಗೆ ಅಗತ್ಯವಾದ ಮರಮುಟ್ಟು ಮುಂತಾದ ಬದುಕಿಗೆ ಪೂರಕವಾದ ಕಚ್ಚಾವಸ್ತುಗಳನ್ನು ಒದಗಿಸುವ ಗಣಿಯಾಯಿತು. ಆದಿವಾಸಿಗಳು, ಮೂಲನಿವಾಸಿಗಳು, ಗಿರಿಜನರು ಎಂಬ ಹೆಸರುಗಳಿಂದ ಕರೆಸಿಕೊಂಡಿರುವ ಬುಡಕಟ್ಟುಗಳು ಕಾಡಿನಲ್ಲೇ ಬದುಕುತ್ತಿದ್ದಾರೆ. ಅರಣ್ಯವಾಸಿಗಳಾಗಿ ಜಗತ್ತಿನ ಎಲ್ಲೆಡೆ ಸಾವಿರಾರು ಬುಡಕಟ್ಟು ಸಮುದಾಯಗಳು ಇರುವುದು ಅಧ್ಯಯನಗಳಿಂದ ದಾಖಲಾಗಿದೆ. ಆದಿಮಾನವನಂತೆ ಬಟ್ಟೆಯ ಬಳಕೆಯನ್ನೇ ಕಾಣದೆ ಬೆತ್ತಲೆಯಾಗಿ ಬದುಕುತ್ತಿರುವ ಅನೇಕ ಬುಡಕಟ್ಟುಗಳು ಇಂದಿಗೂ ಇರುವುದು ವಾಸ್ತವ ಸಂಗತಿಯಾಗಿದೆ.

ಕರ್ನಾಟಕ ರಾಜ್ಯದಲ್ಲಿ ೫೦ ಬುಡಕಟ್ಟುಗಳಿದ್ದು, ಅವರಲ್ಲಿ ಅರಣ್ಯವಾಸಿಗಳು, ಅರೆ-ಅಲೆಮಾರಿಗಳು, ಅಲೆಮಾರಿಗಳು, ಸೂಕ್ಷ್ಮ ಮತ್ತು ಅತೀ ಸೂಕ್ಷ್ಮ ಅಲೆಮಾರಿಗಳು ವಾಸಿಸುತ್ತಿದ್ದು, ಸೋಲಿಗರು ಬಿಳಿಗಿರಂಗನ ಬೆಟ್ಟ, ಮಹದೇಶ್ವರ ಬೆಟ್ಟಗಳ ದಟ್ಟವಾದ ಅರಣ್ಯದಲ್ಲಿ ನೆಲೆ ಕಂಡುಕೊಂಡಿದ್ದಾರೆ.

"ಸೋಲಿಗರು ಗುಂಪಾಗಿ ವಾಸಿಸುವ ಸ್ಥಳವನ್ನು 'ಪೋಡು' ಎಂದು ಕರೆಯುತ್ತಾರೆ.[೮] ಒಂದು ಪೋಡು ಎಂದರೆ ಹತ್ತಾರು ಗುಡಿಸಲುಗಳ ಸಮೂಹ. 'ಪೋಡು' ಎಂಬ ಪದವನ್ನು 'ಗ್ರಾಮ' ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆಂದು ಕೃಷ್ಣ ಅಯ್ಯರ್ ಅವರು ಬರೆದಿದ್ದಾರೆ. ಆದರೆ ಈ ಬಗ್ಗೆ ಹೆಚ್ಚಿನ ವಿವರಗಳನ್ನು ಮೊರಾಬ್ ಅವರು ಹೊಲಗಳಲ್ಲಿ ಬೆಳೆದು ಗಿಡ ಗಂಟಿಗಳನ್ನು ಕಿತ್ತು ಸುಟ್ಟು ಸ್ಥಳೀಯವಾಗಿ ಸಿಗುವ ಮರ ಬಿದಿರು, ಹುಲ್ಲುಗಳಿಂದ ತಮ್ಮ ಗುಡಿಸಲು ಕಟ್ಟಿಕೊಂಡು ಪೋಡುಗಳಲ್ಲಿ ವಾಸ ಮಾಡುತ್ತಾರೆ ಎಂದು ತಿಳಿಸುತ್ತಾರೆ(ಅನಂತಕೃಷ್ಣ ಅಯ್ಯರ್: ೧೯೩೭: ೮೮).

ಸೋಲಿಗರು ವಾಸಿಸುವ ನೆಲೆಗಳನ್ನು 'ಪೋಡು' ಎಂದು ಕರೆಯುತ್ತಾರೆ. ಈ ಪೋಡುಗಳಿಗೆ ಪ್ರಕೃತಿದತ್ತವಾಗಿಯೇ ಹೆಸರುಗಳನ್ನಿಡುತ್ತಾರೆ. ಕಾಡಿನ ಗಿಡ, ಮರ, ಹಳ್ಳ, ಕೆರೆ, ಕಟ್ಟೆ, ಗುಂಡಿ, ಮಾಳ ಇತ್ಯಾದಿಗಳೇ ಆಗಿರುತ್ತವೆ. ಹೊಸಪೋಡು, ಮಂಜಿಗುಂಡಿ ಪೋಡು, ಸೀಗೆ ಪೋಡು, ಮುತ್ತುಗದ ಗದ್ದೆಪೋಡು ಇತ್ಯಾದಿ ಪೋಡುಗಳಿವೆ. ಅಲ್ಲದೇ ಸರ್ಕಾರದ ಪುನರ್ವಸತಿಯ ನಂತರದಲ್ಲಿ ಕೆಲವು ಕಡೆ ಕಾಲೋನಿಗಳನ್ನು ಕಟ್ಟಿಕೊಟ್ಟಿದ್ದಾರೆ. ಅವುಗಳಿಗೆ 'ಗಿರಿಜನ ಕಾಲೋನಿ'ಗಳು ಎಂದು ಸರ್ಕಾರ ಹೆಸರುಗಳನ್ನು ಕೊಟ್ಟಿದೆ. ಅವುಗಳೆಂದರೆ ಕನ್ನೇರಿ ಕಾಲೋನಿ, ಮದ್ದೂರು ಕಾಲೋನಿ, ಮುಂಟೀಪುರ ಕಾಲೋನಿ, ಹಗ್ಗದ ಹಳ್ಳಿ ಕಾಲೋನಿ, ಯರಕನಗದ್ದೆ ಕಾಲೋನಿ ಇತ್ಯಾದಿ.

ಸೋಲಿಗರ ಪೋಡಿನ ಆಯ್ಕೆಯ ಬಗ್ಗೆ ಮೊರಾಬ್ ಅವರು ವಿವರವಾಗಿ ತಿಳಿಸಿದ್ದಾರೆ. ಸೋಲಿಗರು ನೆಲೆಸಲು ಆಯ್ಕೆ ಮಾಡಿಕೊಳ್ಳುವ ಜಾಗವು ಬಹಳ ಆಯಕಟ್ಟಿನದು. ಅಂದರೆ ಅತೀ ಎತ್ತರವೂ ಅಲ್ಲ, ಬಯಲು ಅಲ್ಲ, ನೀರಿನ ಆಸರೆ ಇರಬೇಕು. ಆದರೆ ನೀರು ಸಮೀಪದಲ್ಲಿ ಇರಬಾರದು. ಒಟ್ಟಾರೆ ಕ್ರೂರ ಪ್ರಾಣಿಗಳಿಂದ ಅಂತರವನ್ನು ಕಾಯ್ದುಕೊಳ್ಳಬೇಕು. ಕೆತ್ತಲು ಬೇಸಾಯಕ್ಕೆ ಒಂದಿಷ್ಟು ಮಟ್ಟದ ಭೂಮಿ ಬೇಕು. ಈ ಎಲ್ಲಾ ಲಕ್ಷಣಗಳಿಂದ ಕೂಡಿದ ಜಾಗ ಅವರ ವಾಸಕ್ಕೆ ಯೋಗ್ಯ. ಜಾಗ ಯೋಗ್ಯವೆಂದಮಾತ್ರಕ್ಕೆ ಅಲ್ಲಿ ನೇರವಾಗಿ ಗುಡಿಸಲು ನಿರ್ಮಿಸಲು ಬರುವುದಿಲ್ಲ. ಒಂದು ರಾತ್ರಿ ಗುಂಪಿನ ಹತ್ತಾರು ಜನರು

ಆಯ್ಕೆ ಮಾಡಿಕೊಂಡ ಜಾಗದಲ್ಲಿ ಒಂದು ರಾತ್ರಿ ಮಲಗಬೇಕು. ಅದಕ್ಕೆ ಮುಂಚಿತವಾಗಿ ಒಂದು ಶಾಸ್ತ್ರವನ್ನು ಮಾಡುವರು. ಒಂದು ಸಮತಟ್ಟಾದ ಜಾಗದಲ್ಲಿ ಹರಳು ಬೀಜಗಳನ್ನು(ಔಡ್ಲ ಬೀಜಗಳು) ದುಂಡಾಕಾರದಲ್ಲಿ ಮೂರು ಸುತ್ತು ಜೋಡಿಸುವರು. ನಂತರ ಅದರ ಮೇಲೆ ಬೋರಲಾಗಿ ಒಂದು ಬಿದಿರು ಬುಟ್ಟಿಯನ್ನು ಮುಚ್ಚುವರು. ಬೆಂಕಿಯನ್ನು ಹಾಕಿ ಎಲ್ಲರೂ ತಮ್ಮ ಆರಾಧ್ಯದೈವ ರಂಗಭಾವನನ್ನು ನೆನೆದು ಮಲಗುವರು. ಮತ್ತೊಂದು ಶಾಸ್ತ್ರವೆಂದರೆ ಕಲ್ಲು ಗುಡ್ಡೆ ಮಾಡಿ ಒಂದು ಕುಕ್ಕೆಯ ಒಳಗೆ ಇಟ್ಟು ಕಾಡಿನ ಹೂವುಗಳಿಂದ ಪೂಜೆ ಮಾಡಿ ಎಲ್ಲಾ ದೇವರಿಗೂ ನಮಸ್ಕರಿಸಿ, ಸಗ್ಗದವರಿಗೂ(ಸತ್ತವರಿಗೆ) ಧೂಪ ಹಾಕಿ ನಂತರ ಆ ಬಿದಿರಿನ ಕುಕ್ಕೆಯನ್ನು ಕಲ್ಲಿನ ಮೇಲೆ ಮುಚ್ಚಿ ಅಲ್ಲಿಯೇ ಆ ದಿನ ಕಳೆಯುತ್ತಾರೆ.

ಬೆಳಿಗ್ಗೆ ಪೋಡಿನ ಯಜಮಾನನಿಗೆ ಕನಸಿನಲ್ಲಿ ಶುಭಸೂಚಕವಾದ ಅಂಶಗಳು ಕಾಣಿಸಿಕೊಂಡಿದ್ದರೆ ಮಾತ್ರ ಆ ಸ್ಥಳದಲ್ಲಿ ಪೋಡು ನಿರ್ಮಿಸಲು ಮುಂದಾಗುವರು. ಇಲ್ಲವಾದರೆ. ಆ ಸ್ಥಳದಲ್ಲಿ ಪೋಡು ನಿರ್ಮಿಸಿದರೆ ಕೆಡುಕು ಹೆಚ್ಚು ಎಂದು ಭಾವಿಸಿ ಮತ್ತೊಂದು ಜಾಗಕ್ಕಾಗಿ ಹುಡುಕಾಟ ನಡೆಸುವರು. ಒಂದು ವೇಳೆ ಯಜಮಾನನ ಕನಸಿನಲ್ಲಿ ಶುಭದಾಯಕವಾದ ಸೂಚನೆ ಬಂದರೆ ಆ ಜಾಗದಲ್ಲಿ ಗುಡಿಸಲು ನಿರ್ಮಿಸಲು ಅನುಮತಿ ದೊರೆತಂತೆಯೇ ಸರಿ. ಆದರೆ ಅದೇ ಗುಂಪಿಗೆ ಸಂಬಂಧಿಸಿದ ಓರ್ವನಿಗೆ ಕನಸು ಅಶುಭಕರವಾಗಿತ್ತು ಎಂದರೆ ಅದೇ ಜಾಗದಲ್ಲಿ ಮೂರು ಬೇರೆ ಬೇರೆ ಕಡೆ ಗುಡಿಸಲು ನಿರ್ಮಾಣಕ್ಕೆ ಪ್ರಯತ್ನಿಸಬಹುದು. ಆಗಲೂ ಅಶುಭವೆಂದು ಖಚಿತವಾದರೆ ಹೊಸ ಪೋಡಿನಲ್ಲಿ ಇರುವುದಕ್ಕೆ ಸಾಧ್ಯವಿಲ್ಲ. ಬೇರೆ ಪೋಡಿಗೆ ಹೋಗಿ ಗುಡಿಸಲು ನಿರ್ಮಿಸಿಕೊಂಡು ಬದುಕಬಹುದಾಗಿದೆ. ಅಂದರೆ ಮುಂಬರುವ ತೊಡಕುಗಳನ್ನು ತಿಳಿದುಕೊಳ್ಳುವ ಶಕುನ ಅಥವಾ ಕನಸು ಕಾಣುವುದು(Trail and error) ಇದು ವಾಸದ ನೆಲೆಯನ್ನು ಗುರುತಿಸುವ ಒಂದು ಮಾದರಿಯಾಗಿದೆ. ಇದು ನಿಜವಾಗಿಯೂ ಮೂಢನಂಬಿಕೆ ಎಂದು ಹೇಳಬಹುದಾದರೂ ಅವರ ಮಟ್ಟಿಗೆ ಅದು ವೈಜ್ಞಾನಿಕವೇ ಆಗಿದೆ. ಹೀಗೆ ಕಾಡಿನ ನಡುವೆ ಗುಡಿಸಲುಗಳನ್ನು ಗುರುತಿಸಿಕೊಂಡು **೧೦ರಿಂದ ೨೦ ಕುಟುಂಬಗಳು ಬದುಕುವ ನೆಲೆಗೆ ಪೋಡು** ಎಂದು ಕರೆಯುವರು. ಆದರೆ ಪೋಡುಗಳಿಗೆ ಇಡುವ ಹೆಸರು ಮಾತ್ರ ಅಲ್ಲಿನ ಭೌಗೋಳಿಕ ಸನ್ನಿವೇಶಕ್ಕೆ ಅನುಗುಣವಾಗಿಯೇ ಇರುತ್ತದೆ. ಅಂತಹ ಕೆಲವು ಉದಾಹರಣೆಗಳು ಹೀಗಿವೆ.

**ಆನೆಗುಂಡಿ ಪೋಡು:** ತಾವು ಪೋಡು ನಿರ್ಮಿಸಿದ ಜಾಗಕ್ಕೆ ಹತ್ತಿರದಲ್ಲಿ ಒಂದು ಗುಂಡಿ, ತಗ್ಗು ಅಥವಾ ಹಳ್ಳವಿದ್ದು ಅದು, ಆನೆ ಮುಳುಗುವಷ್ಟು ಅಥವಾ ಆನೆ ಗಾತ್ರದ ಗುಂಡಿಯಾದ್ದರಿಂದ ಅದನ್ನೇ ಗುರುತಾಗಿಸಿಕೊಂಡು ಆನೆಗುಂಡಿ ಪೋಡು ಎಂಬ ಹೆಸರನ್ನು ತಮ್ಮ ವಾಸದ ನೆಲೆಗೆ ಇಟ್ಟಿದ್ದಾರೆ.

**ಹೊಸ ಪೋಡು:** ಕಾಡಿನಿಂದ ಬಿಳಿಗಿರಿರಂಗನ ಬೆಟ್ಟದ ಹತ್ತಿರ ಹಾಗು ಸುತ್ತಲಿನ ಪ್ರದೇಶಗಳಿಗೆ ಸೋಲಿಗರನ್ನು ಸ್ಥಳಾಂತರಿಸಿ ಅವರಿಗೆ ಸರಕಾರದ ವತಿಯಿಂದ ಹೊಸ ಹೊಸ ಮನೆಗಳನ್ನು ನಿರ್ಮಿಸಿ ಕೊಡಲಾಯಿತು ಇವುಗಳನ್ನೇ 'ಹೊಸ ಪೋಡು' ಎಂದು ಕರೆಯಲಾಗಿದೆ.

**ಕತ್ತೆಕಲ್ ಪೋಡು:** ಪೋಡಿನ ಹತ್ತಿರದಲ್ಲಿ ಒಂದು ಕಲ್ಲನ್ನು ನೆಡಲಾಗಿದೆ. ಅದು ಮೈಲಿಕಲ್ಲಿನಂತಿದ್ದು ಅದರ ಒಂದು ಬದಿಯಲ್ಲಿ ಒಂದು ಹಸು ಮತ್ತು ಹಾಲು ಕುಡಿಯುತ್ತಿರುವ ಕರುವನ್ನು ಕೆತ್ತಲಾಗಿದೆ. ನೋಡಿದವರಿಗೆ ಅದು ಕತ್ತೆ ಮತ್ತು ಹಾಲು ಕುಡಿಯುತ್ತಿರುವ ಕತ್ತೆಮರಿಯಂತೆ ಕಂಡುಬರುತ್ತದೆ. ಈ

ಕಲ್ಲನ್ನು ಗುರುತೆಂದು ಭಾವಿಸಿ ತಮ್ಮ ನೆಲೆಗೆ(ಕತ್ತೆಕಲ್ಲು ಪೋಡು, ಕತ್ತೆಕಲ್ ಪೋಡು) ಎಂದು ಕರೆಯುವುದು ಕಂಡುಬಂದಿದೆ.

**ಮಂಜಿಗುಂಡಿ ಪೋಡು:** ಮಂಜಿ ಎಂಬುದು ಒಂದು ಜಾತಿಯ ಜೊಂಡುಹುಲ್ಲು. ಅಲ್ಲಲ್ಲಿ ಗುಂಡಿಗಳಲ್ಲಿ ಮಂಜಿಹುಲ್ಲು ಹೆಚ್ಚೆಚ್ಚು ಬೆಳೆದುದ್ದರಿಂದ ಅಲ್ಲಿ ಗುಡಿಸಲು ಕಟ್ಟಿಕೊಂಡವರು ಆ ನೆಲೆಯನ್ನು ಮಂಜಿಗುಂಡಿ ಪೋಡು ಎಂದು ಕರೆದುಕೊಂಡರು.

**ಯರಕನಗದ್ದೆ ಪೋಡು:** ಈ ಪೋಡಿನಲ್ಲಿ ಸದಾ ಕಾಲ ಗದ್ದೆಯ ರೀತಿಯಲ್ಲಿ ನೀರು ತುಂಬಿರುತ್ತದೆ. ಹಾಗು ಈ ಭಾಗವು ಸದಾ ಕಾಲ ತಣ್ಣನೆಯ ವಾತಾವಾರಣದಿಂದ ಕೂಡಿದ್ದು ಹೆಚ್ಚು ಚಳಿಯಿಂದ ಕೂಡಿರುತ್ತದೆ ಅಲ್ಲದೆ ಈ ಭಾಗದಲ್ಲಿ ಯರಕಿನ ಹೂವು ಸದಾ ಕಾಲ ಗಿಡಗಳಲ್ಲಿ ತುಂಬಿರುತ್ತದೆ ಆದುದರಿಂದ ಈ ಪೋಡಿಗೆ ಯರಕನಗದ್ದೆ ಪೋಡು ಎಂದು ಕರೆಯಲಾಗಿದೆ.

**ಬಂಗ್ಲೆ ಪೋಡು:** ಬ್ರಿಟೀಷರ ಆಳ್ವಿಕೆಯ ಸಂದರ್ಭದಲ್ಲಿ ತಮ್ಮ ವಾಸಕ್ಕೆಂದು ಬಂಗ್ಲೆ ಒಂದನ್ನು ನಿರ್ಮಿಸಲಾಗಿತ್ತು. ಸೋಲಿಗರು ಆ ಬಂಗ್ಲೆ ಪಕ್ಕದಲ್ಲಿ ತಮ್ಮ ವಾಸದ ನೆಲೆಯನ್ನು ಕಟ್ಟಿಕೊಂಡರು. ಆದ್ದರಿಂದ ಬಂಗ್ಲೆ ಅವರ ಗುರುತಿಗೆ ಅನುಕೂಲವಾಯಿತು. ಆದುದರಿಂದ ಈ ಸ್ಥಳಕ್ಕೆ ಬಂಗಲೇ ಪೋಡು ಎಂದು ಹೆಸರಿಲಾಗಿದೆ.

**ಸೀಗೆ ಪೋಡು:** ಸೀಗೆಪೊದೆ ಅಥವಾ ಸೀಗೆ ಮರವು ಈ ಪ್ರದೇಶದಲ್ಲಿ ಯಥೆತ್ತೇಚ್ಛವಾಗಿದ್ದರಿಂದ ಅದರ ಸಮೀಪದಲ್ಲಿ ನಿರ್ಮಿಸಿದ ಪೋಡು ಸೀಗೆಪೋಡಾಯಿತು. ಸೀಗೆ ಸೊಪ್ಪನ್ನು ಸೋಲಿಗರು ಆಹಾರವಾಗಿ ಬಳಸುವುದರಿಂದ ಈ ಪ್ರದೇಶದಲ್ಲಿ ಇವರು ನೆಲೆಯೂರಿರುವುದು ಕಂಡು ಬರುತ್ತದೆ. ಅಲ್ಲದೇ ಸೋಲಿಗರು ಬಾಣಂತಿಗೆ ಮಂಡ ಸೀಗೆ ರಸವನ್ನು ಮಾಡಿ ಕುಡಿಯಲು ಕೊಡುತ್ತಾರೆ. ಒಟ್ಟಾರೆಯಾಗಿ ಸೋಲಿಗರು ಪರಿಸರಕ್ಕೆ ಹೊಂದಿಕೊಂಡು ತಮಗೆ ಅನುಕೂಲವಾಗುವ ರೀತಿಯಲ್ಲಿ ಹಿಂದೆ ತಮ್ಮ ನೆಲೆಯನ್ನು ಕಂಡುಕೊಳ್ಳುತ್ತಿದ್ದರು.

**ಮೊಣಕೈ ಪೋಡು:** ಇಲ್ಲೊಂದು ವೀರಗಲ್ಲು ಇದೆ. ಇದರ ಕೈ ಮೊಂಡಾಗಿದೆ. ಆದ್ದರಿಂದ ಕೈ ಮುರಿದ ದೇವರು ಇರುವುದರಿಂದ ಆ ಭಾಗದಲ್ಲಿ ನೆಲೆಸಿದ ಸೋಲಿಗರು ತಮ್ಮ ವಾಸ್ತವ್ಯಕ್ಕೆ ಮೊಣಕೈ ಪೋಡು ಎಂದು ಕರೆದುಕೊಂಡಿದ್ದಾರೆ.

**ಕುಳ್ಳಕು-ಕುಳ್ಳೂರು:** ಇದೊಂದು ಪ್ರಾಣಿಯ ಹೆಸರು. ಇಲಿಯನ್ನು ಹೋಲುವ ಅದಕ್ಕಿಂತ ಚಿಕ್ಕ ಪ್ರಾಣಿ ಈ ಭಾಗದಲ್ಲಿ ಯಥೇಚ್ಛವಾಗಿ ಸಿಗುತ್ತವೆ. ಆದ್ದರಿಂದ ಈ ಪ್ರದೇಶದಲ್ಲಿ ನೆಲೆಗೊಂಡ ಸೋಲಿಗರು ಕುಳ್ಳೂರು(ಪೋಡು) ಎಂದು ಕರೆದುಕೊಂಡಿರುವುದು ಸಹಜವೇ ಆಗಿದೆ.

**ಭೂತಾಣಿ ಪೋಡು:** ಈ ಪೋಡಿನಲ್ಲಿ ಹೆಚ್ಚು ಭೂತಾಣಿ ಮರಗಳು ಇವೆ. ಇದು ಹೆಚ್ಚು ಹಂಬಿನ ರೀತಿಯಲ್ಲಿ ಇವೆ. ಈ ಮರವನ್ನು ಸೋಲಿಗರು ಸೌದೆ ಕಟ್ಟಲು, ರಾಗಿ, ಧವಸ ಧಾನ್ಯಗಳನ್ನು ಕಟ್ಟಲು ಈ ಮರದ ನಾರನ್ನು ಉಪಯೋಗಿಸುತ್ತಾರೆ. ಆದುದರಿಂದ, ಈ ಊರಿಗೆ ಭೂತಾಣಿ ಪೋಡು ಎಂದು ಹೆಸರು ಬಂದಿದೆ.

**ಅಟ್ಟುಗುಳಿಪುರ ಕಾಲೋನಿ:** 'ಅಟ್ಟುಗುಳಿ' ಎಂಬುದು ಒಂದು ಗಿಡದ ಹೆಸರು. ಇದು ೬ ರಿಂದ ೧೦ ಅಡಿಗಳಷ್ಟು ಎತ್ತರಕ್ಕೆ ಬೆಳೆಯುತ್ತದೆ. ಈ ಗಿಡ ಈ ಪ್ರದೇಶದಲ್ಲಿ ಹೆಚ್ಚು ಇದ್ದು ಇದರ ಸುತ್ತಲೂ ಗುಡಿಸಲು ನಿರ್ಮಿಸಿಕೊಂಡ ಸೋಲಿಗರು ಆ ಮರದ ಹೆಸರಿನಿಂದಲೇ ತಮ್ಮ ಇರುವಿಕೆಯ ಗುರುತಿಸಿ ಕೊಂಡಿದ್ದಾರೆ.

**ಶನಿವಾರ ಮುಂಟಿ:** ಶನಿವಾರೇಗೌಡ ಎಂಬುದು ಒಬ್ಬ ಸೋಲಿಗನ ಹೆಸರು. 'ಮುಂಟಿ' ಎಂದರೆ ಒಂದು 'ಪ್ರದೇಶ' ಮತ್ತು 'ಗುಡ್ಡ' ಎಂಬ ಅರ್ಥವಿದೆ. ಶನಿವಾರೇಗೌಡ ಎಂಬುವನು ಸೋಲಿಗರ ಯಜಮಾನನಾಗಿದ್ದನು. ಬಹಳ ಹೆಸರುವಾಸಿಯೂ ಆಗಿದ್ದನು. ಆದ್ದರಿಂದ ಅಲ್ಲಿ ವಾಸಕ್ಕೆ ಹೋದ ಸೋಲಿಗ ಸಮುದಾಯ ಆತನ ಹೆಸರಿನ ಜೊತೆಗೆ ಗುಡ್ಡವನ್ನು ಸೇರಿಸಿ ಪೋಡಿಗೆ ಹೆಸರಾಗಿ ಇಟ್ಟುಕೊಂಡಿದ್ದಾರೆ.

**ಕುಂಟಗುಡ್ಡೆದೊಡ್ಡಿ:** ಕುಂಟಮ್ಮ ಎಂಬ ಓರ್ವ ಸೂಲಗಿತ್ತಿ ಇದ್ದಳು. ಗುಡ್ಡದ ತಳದಲ್ಲಿ ನೆಲೆಸಿದ್ದಳು. ನಾಡಿನ ಜನರು ತಮ್ಮ ಜಾನುವಾರುಗಳನ್ನು ಕುಂಟಮ್ಮನಲ್ಲಿ ಬಿಟ್ಟು ಹೋಗುತ್ತಿದ್ದರು. ಕೊಳ್ಳೇಗಾಲದ ಭಾಗದಲ್ಲಿ ದನಗಳನ್ನು ಕೂಡುವ ಜಾಗಕ್ಕೆ 'ದೊಡ್ಡಿ' ಎಂದು ಕರೆಯುವರು. ಈ ಹಿನ್ನೆಲೆಯಲ್ಲಿ ಈ ಹೆಸರು ಬಂದಿದೆ.

ಹೀಗೆ ಸೋಲಿಗರು ತಾವು ವಾಸಕ್ಕೆ ಆಯ್ದುಕೊಂಡ ಸ್ಥಳಕ್ಕೆ ಆ ಪ್ರದೇಶದಲ್ಲಿ ಭೌಗೋಳಿಕವಾಗಿ ಬಹಳ ವಿಶೇಷವೆಂದು ಕಂಡುಬರುವ ಗಿಡ, ಮರ, ಹಳ್ಳ-ಕೊಳ್ಳ, ಬೆಟ್ಟ-ಗುಡ್ಡ, ಮಣ್ಣು-ಕಲ್ಲು, ವ್ಯಕ್ತಿ, ದೈವ, ಪ್ರಾಣಿ, ಪಕ್ಷಿ, ಹುಳು ಯಾವುದೇ ಇರಲಿ ಅದರಿಂದಲೇ ತಮ್ಮ ನೆಲೆಗೆ ಹೆಸರಿಡುವ ಮೂಲಕ ಸುಲಭವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಆಗ ಹೆಸರುಗಳು ಮರುಕಳಿಸುತ್ತಿರಲಿಲ್ಲ. ಕಾಡಿನ ಪ್ರತಿಯೊಂದು ಪೋಡಿನ ಹೆಸರಿನಲ್ಲಿ ಸೇರ್ಪಡೆಯಾಗಿ ಅವುಗಳು ಒಂದಕ್ಕಿಂತ ಒಂದು ಭಿನ್ನವಾಗಿ ಇಡೀ ಅರಣ್ಯ ಪ್ರದೇಶವೇ ಸೋಲಿಗರ ಪೋಡುಗಳಾಗಿ ಪರಿವರ್ತಿತವಾಗಿರುತ್ತಿದ್ದವು.

ಬ್ರಿಟಿಷರ ಮತ್ತು ನಾಡಿನ ಜನರ ಆಗಮನವಾದ ನಂತರ ವಾಸದ ನೆಲೆಗಳ ಹೆಸರಿನಲ್ಲಿ ಕಾಲೋನಿ, ಹೊಸಪೋಡು ಎಂಬ ಹೆಸರುಗಳು ಹೊಸದಾಗಿ ಸೇರ್ಪಡೆಯಾದುವು. "೧೯೬೩ರಲ್ಲಿ ಸೋಲಿಗರಿಗೆ ಮೊಟ್ಟಮೊದಲ ಬಾರಿಗೆ ಶ್ರೀ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಒಂದೇ ಪ್ರದೇಶದಲ್ಲಿ ೪೦ ಹೆಂಚಿನ ಮನೆಗಳನ್ನು ನಿರ್ಮಿಸಿ ಅವರ ವಾಸಕ್ಕೆ ಅನುವು ಮಾಡಿಕೊಟ್ಟರು. ಆಗ ಅದರ ಹೆಸರು **'ಎರಕನಗದ್ದೆ ಕಾಲೋನಿ'** ಎಂದು ಕರೆಯಲಾಯಿತು". ಆ ಪ್ರದೇಶದ ಹತ್ತಿರವೇ ಯರಕನಗದ್ದೆ ಪೋಡು ಎಂಬುದಿತ್ತು. ಆದ್ದರಿಂದ ಹೊಸದಾಗಿ ನಿರ್ಮಾಣವಾದ ನೆಲೆಗೆ ಪೋಡಿನ ಬದಲು 'ಕಾಲೋನಿ' ಎಂದು ಕರೆಯುವುದು ರೂಢಿಗೆ ಬಂತು. ಪ್ರಸ್ತುತದಲ್ಲಿ ಪೋಡಿನ ಜೊತೆಗೆ ಕಾಲೋನಿ ಎಂಬ ಊರಿನ ಹೆಸರುಗಳೂ ಸೇರಿಕೊಂಡಿವೆ.

ಇಂದು ಅರಣ್ಯದಲ್ಲಿ ವಾಸಿಸುವುದು ಕಾನೂನಿನನ್ವಯ ಸಾಧ್ಯವಿಲ್ಲ. ಇದರಿಂದ ಕಾಡಿನ ಪ್ರಾಣಿಗಳಿಗೆ ಸ್ವತಂತ್ರವಾಗಿ ಜೀವಿಸಲು ಸಾಧ್ಯವಾಗುವುದಿಲ್ಲ. ಅಷ್ಟಕ್ಕೂ ಕಾಡಿನ ಜನರು ಮುಖ್ಯವಾಹಿನಿಗೆ ಬಂದು ಎಲ್ಲರಂತೆ ಬದುಕಬೇಕು. ಈ ಕಾರ್ಯವು ಕಳೆದ ೩೦ ವರ್ಷಗಳಿಂದ ಸೋಲಿಗರು ಪೋಡನ್ನು ಬದಲಿಸುವುದು ನಿಂತುಹೋಗಿದೆ. ಅವರ ಪೋಡಿಗೆ ಹೊಸ ಹೊಸ ಹೆಸರನ್ನು ಕರೆಯುವುದು

ಸಾಧ್ಯವಾಗಿಲ್ಲ. ಸಾವಿರಾರು ವರ್ಷಗಳಿಂದ ಬಾಳಿಬದುಕಿದ ಸೋಲಿಗರು ಇಂದು ಈ ಸಾವಿರಾರು ಹೆಕ್ಟೇರ್ ಅರಣ್ಯವನ್ನು ಆಯಾ ಭಾಗದಲ್ಲಿ ಕಂಡುಬರುವ ವೈಶಿಷ್ಟ್ಯತೆಗಳಿಂದ ಸರಳವಾಗಿ ಗುರುತಿಸಬಲ್ಲರು. ಆದ್ದರಿಂದಲೇ ಅರಣ್ಯ ಇಲಾಖೆಯವರು ಸೋಲಿಗರನ್ನು ಬಹಳ ಹಿಂದಿನಿಂದಲೂ ಅರಣ್ಯ ಕಾವಲುಗಾರರಾಗಿ ನೇಮಿಸಿಕೊಳ್ಳುವ ಮೂಲಕ ಕಾಡಿನ ರಕ್ಷಣೆಯಲ್ಲಿ ಅವರನ್ನು ಬಳಕೆ ಮಾಡಿಕೊಳ್ಳುತ್ತಿದ್ದಾರೆ.

ಸೋಲಿಗರು ಅರಣ್ಯವನ್ನು 'ರಂಗಪ್ಪನ ಕಾಡು,' 'ಮಾದಪ್ಪನ ಕಾಡು'ಎಂದು ಪವಿತ್ರ ಭಾವನೆಯಿಂದ ಕಾಣುತ್ತಾರೆ. ಈ ದೇವರುಗಳು ನಮಗೆ ಕಾಡನ್ನು ಕೊಟ್ಟಿದ್ದಾನೆ. ಕಾರಯ್ಯನ ಕಾಡು ಹಾಗು ನಮ್ಮ ಅಜ್ಜಯ್ಯನ ಕಾಡು ನಮ್ಮ ಪೂರ್ವಿಕರು ಈ ಕಾಡಿನಲ್ಲಿಯೇ ನೆಲೆಯೂರಿದ್ದಾರೆ. ಅವಿನಾಭಾವ ಸಂಬಂಧದಿಂದ ಕಾಡನ್ನು ಪೂಜಿಸಿ ಗೌರವಿಸುತ್ತಾರೆ. ಹೀಗೆ ಸೋಲಿಗರು ಕಾಡಿನ ಪರಿಸರದಲ್ಲಿಯೇ ತಮ್ಮ ಚಾರಿತ್ರಿಕ ನೆಲೆಯನ್ನು ಕಂಡು ಕೊಂಡಿದ್ದಾರೆ.

### ೨.೭. ಸೋಲಿಗರ ಪದ ನಿಷ್ಪತ್ತಿ ಮತ್ತು ಭಾಷೆ

'ಸೋಲಿಗ' ಎಂಬ ಪದದ ಬಗ್ಗೆ ಸೋಲಿಗರಲ್ಲಿ ಹಿರಿಯರಾದ ಮಾದ ತಮ್ಮಡಿ ಕೆರೆದಿಂಬ ಪೋಡು ಇವರು ಹೇಳುವ ಪ್ರಕಾರ, "ಸೋಲನ ಹಂಬಿನ ಗೆಡ್ಡೆಯನ್ನು ಕಿತ್ತು ಸೋಲಿಗರು ಜೀವಿಸುತ್ತಿದ್ದರು. ಕಾಡಿಗೆ ಸೋಲನ ಹಂಬಿನ ಗೆಣಸನ್ನು ಕೀಳಲು ಹೋದಾಗ ಆ ಗೆಣಸಿನ ಹಂಬು ಹೀಗೆ ಹೇಳುತ್ತದೆಯಂತೆ, "ನಿನ್ನ ಕೈಯಿಂದ ನನ್ನ ಗೆಣಸನ್ನು ಸಾಯುವವರೆಗೂ ಕಿತ್ತರೂ ಸಹ ನೀನು ನನ್ನನ್ನು ಸೋಲಿಸಲಿಕ್ಕೆ ಆಗುವುದಿಲ್ಲ. ಆದ್ದರಿಂದ ನನ್ನ ಗೆಣಸನ್ನು ಕಿತ್ತು ಸೋತವನು ನೀನು 'ಸೋಲಿಗ' ಎಂದು ಹೇಳಿತಂತೆ; ಆದ್ದರಿಂದ ಸೋತವರು ಸೋಲಿಗರಾದರು" ಎಂದು ಹೇಳುತ್ತಾರೆ.

ಮತ್ತೊಂದು ಕಡೆ 'ಸೋಲಾ' ಎಂದರೆ "ಬಿದಿರಿನ ಗುತ್ತಿ" ಅಥವಾ "ಬಿದಿರಿನ ಮೆಳೆ". ಬಿದಿರಿನಿಂದ ಕೂಡಿದ ದಟ್ಟವಾದ ಕಾಡಿನ ಪ್ರದೇಶಗಳಲ್ಲಿ ವಾಸಿಸುತ್ತಿದ್ದವರನ್ನು 'ಸೋಲಿಗರು' ಎಂದು ಕರೆಯುತ್ತಾರೆ.

ಸೋಲಿಗರಿಗೆ ಒಬ್ಬ ರಾಜನಿದ್ದ, ಅವನೇ ಚೋಳರಾಜ. ಅವನಿಗೆ ಐದು ಮಂದಿ ಹೆಣ್ಣು ಮಕ್ಕಳಿದ್ದರು ಕಾಲಾನಂತರದಲ್ಲಿ ಪಕ್ಕದ ರಾಜ್ಯವಾದ ತಮಿಳುನಾಡಿನ ರಾಜರ ಜೊತೆಗೆ ಯುದ್ಧವಾಗಿ ಚೋಳರಾಜನು ಸೋತು ಕಾಡಿನ ಒಳಗೆ ತಮ್ಮ ಮಕ್ಕಳನ್ನು ಕರೆದುಕೊಂಡು ಬಂದು ವಾಸ ಮಾಡತೊಡಗಿದ ಇವರೇ ಸೋಲಿಗರು ಎಂದು ಅಚ್ಚುಗಗೌಡರು ತಿಳಿಸಿದ್ದಾರೆ

ಮತ್ತೊಂದು ಮಾಹಿತಿಯ ಪ್ರಕಾರ ಸೋಲಗಿತ್ತಿಯಮ್ಮ ಒಂದು ಗಬ್ಬೆಂದು ನಾರುವ ಮಡಿಕೆಯಲ್ಲಿ ಚಿನ್ನ ಪೀತಾಂಬರ, ಬೆಳ್ಳಿ, ಬಂಗಾರ, ಹಿತ್ತಾಳೆ, ತಾಮ್ರ- ಎಲ್ಲವನ್ನು ಇಟ್ಟು ಮತ್ತೊಂದು ಕಡೆ ಹಾರೇಕೋಲನ್ನು ಇಟ್ಟಿದ್ದಳಂತೆ. ತಮ್ಮ ಮಕ್ಕಳಿಗೆ ಈ ಎರಡರಲ್ಲಿ ನಿಮಗೆ ಯಾವುದು ಬೇಕು ತೆಗೆದುಕೊಳ್ಳಿ ಎಂದು ಪರೀಕ್ಷೆ ಮಾಡಲುಬಿಟ್ಟಳು. ಆಗ ಸೋಲಿಗ ಅದೆಲ್ಲವನ್ನು ನೋಡಿ ಆ ಚಿನ್ನ ಪೀತಾಂಬರವೆಲ್ಲವೂ ಗಂಬೇದು ವಾಸನೆ ಬಂದುದ್ದನ್ನು ಕಂಡು ಇತ್ತ ಕಡೆ ಪಳ ಪಳನೆ ಹೊಳೆಯುವ ಉದ್ದನೆಯ ಹಾರೆಯ ಕೋಲನ್ನು ತಟ್ಟನೇ ತೆಗೆದುಕೊಂಡು ತಮ್ಮ ಹೆಗಲ ಮೇಲೆ ಹಾಕಿಕೊಂಡನಂತೆ ಆಗ ಸೋಲಗಿತ್ತಿಯಮ್ಮ ನೀನು ಇಂದಿನಿಂದ ಈ ಹಾರೆ ಕೋಲಿನಿಂದ ಕಾಡಿನಲ್ಲಿ ಸಿಗುವ ಗೆಡ್ಡೆ ಗೆಣಸು ಕಿತ್ತು ಜೀವನ ಸಾಗಿಸು, ಹೋಗು ಎಂದು ಹೇಳಿದಳಂತೆ. ಅಂದಿನಿಂದ ಸೋಲಿಗರಿಗೆ

'ಹಾರೆಯ ಕೋಲು ನೂರೆಯ ಗೆಣಸು ಕಾಯಂಬು ಗೆಣಸು ಕಲ್ಲಂಬುತ್ತಾರ ಸೋತು ಹೋಗದು ಸೋಲನ ಗೆಣಸು' ಎಂದು ರೂಢಿಗೆ ಬಂದಿತು. ಸೋಲಿಗರು ಎಷ್ಟೇ ಸಂಪಾದನೆ ಮಾಡಿದರೂ ಅದನ್ನು ಉಳಿಸುವುದಿಲ್ಲ ಎಂಬ ನಂಬಿಕೆ. ಆದುದರಿಂದ ಸೋಲಿಗರ ಪ್ರತಿಯೊಬ್ಬರ ಮನೆಯಲ್ಲಿಯೂ ಸಹ ಹಾರೆಯ ಕೋಲುಗಳನ್ನು ತಮ್ಮ ಮನೆಯಲ್ಲಿ ಇಟ್ಟಿರುತ್ತಾರೆ. ಇದರಿಂದ ಸೋಲಿಗರು ಅಲ್ಪ ತೃಪ್ತರು ಅತಿಯಾಗಿ ಆಸೆ ಪಡುವವರಲ್ಲ, ಎಲ್ಲಾ ವಿಷಯದಲ್ಲಿಯೂ ಸಹ ಸೋಲನ್ನು ಕಾಣುತ್ತಾರೆ.

**ಸೋಲನ ಗೆಣಸಿನ ಮೇಲಿನ ಹಾಡನ್ನು ಹೇಳುತ್ತ ಸೋಲಿಗರು ಗೆಸನ್ನು(ಗೆಣಸು) ಕೀಳುತ್ತಾರೆ ಅದರಲ್ಲಿ ಒಂದು ಗೆಣಸು ಕೀಳುವ ಹಾಡೆಂದರೆ,**

**ತಿನ್ನಾಗೆ ಲೇನೆಇಲ್ಲಾ**
**ಸೋಲಗಿತ್ತಿಯಮ್ಮ**
**ಕೂತುಕೊಳ್ಳಾಕೆ ಮನೆಇಲ್ಲ**
**ಸೋಲಗಿತ್ತಿಯಮ್ಮ**
**ಏ ಸೋಲಗಿತ್ತಿಯಮ್ಮ**
**ಸೋಲಿಸಬೇಡ**
**ಇವತ್ತು ಒಂದಷ್ಟು ಗೆಳಸ ಸಿಕ್ಕಿಸೇ**
**ಸೋಲಗಿತ್ತಿಯಮ್ಮ.**

ಬುಕಾನನ್ ಸೋಲಿಗರ ಬಗ್ಗೆ ಹೇಳಿರುವ ಮಾಹಿತಿಯನ್ನು ಮುಂದುವರಿಸುತ್ತ ಸೋಲಿಗರ ಮನೆಯ ಚಿತ್ರಣ, ವಾಸದ ನೆಲೆ, ಅವರು ಹಾಕಿಕೊಳ್ಳುತ್ತಿದ್ದ ಉಡುಪು, ಬೆಂಕಿಯ ಬಳಕೆ ಹಾಗು ಸೋಲಿಗರ ತಮಿಳು ಮಿಶ್ರಿತ ಕನ್ನಡ ಭಾಷೆಯನ್ನು ತಮ್ಮ ಬರವಣಿಗೆಯಲ್ಲಿ ತಿಳಿಸಿದ್ದಾರೆ.

**ಥರ್ಸ್ಟನ್.ಇ.** ಅವರು ೧೯೦೯ರಲ್ಲಿ ತಮ್ಮ ಗ್ರಂಥವಾದ **'ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ'** (Cast and Tribes of Southern India) ಎಂಬ ಗ್ರಂಥದಲ್ಲಿ **'ಸೋಲಿಗರು' ಎಂದರೆ "ಸೋತು ಕಾಡಿಗೆ ಹೋದವರು"**[೯] ಎಂದು ತಿಳಿಸಿದ್ದಾರೆ. ಹಾಗೆಯೇ Edgar Thruston and K.Rangchari in 1909. 'Origin of Soliga' ಎಂಬ ತಮ್ಮ ಪುಸ್ತಕದಲ್ಲಿ ಹೇಗೆ ಸೋಲಿಗರು ಎಂಬ ಪದದ ಉಗಮದ ಬಗ್ಗೆ ಈ ರೀತಿಯಾದ ಮಾಹಿತಿಯನ್ನು ನೀಡಿದ್ದಾರೆ. ಹಾಗು ಸೋಲಿಗರು ಕಾರಯ್ಯ ಮತ್ತು ಬಿಲ್ಲಯ್ಯ ಸೋಲಿಗರ ಮೂಲ ಪುರುಷರಾಗಿದ್ದಾರೆ. ಇವರಿಬ್ಬರೂ ಮಹದೇಶ್ವರನ ಭಕ್ತಾದಿಗಳಾಗಿದ್ದಾರೆ ಎಂದು ತಿಳಿಸಿದ್ದಾರೆ. ಸೋಲಿಗರು ತಮಿಳುನಾಡಿನ ಭಾಗಗಳಲ್ಲಿ **ಶೋಲಗ** ಎಂದು, ಕರ್ನಾಟಕದ ಭಾಗಗಳಲ್ಲಿ **'ಸೋಲಿಗರು'** ಎಂದು ಕರೆಯುತ್ತಾರೆ ಎಂದಿದ್ದಾರೆ.

ಭಾಷಾಶಾಸ್ತ್ರಜ್ಞರ ದೃಷ್ಟಿಯಿಂದ ಸೋಲಿಗರಲ್ಲಿ 'ಲ' ಕಾರದ ಅಕ್ಷರದ ಉಚ್ಚಾರಣೆ ಇಲ್ಲದ್ದರಿಂದ 'ಇಲು' ಎಂಬುದು ಆಗಿ 'ಸೋಯಿ' ಎಂಬುದು ಉಚ್ಚಾರಣೆಯಾಗಿ ನಿಜವಾದ ರೂಪ 'ಸ್ವಾಮಿಗ' ಎಂದಾಗಿದ್ದು ಮಹದೇಶ್ವರರ ಭಕ್ತರಾಗಿದ್ದರಿಂದ ಇವರನ್ನು ಮೊದಲು ಸ್ವಾಮಿಗ ಎಂದಾಗಿದ್ದು, ಮುಂದೆ ಜನ ಬಳಕೆಯಲ್ಲಿ 'ಸೋಲಿಗ' ಎಂದಾಗಿರಬಹುದು ಎಂದು ತಿಳಿಸಿದ್ದಾರೆ. ಸೋಲಿಗರಲ್ಲಿ ಜಾನಪದ ಶೈಲಿಯು ಹೆಚ್ಚಾಗಿರುವುದನ್ನು ನಾವು ಕಾಣುತ್ತೇವೆ. ಸೋಲಿಗರ ಹುಟ್ಟಿನಿಂದ-ಸಾಯುವವರೆಗಿನ ಅವರ

ಅಚರಣೆಯಲ್ಲಿ ಅವರೇ ರೂಪಿಸಿಕೊಂಡ ಲೋಕದೃಷ್ಟಿಯನ್ನು ನೋಡಬಹುದು. ಸೋಲಿಗ ಸಮುದಾಯಕ್ಕೆ **'ಸೋಲಿಗ'** ಎಂಬ ಹೆಸರು ಉಗಮಕ್ಕೆ ಕೆಲವು ಸ್ವಾರಸ್ಯಕರವಾದ ನಿರೂಪಣೆಗಳಿವೆ. ಸೋಲಿಗ ಭಾಷೆಯಲ್ಲಿ **'ಸೋಲ'** ಎಂದರೆ **'ಬಿದಿರು'** ತಾವು ಬಿದಿರಿನಿಂದ ಬಂದವರು ಎಂದು ಸೋಲಿಗರು ಹೇಳಿಕೊಳ್ಳುತ್ತಾರೆ. **ಮೊರಬ್** ಅವರು **ಬಾಲಕೃಷ್ಣ** ಅವರನ್ನು ಉಲ್ಲೇಖಿಸುತ್ತಾ ಸೋಲಿಗ ಎಂಬ ಪದ **'ಸೋಯಿಗ'** ಎಂಬುದರಿಂದ ಬಂದಿದೆ. ಸೋಯಿಗ ಎಂಬುದು **'ಸ್ವಾಮಿಗ'** ಎಂಬ ಪದಕ್ಕೆ ತದ್ಭವ ರೂಪ. ಸ್ವಾಮಿಗ ಎಂದರೆ 'ಸ್ವಾಮಿಗೆ' ಸಂಬಂಧಿಸಿದವರು. ಈ ರೀತಿಯಾಗಿ ಅರ್ಥವನ್ನು ನೀಡುತ್ತಾರೆ. ಇನ್ನೊಂದು ಅರ್ಥದಲ್ಲಿ **"ಸೋಲಿಗ ಪದವು ತಮಿಳು ಪದ 'ಸೋಲೈ'ನಿಂದ ಬಂದಿದ್ದು. ದಟ್ಟವಾದ ಮೆಳೆ, ಗುತ್ತಿ, ಕಾಡು ಎಂಬ ಅರ್ಥಗಳನ್ನು ಹೊಂದಿದೆ ಅಂತಹ ಪ್ರದೇಶಗಳಲ್ಲಿ ವಾಸಿಸುವ ಜನರನ್ನು 'ಸೋಲಿಗರು'**[೧೦] ಎಂದು ತಿಳಿಯಬಹುದು ಎಂದಿದ್ದಾರೆ.

ಸೋಲಿಗ ಪದದ ನಿಷ್ಪತ್ತಿಯ ಬಗ್ಗೆ ಲೂಯಿಜ಼್(Luiz) ತಮ್ಮ ಗ್ರಂಥವಾದ ಟ್ರೈಬ್ಸ್ ಆಫ್ ಮೈಸೂರು ಗ್ರಂಥದಲ್ಲಿ "The name (Sholiga) is the corruption of the Tamil worked Colai or Colai (Thicket) and has reference to the dense thickets amidst which they live"[11] ಎಂದು ಹೇಳಿದ್ದಾರೆ. ಇವರ ಅಭಿಪ್ರಾಯವನ್ನು ಕುರಿತು ಎಸ್ ಜಿ ಮೊರ್ಯಾಬ್ ಅವರು ಸೋಲಿಗರು ಮೈಸೂರು ಜಿಲ್ಲೆಯಲ್ಲಿ ಹಾಗೂ ತಮಿಳುನಾಡಿನಲ್ಲಿಯೂ ವಾಸಿಸುತ್ತಾರೆ ಎಂದು ತಿಳಿಸಿದ್ದಾರೆ.[೧೨] ಮತ್ತೊಂದು ಐತಿಹ್ಯದ ಪ್ರಕಾರ ಉತ್ತರ ಪ್ರದೇಶದಿಂದ ದಕ್ಷಿಣದ ಕಡೆಗೆ ಬಂದಂತಹ ಮಲೆಮಹದೇಶ್ವರರು (ಮಾದಪ್ಪ) ಕಾರಯ್ಯ ಮತ್ತು ಬಿಲ್ಲಯ್ಯ ಎಂಬ ಇಬ್ಬರು ವ್ಯಕ್ತಿಗಳನ್ನು ಪಡೆದುಕೊಳ್ಳುತ್ತಾನೆ. ಅವರಲ್ಲಿ ಕಾರಯ್ಯನಿಂದ ಸೋಲಿಗರ ವಂಶವು ಬೆಳೆಯುತ್ತದೆ. ಹಾಗಾಗಿ ಸೋಲಿಗರು ಇಂದಿಗೂ ತಮ್ಮನ್ನು 'ಕಾರಯ್ಯನ ಮಕ್ಕಳು' ಎಂಬುದಾಗಿ ಕರೆದುಕೊಳ್ಳುತ್ತಾರೆ. ಈ ಐತಿಹ್ಯವು ಸೋಲಿಗರಲ್ಲಿ ಹೆಚ್ಚು ಪ್ರಚಲಿತವನ್ನು ಪಡೆದುಕೊಂಡಿದೆ. ಸೋಲಿಗರ ಕುಲ ಮತ್ತು ಕುಲಕಸುಬು ಸೋಲಿಗರ ಸಂಸ್ಕೃತಿಯು ಬದುಕಿನ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತಹದಾಗಿದ್ದು, ಅದರ ಮೇಲೆ ಪ್ರಕೃತಿಯ ಗಾಢವಾದ ಪ್ರಭಾವವಿದೆ. ಇದರಿಂದಾಗಿಯೇ ಸೋಲಿಗರಲ್ಲಿ ಪ್ರಕೃತಿಯ ಆರಾಧನೆ ಹೆಚ್ಚಾಗಿದೆ. ಇಂದಿಗೂ ಅವರು ಗಿಡ, ಮರ, ಬಳ್ಳಿ ಹಾಗೂ ಕೆಲವು ಪ್ರಾಣಿಗಳನ್ನು ದೇವರುಗಳ ರೂಪದಲ್ಲಿ ಆರಾಧಿಸುತ್ತಿದ್ದಾರೆ.

ಇನ್ನೂ ಕೆಲವು ಮಾಹಿತಿಯ ಪ್ರಕಾರ ಸೋಲಿಗರ ಉಗಮವನ್ನು ಕಥೆಯ ಮೂಲಕ ತಿಳಿಯಬಹುದಾಗಿದೆ. ಇದನ್ನು ಡಾ. ಕೆ ಕೇಶವನ್ ಪ್ರಸಾದ್ ಅವರು **'ಸೋಲಿಗರು ಹಾಡಿದ ಬಿಳಿಗಿರಿರಂಗನ ಕಾವ್ಯ'** ಎಂಬ ಪುಸ್ತಕದಲ್ಲಿ ತಿಳಿಸಿದ್ದಾರೆ. ಅವರ ಪ್ರಕಾರ ಪಾರ್ವತಿ ಪರಮೇಶ್ವರನ ಕಥೆ. "ಪಾರ್ವತಿ ಪರಮೇಶ್ವರರು ತಮ್ಮ ಬೆವರಿನಿಂದ ಎರಡು ಗೊಂಬೆಗಳನ್ನು ಮಾಡಿ ಅದಕ್ಕೆ ಜೀವತುಂಬಿ ಒಂದು ನೀಲಯ್ಯನಾಯಿತು. ಮತ್ತೊಂದು ಸಂಕಮ್ಮನಾಯಿತು. ಇವರಿಂದ ವಂಶಾವಳಿ ಬೆಳೆಯಿತು. ಇವರ **ಮಕ್ಕಳು ಸೋಲನ ಹಂಬಿನ ಗೆಡ್ಡೆಯನ್ನು ತಿಂದು ಜೀವಿಸುತ್ತಿದ್ದರು.** ಹೀಗೆ ಅವರು ಗೆಡ್ಡೆಯನ್ನು ಕಿತ್ತು ಬೇಯಿಸುತ್ತಾ ತಿನ್ನುತ್ತಲೇ ಮುಪ್ಪಾದರು. ಆದರೆ ಸೋಲನ ಹಂಬು ಮಾತ್ರ ಮತ್ತೆ ಮತ್ತೆ ಚಿಗುರಿ ಹೊಸ ಹೊಸ ಗೆಡ್ಡೆಯನ್ನು ಬಿಡುತ್ತಿತ್ತು. ಒಮ್ಮೆ ಆ ಮುದುಕ ಗೆಡ್ಡೆಯನ್ನು ಕೀಳಲು ಹೋದಾಗ ಸೋಲನ ಹಂಬು ಹೇಳಿತು; ನಿನ್ನ ಕೈಯಿಂದ ನನ್ನ ಗೆಡ್ಡೆಯನ್ನು ಸಾಯುವವರೆಗೂ ಕಿತ್ತರೂ ನನ್ನನ್ನು ನೀನು ಸೋಲಿಸಲಿಕ್ಕೆ ಆಗುವುದಿಲ್ಲ. ಆದ್ದರಿಂದ ನನ್ನ ಗೆಡ್ಡೆಯನ್ನು ಕಿತ್ತು ಸೋತವನು ನೀನು

'ಸೋಲಿಗ' ಎಂದು ಹೇಳಿತು. ಆದರೆ ಇವೆಲ್ಲ ಕಲ್ಪಿತ ಕಥೆಗಳು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ"[೧೩] ಎಂದು ಹೇಳುತ್ತಾರೆ.

Nanjundayya H.V and L.A.K Iyer (1931) in their book the Mysore Tribes and castes, Vol IV describes about the origin and customs of Soliga and the exogamous divisions of the tribe distributed in Biligiri Rangana hills and they have stated that in the hilly tracts of Rangagiri these people are called by other natives as 'Cad Eruligaru'.

ಈ ಮೇಲಿನ ಹಲವಾರು ವಿವರಣೆಗಳನ್ನು ಸೋಲಿಗ ಪದದ ಬಗ್ಗೆ ತಿಳಿದಾಗ ಸೋಲಿಗ ಎಂಬ ಪದವು ಯಾವ ರೀತಿ ಉಗಮಗೊಂಡಿತು ಎಂಬುದನ್ನು ತಿಳಿಯುವುದರ ಜೊತೆಗೆ ಸೋಲಿಗರೆಂದರೆ ಕಾಡಿನ ಮಕ್ಕಳು, ತಮ್ಮನ್ನು ತಾವು ಪಾರ್ವತಿ ಪರಮೇಶ್ವರರ ಪುತ್ರರು ಎಂದು ಹೇಳುತ್ತಾರೆ. ಸೋಲನ ಗೆಣಸನ್ನು ಕಿತ್ತು ಸೋತದ್ದು ಹಾಗಿರಲಿ, ಆದರೆ ಸೋಲಿಗರು ತಮ್ಮ ದಿನನಿತ್ಯದ ಬದುಕಿನಲ್ಲಿ ಸೋಲನ್ನೇ ಕಾಣುತ್ತಾ ಬರುತ್ತಿದ್ದಾರೆ. ಹಿಂದೆ ಸೋಲಿಗರು ತಮ್ಮ ಗುಂಪಿನಲ್ಲಿ ಘರ್ಷಣೆಯಾಗಿ ಮತ್ತೊಂದು ಗುಂಪು ಕಾಡಿನ ಒಳಗೆ ಓಡಿ ಹೋಗಿ ರಕ್ಷಣೆಗೋಸ್ಕರ, ಇವರಿಂದ ದೂರ ಹೋಗಿ ವಾಸ ಮಾಡೋಣ ಎಂದು ಭಯದಿಂದ ದೂರದ ಕಾನನಗಳಲ್ಲಿ, ಯಾರಿಗೂ ಕಾಣದ ಕಡೆಗೆ ಹೋಗಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

**ಮತ್ತೊಂದು ಘಟನೆ: ಮದ್ದೂರು ಕಾಲೋನಿ** ಗುಂಡ್ಲುಪೇಟೆ ತಾಲ್ಲೂಕು ಚಾಮರಾಜನಗರ ಜಿಲ್ಲೆ, ಇಲ್ಲಿ ಸೋಲಿಗರು, ಬೆಟ್ಟಕುರುಬರು (ಕಾಡುಕುರುಬರು), ಜೇನುಕುರುಬರು, ಮೂರು ಸಮುದಾಯದವರು ವಾಸ ಮಾಡುತ್ತಾರೆ. ೧೯೯೯-೨೦೦೦ರಲ್ಲಿ ಎರಡು ಸಮುದಾಯವಾದ ಸೋಲಿಗ, ಬೆಟ್ಟಕುರುಬ ಇವರಿಗೆ ಘರ್ಷಣೆಯಾಗಿ ಭಯಭೀತರಾದ ಸೋಲಿಗರು ರಾತ್ರೋ ರಾತ್ರಿ ಮತ್ತೊಂದು ಸಮುದಾಯಕ್ಕೆ ಹೆದರಿ ಪಕ್ಕದ ನಾಡವರು ಇರುವ ಊರಾದ ಕಗ್ಗಳದಹುಂಡಿಗೆ ಹೋಗಿ ಆಶ್ರಯ ಪಡೆಯುತ್ತಾರೆ. ಆ ನಂತರದಲ್ಲಿ ಆ ಊರಿನ ಮುಖಂಡರು ಹಿರಿಯರು, ಸಂಬಂಧಿಸಿದ ಇಲಾಖೆಯವರು ಎಲ್ಲರೂ ಸೋಲಿಗರಿಗೆ ಧೈರ್ಯ ಹೇಳಿ ನಿಮ್ಮ ರಕ್ಷಣೆಗೆ ನಾವು ಇರುತ್ತೇವೆ ಎಂದು ಮತ್ತೊಂದು ಸಮುದಾಯದಿಂದ ಮುಚ್ಚಳಿಕೆ ಪತ್ರವನ್ನು ಬರೆಯಿಸಿಕೊಂಡ ನಂತರ ಮತ್ತೆ ಹಿಂದಿರುಗಿ ಬರುತ್ತಾರೆ.

ಅಂದರೆ ಇಲ್ಲಿ ಸೋಲಿಗರು ಸದಾ ಸೋಲುತ್ತಲೇ ಇರುತ್ತಾರೆ. ಇವರಿಗೆ ಬೇರೆಯವರನ್ನು ಹೆದರಿಸು ವುದಕ್ಕೆ ಆಗುವುದಿಲ್ಲ. ಆದುದರಿಂದ ಸೋತು ಹೋಗುವವರು ಸೋಲಿಗರು. ಹಿಂದೆ ಕಾಡಿನ ಪ್ರದೇಶಕ್ಕೆ ಸೋತು ಹೋದುದರಿಂದ ಕಾಡಿನಲ್ಲಿಯೇ ರಕ್ಷಣೆ ಪಡೆದು ಆ ಪರಿಸರದಲ್ಲಿಯೇ ಬೆಳೆದು ಕಾಡಿನ ಮಕ್ಕಳಾಗಿದ್ದಾರೆ.

### ೨.೪. ಪದನಿಷ್ಪತ್ತಿ ಮತ್ತು ಭಾಷೆ

**ಭಾಷೆ** ಎಂಬುದು ಪರಸ್ಪರ ಅಭಿಪ್ರಾಯ, ಅಭಿರುಚಿಗಳನ್ನು ಹಂಚಿಕೊಳ್ಳುವ ಒಂದು ಸಂವಹನ ಮಾಧ್ಯಮ ಮಾನವನು ಮೂಲತಃ ಸಂಘಜೀವಿಯಾಗಿರುವುದರಿಂದ, ಆತ ಒಬ್ಬಂಟಿಯಾಗಿ ಬದುಕುವುದು ಕಷ್ಟ ಒಂದುವೇಳೆ ಬದುಕಿದರೂ ಪರಾವಲಂಬಿಯಾಗಿರುವುದರಿಂದ ಮತ್ತೊಬ್ಬರನ್ನು ಆಶ್ರಯಿಸಬೇಕಾದ ಅನಿವಾರ್ಯತೆ ಇದೆ. ಹಾಗಾಗಿ ಜಗತ್ತಿನಲ್ಲಿರುವ ಎಲ್ಲಾ ಮನುಷ್ಯರು ಭಾವನಾತ್ಮಕವಾಗಿ, ವ್ಯವಹಾರಿಕವಾಗಿ ತಮ್ಮದೇ ಆದ ವಿವಿಧ ಬಗೆಯ ಭಾಷೆಗಳನ್ನು ರೂಢಿಸಿಕೊಂಡಿದ್ದಾರೆ.

ಆರಂಭದಲ್ಲಿ ಆದಿಮಾನವನು ತನ್ನ ಮನಸ್ಸಿನಲ್ಲಿ ಉದ್ದೀಪನಗೊಂಡ ಭಾವನೆಗಳನ್ನು ಸನ್ನೆ ಅಥವಾ ಸಂಕೇತಗಳ ಮೂಲಕ ವ್ಯಕ್ತಪಡಿಸತೊಡಗಿದ್ದನು. ಅದೇ ಮುಂದೆ ಮಾನವನ ಬೌದ್ಧಿಕ ಕೌಶಲ್ಯದ ಪರಿಣಾಮವಾಗಿ ಒಂದು ವ್ಯವಸ್ಥಿತ ಭಾಷೆಯಾಗಿ ರೂಪುಗೊಂಡಿತು. ಎಲ್ಲಾ ಮನುಷ್ಯರ ಸನ್ನೆ, ಸಂಕೇತಗಳಲ್ಲಿ ಒಂದೇ ರೀತಿಯ ಹೋಲಿಕೆಗಳು ಕಂಡುಬಂದರೂ, ಜಗತ್ತಿನಲ್ಲಿ ಎಲ್ಲರೂ ಒಂದೇ ಭಾಷೆ ಆಡುವುದಿಲ್ಲ. ಉಚ್ಚರಣೆ, ಲಿಪಿ, ಶಬ್ದಕ್ಕೆ ಇರುವ ಅರ್ಥದ ಹಿನ್ನೆಲೆಯಲ್ಲಿ ನಾನಾ ಭಾಷೆಗಳು ಚಾಲ್ತಿಯಲ್ಲಿವೆ. ಎಲ್ಲಾ ಭಾಷೆಗಳನ್ನು ಉಚ್ಚರಣೆಯ ರೂಪದಲ್ಲಿ ಒಂದೇ ಗುಂಪಿಗೆ ಸೇರಿಸಬಹುದಾದರೂ ಲಿಪಿ ಮತ್ತು ಅರ್ಥದ ಹಿನ್ನೆಲೆಯಲ್ಲಿ ಭಿನ್ನತೆಗಳು ಕಾಣಿಸಿಕೊಳ್ಳುತ್ತವೆ. ಹಾಗಾಗಿ ಭಾಷೆಯನ್ನು ನಾವು ಪ್ರದೇಶ ಮತ್ತು ಜನಾಂಗದ ಆಧಾರದ ಮೇಲೆ ಗುರುತಿಸಬಹುದು. ಒಟ್ಟಿನಲ್ಲಿ ಭಾಷೆ ಎಂಬುದು ವಿಚಾರ ವಿನಿಮಯಕ್ಕಾಗಿ ರೂಢಿಸಿಕೊಂಡ ವ್ಯವಸ್ಥೆಯಾಗಿದೆ ಎಂಬುದನ್ನು ಅರಿಯಬಹುದಾಗಿದೆ.

ಮಾತು ಮತ್ತು ಲಿಪಿ ಎರಡು ವ್ಯವಸ್ಥಿತವಾಗಿದ್ದರೆ ಮಾತ್ರ ಅದನ್ನು ಭಾಷೆ ಎಂದು ಕರೆಯುತ್ತೇವೆ. ಇಲ್ಲಿ ವ್ಯವಸ್ಥೆ ಎಂಬುದು ಮುಖ್ಯ. ಏಕೆಂದರೆ ಪ್ರಾಣಿ, ಪಕ್ಷಿಗಳು ಸಹ ತಮ್ಮ ಧ್ವನಿಯ ಮೂಲಕ ಪರಸ್ಪರ ಭಾವನೆಗಳನ್ನು ವಿನಿಮಯ ಮಾಡಿಕೊಳ್ಳುವ ದೃಶ್ಯಗಳು ನಮಗೆ ಕಂಡುಬರುತ್ತದೆ. ಆದರೆ ಅವುಗಳ ಧ್ವನಿ ವ್ಯವಸ್ಥಿತವಾಗಿಲ್ಲದ ಕಾರಣ ಅಥವಾ ಅವುಗಳ ಧ್ವನಿಯಲ್ಲಿರುವ ಭಾವನೆಗಳನ್ನು ನಾವು ಅರಿಯಲಾಗದಿರುವ ಕಾರಣದಿಂದ ಅವುಗಳ ಧ್ವನಿಯನ್ನು ಭಾಷೆಯೆಂದು ಕರೆಯಲಾಗುವುದಿಲ್ಲ.

**ಭಾಷೆಯ ವ್ಯಾಖ್ಯೆಗಳು**

**ಪ್ಲೇಟೋ:** "ಧ್ವನಿ ಸಂಕೇತಗಳಿಂದ ಮನುಷ್ಯರ ವಿಚಾರಗಳನ್ನು ಅಭಿವ್ಯಕ್ತಿಗೊಳಿಸುವ ಸಾಧನವೇ ಭಾಷೆ"

**ಟ್ರೇಗರ್:** ಒಂದು ಸಾಮಾಜಿಕ ಸಮುದಾಯವು, ಪರಸ್ಪರ ಅನುಕರಿಸಲು ಉಳಿಸಿಕೊಳ್ಳುವ ಯಾಧೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ.

**ಎರ್ಡ್‌ಮಾನ್:** ಭಾಷೆ ಎಂಬುದು ಒಂದು ಬಗೆಯ ಸಾಧನ. ಅದು ಮನುಷ್ಯರ ವಿಶಿಷ್ಟ ಆಲೋಚನೆಗಳಿಗೆ ನೆರವಾಗುವ ಒಂದು ಅಂಗ.

**ಕ್ವಿಲ್ಲರ್ ಕೌಚ್:** ಪದಗಳೆಂಬ ನಾಣ್ಯಗಳ ಮೂಲಕ, ನಮ್ಮೊಳಗಿನ ಆಲೋಚನೆಗಳನ್ನು ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುವ ಸಾಧನವೇ ಭಾಷೆ.

ವಿದ್ವಾಂಸರ ಪ್ರಕಾರ ಭಾಷೆ ಎಂದರೆ "ಒಂದು ಸಮಾಜದ ಜನರು ಆಡುವ ಮಾತು ಅಷ್ಟೆ. ಲಿಪಿಯಿಲ್ಲದಿರುವ ವ್ಯವಸ್ಥಿತವಾದ ಮಾತನ್ನು ಭಾಷೆ ಎಂದು ಕರೆಯಲಾಗುತ್ತದೆ. ಆದ್ದರಿಂದ, ಭಾಷೆಯನ್ನು ಚಾಕ್ಷುಷ ಮತ್ತು ಶ್ರವಣ ಎಂದು ಎರಡು ಭಾಗ ಮಾಡುತ್ತೇವೆ. ಶ್ರವಣ, ಲಿಪಿ ಒಳಗೊಂಡ ಭಾಷೆಯನ್ನು ಚಾಕ್ಷುಷವೆಂತಲೂ, ಲಿಪಿ ಇಲ್ಲದ ಕೇವಲ ವ್ಯವಹಾರದಲ್ಲಿ ಬಳಸಲ್ಪಡುವ ಭಾಷೆಯನ್ನು ಶ್ರವಣವೆಂತಲೂ ಕರೆಯುತ್ತಾರೆ.

ದ್ರಾವಿಡ ಭಾಷಾವರ್ಗದಲ್ಲಿ ಪ್ರಮುಖವಾದ ಭಾಷೆಗಳೆಂದರೆ ತಮಿಳು, ಕನ್ನಡ, ತೆಲುಗು, ಮಲೆಯಾಳಂ, ತುಳು ಇವುಗಳನ್ನು ಪಂಚ ದ್ರಾವಿಡ ಭಾಷೆಗಳೆಂದು ಕರೆಯಲಾಗುತ್ತದೆ. ದ್ರಾವಿಡ ಭಾಷೆಗಳಲ್ಲಿ ಕನ್ನಡವು ಎರಡನೇ ಪ್ರಾಚೀನ ಭಾಷೆಯಾಗಿದೆ. ಕರ್ನಾಟಕ ರಾಜ್ಯದ ಬಹು ಮುಖ್ಯ ಭಾಷೆಯಾಗಿರುವ

ಕನ್ನಡದ ಸಾಮಾಜಿಕ ಉಪಭಾಷೆಯಾಗಿ ಸೋಲಿಗ ಭಾಷೆಯು ಕಂಡುಬರುತ್ತದೆ. ಸೋಲಿಗ ಭಾಷೆಯು ಕನ್ನಡ ಭಾಷೆಯೊಂದಿಗೆ ನಿಕಟ ಸಂಬಂಧವನ್ನು ಹೊಂದಿರುವುದು ಅಧ್ಯಯನದ ಮುಖೇನ ತಿಳಿಯುತ್ತದೆ. ಸೋಲಿಗರ ಪದ ನಿಷ್ಪತ್ತಿಯ ಬಗ್ಗೆ ಸೋಲಿಗರಲ್ಲಿ ಒಂದು ಜನಪದ ಕಥೆಯಿದೆ.

"ಭಾಷೆ ಎಂದರೆ ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥೆ" ಎಂದಿದ್ದಾರೆ. ಆದುದರಿಂದ ಸಮೂಹ ಜೀವಿಯಾದ ಮನುಷ್ಯ ಸಾಮಾಜಿಕ ಉದ್ದೇಶಕ್ಕಾಗಿ ಭಾಷೆಯನ್ನು ರೂಢಿಸಿಕೊಂಡಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಸೋಲಿಗರು ಸಹ ಸಮೂಹ ಜೀವಿಗಳು, ಸಮುದಾಯದ ಒಟ್ಟಿಗೆ ವಾಸ ಮಾಡುತ್ತಾರೆ. ಅವರು ಪರಿಸರಕ್ಕೆ ಹೊಂದಿ ಕೊಂಡ ಹಾಗೆ ತಮ್ಮದೇ ಆದ ಆಡುಭಾಷೆಯನ್ನು ಹೊಂದಿದ್ದಾರೆ; ಅದುವೇ 'ಸೋಲಿಗ ನುಡಿ.'

"ಭಾಷೆಯ ಸಾಮಾನ್ಯ ಸ್ವರೂಪವನ್ನು ಸೈದ್ಧಾಂತಿಕವಾಗಿ ಅಧ್ಯಯನ ಮಾಡುವುದನ್ನು ಸಾಮಾನ್ಯ ಭಾಷಾಶಾಸ್ತ್ರ ಎಂದು ಕರೆಯುವರು."[೧೪] ಅಂದರೆ ಮಾನವನು ನಡೆದುಬಂದ ದಾರಿಯಲ್ಲಿ ನೂರಾರು ಸಂಸ್ಕೃತಿಯ ಲಕ್ಷಣಗಳನ್ನು ತೋರ್ಪಡಿಸದಿದ್ದರೂ ಮಾತನಾಡುವ ಮತ್ತು ಉಪಯೋಗಿಸುತ್ತಿದ್ದ ಭಾಷಾ ಸಂಸ್ಕೃತಿಯಲ್ಲಿ ವಿಶಿಷ್ಟ ಲಕ್ಷಣವನ್ನು ತೋರಿಸುತ್ತದೆ.

ದ್ರಾವಿಡ ಭಾಷೆಗಳ ಮೂಲಕ ಕಂಡುಬರುವ ಹಲವಾರು ವ್ಯತ್ಯಾಸಗಳನ್ನು ಕಾಣಬಹುದು. ದ್ರಾವಿಡ ಭಾಷೆಗಳ ಗುಂಪಿಗೆ ಸೇರಿದ ಸೋಲಿಗರಲ್ಲಿಯೂ ಸಹ ತಮ್ಮದೇ ಆದ ಪರಿಸರಕ್ಕೆ ಹೊಂದಿ ಕೊಂಡಂತಿರುವ ಸೋಲಿಗ ನುಡಿಯು ಪ್ರಸ್ತುತದಲ್ಲಿ ಚಾಮರಾಜನಗರ ಜಿಲ್ಲೆಯ ಹಲವಾರು ಪೋಡುಗಳಲ್ಲಿ ಕಾಲೋನಿಗಳಲ್ಲಿ ಮಾತನಾಡುವುದನ್ನು ಕಾಣಬಹುದಾಗಿದೆ.

**ಕೆಂಪೇಗೌಡ**. ಕೆ ಅವರು ತಮ್ಮ "ಭಾಷಾ ವಿಜ್ಞಾನ" ಪುಸ್ತಕದಲ್ಲಿ ಭಾಷೆ ಎಂದರೇನು? ಭಾಷೆ ಮತ್ತು ಸಾಹಿತ್ಯ, ಮಾತೃ ಭಾಷಾ ಬೋಧನೆ ಸೋಲಿಗರು ಕನ್ನಡದ ಬಗ್ಗೆ ಇನ್ನು ಮುಂತಾದವುಗಳ ಬಗ್ಗೆ ತಿಳಿಸಿದ್ದಾರೆ. "ಸೋಲಿಗರು ಆಡುವ ಕನ್ನಡವನ್ನೇ ಸೋಲಿಗರ ಕನ್ನಡ ಎನ್ನುವರು."[೧೫] ಇವರು ಕಾಡಿನಲ್ಲಿಯೇ ವಾಸಿಸುವ ಜನರಾದ್ದರಿಂದ ಇವರೊಡನೆ ಜನಸಂಪರ್ಕ ಬಹಳ ಕಡಿಮೆ. ಈ ಕಾರಣದಿಂದ ಇವರು ಆಡುವ ಕನ್ನಡ ಭಾಷೆ ತನ್ನದೇ ಆದ ರೀತಿಯಲ್ಲಿ ಕಂಡುಬರುವುದು" ಎಂದಿದ್ದಾರೆ.

ಭಾಷೆ ಎಂಬ ಬೆಳಕು ಬೆಳಗದಿದ್ದರೆ ಲೋಕದಲ್ಲಿ ಕತ್ತಲಿನಿಂದ ತುಂಬಿಹೋಗುತ್ತಿತ್ತು. ಭಾಷೆ ಮಾನವ ಜನಾಂಗದ ಅಮೂಲ್ಯ ಸ್ವತ್ತು. ಮಾರ್ಟನ್‌ರ ಪ್ರಕಾರ ಭಾಷೆ ಎಂದರೆ ಒಂದು ಚಿತ್ತ ಸ್ಥಿತಿಯನ್ನು ವ್ಯಕ್ತಪಡಿಸಲು ಮಾಡುವ ಉದ್ದೇಶಪೂರ್ವಕ ಉಚ್ಚರಣೆಯೇ ಭಾಷೆ. ಒಂದು ಸಾಮಾಜಿಕ ಒಪ್ಪಂದ. ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚಿಕ ಧ್ವನಿಸಂಕೇತಗಳ ವ್ಯವಸ್ಥೆ ಭಾಷೆ. ಭಾಷೆ ಸಂಸ್ಕೃತಿಯನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುವ ಸಂವಹನ ಸಾಧನ.

ಅಂದು ಸೋಲಿಗರು ಹೆಚ್ಚಾಗಿ ನಾಡಿನ ಸಂಪರ್ಕ ಹೊಂದಿಲ್ಲವಾದ್ದರಿಂದ ಹಲವಾರು ವಸ್ತುಗಳನ್ನು ತಮ್ಮದೇ ಆದ ಭಾಷಾ ಸಂಪತ್ತನ್ನು ನಿರ್ಮಿಸಿಕೊಂಡಿದ್ದಾರೆ. ಆದರೂ ಸೋಲಿಗ ಭಾಷೆಯು ಕನ್ನಡ ಭಾಷೆಯಂತೆಯೇ ಇದೆ. ಕನ್ನಡ ಭಾಷೆಗೆ ಭಿನ್ನವಾದ ಸೋಲಿಗ ಭಾಷೆಯ ಪದಗಳು ತೀನಿ(ಆಹಾರ), ಇರ್ರು(ಇರುವೆ), ಕೇಳಲು(ಕೊಂಡುಗುರಿ), ಮುಕ್ಕಣ್ಣ(ತೆಂಗಿನಕಾಯಿ), ಕುನ್ನ(ಗಂಡು), ಕುನ್ನಿ(ಹೆಣ್ಣು), ಕರಿತಲೆನಾರಿ(ಹೆಂಗಸು), ಮೀಸೆಕಾರ(ಗಂಡಸು), ಕಿರುಬ(agave), ಸೊಗೆ(ಅಂಗಿ), ಮೆನೆ(ಮನೆ),

ಕಾಡು(ಕಾಡು), ಅಂಜುಕೆ(ಭಯ), ಬುಲ್ಲೆ(ಸುಳ್ಳು), ಉಗ(ಯುಗ), ಸಗುತಿ(ಶಕ್ತಿ), ನೇರಿಹಣ್ಣು(ನೇರಳೆಹಣ್ಣು), ಜಿನ(ದಿನ), ಇಸಾರ(ವಿಚಾರ), ಪೇಸ(ಹಣ), ಊಂಜ(ಹುಂಜ), ಪೋಡು(ಊರು), ಕೊತ್ತಿ(ಬೆಕ್ಕು), ಅಳುಮ(ಅಳಿಲು), ಕೂಗುರಿ(ಕಾಮುಕ), ಗಪ್ಪನೆ(ನಿಶಬ್ದ), ರತ್ತ(ರಕ್ತ), ತೊಲಕ್ಕಿ(ಬಾವಲಿ), ಇರಿಕ(ಹಿರಿಯ), ಸೊಂಪೊತ್ತು(ಸಂಪತ್ತು), ಗೈಮೆ(ಕೆಲಸ), ಸೋಯ್ದೆ(ಕಟ್ಟಗೆ), ತೊಡಕು(ತೊಂದರೆ), ಪಡಲು(ಪಶ್ಚಿಮ), ಬಡಗಲು(ದಕ್ಷಿಣ), ಎಲಿ(ಇಲಿ), ಕಾಟಿ(ಕಾಡುಕೋಣ), ಏಟ(ಕೋಳಿ), ಮೂಕು(ಮೂಗು), ಬೋಸಿ(ಪಾತ್ರೆ), ಬಾಕಲು(ಬಾಗಿಲು), ಇಟ್ಬು( ಮುದ್ದೆ), ಉದುಕ(ಸಾಂಬಾರು).

**ಸೋಲಿಗರ ಭಾಷೆಯಲ್ಲಿ ಕನ್ನಡ 'ಚ' ಕಾರಕ್ಕೆ 'ಸ' ಕಾರದ ಬಳಕೆ ಕಂಡುಬರುತ್ತದೆ. ಅಂದರೆ ಸೋಲಿಗರು 'ಚ' ಕಾರದ ಪದಗಳನ್ನು ಬಳಸುವಾಗ 'ಸ'ಕಾರವಾಗಿ ಉಚ್ಚಾರಣೆ ಮಾಡುತ್ತಾರೆ. ಚ>ಸ**

ಚಳಿ–ಸಳಿ, ಚಾಪೆ–ಸಾಪೆ, ಚಿನ್ನ–ಸಿನ್ನ, ಚಿತ್ರಾನ್ನ– ಸಿತ್ರಾನ್ನ, ಚಿತ್ರ–ಸಿತ್ರ, ಚಿಂತೆ–ಸಿಂತೆ, ಚೆಂದ್ರ–ಸೆಂದ್ರ, ಚಿಲಕ–ಸಿಲಕ, ಚಿಟ್ಟೆ–ಸಿಟ್ಟೆ, ಚೆಲುವ–ಸೆಲುವ, ಚಿಕ್ಕಪ್ಪ–ಸಿಕ್ಕಪ್ಪ, ಚಿಕ್ಕಮ್ಮ–ಸಿಕ್ಕವ್ವೆ, ಚುಕ್ಕಿ–ಸುಕ್ಕಿ, ಚೆಂಬು–ಸೆಂಬು, ಚೆಮಡು–ಸೆಂಡು, ಚೀಲ–ಸೀಲ, ಚೆರಮಡಿ–ಸೆರಂಡಿ, ಚಪ್ಪಲಿ–ಸಪ್ಪಲಿ, ಚಪ್ಪಾಳೆ–ಸಪ್ಪಾಳೆ, ಚಪಾತಿ–ಸಪಾತಿ, ಚಕ್ಕಲಿ–ಸಕ್ಕುಲಿ, ವಿಚಾರ–ಇಸಾರ, ಬಾಚಣಿಗೆ–ಬಾಸಣಿಗೆ, ಕುರ್ಚಿ–ಕುರ್ಸಿ,ಕರ್ಚು–ಕರ್ಸು, ಚರ್ಚೆ–ಸರ್ಸೆ, ಪೇಚಾಟ–ಪೇಸಾಟ, ಆಚರಣೆ–ಆಸರಣೆ, ಆಚೆಗೆ–ಆಸೆಕ, ನಾಚಿಕೆ–ನಾಸುಕೆ, ಚರ್ಮ–ಸರ್ಮ, ಚಾಕು–ಸಾಕು, ಚಮಚ–ಸಮ್ಸ, ಚಪ್ಪರ–ಸಪ್ಪರ, ಛತ್ರಿ–ಸೆತ್ರಿ, ಚಕ್ರ–ಸೆಕ್ರ, ಚಳಿಗಾಲ–ಸಳಿಗಾಲ, ಚಿಮುಟ–ಸಿಮುಟ, ನೀಚ–ನೀಸ, ಸಿಕ್ಕದು–ಸಿಕ್ಕದು, ಚುರುಕು–ಸುರುಕು, ಹಂಬು–ಅಂಬು, ಹುಟ್ಟು–ಉಟ್ಟು, ಹೆಸರುಕಾಳು–ಅಸರುಕಾಳು, ಹಾಸಿಗೆ–ಅಸುಕೆ.

**ಸೋಲಿಗರ ಭಾಷೆಯಲ್ಲಿ ಚ>ಸ ಕರವಾಗುವಂತೆಯೇ, ಕನ್ನಡದ ಯ/ಎ/ಕಾರವಾಗಿ ಬದಲಾಗುವುದು ಕಂಡುಬರುತ್ತದೆ.**

ಯ/ಎ/>ದ: ಏನು–ದೇನ, ಎಲ್ಲಿಯ–ದೆಲ್ಲಯ, ಯಾವಕಡೆ–ದೆತ್ತವ, ಯಾವುದು–ದ್ಯಾವ್ದ, ಯಾರು–ದೇರ, ಯಾವತ್ತು–ದೇವತ್ತು, ಏಕೆ–ದೇಕ, ಎಲ್ಲಿ–ದೆಲ್ಲಿ, ಯೋಚನೆ–ಏಸನೆ, ಯಂತ್ರ–ಎಂತ್ರ, ಯಾವುದು–ಏವುದು, ಯತ್ನ–ಎತ್ನ.

**ಸೋಲಿಗ ಭಾಷೆಯಲ್ಲಿ ಅನುಸ್ವರ ಅಥವಾ ಮೂಗಿನ ಸಹಾಯದಿಂದ ಉಚ್ಛರಿಸುವ ಪದಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ.**

ಅವನು–ಅಂವ, ಇವನು–ಇಂವ, ಅಯ್ಯ–ಅಂಯ್ಯ, ಕಹಿ–ಕಂಯೀ/ಕಂಯ್, ಸಿಹಿ–ಸಿಂಯೀ/ಸಿಂಯ್, ನೋವು–ನುಂವು, ನಾಡಿನವನು–ನಾಡಂವ, ಔಷಧಿ–ಹೌಂಸ್ತಿ.

ಸೋಲಿಗ ಭಾಷೆಯಲ್ಲಿ 'ಶ' ಮತ್ತು 'ಷ' ಅಕ್ಷರಗಳ ಬಳಕೆ ಅಷ್ಟಾಗಿ ಕಂಡುಬರುವುದಿಲ್ಲ. ಆದರೆ ಅವುಗಳನ್ನೊಳಗೊಂಡ ಪದಗಳ ಬಳಕೆ ಇವೆ. ಅಂತಹ ಸಂದರ್ಭದಲ್ಲಿ ಅವುಗಳ ಸ್ಥಾನದಲ್ಲಿ 'ಸ' ಕಾರವನ್ನು ಬಳಸುತ್ತಾರೆ.

ಶರೀರ–ಸರೀರ, ಶಿಶು–ಸಿಸು, ಶಶಿ–ಸಸಿ, ಶಿವ–ಸಿವ, ಶಿಲ್ಪಿ–ಸಿಲ್ಪಿ, ಶಿರ–ಸಿರ, ದೇಶ–ದೇಸ, ವಿಷ–ಇಸ, ವಿಶ್ವಾಸ–ಇಸ್ವಾಸ, ವಿಷಯ–ಇಸಯ, ಶಕ್ತಿ–ಸಕುತಿ, ಇಷ್ಟ–ಇಸ್ಟ

ಸೋಲಿಗರ ಭಾಷೆಯಲ್ಲಿ ಮಹಾಪ್ರಾಣ ಅಕ್ಷರಗಳು ಬಂದಾಗ ಅವು ಅಲ್ಪಪ್ರಾಣಗಳಾಗಿ ಧ್ವನಿತವಾಗುತ್ತದೆ.

ಭಕ್ತಿ–ಬಕುತಿ, ಧರ್ಮ–ದರುಮ, ಶಕ್ತಿ–ಸಕುತಿ, ಖಡ್ಗ–ಕಡುಗ.

**ಸೋಲಿಗ ಭಾಷೆಯಲ್ಲಿ 'ಹ' ಕಾರದ ಸ್ಪಷ್ಟ ಉಚ್ಚರಣೆ ಕಂಡುಬರುವುದಿಲ್ಲ. ಇದರ ಕಡೆ 'ಅ' ಅಥವಾ ಇತರೆ ಕೆಲವೊಂದು ಸ್ವರಾಕ್ಷರಗಳನ್ನು ಬಳಸುತ್ತಾರೆ.**

ಹಿರಿಯ– ಹಿರಿಕ, ಹಿಂಬಿ–ಇಂಬಿ, ಹಾಲು–ಆಲು, ಹಸಿವು–ಅಸು, ಹೊಗಳು–ಉಬ್ಬಿಸು.

**ಸೋಲಿಗ ಭಾಷೆಯಲ್ಲಿ ಬಹುವಚನ ಬಳಕೆಯಲ್ಲಾಗುವ 'ಗ' 'ಗಳು' ಪ್ರತ್ಯಯದ ಬದಲಾಗಿ 'ಗ' ಅಥವಾ 'ಕ' ಪ್ರತ್ಯಯಗಳು ಕಂಡುಬರುತ್ತದೆ.**

ಮಕ್ಕಳು–ಮಕ್ಕ, ಕುರಿಗಳು–ಕುರಿಗ, ಜನರು–ಜೆನಗ, ಆನೆಗಳು–ಆನೆಗ, ಮರಗಳು–ಮರಗ, ನಾಡವರು–ನಾಡೆವೆಗ, ಹಣ್ಣುಗಳು–ಅಣ್ಣುಗ, ಹುಳಗಳು–ಉಳಗ, ಇರುವೆಗಳು–ಇರುಗ, ಗೆಣಸುಗಳು–ಗೆಳಸುಗ.

ಸೋಲಿಗರು ತಮ್ಮ ಭಾಷೆಯನ್ನು ವ್ಯಕ್ತಪಡಿಸಬೇಕಾದರೆ ಸೂಚನೆ, ಸಂಕೇತ ಮತ್ತು ಧ್ವನಿ ಅಥವಾ ನಾದಗಳ ಮುಖಾಂತರ ತಮ್ಮ ಅವಶ್ಯಕತೆಗಳಿಗೆ ತಕ್ಕಂತೆ ತಮ್ಮ ಭಾವನೆಗಳನ್ನು ಅಭಿವ್ಯಕ್ತಪಡಿಸುತ್ತಾರೆ

ಸೋಲಿಗರು ಸಾಮಾನ್ಯವಾಗಿ ಔಷಧಿಯ ಗಿಡಗಳನ್ನು ನೇರವಾಗಿ ಭಾಷೆಯ ಮೂಲಕ ಮತ್ತೊಬ್ಬರಿಗೆ ಹೇಳಿ ಅದನ್ನು ತೋರಿಸುವುದಿಲ್ಲ. ಸೂಚನೆ, ಸಂಕೇತ ಮತ್ತು ಧ್ವನಿ ಅಲ್ಲದೇ ಅದನ್ನು ಗೊತ್ತುಪಡಿಸುವಾಗ ಕಾಡಿನ ಒಳಗೆ ಕರೆದುಕೊಂಡು ಹೋಗಿ ಕಲಿಯುವವರ ಹಿಂದೆ ಅಥವಾ ಪಕ್ಕದಲ್ಲಿ ಬರುವಾಗ ಆ ತೋರಿಸುವ ಔಷಧಿಯ ಗಿಡದ ಗುರುತನ್ನು ಸನ್ನೆಯ ಮೂಲಕ ಕಾಲಿನಲ್ಲಿ ನೆಲಕ್ಕೆ ಒದ್ದು ಆ ಗಿಡದ ಪಕ್ಕದಲ್ಲಿ ಸ್ವಲ್ಪ ಮಣ್ಣು ಗುರುತು ಅಥವಾ ಹೆಜ್ಜೆಯ ಗುರುತು ಹಾಕಿ ಮುಂದೆ ಹೋಗುತ್ತಾರೆ. ಕಲಿಯುವವರು ಬಹಳ ಜಾಗರೂಕತೆಯಿಂದ ನೋಡುತ್ತಾ, ಗಮನಿಸುತ್ತಾ ಕಲಿಯಬೇಕಾದ ಔಷಧಿಯ ಗಿಡದ ಗುರುತನ್ನು ಪತ್ತೆ ಹಚ್ಚುತ್ತಾರೆ. ಈ  ಕಲೆಯು ಸೋಲಿಗರಲ್ಲಿ ಹೆಚ್ಚಾಗಿದೆ.

ಸೋಲಿಗರ ಕನ್ನಡ ಉಚ್ಚಾರ ಅಷ್ಟೊಂದು ಸುಲಭವಾಗಿ ಅರ್ಥವಾಗದಿದ್ದರೂ ಅವರ ಭಾಷೆ ಕನ್ನಡ ಎಂಬುದರಲ್ಲಿ ಅನುಮಾನವೇ ಇಲ್ಲ. ಇವರ ಕನ್ನಡ ಉಚ್ಚಾರದಲ್ಲಿ ತಮಿಳು ಭಾಷೆಯ ಪ್ರಭಾವವು ಸ್ಪಷ್ಟವಾಗಿ ಗೋಚರಿಸುವುದು. ಉತ್ತರ ಕನ್ನಡದ ಜನರು ಮಾತನಾಡುವಂತಹ ಕನ್ನಡದಂತೆ ಸೋಲಿಗರ ಕನ್ನಡದಲ್ಲಿಯೂ ಅನುನಾಸಿಕತೆ ಪ್ರಧಾನವಾಗಿ ಗೋಚರಿಸುವುದು. ಉದಾ: ಅವನು–ಅವ, ಇವನು–ಇವ, ಅವಳು–ಅವಿ ಇತ್ಯಾದಿ ಸೋಲಿಗರ ಕನ್ನಡದಲ್ಲಿ ಬಹುವಚನ ಪ್ರತ್ಯಯಗಳು ತನ್ನದೇ ಆದ ರೀತಿಯಲ್ಲಿ ಬಳಕೆಯಲ್ಲಿವೆ. ಉದಾ: ಮಕ್ಕಳು–ಮಕ್ಕ, ಮರಗಳು–ಮರಗ, ಆನೆಗಳು–ಆನೆಗ, ಎತ್ತುಗಳು–ಎತ್ತುಗ ಇತ್ಯಾದಿ. ಸೋಲಿಗರ ಕನ್ನಡದ ಶಬ್ದಕೋಶವು ತನ್ನದೇ ಆದ ರೀತಿಯಲ್ಲಿ ಬಳಕೆಯಲ್ಲಿದೆ. ಉದಾ: ಕೆರೆ–ಕೆರಿ, ಮರೆ–ಮರಿ, ತೆರೆ–ತೆರಿ, ಇವರ ಕನ್ನಡದಲ್ಲಿ ಶಕಟ ರೇಫ ಮತ್ತು ರೇಫಗಳು ಹಳೆಗನ್ನಡದಂತೆ ಸ್ಪಷ್ಟವಾಗಿವೆ. ಮುಲೆ–ಮುರಿ, ಅವೆ–ಅರೆ, ಕೋವೆ–ಕೋಳಿ, ಮವೆ–ಮಳೆ, ಚತುರ್ಥಿ ವಿಭಕ್ತಿ ಪ್ರತ್ಯಯ–ಕ್ಕೆ–ಗೆ, ಎಂಬುವು–ಕ,ಗ, ಆಗಿ ಬಳಕೆಯಲ್ಲಿವೆ. ಉದಾ: ಕಾಡಿಗೆ–ಕಾರಿಗ, ಊರಿಗೆ–ಊರಿಗ, ಗಿಡಕ್ಕೆ–ಗಿಡಕ್ಕ, ಮರಕ್ಕೆ–ಮರಕ್ಕ ಇತ್ಯಾದಿ ಸೋಲಿಗರ ಕನ್ನಡದಲ್ಲಿ ಕನ್ನಡದ ಯಾವ

ಉಪಭಾಷೆಯಲ್ಲಿಯೂ ಕಂಡು ಬರದ ಭೂತಕಾಲಸೂತಕ ಪ್ರತ್ಯಯವು ಬಳಕೆಯಲ್ಲಿವೆ. ಉದಾ: ಹೋದೆ-ಹೋನೆ, ಹೋದೆವು-ಹೋನೋ, ಬಂದೆ-ಬನ್ನೆ, ಇತ್ಯಾದಿ ಹೀಗೆ ಸೋಲಿಗ ಭಾಷೆಯು ತನ್ನದೇ ಆದ ಉಪಭಾಷೆಯನ್ನು ಸಂಪಾದಿಸಿಕೊಂಡಿರುವ ಉಪಭಾಷೆಯಾಗಿದೆ.

The Soliga speak the Sholaga Language (Soliganudi) as a mother tongue. A member of the Dravidian Family. It is most closely related to Kannada with several Tamil influences"[16] (Buchanan Francis:1870).

ಹೀಗೆ ಸೋಲಿಗರ ಸೋಲಿಗ ನುಡಿ ಭಾಷೆಯ ಬಗ್ಗೆ ತಿಳಿಸಿದ್ದಾರೆ. ಪ್ರಸ್ತುತ ಚಾಮರಾಜನಗರ ಜಿಲ್ಲೆಯ ಸುತ್ತಮುತ್ತಲ ಅರಣ್ಯ ಹಾಗೂ ಅರಣ್ಯದಂಚಿನಲ್ಲಿ ಹಾಗೂ ಮೈಸೂರು ಜಿಲ್ಲೆಯ ಅರಣ್ಯ ಹಾಗೂ ಅರಣ್ಯದ ಅಂಚಿನಲ್ಲಿರುವ ಸೋಲಿಗರು ಭಾಷೆಯನ್ನು ಮಾತನಾಡುವ ಮೂಲಕ ಮುಂದಿನ ಪೀಳಿಗೆಗೂ ಉಳಿಸಿಕೊಂಡುಬರುತ್ತಿದ್ದಾರೆ. ಇದನ್ನೇ ಈಗ ಸೋಲಿಗರು ನಮ್ಮ ಭಾಷೆ 'ಸೋಲಿಗ ನುಡಿ' ಎಂದು ಕರೆಯುವುದರ ಮೂಲಕ ಪ್ರಾಥಮಿಕ ಪಠ್ಯಗಳಲ್ಲಿ ಸರಕಾರದ ವತಿಯಿಂದ ಹಲವು ಕಡೆ ಸೋಲಿಗ ನುಡಿಯ ಮೂಲಕ ಪಾಠ ಹೇಳಿಕೊಡುತ್ತಾರೆ. ಸೋಲಿಗರ ಶಿಕ್ಷಕರ ಕೈಪಿಡಿ ಪುಸ್ತಕವೂ ಸಹ ಸರಕಾರದ ವತಿಯಿಂದ ಹೊರಬಂದಿದೆ. ಆದರೆ ಈ ಪುಸ್ತಕವು ಸೋಲಿಗರ ನಿತ್ಯ ಜೀವನ, ಪರಿಸರ, ಸಾಮಾಜಿಕ ವ್ಯವಸ್ಥೆ, ಅವರ ಬದುಕು, ಪ್ರಾಣಿ, ಪಕ್ಷಿ, ಜೀವ, ಜಂತುಗಳ ಪರಿಚಯ ಹಾಗೂ ಸೋಲಿಗರಿಗೂ ಪರಿಸರಕ್ಕೂ ಇರುವ ಸಂಬಂಧವನ್ನು ಈ ಪುಸ್ತಕದಲ್ಲಿ ಕಾಣಬಹುದು. ಈ ಸೋಲಿಗ ನುಡಿ ಪುಸ್ತಕದ ಮೂಲಕ ಎಲ್ಲಾ ಆಶ್ರಮ ಶಾಲೆಗಳಲ್ಲಿಯೂ ಸಹ ಬೋಧನೆ ಮಾಡಿದರೆ ಮಾತೃಭಾಷೆಯಯಲ್ಲಿ ಶಿಕ್ಷಣ ನೀಡಿದಂತಾಗುತ್ತದೆ. ಜೊತೆಗೆ ಸೋಲಿಗ ಮಕ್ಕಳಿಗೆ ಭಾಷೆಯ ಮೂಲಕ ಪಾಠ ಹೇಳಿ ಕೊಡುವುದರ ಮೂಲಕ ಅವರ ಆತ್ಮವಿಶ್ವಾಸವನ್ನು ಹೆಚ್ಚಿಸಿದಂತೆ ಆಗುತ್ತದೆ. ಇದರಿಂದ ಸೋಲಿಗ ಮಕ್ಕಳು ಕಲಿಕೆಯಲ್ಲಿ ಮುಂದುವರೆದು ಹೆಚ್ಚಿನ ಓದಿನ ಕಡೆ ಗಮನಕೊಟ್ಟು ಉನ್ನತ ವ್ಯಾಸಂಗ ಮಾಡುವುದರ ಮೂಲಕ ಸಮುದಾಯದವರಿಗೂ ಉದ್ಯೋಗ ದೊರಕಿ ಆರ್ಥಿಕ ಸಬಲತೆಯನ್ನು ಕಂಡುಕೊಳ್ಳಬಹುದಾಗಿರುತ್ತದೆ. ಇದರ ಮೂಲಕ ಸೋಲಿಗ ಮಕ್ಕಳು ಹಾಗೂ ಬುಡಕಟ್ಟು ಮಕ್ಕಳು ಶಾಲೆಯಿಂದ ದೂರ ಉಳಿಯುವುದನ್ನು ತಪ್ಪಿಸಬಹುದು ಜೊತೆಗೆ ಅವರ ಭಾಷೆಯನ್ನು ಬೆಳೆಸಿ, ಪೋಷಿಸಿದಂತಾಗುತ್ತದೆ.

ಸೋಲಿಗರ ಭಾಷೆಯನ್ನು ಕ್ಷೇತ್ರಕಾರ್ಯದ ಮೂಲಕ, ಸಮುದಾಯದಲ್ಲಿರುವ ಹಿರಿಯರಿಂದ ಕೇಳಿ ಮಾಹಿತಿಯನ್ನು ಪಡೆದು ಅದನ್ನು ಸಮುದಾಯದಲ್ಲಿ ದಿನನಿತ್ಯ ಬಳಸುವ ಪದಗಳು, ನಾಮ ಪದ, ಪ್ರಾಣಿ-ಪಕ್ಷಿಗಳು, ಮರ-ಗಿಡಗಳು, ಬಟ್ಟೆ, ಆಭರಣಗಳು, ವಸ್ತುಗಳು ಇನ್ನಿತರ ಪ್ರಕೃತಿಗೆ ಸಂಬಂಧಿಸಿದ ವಸ್ತುಗಳನ್ನು ಸೋಲಿಗರ 'ಸೋಲಿಗ ನುಡಿ' ಭಾಷೆಯಲ್ಲಿಯೇ ತಿಳಿಸಲಾಗಿದೆ.(ಅನುಬಂಧವನ್ನು ನೋಡಿ)

**ಕೊನೆಟಿಪ್ಪಣಿ**

೧. ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್, ೧೯೩೦, '*The Mysore Tribes and Castes*' ಪು. ೫

೨. ಮೊಗಳ್ಳಿ ಗಣೇಶ್, ೨೦೦೬, *ಮೌಖಿಕ ಪರಂಪರೆಯ ದೇಶಿ ಕಥನಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೧೫

೩. ಶಿರಾಜಪ್ಪ ಎಸ್, ೨೦೧೩, *ಮಹದೇಶ್ವರ ಚರಿತ್ರೆ*, ಸಪ್ನ ಬುಕ್‌ಹೌಸ್, ಮೈಸೂರು, ಪು.೩೦–೪೦

೪. ಸೋಮಸುಂದರಮ್ ಎಚ್ ಎನ್, ಜಡೇಗೌಡ ಎಂ, ರೀನಾ ಎನ್, ವಾಸುಕಿ ಬಿ ಕೆ, ವೀರಭದ್ರಸ್ವಾಮಿ, ಮತ್ತು ಕೃಷ್ಣ, ೨೦೦೬, *ಸೋಲಿಗಾಸ್ ಡಾಟಾ*, ಅನ್‌ಪಬ್ಲಿಶ್ಡ್, ವಿವೇಕಾನಂದ ಗಿರಿಜನ ಕೇಂದ್ರ, ಬಿಳಿಗಿರಿರಂಗನ ಬೆಟ್ಟ, ಪು. ೭

೫. ಕೇಶವನ್ ಪ್ರಸಾದ್ ಕೆ (ಸಂ), ೨೦೦೫, *ಸೋಲಿಗರು ಹಾಡಿದ ಬಿಳಿಗಿರಿರಂಗನ ಕಾವ್ಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೪

೬. ಸುನಂದಮ್ಮ ಎನ್, *ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಬುಡಕಟ್ಟು ಜನಾಂಗದ ಅಭಿವೃದ್ಧಿಗೆ ಕರ್ನಾಟಕ ಸರಕಾರದ ಕಾರ್ಯಕ್ರಮಗಳು: ಒಂದು ವಿಮಾರ್ಶಾತ್ಮಕ ಅಧ್ಯಯನ*, ೨೦೧೧, ಪ್ರಕಟಿತ ಪಿಎಚ್ ಡಿ, ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೪೪೬

೭. ಬೋರಲಿಂಗಯ್ಯ ಹಿ ಚಿ, ೨೦೧೧, *ಒಂದು ಬುಡಕಟ್ಟಿನ ಲೋಕದೃಷ್ಟಿ*, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು ಪು. ೩೩

೮. Nanjundaiah H V, and Anantha Krishna Iyer L K, 1930, The *Mysore Tribes and Castes,* Vol-3-4, Mysore University, Mysore, P. 88

೯. Edgar Thurston, Rangachari K,1909, *Caste and Tribes of Southern India*, Vol.4 – 6, Asian Educational Serices, New Delhi, P. 379

೧೦. Morab S G, 1977, The Soliga of The B R Hills, An Anthropology Survey Of India, Government of India, P. 6

೧೧. Luiz AAD: *Tribs of Mysore* 1963, P. 180

೧೨. Morab S G, 1977, The Soliga of The B R Hills, An Anthropology Survey Of India, Government of India, P. 8

೧೩. ಕೇಶವನ್ ಪ್ರಸಾದ್ ಕೆ (ಸಂ), ೨೦೦೫, *ಸೋಲಿಗರು ಹಾಡಿದ ಬಿಳಿಗಿರಿರಂಗನ ಕಾವ್ಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೪

೧೪. ಅಂಗಡಿ ಎಸ್ ಎಸ್, ೨೦೧೧, *ಕರ್ನಾಟಕ ಬುಡಕಟ್ಟು ಭಾಷೆ–ಉಪಭಾಷೆ*, ಕಲ್ಯಾಣ ಪ್ರಕಾಶನ, ಬೆಂಗಳೂರು, ಪು. ೨೩

೧೫. ಕೆಂಪೇಗೌಡ ಕೆ, ೨೦೧೧, *ಭಾಷಾ ವಿಜ್ಞಾನ ಪರಿಚಯ*, ನವಭಾರತಿ ಪ್ರಕಾಶನ, ಮೈಸೂರು. ಪು. ೩೫೩–೩೫೪.

೧೬. Buchanan Francis, 1807, A Journey from Madras through the Countries of Mysore, Canara, and Malabar: (Cambridge Library Collection-South Asian History) Pub.Cambridge University Press. 2, p 590.

೧೭. Morab S G, 1977, *The Soliga of The B R Hills*, An Anthropology Survey Of India, Government of India, P. 6

## ಅಧ್ಯಾಯ ಮೂರು

# ಸೋಲಿಗರು ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆ

೩.೧. ಪೋಡು, ಪೋಡಿನ ವ್ಯವಸ್ಥೆ (ಮನೆಗಳ ರಚನೆ)

೩.೨. ವಿವಾಹ, ಜನನ ಮತ್ತು ಮರಣ

೩.೩. ಸೋಲಿಗರು ಬುಡಕಟ್ಟಿನ ಕುಲಗಳು

೩.೪. ಯಜಮಾನ, ಕೋಲುಕಾರ, ಪಟ್ಟೆಗಾರ, ದಳವಾಹಿ

೩.೫. ನ್ಯಾಯ ಪದ್ಧತಿ

ಅಧ್ಯಾಯ ಮೂರು

# ಸೋಲಿಗರು ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆ

## ೩.೧ ಪೋಡು, ಪೋಡಿನ ವ್ಯವಸ್ಥೆ (ಮನೆಗಳ ರಚನೆ)

ಪ್ರತಿಯೊಬ್ಬ ಮಾನವನಿಗೂ ವಾಸಿಸಲು ಯೋಗ್ಯವಾದ ಮನೆಯೊಂದು ಅತ್ಯವಶ್ಯಕವಾಗಿ ಬೇಕು. ಆದಿಮಾನವ ಇಡೀ ಕಾಡನ್ನೇ ತನ್ನ ಮನೆ ಎಂದು ಭಾವಿಸಿ ವಾಸ ಮಾಡುತ್ತಿದ್ದ ಕಾಲವೊಂದಿತ್ತು. ಹಿಂದೆ ಆದಿಮಾನವರು ಮರದ ಪೊಟರೆಗಳಲ್ಲಿ, ಗುಹೆಯಲ್ಲಿ, ಬಂಡೆಯ ಸಂದುಗಳಲ್ಲಿ, ಮರದ ಮೇಲೆ ವಾಸಿಸುತ್ತಿದ್ದರು. ತದ ನಂತರದಲ್ಲಿ ಇವುಗಳು ಹೇರಳವಾಗಿ ದೊರೆಯದೇ ಹೋದಾಗ ಚಳಿ, ಗಾಳಿ, ಮಳೆಗೆ ತನ್ನ ದೇಹದ ರಕ್ಷಣೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಮರ ಹಾಗೂ ಸೊಪ್ಪುಗಳಿಂದ ಗುಡಿಸಲು ಕಟ್ಟಿಕೊಂಡು ವಾಸ ಮಾಡುತ್ತಿದ್ದರು.

**ಪೋಡು:** ಸೋಲಿಗರು ಗುಂಪಾಗಿ ವಾಸಿಸುವ ಸ್ಥಳವನ್ನು **'ಪೋಡು'** ಎಂದು ಕರೆಯುತ್ತಾರೆ. ಸೋಲಿಗರು ತಮ್ಮ ಮನೆಯನ್ನು **'ಗುಡ್ಲು'** ಎಂದು ಕರೆಯುತ್ತಾರೆ. ಈ ಗುಡ್ಲನ್ನು **'ಹುಲ್ಲುಮನೆ'** ಎಂದು ಅವರ ಭಾಷೆಯಲ್ಲಿ ಕರೆಯುತ್ತಾರೆ. ಕಾಡಿನಲ್ಲಿ ಸಿಗುವ ಹುಲ್ಲುಗಳಾದ ಬಾಣೆಹುಲ್ಲು, ಸೋಗೇಹುಲ್ಲು ಇನ್ನಿತರ ಹುಲ್ಲುಗಳನ್ನು ತಂದು ಹುಲ್ಲುಮನೆಯನ್ನು ಕಟ್ಟಿಕೊಳ್ಳುತ್ತಾರೆ. ಇದನ್ನೇ ಮೊರಾಬ್ ಅವರು ಸೋಲಿಗರ 'ಗುಡ್ಲು ಮನೆ' ಎಂದು ಕರೆದಿರುವುದು. ಸೋಲಿಗರು ತಮ್ಮ ಹುಲ್ಲು ಮೆನೆ(ಮನೆ)ಯನ್ನು ಕಟ್ಟಿಕೊಳ್ಳಲು ತಮ್ಮದೇ ಜ್ಞಾನವನ್ನು ಉಪಯೋಗಿಸುತ್ತಾರೆ. ಒಂದು ಪೋಡು ಎಂದರೆ ಹತ್ತಾರು ಗುಡಿಸಲುಗಳ ಸಮೂಹ. ಹಿಂದೆ ಸೋಲಿಗರು ವ್ಯವಸಾಯದ ಭೂಮಿ ಹಾಗೂ ವಾಸಿಸುತ್ತಿದ್ದ ಗುಡಿಸಲುಗಳು ಒಂದೇ ಕಡೆ ಇದ್ದವು. ಕೃಷ್ಣ ಅಯ್ಯರ್‌ರವರು ತಮ್ಮ ಪುಸ್ತಕವಾದ "The Mysore Tribes and Castes"ನಲ್ಲಿ 'ಪೋಡು' ಎಂಬ ಪದವನ್ನು ಗ್ರಾಮ ಎಂಬ ಅರ್ಥದಲ್ಲಿ ಬರೆಯುತ್ತಾರೆ. ಆದರೆ, ಪೋಡಿಗೆ ಸಂಬಂಧಿಸಿದ ಹೆಚ್ಚಿನ ವಿವರಗಳನ್ನು ಮೊರಾಬ್ ಅವರು ತಮ್ಮ ಪುಸ್ತಕವಾದ 'The Soliga of Biligiri Rangana Hills' –ಬರೆಯುತ್ತಾ, ಹೊಲಗಳಲ್ಲಿ ಬೆಳೆದ ಗಿಡಗಂಟಿಗಳನ್ನು ಸುಟ್ಟು, ಕೆತ್ಲು ಬೇಸಾಯ ಅಥವಾ ಕುಮ್ರಿ ಬೇಸಾಯಕ್ಕೆ ಸಂಬಂಧಿಸಿದ್ದೆಂದು 'ಪೋಡು' ಎಂಬ ಪದವನ್ನು ಅರ್ಥೈಸುತ್ತಾರೆ.

'The Mysore Tribes and Castes' ಪುಸ್ತಕದಲ್ಲಿ, ಅನಂತಕೃಷ್ಣ ಅಯ್ಯರ್ ಹೀಗೆ ಹೇಳಿದ್ದಾರೆ "There huts like those of many of the jungle tribes are firm by ones. Which consist of bamboos with both ends stuck in to the ground. So as to, form an arch which is covered with plantain leaves the shlings, who inhabit.The jungles of the coimbatore forests near the Mysore Frontier, comparatively better huts for their residence."[1]

Saradindu Bose., 1991, Shifting Cultivation in India, Director General, Anthropological Survey of India, In Manipur the Kukis pay tribute to the village Chief for cultivation, who is the owner of all land in the village. Among some group of Naga people, hill slopes belong to the clan. However, badly speaking there are three categories of land ownership patterns among Shifting Cultivation.

1. land owned by the village collectively
2. land owned by the individual families
3. Land owned by the chief or siem or clan, who distributes it among individuals.[2] (Saradindu bose: 1991:261)

ಸೋಮಸುಂದರಂ ಎಚ್ ಎನ್., ಅವರು **'ಸೋಲಿಗ ಸಿರಿ'** ಪುಸ್ತಕದಲ್ಲಿ "ಸೋಲಿಗರನ್ನು 'ನೆಲೆಸಿದ್ದಾರೆ' ಎಂದು ಹೇಳಲು ಕಷ್ಟ ಏಕೆಂದರೆ, ಸೋಲಿಗರು ಅರೆಅಲೆಮಾರಿ ಜನಾಂಗವಾಗಿದ್ದು, ಆ ಪ್ರದೇಶಗಳಿಗಿಂತ ಬಹುದೂರಕ್ಕೆ ಹೋಗದಿದ್ದರೂ ಅಲ್ಲಲ್ಲಿಯೇ ವಲಸೆ ಹೋಗುತ್ತಿದ್ದರು"[೩] ಎಂಬ ಮಾಹಿತಿಯನ್ನು ತಿಳಿಸಿದ್ದಾರೆ. ಸೋಲಿಗರು ಹಿಂದೆ ವಲಸೆ ಹೋಗುವುದಕ್ಕೆ ಸಂಬಂಧಿಸಿದಂತೆ, ಹಲವಾರು ಕಾರಣಗಳಿವೆ.

- ವಲಸೆ ಅವರ ರಕ್ತದಲ್ಲಿಯೇ ಬಂದಿರುವುದು ಮತ್ತು ಸೋಲಿಗರಿಗೆ ಮನದಿಚ್ಛೆ ಬಂದಾಗ ವಲಸೆ ಹೊರಡುವುದು.
- ೪–೫ ವರ್ಷ ಒಂದು ಕಡೆ ಇದ್ದು, ಕಳಕೊಟ್ಲು ಬೇಸಾಯ ಮಾಡಿ ನೆಲದ ಫಲವತ್ತತೆ ಸ್ವಾಭಾವಿಕವಾಗಿಯೇ ಕಡಿಮೆಯಾದರೆ ವಲಸೆ ಹೋಗುತ್ತಿದ್ದರು.
- ಸೋಲಿಗರಿಗೆ ಯಾವುದಾದರೂ ಸ್ಥಳ ಆಗಬಾರದಿದ್ದರೆ ವಲಸೆ ಹೋಗುತ್ತಾರೆ. ಅಂದರೆ ಆ ಸ್ಥಳದಲ್ಲಿ ಏನಾದರೂ ಅನಾಹುತ ಸಂಭವಿಸಿದಾಗ,

- 'ಗೋರ'(ಮಾರಕ ಕಾಯಿಲೆ) ಸಂಭವಿಸಿದಾಗ ವಲಸೆ ಹೋಗುತ್ತಿದ್ದರು. **'ಗೋರ'** ಎಂದರೆ ಸಾಮಾನ್ಯವಾಗಿ ಅಂದಿನ ಕಾಲದಲ್ಲಿ ಕಾಡುತ್ತಿದ್ದ ಸಿಡುಬು, ಪ್ಲೇಗು, ಕಾಲರ ಮುಂತಾದುವು. ಹಿರಿಯ ಸೋಲಿಗರು ಇಂದಿಗೂ 'ಗೋರ'ವನ್ನು ನೆನಪಿಸಿಕೊಳ್ಳುತ್ತಾರೆ. "ಸೋಲಿಗರು ಪ್ರಕೃತಿಯೊಂದಿಗೆ ಅನ್ಯೋನ್ಯತೆಯಿಂದ ಬದುಕು ಸಾಗಿಸುತ್ತಾ ಬಂದವರು. ತಮ್ಮ ವಾಸಕ್ಕಾಗಿ ಕಟ್ಟಿಕೊಳ್ಳುವ ಗುಡಿಸಲುಗಳನ್ನು ಸೋಲಿಗರ ಭಾಷೆಯಲ್ಲಿ 'ಹುಲ್ಲುಮನೆ' ಎಂದು ಕರೆಯುತ್ತಾರೆ. ಇವುಗಳನ್ನು ಸರಳವಾಗಿ ಕಾಡಿನಲ್ಲಿ ಸಿಗುವ ವಸ್ತುಗಳಿಂದ ಕಡಿಮೆ ಸಮಯದಲ್ಲಿ ನಿರ್ಮಾಣ ಮಾಡುತ್ತಾರೆ. ಚಾಮರಾಜನಗರ ಜಿಲ್ಲೆ, ಮೈಸೂರು, ಕೊಡಗು ಇನ್ನೂ ಮುಂತಾದ ಕಡೆಗಳಲ್ಲಿ ಸೋಲಿಗರು ಗುಡಿಸಲು ಮನೆ(ಗುಡ್ಲು)ಯಲ್ಲಿಯೇ ವಾಸವಾಗಿದ್ದಾರೆ." ಉದಾ: ಕೆರೆದಿಂಬ, ಗೊಂಬೆಗಲ್ಲು, ಬೇಡಗುಳಿ, ಕಾಡಿನ ಮಧ್ಯ ಭಾಗದಲ್ಲಿ ಮತ್ತು ಕಾಡಿನ ಅಂಚಿನಲ್ಲಿರುವ ಸೋಲಿಗರು ಈಗಲೂ ಸಹ ಗುಡಿಸಲುಗಳಲ್ಲಿಯೇ ವಾಸಿಸುತ್ತಾರೆ.

ಪೋಡು ಎಂಬ ಪದದ ಅರ್ಥ ಒಬ್ಬೊಬ್ಬರ ದೃಷ್ಟಿಯಲ್ಲಿ ಬೇರೆ–ಬೇರೆಯಾದರೂ ಇಂದಿಗೂ ಸೋಲಿಗರು 'ಪೋಡು', ಕಾಲೋನಿ, ಹಾಡಿ ಸೋಲಿಗರ ವಾಸ ಸ್ಥಳವಾಗಿರುವುದು ಕಂಡು ಬಂದಿದೆ.

**ಪೋಡು ಕಟ್ಟಲು ಸೋಲಿಗರು ತಮ್ಮದೇ ಆದ ನಂಬಿಕೆ ಮತ್ತು ಜ್ಞಾನವನ್ನು ಉಪಯೋಗಿಸುತ್ತಾರೆ**

- **ಶಕುನ ಕಾಣುವುದು:** ರಾತ್ರಿ ವೇಳೆ ಆ ಸ್ಥಳದ ಬಗ್ಗೆ ಕನಸು ಬಿದ್ದು, ಆ ಜಾಗ ಸರಿ ಇದೆಯೇ ಇಲ್ಲವೇ ಎಂದು ತಮ್ಮ ಸಮುದಾಯದಲ್ಲಿ ಅಥವಾ ಮನೆಯಲ್ಲಿ ಸತ್ತಿರುವ ವ್ಯಕ್ತಿಗಳು ಮತ್ತು ದೇವರುಗಳ ಮೂಲಕ ತಿಳಿದುಕೊಳ್ಳುವುದು.

- **ಹಳ್ಳುಶಾಸ್ತ್ರ:** ತಮ್ಮಡಿ ಅಥವಾ ಹಿರಿಯರು ಕಾಡಿನಲ್ಲಿ ಸಿಗುವ ಸಣ್ಣ-ಸಣ್ಣ ಕಲ್ಲುಗಳನ್ನು ತೆಗೆದುಕೊಂಡು ಮಂತ್ರಿಸಿ, ಹಳ್ಳುಬಿಟ್ಟು ಆ ಜಾಗ ಸರಿ ಇದೆಯೋ ಇಲ್ಲವೇ ಎಂಬುದನ್ನು ತಿಳಿಯುವುದು.

- **ಕಾಣಿಕೆ ಕಟ್ಟುವುದು:** ಹೆಚ್ಚೆಂದರೆ ೨೫ ಪೈಸೆ ಅಥವಾ ೧ ೧/೨ ರೂಪಾಯಿಯನ್ನು ತೆಗೆದುಕೊಂಡು ಒಂದು ಬಿಳಿ ಬಟ್ಟೆಯ ತುಂಡಿನಲ್ಲಿ ಕಟ್ಟಿ, ತಮ್ಮ ಮನೆದೇವರ, ಸಗ್ಗದವರ ಹೆಸರೇಳಿ, ಕಾರ್ಯ ಒಳ್ಳೆಯದು ಮಾಡು ಎಂದು, ನಂತರ ನಿನಗೆ ಕಾಣಿಕೆ ತೀರಿಸುತ್ತೇವೆ ಎನ್ನುವ ಪದ್ಧತಿ.

- **ಕಲ್ಲು ಗುಡ್ಡೆ:** ಸೋಲಿಗರು ಒಂದು ಕಲ್ಲು ಗುಡ್ಡೆ ಮಾಡಿ, ಒಂದರ ಮೇಲೊಂದರಂತೆ ಕಲ್ಲು ಜೋಡಿಸಿ ಇಟ್ಟು ಅದರ ಮೇಲೆ ಬಿದಿರಿನ ಕುಕ್ಕೆಯನ್ನು ಮುಚ್ಚಿ, ಇಡೀ ರಾತ್ರಿ ಹಾಗೆ ಬಿಟ್ಟು ಬೆಳಿಗ್ಗೆ ತೆಗೆದು ನೋಡಿದಾಗ ಆ ಕಲ್ಲು ಚೆಲ್ಲಾಡದೆ ಹಾಗೆಯೇ ಇದ್ದರೆ ಆ ಜಾಗ ಸರಿ ಇದೆ ಎಂದು ತಿಳಿಯುತ್ತಾರೆ.

ಹೀಗೆ ಸೋಲಿಗರು ತಮ್ಮ ಪೋಡು ನಿರ್ಮಾಣ ಮಾಡುವುದಕ್ಕೂ ಮೊದಲು ಸ್ಥಳದ ಪರಿಶೀಲನೆಯನ್ನು ಸಮುದಾಯದವರೆಲ್ಲ ಸೇರಿಕೊಂಡು ತಿಳಿದುಕೊಳ್ಳುತ್ತಾರೆ. ತಮ್ಮದೇ ಆದ ನಂಬಿಕೆ ಮತ್ತು ಪಾರಂಪರಿಕ ಜ್ಞಾನದ ಮೂಲಕ ಪೋಡಿನ ಸ್ಥಳದ ಬಗ್ಗೆ ತಿಳಿದುಕೊಂಡು, ನಂತರ ಆ ಸ್ಥಳವು ಅವರಿಗೆ ಆ ಗುಂಪಿನಲ್ಲಿ ಯಾರೊಬ್ಬರಿಗಾದರೂ ಕನಸಿನಲ್ಲಿ ದೇವರು ಅಥವಾ ಅವರ ಸಗ್ಗದವರು ಬಂದು ಸ್ಥಳವು ನಿಮಗೆ ಒಳ್ಳೆಯದಾಗುತ್ತದೆ ಎಂದು ಹೇಳಿದಾಗ ಮಾತ್ರ ಆ ಪೋಡಿನ ನಿರ್ಮಾಣವನ್ನು ಎಲ್ಲರೂ ಸೇರಿ ಮಾಡುತ್ತಾರೆ. ಒಂದುವೇಳೆ ಆ ಸ್ಥಳವು ಇವರಿಗೆ ಸರಿಯಾಗಿರುವುದಿಲ್ಲವೆಂದು ಕನಸಿನಲ್ಲಿ ಬಂದು ತಿಳಿಸಿದಾಗ ಸಮುದಾಯದವರು ಮತ್ತೊಂದು ಸ್ಥಳದ ಪರಿಶೀಲನೆಯನ್ನು ಮಾಡಲು ಮುಂದಾಗುತ್ತಾರೆ.

## ಸೋಲಿಗರ ಮನೆಯ ರಚನೆ

ಸಾಮಾನ್ಯವಾಗಿ ಸೋಲಿಗರು ಸ್ಥಳ ಪರಿಶೀಲಿಸುವಾಗ ಎತ್ತರವಾದ ಸ್ಥಳ ಮತ್ತು ಪಕ್ಕದಲ್ಲಿಯೇ ನೀರು ಹರಿಯುವ ಜಾಗ ಹಾಗೂ ಪ್ರಾಣಿ-ಪಕ್ಷಿಗಳಿಂದ ಯಾವುದೇ ತೊಂದರೆಯಾಗದಂತಿರುವ ಸ್ಥಳವನ್ನು ನೋಡಿ ಆಯ್ಕೆ ಮಾಡಿಕೊಂಡು ಅಂತಹ ಜಾಗದಲ್ಲಿ ಹುಲ್ಲುಮನೆಯನ್ನು ಕಟ್ಟುತ್ತಾರೆ.

**ಹುಲ್ಲು ಮನೆ:** ಹುಲ್ಲು ಮನೆಯನ್ನು ಕಟ್ಟಲು ಸೋಲಿಗರು ಕಾಡಿನಿಂದ ನಾಲ್ಕು ತರಹದ ಮರಗಳನ್ನು ತರುತ್ತಾರೆ. ಸೆಳೆಮರ, ಕಾತಾಳೆಮರ, ಕಕ್ಕೆಮರ, ಕಲ್ಲುಮುತ್ತುಗಮರ, ಕೂಗಿಮರ- ಈ ಮರಗಳನ್ನು ಹೆಚ್ಚಾಗಿ ಬಳಸುತ್ತಾರೆ. ಕಾರಣ ಈ ಮರಗಳು ಗಟ್ಟಿಯಾಗಿದ್ದು, ಬೇಗ ಗೆದ್ದಲು ಬರುವುದಿಲ್ಲ ಹಾಗು ಕುಟ್ಟ ಹಿಡಿಯುವುದಿಲ್ಲ, (ಮರದ ಒಳಗೆ ಬಿರುಕು ಬಂದು ಪುಡಿಯಾಗಿ ಬೇಗ ಬೀಳುವುದು) ಹಾಗಾಗಿ ಹೆಚ್ಚಿನ ದಿನಗಳ ಕಾಲ ಗುಡಿಸಲು ಬೀಳದಿರಲೆಂದು ಈ ಮರಗಳನ್ನು ಉಪಯೋಗಿಸುತ್ತಾರೆ.

ಎರಡು ಕಂಬದ ಮನೆ

ನಾಲ್ಕು ಕಂಬದ ಮನೆ

ಆರು ಕಂಬದ ಮನೆ

ಒಂಬತ್ತು ಕಂಬದ ಮನೆ

ಈ ರೀತಿಯಾದ ಹುಲ್ಲುಮನೆಯನ್ನು ಕಟ್ಟಲು ಎಕ್ಕವೆ–೩ (ಅಂದರೆ ದೊಡ್ಡ ಕವೆ) ಇದು ಸಾಮಾನ್ಯವಾಗಿ ೭ ಅಡಿ ಉದ್ದ, ಕುರುಕವೆ–೬ (ಚಿಕ್ಕ ಕವೆ) ಇದು ೩ ೧/೨ ಅಡಿ ಉದ್ದ, ಹುಲ್ಲುಮನೆಯ ಮೇಲೆ 'ಹಂಜರದ ಗಳು' ಇದು ಮೇಲ್ಚಾವಣಿಯ ಹಾಗೆ ಹುಲ್ಲನ್ನು ಗುಡಿಸಲಿಗೆ ಹಾಕುವುದು. ಮೊದಲು ತೊಂಡೆ ಗಳಗಳನ್ನು ತಂದು ಹಾಕುತ್ತಾರೆ. ಇದು ಉದ್ದವಾಗಿ ಸಣ್ಣದಾಗಿ ಬಾಗಿದ ಹಾಗೆ ನೀಳವಾಗಿರುತ್ತದೆ. (ಅಡಿಕೆ ಮರದ ಒಡಪಿನ ಹಾಗೆ) ಇದಕ್ಕೆ 'ಹಂಜರ' ಎಂದು ಹೆಸರು. ಇವುಗಳನ್ನು ಮಧ್ಯದಲ್ಲಿ ಕವರಿನಾರು, ಸೊವ್ವೆನಾರು, ಹೊತ್ತಗದ ಹಂಬಿನ ನಾರು, ಹುನಗುನಿ ಹಂಬು ಇನ್ನೂ ಮುಂತಾದ ಕಾಡಿನ ನಾರುಗಳಿಂದ ಕಟ್ಟುತ್ತಾರೆ.

**ಹುಲ್ಲು:** ಬಾಣೆ ಹುಲ್ಲು, ಸೋಗೆಹುಲ್ಲು ಇತ್ಯಾದಿ. ೧ ಹೊರೆಗೆ ೧೦ ಕಂತೆಯಂತೆ, ೩೦ ಹೊರೆ ಅಂದರೆ, ೩೦೦ ಕಂತೆ ಹುಲ್ಲು ಬೇಕಾಗುತ್ತದೆ.

**ಕಟ್ಟುಗೋಲು:** ಛಾವಣಿಯ ಮೇಲೆ ಹುಲ್ಲನ್ನು ಹಾಕಿದಾಗ ಹುಲ್ಲು ಬೀಳದಿರಲು ಹುಲ್ಲಿನ ಮೇಲೆ ೬ ಕಟ್ಟುಗೋಲು(ಕೋಲು, ಗಳು) ಹಾಕಿ ಬಿಗಿಯಾಗಿ ಕಟ್ಟುತ್ತಾರೆ.

**ಬೀಮ್ (ತೀರು):** ಗುಡಿಸಲಿನ ಎರಡು ಕಡೆ ಎರಡೆರಡು ಬೀಮ್(ತೀರು) ಕಟ್ಟುತ್ತಾರೆ. ಇದು ಮಳೆ, ಗುಡುಗು, ಸಿಡಿಲು ಬಂದಾಗ ತಡೆಯುತ್ತದೆ ಎಂದು ಸೋಲಿಗರು ಭೀಮನನ್ನು ಕಟ್ಟುತ್ತಾರೆ.(ಬಿದಿರಿನ ಗಳ ಅಥವಾ ಬೀಟೆ ಮತ್ತು ಮತ್ತಿ ಮರವನ್ನು ಎರಡೂ ಬದಿಗೂ ಬರುವಂತೆ ಮೇಲೆ ಬಿಗಿಯಾಗಿ ಕಟ್ಟುವುದು)

**ಗೋಡೆ:** ತೊಂಡೆಗಳ(ತೊಂಡೆ ಮರ, ಇದೊಂದು ಕಾಡು ಜಾತಿಯ ಮರ) ನೆಟ್ಟಗೆ(ನೇರವಾಗಿ) ನೆಟ್ಟುಕೊಳ್ಳುವುದು. ಕಾನಳ್ಳು ಕಟ್ಟಿಗೆ ಇವುಗಳನ್ನು ೪ ಭಾಗದಲ್ಲಿ ನೆಟ್ಟು ಗೋಡೆ ಮಾಡುವುದು. ಆನಂತರದಲ್ಲಿ ಮಣ್ಣನ್ನು ಚೆನ್ನಾಗಿ ಕಲಸಿ ಈ ನೆಟ್ಟಿರುವ ಕಾನಳ್ಳು ಕಟ್ಟಿಗೆ ಮತ್ತು ತೊಂಡೆ ಗಳದ ಮಧ್ಯ ಮಧ್ಯದಲ್ಲಿ ಹಾಕುತ್ತಾ ಹೋಗಬೇಕು. ಕಾನಳ್ಳು ಕಟ್ಟಿಗೆ ಈ ಮರಕ್ಕೆ ಮಣ್ಣನ್ನು ಅದು ಬೇಗನೆ(ಬೇಗ) ಈ ಮರಕ್ಕೆ ಅಂಟಿಕೊಳ್ಳುತ್ತದೆ. ಅಲ್ಲದೇ ಸೌದೆಗಳು ನೇರವಾಗಿ(ಸ್ಟ್ರೈಟ್) ಇರುತ್ತದೆ.

**ಮಣ್ಣು:** ಕರಿಮಣ್ಣು ಗೋಡೆಯ ಒಳಗೆ ಹಾಕುತ್ತಾರೆ. ಇದು ಬೇಗ ಹಿಡಿದುಕೊಳ್ಳುತ್ತದೆ. ಬೂದಿಮಣ್ಣು ಗೋಡೆಯ ಹೊರಭಾಗಕ್ಕೆ ಹಾಕುತ್ತಾರೆ. ಕಾರಣ ಈ ಮಣ್ಣು ಲಕ್ಷಣವಾಗಿ ಕಾಣುತ್ತದೆ ಎಂದು ಸೋಲಿಗರ ನಂಬಿಕೆ.

**ಹೆಗ್ಗೋಡೆ:** ಗುಡಿಸಲಿನ ಎರಡೂ ಕಡೆಗೆ ಹೆಗ್ಗೋಡೆ ಎನ್ನುತ್ತೇವೆ. ಈ ಗೋಡೆಗೆ ಹಳ್ಳುಸೌದೆಯನ್ನು ಹಾಕಿ ಕಟ್ಟುತ್ತಾರೆ. ಈ ಸೌದೆ ಹೆಗ್ಗೋಡೆಗೆ ಹೆಚ್ಚಿನ ಪ್ರಮಾಣದಲ್ಲಿ ಅಗತ್ಯವಿರುತ್ತದೆ.

**ಕುರುಗೋಡೆ:** ಇದು ಕುರು(ಚಿಕ್ಕ) ಕವೆಗೆ ಹಾಕುವ ಗೋಡೆ. ಈ ಸೌದೆ ಕುರುಸೌದೆ. ಇದು ಕಡಿಮೆ ಬೇಕಾಗುತ್ತದೆ. ಎರಡೂ ಕಡೆ ಗೋಡೆ ಕಟ್ಟಿ ಮಧ್ಯದಲ್ಲಿ ಬಾಗಿಲು ಬಿಡುತ್ತಾರೆ.

**ಬಾಗಿಲು:** ಬೆಂಡೆ ತೊಕ್ಕೆ(ಬೆಂಡೆ ಮರ) ಬಿದಿರು, ಲ್ಯಾಂಟನಕಡ್ಡಿ ಇತ್ಯಾದಿಗಳನ್ನು ತಂದು ಬಾಗಿಲು ಕಟ್ಟುತ್ತಾರೆ.

ಹೀಗೆ ಕಟ್ಟಿದ ಸೋಲಿಗರ ಹುಲ್ಲು ಮನೆಯಲ್ಲಿ

- ಹಿಟ್ಟು ಸೊಪ್ಪು ಬೇಸಾಗೆ ಮನೆ (ಅಡುಗೆ ಮನೆ)
- ಕೋಣೆ ಮನೆ
- ಭಾವಡಿ, ಬೆಂಕಿಯ ಮುಂದೆ
- ಪಡಸಾಲೆ (ಮನೆಯ ಮುಂದಿನ ಜಾಗ)

ಹಿಟ್ಟು ಸೊಪ್ಪು ಬೇಸಾಗೆ ಮನೆಯ ಗೋಡೆಗೆ ಬೆಂಕಿಯಿಂದ ರಕ್ಷಣೆಗೋಸ್ಕರ ಕಲ್ಲು-ಅರೆಕಲ್ಲು ಹಾಕಿರುತ್ತಾರೆ. ಕಾರಣ ಗೋಡೆಯಲ್ಲಿ ಹಾಕಿರುವ ಮರ ಬೆಂದೊದರೆ(ಸುಟ್ಟುಹೋದರೆ) ಅರೆ ಕಲ್ಲನ್ನು ನೆಟ್ಟಗೆ ನಿಲ್ಲಿಸಲಾಗಿರುತ್ತದೆ. ಇದರ ಮೂಲಕ ಬೆಂಕಿ ಹಚ್ಚಿದರೂ ಕೂಡ ಗೋಡೆಗೆ ಕಾವು ತಾಗುವುದಿಲ್ಲ. ಹೀಗೆ ಸೋಲಿಗರು ತಮ್ಮದೇ ಆದ ಜ್ಞಾನವನ್ನು ಮನೆಯ ರಚನೆಯಲ್ಲಿ ಉಪಯೋಗಿಸುತ್ತಾರೆ. ಮಕ್ಕಳು ಕೋಣೆಯ ಒಳಗೆ ಮಲಗಿಕೊಂಡರೆ ಗಂಡ-ಹೆಂಡತಿ, ವಯಸ್ಸಾದವರು ಎಲ್ಲರೂ ಭಾವಡಿಯ ಮುಂದೆ ಕಿಚ್ಚು ಹತ್ತಿಸಿ (ಬೆಂಕಿ ಹಾಕಿ) ಅದರ ಸುತ್ತಲೂ ತಮ್ಮ ಬೆನ್ನನ್ನು ಬೆಂಕಿಗೆ ಬರುವಂತೆ ಮಾಡಿ ಸುತ್ತಲೂ ಮಲಗುತ್ತಾರೆ. ಹೀಗೆ ಮಲಗಲು ಕಾರಣ ಕಾಡಿನಲ್ಲಿರುವ ವಿಷಜಂತು, ಪ್ರಾಣಿ, ಹುಳ, ಹುಪ್ಪಟೆ ಯಾವುದೂ ಗುಡಿಸಲಿನ ಹತ್ತಿರ ಬರುವುದಿಲ್ಲ. ಗೋಣಿಚೀಲ ಹಾಸಿ ಅದನ್ನೇ ಹೊದಿಕೆಯನ್ನಾಗಿ ಮಾಡಿಕೊಂಡು ಮಲಗುತ್ತಾರೆ, ಸೋಲಿಗರು ಸಾಮಾನ್ಯವಾಗಿ ಹಾಸಿಗೆ, ದಿಂಬು, ಬೆಡ್‌ಶೀಟ್ ಮಲಗಲು ಬೇಕಾದ ಹಾಸಿಗೆ ಪರಿಕರಗಳನ್ನು ಇಟ್ಟುಕೊಂಡಿರುವುದಿಲ್ಲ, ಪ್ರಸ್ತುತ ಸೋಲಿಗರು ಕೆಲವು ಕಡೆ ಮನೆಯ ಹೊರಗಡೆ, ಬೆಂಕಿಯನ್ನು ಹಾಕಿಕೊಂಡು ಅದರ ಸುತ್ತಲೂ ಮಲಗುತ್ತಾರೆ.

ಈ ರೀತಿಯ ಹುಲ್ಲು ಮನೆಯನ್ನು ಸುಮಾರು ೪-೫ ಜನ ಸೇರಿಕೊಂಡು ೧೦-೧೫ ದಿನಗಳ ಒಳಗೆ ಕಟ್ಟಿ ಮುಗಿಸುತ್ತಾರೆ. ಇದಕ್ಕೆ ಯಾವುದೇ ರೀತಿಯ ಖರ್ಚು ಇರುವುದಿಲ್ಲ. ಸಮುದಾಯದಲ್ಲಿ ಅವರವರೇ ಸೇರಿಕೊಂಡು ಕಟ್ಟುತ್ತಾರೆ. ಕಟ್ಟಿದ ಹುಲ್ಲು ಮನೆಯನ್ನು ಪ್ರತಿವರ್ಷ ಕಿತ್ತು ಬದಲಿಸಿ ಮುಂದಿನ ವರ್ಷಕ್ಕೆ ಮತ್ತೊಂದು ಹೊಸ ಹುಲ್ಲುಮನೆಯನ್ನು ಕಟ್ಟುತ್ತಾರೆ. ಸೋಲಿಗರು ಈ ಹುಲ್ಲುಮನೆಯಲ್ಲಿ ಯಾವುದೇ ಭಯ, ಅಂಜಿಕೆ ಇಲ್ಲದೆ ಕಾಡಿನ ಮಧ್ಯದಲ್ಲಿ ಬದುಕುತ್ತಾರೆ. ಕಾಡಿನಲ್ಲಿ ಹುಟ್ಟಿ ಬೆಳೆದು ಜೀವನ ಮಾಡುವವರಿಗೆ ಆಸ್ತಿಯ ಹಂಬಲ ಇಲ್ಲ. ಸುಖ ಜೀವನದ ಆಸೆ ಅವರಿಗೆ ಇದೆ. ಏನಿದ್ದರೂ ಅದೇ ಅವರ ಆಸ್ತಿ. ನಾಲ್ಕಾರು ಮಡಿಕೆ, ಕುಡಿಕೆ, ನಾಲ್ಕಾರು ಸೇರು ಕಾಳು, ಒಂದೆರಡು ಹಿತ್ತಾಳೆ ಚೆಂಬು ಇವೆ. ಅವರ ಸ್ಥಿರಾಸ್ತಿ ಇದ್ದರೆ ಬೇಟೆಯ ಸಾಮಾನು, ವ್ಯವಸಾಯಕ್ಕೆ ಬಳಸುವ ಗುದ್ದಲಿ, ಗೆಡ್ಡೆ-ಗೆಣಸು ಕೀಳುವ ಇವನ್ನು ಇಡಲು ಇಷ್ಟು ಜಾಗ ಸಾಕು.

**ನೀರು ಮಿಯ್ಯಾಮನೆ (ಸ್ನಾನದ ಮನೆ):** ಸೋಲಿಗರು ಸ್ನಾನದ ಮನೆಯನ್ನು ಕಟ್ಟುವುದಿಲ್ಲ. ಇವರು ಗುಡಿಸಲು ಹಿಂಭಾಗದಲ್ಲಿ ಕಂಬಗಳನ್ನು ನೆಟ್ಟು ಅದರ ಸುತ್ತ ಹಳೆಯ ಸೀರೆಯನ್ನು ಸುತ್ತಿ ಮರೆಮಾಡುತ್ತಾರೆ. ಹಾಗೂ ಒಳಗೆ ಒಂದು ಮೂರು ದಪ್ಪನೆಯ ಕಲ್ಲು ಇಟ್ಟು ಒಲೆ ಮಾಡಿ ಅದರ ಮೇಲೆ ಒಂದು ಪಾತ್ರೆ ಇಟ್ಟು, ಕಾಡಿನ ಸೌದೆಯನ್ನು ತಂದು ಬೆಂಕಿ ಹಾಕಿ ನೀರನ್ನು ಕಾಯಿಸುತ್ತಾರೆ. ಮಧ್ಯದಲ್ಲಿ ಕುಳಿತು ಸ್ನಾನ ಮಾಡಲು ಒಂದು ಅಚ್ಚ(ಅರೆ) ಕಲ್ಲನ್ನು(ಅಗಲವಾಗಿ) ಹಾಕಿರುತ್ತಾರೆ. ಇಷ್ಟೇ ಸೋಲಿಗರ ಸ್ನಾನದ ಗೃಹ. ಕೆಲವು ಸಲ ಗಂಡಸರು ಮನೆಯ ಮುಂದೆ ಸ್ನಾನ ಮಾಡುತ್ತಾರೆ.

**ಶೌಚಾಲಯ:** ಶೌಚಾಲಯದ ಪರಿಕಲ್ಪನೆ ಸೋಲಿಗರಿಗೆ ಗೊತ್ತೇ ಇಲ್ಲ. ಹಿರಿಯರಿಗೆ, ವಯಸ್ಸಾದವರಿಗೆ ಇದರ ಅರಿವೇ ಇಲ್ಲ. ಬಯಲು, ಕಾಡಿನ ಒಳಗಡೆಯೇ ಇವರ ಶೌಚದ ಕೆಲಸ ಮುಗಿಯುತ್ತದೆ. ಸೋಲಿಗರು ಒಬ್ಬರೆ ಹೋಗುವುದಿಲ್ಲ, ಜೊತೆಯಲ್ಲಿ ೩-೪ ಜನ ಒಟ್ಟಾಗಿ ಕಾಡಿನ ಅಂಚಿನ ಕಡೆಗೆ, ಇತ್ತೀಚೆಗೆ ಹೊಲದ ಕಡೆಗೆ ಹೋಗುತ್ತಾರೆ. ಇತ್ತೀಚೆಗೆ ಸರಕಾರದ ವತಿಯಿಂದ ಪ್ರತಿಯೊಂದು ಪೋಡು, ಹಳ್ಳಿ, ಕಾಲೋನಿಗೂ ಶೌಚಾಲಯ ಕಟ್ಟಿಸಿಕೊಡುವ ಪ್ರಯತ್ನ ನಡೆಯುತ್ತಿದೆ. ಆದರೆ ಎಷ್ಟೋ ಮಂದಿ ಸೋಲಿಗರಲ್ಲಿ ಶೌಚಾಲಯ ಕಟ್ಟಿಸಿದ್ದರೂ ಅದನ್ನು ಉಪಯೋಗಿಸದೆ ಆ ಮನೆಗೆ ಅಗತ್ಯವಿರುವ ಸೌದೆ, ಸಾಮಾನು ಹುಲ್ಲು ಇತರೆ ವಸ್ತುಗಳನ್ನು ಇಡಲು ಬಳಸುತ್ತಾರೆ. ಶೌಚಾಲಯ ಬಳಸುವವರು ತುಂಬಾ ಕಡಿಮೆ.

ಸೋಲಿಗರು ತಮ್ಮ ಜಮೀನಿನಲ್ಲಿ ಪ್ರಾಣಿಗಳಿಂದ ತಾವು ಬೆಳೆದ ಫಸಲನ್ನು ಕಾಯಲು ಹಾಗು ತಾವು ಹೊಲದಲ್ಲಿ ವಿಶ್ರಾಂತಿ ಪಡೆಯಲು ಪ್ರಾಚೀನ ಮಾದರಿಯಂತೆ ಮರದ ಮೇಲೆ, ಬಿದಿರುಕಟ್ಟೆಯ ಮೇಲೆ ಗುಳ್ಳನ್ನು(ಗುಡಿಸಲು) ಕಟ್ಟಿಕೊಂಡು ವಾಸ ಮಾಡುತ್ತಾರೆ. ಇದನ್ನು ಅಟ್ಟಣಿ, ಅಟ್ನಿ ಎಂದು ಕರೆಯುತ್ತಾರೆ. ಇದನ್ನು ನೋಡಿದಾಗ ಸೋಲಿಗರೂ ಸಹ ಈಗಲೂ ಪ್ರಾಚೀನ ಮಾದರಿಯ ಮನೆಯ ಮಾದರಿಯನ್ನು ಉಳಿಸಿಕೊಂಡು ಬಂದ ಗುಂಪಿನವರಾಗಿದ್ದಾರೆ ಎಂದು ಅನ್ನಿಸಬಹುದು. ಪ್ರಸ್ತುತ ಸಹ ಸೋಲಿಗರು ತಮ್ಮ ವ್ಯವಸಾಯದ ಜಮೀನಿನಲ್ಲಿ ಇಂತಹ ಮರದ ಹಾಗೂ ಬಿದಿರುಕಟ್ಟೆಯ ಮೇಲೆ ಅಟ್ನಿ ಮಾಡಿಕೊಂಡು ರಾತ್ರಿಯ ಸಮಯದಲ್ಲಿ ಗಂಡ-ಹೆಂಡತಿ ಅಥವಾ ವಯಸ್ಸಿಗೆ ಬಂದ ದೊಡ್ಡ ಮಕ್ಕಳಿದ್ದರೆ ಅವರೂ ಸಹ ಈ ಅಟ್ನಿಯಲ್ಲಿದ್ದುಕೊಂಡು ಹೊಲವನ್ನು ಕಾಯುತ್ತಾರೆ.

**ಸೋಲಿಗರು ಉಪಯೋಗಿಸುವ ಪರಿಕರಗಳು ರಾಗಿ ಕಲ್ಲು, ಅರೆಕಲ್ಲು**

ಸಾಮಾನ್ಯವಾಗಿ ಸೋಲಿಗರ ಪ್ರತಿಯೊಂದು ಗುಡಿಸಲಿನಲ್ಲಿಯೂ ರಾಗಿ ಅರೆಯುವ ಕಲ್ಲು ಇರುತ್ತದೆ. ರಾಗಿ ಬೀಸುವ ಕಲ್ಲನ್ನು ಇಟ್ಟುಕೊಂಡು ಹಾಡು ಹೇಳುತ್ತಾ ರಾಗಿಯನ್ನು ಬೀಸುವರು. ಅಸೆಕಲ್ಲು(ಉದುಕ ಮಾಡಲು ಕಾರ ಅರೆಯುವ ಕಲ್ಲು) ಕಾರ ಅರೆಯುವುದಕ್ಕೆ ಇಟ್ಟುಕೊಳ್ಳುತ್ತಿದ್ದರು. ರಾಗಿ ತುಂಬಿಡಲು ರಾಗಿ ಗುಳಿ ಅಂದರೆ ಕಣಜ, ನೆಲದಲ್ಲಿ ಗುಂಡಿ ತೋಡಿ, ಸಗಣಿಯಿಂದ ಹಾಗೂ ಕಾಡೆಮ್ಮೆಯ ಸಗಣಿಯಿಂದ ಸಾರಿಸುತ್ತಿದ್ದರು. "ಕಾಡೆಮ್ಮೆ ಸಗಣಿಯಿಂದ ನೆಲ ಅಥವಾ ರಾಗಿ ಗುಳಿಯನ್ನು ಸಾರಿಸಿದರೆ, ನೆಲ ನುಣ್ಣಗಾಗುತ್ತದೆ. ಗೆದ್ದಲು ಹತ್ತುವುದಿಲ್ಲ, ರಾಗಿ ಕೆಡುವುದಿಲ್ಲ" ಎಂಬುದು ಇವರ ನಂಬಿಕೆ. ರಾಗಿ ಬೀಸುವುದಕ್ಕೆ ರಾಗಿಕಲ್ಲು, ನವಣೆ, ಸಾಮ, ಕಂಬು, ಭತ್ತ ಕುಟ್ಟಲು ಒನಕೆ, ಕುಂದಣಿ, ಅಸೆ ಕಲ್ಲು ಮತ್ತು ಗುಂಡು ಕಲ್ಲು, ಖಾರ ಅರೆಯಲು ಖಾರದಕಲ್ಲು ಇವುಗಳನ್ನು ಹೆಚ್ಚಾಗಿ ಸೋಲಿಗರು ಉಪಯೋಗಿಸುತ್ತಾರೆ. ಅದರೆ ಇತ್ತೀಚೆಗೆ ಸೋಲಿಗರು ವಾಸಿಸುವ ಪೋಡು ಮತ್ತು ಕಾಲೋನಿಗಳ ಕೆಲವು ಮನೆಗಳಲ್ಲಿ ಆಧುನಿಕ ಅಡುಗೆ ಪರಿಕರಗಳಾದ ಹೊರಳುಕಲ್ಲು, ಮಿಕ್ಸಿ ಇತ್ಯಾದಿಗಳನ್ನು ಉಪಯೋಗಿಸುತ್ತಾರೆ.

**ಸೋಲಿಗರು ಕಾಡಿನಿಂದ ಸ್ಥಳಾಂತರಗೊಂಡ ನಂತರದ ಮನೆಯ ರಚನೆ**

ಇತ್ತೀಚೆಗೆ ಸರಕಾರ ಸೋಲಿಗರನ್ನು ಕಾಡಿನಿಂದ ನಾಡಿನಂಚಿಗೆ ಸ್ಥಳಾಂತರ ಮಾಡಿದ ಮೇಲೆ ಸಾಲು ಅಥವಾ ಲೈನು ಮನೆಗಳನ್ನು ಕಟ್ಟಿಕೊಟ್ಟು, ಅವುಗಳಿಗೆ ಕಾಲೋನಿ ಎಂದು ಹೆಸರಿಡಲಾಗಿದೆ.

ಇಂತಹ ಕಾಲೋನಿಗಳಲ್ಲಿ ಸರಕಾರದವರು ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಯಿಂದ ಹಲವಾರು ವಸತಿ ಯೋಜನೆಗಳನ್ನು ಸೋಲಿಗರಿಗೆ ನೀಡಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಆಶ್ರಯ ಮನೆ ಯೋಜನೆ– ಇಂದಿರಾ ಆವಾಜ಼್ ಯೋಜನೆ, ರಾಜೀವ್‌ಗಾಂಧಿ ಮನೆ ಯೋಜನೆ, ಅಂಬೇಡ್ಕರ್ ವಸತಿ ಯೋಜನೆ, ಹೀಗೆ ಸರಕಾರವು ಹಲವಾರು ಯೋಜನೆಗಳ ಮೂಲಕ ಸೋಲಿಗರಿಗೆ ಮನೆಗಳನ್ನು ಕಟ್ಟಿಸಿಕೊಡುತ್ತಿದ್ದಾರೆ.

**ಸರಕಾರದ ಮನೆಯ ರಚನೆ:** ಸರಕಾರದಿಂದ ನಿರ್ಮಿಸಿಕೊಡುವ ಮನೆಯು ರೂ. ೧,೭೫,೦೦೦/– (ಒಂದು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿ), ರೂ. ೨,೦೦,೦೦೦/–(ಎರಡು ಲಕ್ಷ ರೂಪಾಯಿ) ಗಳದ್ದಾಗಿರುತ್ತದೆ. ಈ ಮನೆಯಲ್ಲಿ ಒಂದು ಅಡುಗೆ ಕೋಣೆ, ಮಧ್ಯದಲ್ಲಿ ಒಂದು ಅರ್ಧಕ್ಕೆ ಗೋಡೆ ಇರುತ್ತದೆ. ಇತ್ತೀಚೆಗೆ ಹೊರಗಡೆ ಶೌಚಾಲಯದ ಮನೆಯನ್ನು ನಿರ್ಮಿಸಿಕೊಡುತ್ತಾರೆ.

ಸೋಲಿಗರು ತಮ್ಮ ವಾಸಕ್ಕಾಗಿ ಕಟ್ಟಿಕೊಳ್ಳುವ ಗುಡಿಸಲುಗಳು ತುಂಬಾ ಸರಳವಾಗಿದ್ದವು. "ಕಾಡಿನಲ್ಲೇ ದೊರೆಯುವಂತಹ ಬಿದಿರುಗಳು, ಮರದ ಕವೆಗಳು, ಹಂಜರದ ಗಳು, ಕಾಡಿನ ಹುಲ್ಲು ಕಾಡಿನ ಮಣ್ಣು ನಿಸರ್ಗದತ್ತವಾಗಿಯೇ ಕಡಿಮೆ ಸಮಯದಲ್ಲಿ, ಕಡಿಮೆ ಜನರು ಸೇರಿಕೊಂಡು ಗುಡಿಸಲು ಕಟ್ಟಿ ಮುಗಿಸುತ್ತಿದ್ದೆವು. ಯಾವುದೇ ರೀತಿಯ ಹಣದ ಖರ್ಚು ಇರುತ್ತಿರಲಿಲ್ಲ. ಕಾಡಿನಲ್ಲಿರುವಾಗ ಒಂದು ವರ್ಷಕ್ಕೆ ಒಂದು ಸಾರಿ ಆ ಗುಳ್ಳನ್ನು ಕಿತ್ತು ಮತ್ತೆ ಹೊಸ ಗುಳ್ಳನ್ನು ಕಟ್ಟುತ್ತಿದ್ದೆವು" ಎಂದು ಹೇಳುತ್ತಾರೆ. ಮಾರ್ಚ್–ಏಪ್ರಿಲ್ ತಿಂಗಳುಗಳಲ್ಲಿ ಈ ಗುಡಿಸಲನ್ನು ಕಟ್ಟುತ್ತಾರೆ ಅಂದರೆ, ಬೇಸಿಗೆಯ ಕಾಲದಲ್ಲಿ ತಯಾರಿ ಮಾಡಿಕೊಳ್ಳುತ್ತಾರೆ.

ಆದರೆ ಇತ್ತೀಚೆಗೆ ಸರಕಾರ ಸೋಲಿಗರನ್ನು ಕಾಡಿನಿಂದ ಸ್ಥಳಾಂತರ ಮಾಡಿಸಿದ ನಂತರವೂ ಎಲ್ಲರಿಗೂ ಮನೆ ವ್ಯವಸ್ಥೆ ಆಗಿಲ್ಲ, ಕೆಲವರು ಇನ್ನೂ ಗುಡಿಸಲು(ಗುಳ್ಳು) ಮನೆಯಲ್ಲಿಯೇ ವಾಸವಾಗಿದ್ದಾರೆ. ಉದಾ: ಕೆರೆದಿಂಬ, ಗೊಂಬೆಗಲ್ಲು, ಕಡಕಲಕಿಂಡಿ, ಆಡಿನ ಕಣಿವೆ, ಮಹದೇಶ್ವರಬೆಟ್ಟದ ಹಲವಾರು ಭಾಗಗಳಲ್ಲಿ, ಬಿಳಿಗಿರಿರಂಗನ ಬೆಟ್ಟ, ಗುಂಡ್ಲುಪೇಟೆಯ ಕೆಲವೆಡೆ, ಕೊಳ್ಳೇಗಾಲ ಹೀಗೆ ಇನ್ನೂ ಹಲವು ಕಡೆಗಳಲ್ಲಿ ಸೋಲಿಗರು ಗುಡಿಸಲು ಮನೆಯಲ್ಲಿಯೇ ವಾಸವಾಗಿದ್ದಾರೆ.

ಆದರೆ ಇತ್ತೀಚೆಗೆ ಗುಡಿಸಲು ಕಟ್ಟಲು ಸೋಲಿಗರಿಗೆ ಕಾಡಿನಿಂದ ಗಳು, ಕವೆ, ಹಂಜರದ ಗಳು, ಬಿದಿರುಗಳನ್ನು ತರಲು ತುಂಬಾ ಕಷ್ಟ. ಅರಣ್ಯ ಇಲಾಖೆಯವರು ಕಾಡಿಗೆ ಬಿಡುವುದಿಲ್ಲ. ಬಿಟ್ಟರೂ ಮರಮುಟ್ಟು ತರಲು ಭಯ ಮತ್ತು ಗುಡಿಸಲಿಗೆ ಹಾಕುವ ಹುಲ್ಲು ಇತ್ತೀಚೆಗೆ ಸಿಗುವುದೇ ಕಷ್ಟವಾಗಿದೆ. ಕಾರಣ ಕಾಡಿನ ತುಂಬಾ 'ಲಾಂಟಾನ' ರೋಜಾ ಗಿಡ ಬೆಳೆದುಕೊಂಡಿದೆ. ಇದು ಬೆಳೆದಿರುವ ಕಡೆ ಬೇರೆ ಯಾವ ಗಿಡವಾಗಲಿ, ಮರವಾಗಲಿ ಬೆಳೆಯುವುದಕ್ಕೆ ಬಿಡುವುದಿಲ್ಲ. ಹಾಗಾಗಿ ಇತ್ತೀಚೆಗೆ ಸೋಲಿಗರು ತಮ್ಮ ಗುಡಿಸಲು ಕಟ್ಟಿಕೊಂಡು ಜೀವನ ಮಾಡಲು ತುಂಬಾ ಕಷ್ಟವಾಗುತ್ತದೆ.

ಸೋಲಿಗರು ಇತ್ತೀಚಿನ ದಿನಗಳಲ್ಲಿ ತೆಂಗಿನ ಗರಿ, ಪ್ಲಾಸ್ಟಿಕ್ ಟರ್‌ಪಾಲ್, ಸೀಟ್, ತಗಡು ಮನೆ, ಹೆಂಚಿನ ಮನೆ, ಸರಕಾರದ್ದು ಹೀಗೆ ಸೋಲಿಗರ ಪೋಡು, ಕಾಲೋನಿಗಳಲ್ಲಿ ಈ ರೀತಿಯ ಮನೆಗಳು ಕಟ್ಟಿಕೊಂಡಿರುವುದನ್ನು ಅಧ್ಯಯನದ ಮೂಲಕ ತಿಳಿಯಲಾಗಿದೆ.

**ಸೋಲಿಗರ ಭಾಷೆಯಲ್ಲಿ ಮನೆಯ ಪರಿಕಲ್ಪನೆ**

ಹಳ್ಳು ಶಾಸ್ತ್ರ, ಹುಲ್ಲಿನ ಮನೆ, ಕಿಚ್ಚಿನ ಗುಂಡಿ, ತೆಂಗಿನ ಗರಿ, ಪ್ಲಾಸ್ಟಿಕ್ ಟರ್‌ಪಾಲ್, ಶೀಟ್, ತಗಡು ಮನೆ. ಸೋಲಿಗರನ್ನು ಕಾಡಿನಿಂದ ಪುನರ್ವಸತಿ ಕಲ್ಪಿಸಿದ ನಂತರದಲ್ಲಿ ಇವರಿಗೆ ಸರಕಾರದ ವತಿಯಿಂದ ಮನೆಗಳನ್ನು ಕಟ್ಟಿಸಿಕೊಡಲಾಯಿತು. ಸೋಲಿಗರಿಗೆ ಸರಕಾರದಿಂದ ಮನೆ ಕಟ್ಟಿಸಿಕೊಟ್ಟಿದ್ದರೂ ಅದರ ಪಕ್ಕದಲ್ಲಿ ಮತ್ತೊಂದು ಗುಡಿಸಲನ್ನು ನಿರ್ಮಿಸಿಕೊಂಡಿರುತ್ತಾರೆ. ಸೋಲಿಗರನ್ನು ಕೇಳಿದಾಗ ಹೀಗೆ ಹೇಳುತ್ತಾರೆ. "ಸರ್ಕಾರ ಕಟ್ಟಿಸಿಕೊಡುವ ಮನೆ ಬದ್ರ ಇಲ್ಲೆ, ಜೋರಾಗಿ ಮಳೆ, ಗಾಳಿ ಬಂದುರೆ ಅದು ನಮ್ಮ ಮೇಲೆಯೇ ಬಿದ್ದು ಬಿಡುತ್ತದೆ ಎಂಬ ಭಯ ಗೋಡೆ ೧ ವರ್ಷಕ್ಕೆ ಬಿರುಕುಬಿಡುತ್ತದೆ. ಜೋರಾದ ಮಳೆ ಬಂದುರೆ(ಬಂದರೆ) ಮಳೆಯ ನೀರು ಬಿದ್ದು ಮನೆ ಸೋರುತ್ತದೆ. ಅದಕ್ಕೆ ನಮಗೆ ಭಯ. ಆ ಮನೆಯಲ್ಲಿ ಸಾಮಾನು, ಸರಂಜಾಮು ಇಟ್ರು(ಇಟ್ಟು) ಹಿಟ್ಟು ಸೊಪ್ಪು ಬೇಯಿಸಿ ತಿಂದ್ರು ಆಮೇಲೆ ಗುಳ್ಳಿಕ ಬಂದು ಕಿಚ್ಚುಹಾಕಿ ಮಲ್ಗೂಗುರುತೀವಿ ಎಂದು ಹೆಳುತ್ತಾರೆ.

ಆದರೂ ಸಹ ಇತ್ತೀಚೆಗೆ ಸೋಲಿಗರು ಸರ್ಕಾರ ಕಟ್ಟಿಸಿಕೊಟ್ಟ ಮನೆಗಳಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಗುಡಿಸಲು ಕಟ್ಟಲು ಉಪಯೋಗಿಸುತ್ತಿದ್ದ ಹುಲ್ಲಿನ ಬದಲಾಗಿ ತೆಂಗಿನ ಗರಿ, ಪ್ಲಾಸ್ಟಿಕ್ ಚೀಲ ಅಡಿಕೆ ಗರಿ ಇವುಗಳನ್ನು ಉಪಯೋಗಿಸುತ್ತಾರೆ. ಸೋಲಿಗರು ಇತ್ತೀಚೆಗೆ ಯಾರಿಗೆ ಸರಕಾರದಿಂದ ಮನೆ ನಿರ್ಮಿಸಿಕೊಟ್ಟಿಲ್ಲವೋ ಅಂತಹವರು ಈಗಲೂ ಪ್ಲಾಸ್ಟಿಕ್ ಹೊದಿಕೆ, ಶೀಟ್, ತಗಡಿನ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ.

ಸೋಲಿಗರಲ್ಲಿ ವಯಸ್ಸಾದವರು, ಖಾಯಿಲೆ ಬಿದ್ದವರು ಮನೆಯ ಹೊರಗಡೆ ಅಥವಾ ಗುಡಿಸಲಿನಲ್ಲಿ, ಮನೆಯ ಮುಂದಿನ ಪಡಸಾಲೆ, ಚಾವಡಿಗಳಲ್ಲಿ ವಾಸ ಮಾಡುತ್ತಾರೆ. ಅಲ್ಲಿಯೇ ಅವರನ್ನು ನೋಡಿಕೊಳ್ಳುತ್ತಾರೆ. ಸೋಲಿಗರ ನಂಬಿಕೆಯ ಪ್ರಕಾರ ಹಿಂದೆ ಕಾಡಿನಲ್ಲಿದ್ದಾಗ ಗುಡಿಸಲಿನಲ್ಲಿ ಯಾರಾದರೂ ಮರಣ ಹೊಂದಿದರೆ ಆ ಗುಡಿಸಲನ್ನು ಕಿತ್ತು ಹಾಕಿ ಸುಟ್ಟುಬಿಡುತ್ತಿದ್ದರು. ಮತ್ತೆ ಮತ್ತೊಂದು ಕಡೆ ಹೊಸ ಗುಳ್ಳನ್ನು(ಗುಡಿಸಲು) ಕಟ್ಟಿಕೊಳ್ಳುತ್ತಿದ್ದರು. ಆದರೆ ಈಗ ಹಾಗೆ ಮಾಡುವುದಕ್ಕೆ ಆಗುವುದಿಲ್ಲ ಎಂದು **ಯತ್ತಯ್ಯನ ಮಾದಯ್ಯ ತಮ್ಮಡಿ ಮದ್ದೂರು ಕಾಲೋನಿ ಹೇಳುತ್ತಾರೆ.** ಕಾರಣ ಇತ್ತೀಚೆಗೆ ಸರಕಾರದ ಮನೆ ಸಿಗುವುದೇ ಕಷ್ಟ ಹಾಗೂ ಒಂದು ಗುಡಿಸಲನ್ನು ನಿರ್ಮಾಣ ಮಾಡುವುದು ಇನ್ನೂ ಕಷ್ಟ ಆದುದರಿಂದ ವಯಸ್ಸಾದವರು, ಖಾಯಿಲೆ ಬಿದ್ದವರನ್ನು ಹೊರಗೆ ಇರಿಸುತ್ತಾರೆ. ಒಂದು ವೇಳೆ ಮರಣ ಹೊಂದಿದರೆ ಅವರ ಸೂಲು ಹೊರಗಡೆಯೇ ಹೋಗಲಿ ಎಂದು ಸೋಲಿಗರ ನಂಬಿಕೆ. ಮನೆಯ ಒಳಗೆ ಸೂಲು(ಪ್ರಾಣ) ಹೋಗಬಾರದು ಎಂದು ಸೋಲಿಗರು ಬಯಸುತ್ತಾರೆ. ಆದರೆ ಒಂದುವೇಳೆ ಆ ರೀತಿಯಾಗಿ ಮನೆಯ ಒಳಗೆ 'ಸೂಲು'(ಪ್ರಾಣ) ಹೋದರೆ ಆ ಮನೆ, ಗುಡಿಸಲನ್ನು ಸುಮಾರು ೧ ರಿಂದ ೩ ವರ್ಷ ಖಾಲಿ ಬಿಟ್ಟುಬಿಡುತ್ತಾರೆ. ಇತ್ತೀಚೆಗೆ ಮನೆಯ ಜಾಗದ ಸ್ಥಳಾಂತರದ ಸಮಸ್ಯೆಯಿಂದಾಗಿ ಆ ಮನೆಯಲ್ಲಿಯೇ ವಾಸ ಮಾಡುವುದೂ ಸಹ ಕಂಡುಬರುತ್ತದೆ. ಈ ರೀತಿಯ ಸಂದಿಗ್ಧ ಪರಿಸ್ಥಿತಿಯೊಳಗೆ ಸೋಲಿಗರು ಮಾನಸಿಕವಾಗಿ ತಮ್ಮ ಸ್ಥೈರ್ಯವನ್ನು ಕಳೆದುಕೊಳ್ಳುತ್ತಿದ್ದಾರೆ.

ಇದರಿಂದ ಪ್ರಸ್ತುತ ಸೋಲಿಗರಿಗೆ ಗುಡಿಸಲು ಮನೆಯನ್ನು ಸಹ ಕಟ್ಟಿಕೊಳ್ಳಲು ಹಣದ ಖರ್ಚುವೆಚ್ಚ ಬೀಳುತ್ತದೆ. ಇದು ಅವರಿಗೆ ಸಮಸ್ಯೆಯಾಗಿದ್ದು, ಕಾಡಿಗೆ ಹೋಗಿ ಗುಡಿಸಲು ಸಾಮಾನು ತರುವುದಕ್ಕೆ

ಅರಣ್ಯ ಇಲಾಖೆಯವರಿಂದ ತೊಂದರೆ ಹಾಗೂ ಸರ್ಕಾರದ ಮನೆಯನ್ನು ಕೆಡುವುದಕ್ಕೆ ಆಗುವುದಿಲ್ಲ ಕಾರಣ, ವಾಸ್ತವದ ಪರಿಸ್ಥಿತಿಯಲ್ಲಿ ತಮ್ಮ ಕೆಲವು ಪಾರಂಪರಿಕ ಜ್ಞಾನ, ನಂಬಿಕೆ, ಆಚಾರಗಳನ್ನು ಬಿಟ್ಟುಕೊಡುತ್ತಿರುವುದರ ಜೊತೆಗೆ ಮಾನಸಿಕವಾಗಿ ತೊಂದರೆಗೀಡಾಗುತ್ತಿದ್ದಾರೆ. ಆದರೂ ಸಹ ಆಧುನಿಕ ಸಮಾಜದ ಗೃಹವ್ಯವಸ್ಥೆಯ ಪರಿಧಿಯೊಳಗೆ ಸ್ವಲ್ಪ ಸ್ವಲ್ಪವಾಗಿ ಬಾಳುವ ವ್ಯವಸ್ಥೆಯನ್ನು ಮೈಗೂಡಿಸಿ ಕೊಳ್ಳುತ್ತಿರುವುದು ಕಂಡು ಬರುತ್ತದೆ.



**ಹೊಸಪೋಡಿನಲ್ಲಿ ಸೋಲಿಗರು ನಿರ್ಮಿಸಿಕೊಂಡಿರುವ ನೆರಕೆ ಮತ್ತು ಪ್ಲಾಸ್ಟಿಕ್ ಮನೆಯ ಚಿತ್ರಣ, ಯಳಂದೂರು ತಾಲೂಕು, ಚಾಮರಾಜನಗರ ಜಿಲ್ಲೆ.**

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿದಾಗ ಈ ಕೆಳಗಿನಂತೆ ಸೋಲಿಗರು ಮನೆಗಳನ್ನು ಕಟ್ಟಿಕೊಂಡು ವಾಸಿಸುವುದು ಕಂಡುಬರುತ್ತದೆ. ಸರ್ಕಾರದ ವತಿಯಿಂದ ಸೋಲಿಗರಿಗೆ ಕುಂಟಗುಡಿ ಪೋಡು, ಮುನೇಶ್ವರ ಕಾಲೋನಿ, ಮದ್ದೂರು ಕಾಲೋನಿ, ಕಾರೆಮಾಳ, ಹೊಸಪೋಡು, ಯರಕನಗದ್ದೆ ಪೋಡು, ಜಡೆಸ್ವಾಮಿ ದೊಡ್ಡಿ, ಕೆರೆದಿಂಬ ಪೋಡುಗಳನ್ನು ಆಯ್ಕೆ ಮಾಡಿಕೊಂಡು ಒಟ್ಟು ೩೨೪ ಕುಟುಂಬಗಳು, ಅವುಗಳಲ್ಲಿ ಜನಸಂಖ್ಯೆ ೧೭೩೦ ಮಹಿಳೆಯರು ೮೬೬, ಪುರುಷರು ೮೬೪ ಇವರುಗಳಲ್ಲಿ ಮನೆ ಇದೆಯೇ, ಮನೆ ಸ್ವಂತ ಮನೆಯೇ, ಕಚ್ಚಾ ಮನೆ, ಪಕ್ಕಾ ಮನೆಯಲ್ಲಿ ವಾಸಿಸುತ್ತಿರುವ ಬಗ್ಗೆ ಮೂಲಭೂತ ಸೌಲಭ್ಯಗಳ ಸಂಬಂಧಿಸಿದ ಮಾಹಿತಿಯ ವಿವರ.

**ಕೋಷ್ಟಕ ೩.೧. ಸಮೀಕ್ಷೆಗೊಳಪಟ್ಟ ಸೋಲಿಗರು ಬುಡಕಟ್ಟಿನ ಮನೆಗಳ ಮಾದರಿ**

| ಕ್ರಸಂ | ಮನೆಗಳ ಮಾದರಿ | ಆವರ್ತನ | ಶೇ. |
|---|---|---|---|
| ೧. | ಮಣ್ಣಿನ ಮನೆಗಳು | ೧೫೩ | ೪೭.೨೪ |
| ೨. | ಸಿಮೆಂಟು ಕಟ್ಟಡಗಳು | ೧೨೩ | ೩೭.೯೬ |
| ೩. | ನೇರಕೆ ಗೋಡೆ | ೨೩ | ೭.೦೯ |
| ೪. | ಇತರೆ ಪ್ಲಾಸ್ಟಿಕ್, ತಗಡು, ಗೋಣಿಚೀಲ ಇತ್ಯಾದಿ | ೨೫ | ೭.೭೧ |
| | ಒಟ್ಟು | ೩೨೪ | ೧೦೦.೦೦ |

ವೃತ್ತಚಿತ್ರ ೩.೧. ಸೋಲಿಗರು ಬುಡಕಟ್ಟಿನ ಮನೆಗಳ ಮಾದರಿ




ಕೋಷ್ಟಕ ೩.೨. ಸಮೀಕ್ಷೆಗೊಳಪಟ್ಟ ಸೋಲಿಗ ಬುಡಕಟ್ಟಿನ ಮೂಲಭೂತ ಸೌಕರ್ಯ

| ಕ್ರಸಂ | ಮೂಲಭೂತ ಸೌಕರ್ಯ ವಿವರ | ಮೂಲಭೂತ ಸೌಕರ್ಯ ಹೊಂದಿರುವ ಸಂಖ್ಯೆ | ಶೇಕಡವಾರು |
|---|---|---|---|
| ೧ | ಸ್ವಂತ ಮನೆ | ೫೩ | ೧೬.೩೫ |
| ೨ | ಸರ್ಕಾರಿ | ೨೧೭ | ೬೬.೯೭ |
| ೩ | ಇತರೆ | ೫೪ | ೧೬.೬೮ |
| | ಒಟ್ಟು | ೩೨೪ | ೧೦೦ |

ಲಂಬಚಿತ್ರ ೩.೧. ಸೋಲಿಗರು ಬುಡಕಟ್ಟಿನ ಮೂಲಭೂತ ಸೌಕರ್ಯ




## ಕುಟುಂಬ ಮತ್ತು ಕುಟುಂಬದ ವ್ಯಾಖ್ಯೆಗಳು

ಕುಟುಂಬ ಎಂಬುದು ಸಮಾಜದ ಒಂದು ಚಿಕ್ಕ ಘಟಕ. ಈ ಕುಟುಂಬ ವ್ಯವಸ್ಥೆಯು ಮನೆಯ ಸದಸ್ಯರುಗಳಿಂದ ರೂಪಿತವಾಗಿರುತ್ತದೆ. ಆಯಾಯ ಸಮಾಜದ, ಸಂಸ್ಕೃತಿ ಪರಂಪರೆಯನ್ನು ರೂಢಿಸಿಕೊಂಡು ಬಂದಿರುವ ನಿಯಮಗಳನ್ನು ಮುಖ್ಯವಾಗಿ ಪಾಲಿಸಲಾಗುತ್ತದೆ. ಸೋಲಿಗ ಸಮುದಾಯದವರು ಸಹ ಇಂತಹ ವ್ಯವಸ್ಥೆಯೊಳಗೆ ಜೀವನ ನಡೆಸುತ್ತಾರೆ.

ಕುಟುಂಬವು ಒಂದು ಪ್ರಾಥಮಿಕ ಸಮೂಹವಾಗಿದೆ. ಕುಟುಂಬವು ವಿವಾಹದಂತೆ ಒಂದು ಮೂಲಭೂತವಾದ ಮತ್ತು ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಯಾಗಿದೆ. ಕುಟುಂಬಗಳ ಅಸ್ತಿತ್ವವನ್ನು ಹೊಂದದ ಸಮಾಜ ಸಮುದಾಯಗಳೇ ಇಲ್ಲ. ಕುಟುಂಬವು ಮನುಷ್ಯನ ಮೂಲಭೂತ ಬೇಡಿಕೆಗಳನ್ನು ಪೂರೈಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡಿದೆ. ಕುಟುಂಬದಲ್ಲಿ ಪಿತೃಪ್ರಧಾನ ಕುಟುಂಬ, ಮಾತೃಪ್ರಧಾನ ಕುಟುಂಬ ಎಂಬ ಎರಡು ಬಗೆಗಳಿವೆ. ಕುಟುಂಬವು ಮಗುವಿಗೆ ಸಾಮಾಜೀಕರಣ ಪ್ರಕ್ರಿಯೆ ನಡೆಯುವುದಕ್ಕೆ ಸಹಕಾರಿಯಾಗಿದೆ. ಕುಟುಂಬವಿಲ್ಲದೇ ಸಮಾಜ, ಸಮುದಾಯ ಬರೀ ಕಾಲ್ಪನಿಕವಾದುದು. ಮಕ್ಕಳಿಗೆ ಒಂದು ಸ್ಥಾನಮಾನವನ್ನು ಒದಗಿಸಿ, ಅದರ ಮೂಲಕ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುತ್ತದೆ.

ಕುಟುಂಬ ವ್ಯವಸ್ಥೆಯು ಮಾನವನ ಮೂಲಭೂತ ಘಟಕವಾಗಿರುತ್ತದೆ. ಕುಟುಂಬದ ಮೂಲಕ ಮಾನವ ಸಂಗಜೀವಿಯಾಗಿ ಬಾಳಲು ಅನುಕೂಲವಾಗುತ್ತದೆ. ಕುಟುಂಬ ತನ್ನ ಪ್ರತಿಯೊಬ್ಬ ಸದಸ್ಯನ ಬೇಕು–ಬೇಡಗಳನ್ನು ಪೂರೈಸುತ್ತದೆ. ಕುಟುಂಬದ ಸದಸ್ಯರಲ್ಲಿ ಐಕ್ಯತೆ ಇರುವುದರಿಂದ ಕುಟುಂಬದ ಸದಸ್ಯನಿಗೆ ತೊಂದರೆಯಾದಾಗ ಅವನಿಗೆ ಎಲ್ಲಾ ತರಹದ ನೆರವು ನೀಡುತ್ತದೆ. ಇದರಿಂದ ಯಾವ ಮಾನವ ಜೀವಿಯೇ ಆಗಲಿ, ಕುಟುಂಬದ ಆಶ್ರಯವಿಲ್ಲದೇ ಬಾಳಲು ಸಾಧ್ಯವಿಲ್ಲ. ಒಂದು ಸಾಮಾಜಿಕ ಸಂಸ್ಥೆ ಸಮಾಜದ ಏಳಿಗೆಗಾಗಿ ಹೇಗೆ ದುಡಿಯುತ್ತದೆಯೋ ಅದೇ ರೀತಿಯಲ್ಲಿ ತನ್ನ ಪ್ರತಿಯೊಬ್ಬ ಸದಸ್ಯರ ಏಳಿಗೆಗಾಗಿ ದುಡಿಯುತ್ತದೆ. ಕುಟುಂಬ ಮಕ್ಕಳಿಗೆ, ವಯಸ್ಸಾದವರಿಗೆ, ಗರ್ಭಿಣಿಗೆ ಹೀಗೆ ಎಲ್ಲರಿಗೂ ಆಶ್ರಯವನ್ನು ನೀಡುತ್ತದೆ.

ಕುಟುಂಬ ವ್ಯವಸ್ಥೆಯು ಅನಾದಿಕಾಲದಿಂದಲೂ ಬೆಳೆದು ಬಂದಿದೆ. ಕುಟುಂಬ ವ್ಯವಸ್ಥೆಯಲ್ಲಿ ಒಂದೇ ತರಹದ ಲಕ್ಷಣಗಳನ್ನು ಕಾಣಲು ಸಾಧ್ಯವಿಲ್ಲ. ಏಕೆಂದರೆ ಸಮಾಜ ಬದಲಾವಣೆ ಹೊಂದಿದ ಹಾಗೆಲ್ಲಾ ತನ್ನ ಮೂಲ ವ್ಯವಸ್ಥೆಯಿಂದ ಭಿನ್ನವಾಗಿತ್ತಾ ಬರುತ್ತದೆ. ಕುಟುಂಬದ ಸದಸ್ಯರೆಂದು ಸಮಾಜ ಶಾಸ್ತ್ರಜ್ಞರ ಅರ್ಥದಲ್ಲಿ ಪರಿಗಣಿಸುವ ಕ್ರಮವಿಲ್ಲ.

**ಕುಟುಂಬದ ವ್ಯಾಖ್ಯೆಗಳು**

**ಸಮ್ಮರ್ ಮತ್ತು ಕೆಲ್ಲರ್ ಪ್ರಕಾರ:** ರಕ್ತ ಸಂಬಂಧಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತೀ ಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ.

**ಈಲಿಯಟ್ ಮತ್ತು ಮೆರಿಲ್ ಪ್ರಕಾರ:** ಗಂಡ ಹೆಂಡತಿ ಮತ್ತು ಮಕ್ಕಳನ್ನೊಳಗೊಂಡಿರುವ ಜೈವಿಕ ಮತ್ತು ಸಾಮಾಜಿಕ ಘಟಕವೇ ಕುಟುಂಬ.

**ಮೆಕೈವರ್ ಮತ್ತು ಪೇಜ್ ಅವರ ಪ್ರಕಾರ:** ಸಂತತಿಯ ಉತ್ಪತ್ತಿ ಮತ್ತು ಶಿಶುಗಳ ಪಾಲನೆ–ಪೋಷಣೆಯ ಕಾರ್ಯಗಳನ್ನು ನಿರ್ವಹಿಸುವುದರ ಸಲುವಾಗಿ, ಲೈಂಗಿಕ ಸಂಬಂಧದ ಆಧಾರದ ಮೇಲೆ ರಚಿತವಾದ ಸಾಕಷ್ಟು ಖಚಿತವಾದ ಮತ್ತು ದೀರ್ಘಕಾಲ ಬಾಳುವ ಸಮೂಹವೇ ಕುಟುಂಬ.

**ಕುಟುಂಬ ಎಂಬ ಪದದ ಅರ್ಥ:** ಕುಟುಂಬ ಎಂಬ ಪದವು 'ಫ್ಯಾಮಿಲಿ' ಎಂಬ ಲ್ಯಾಟೀನ್ ಭಾಷೆಯ 'ಫ್ಯಾಮುಲಸ್' ಎಂಬ ಮೂಲ ಶಬ್ದದಿಂದ ಬಂದಿದೆ. 'ಫ್ಯಾಮುಲಸ್' ಎಂದರೆ 'ಆಳು'(ಸರ್‌ವೆನ್ಟ್) ಎಂದರ್ಥ. ರೋಮ್ ದೇಶದಲ್ಲಿ ಹಿಂದಿನ ಕಾಲದಲ್ಲಿ ಆಳುಗಳನ್ನು ಕೂಡ ಕುಟುಂಬದ ಸದಸ್ಯರೆಂದು ಪರಿಗಣಿಸುತ್ತಿದ್ದರೆಂದು ಇದರಿಂದ ತಿಳಿದು ಬರುತ್ತದೆ.

ಕುಟುಂಬಗಳಲ್ಲಿ ಹಲವಾರು ಬಗೆಗಳನ್ನು ಕಾಣಬಹುದು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ, ಅವಿಭಕ್ತ ಕುಟುಂಬ, ವಿಭಕ್ತ ಕುಟುಂಬ, ಮಾತೃಪ್ರಧಾನ ಕುಟುಂಬ, ಪಿತೃಪ್ರಧಾನ ಕುಟುಂಬ.

ಕುಟುಂಬ ಎಂಬುದು ಸಮಾಜದ ಒಂದು ಚಿಕ್ಕ ಘಟಕ. ಈ ಕುಟುಂಬ ವ್ಯವಸ್ಥೆಯು ಮನೆಯ ಸದಸ್ಯರುಗಳಿಂದ ರೂಪಿತವಾಗಿರುತ್ತದೆ. ಆಯಾಯ ಸಮಾಜದ, ಸಂಸ್ಕೃತಿ ಪರಂಪರೆಯನ್ನು ರೂಢಿಸಿಕೊಂಡು ಬಂದಿರುವ ನಿಯಮಗಳನ್ನು ಮುಖ್ಯವಾಗಿ ಪಾಲಿಸಲಾಗುತ್ತದೆ. ಸೋಲಿಗ ಸಮುದಾಯವೂ ಸಹ ಇಂತಹ ವ್ಯವಸ್ಥೆಯೊಳಗೆ ಜೀವನ ನಡೆಸುತ್ತಿದೆ. ಕುಟುಂಬವು ಒಂದು ಪ್ರಾಥಮಿಕ ಸಮೂಹವಾಗಿದೆ.

ಸೋಲಿಗರು ಅನಾದಿಕಾಲದಿಂದಲೂ ಕಾಡಿನಲ್ಲಿಯೇ ವಾಸ ಮಾಡುತ್ತಿದ್ದುದರಿಂದ ಇವರಲ್ಲಿ ಪುರುಷ–ಮಹಿಳೆ ಇಬ್ಬರೂ ಸಹ ಸಮಾನರಾಗಿ ಕಾಣುತ್ತಾರೆ. ಕಾಡಿನಲ್ಲಿ ಅಲೆಮಾರಿಗಳಾಗಿ ಕಾಡಿನ ಗೆಡ್ಡೆ–ಗೆಣಸು, ಸೊಪ್ಪು, ಕಾಡಿನ ಹಣ್ಣುಗಳು ಮುಂತಾದವುಗಳೇ ಇವರ ಆಹಾರ. ಗಂಡ–ಹೆಂಡತಿ ಅಥವಾ ಗುಂಪುಗಳಲ್ಲಿ ಮೊದಲು ಮರದ ಮೇಲೆ, ಪೊಟರೆಗಳಲ್ಲಿ, ಗವಿ, ಕಲ್ಲು–ಬಂಡೆಗಳಲ್ಲಿ, ಬೆಟ್ಟ–ಗುಡ್ಡಗಳಲ್ಲಿ, ಅಲೆದಾಡುತ್ತಾ ಕೆಲವು ಪ್ರಾಣಿಗಳಿಂದ ರಕ್ಷಿಸಲು ಮರದ ಮೇಲೆ ಮತ್ತು ಬಿದಿರಿನ ಕಟ್ಟೆಯ ಮೇಲೆ ಅಟ್ಟಣಿ, ಅಟ್ನಿ(ಮನೆ, ಗುಡಿಸಲು) ಕಟ್ಟಿಕೊಂಡು ವಾಸಿಸುತ್ತಿದ್ದರು. ಪುರುಷ–ಸ್ತ್ರೀ ಇಬ್ಬರೂ ಸಹ ಸಮನಾಗಿ ತಮ್ಮ ತಮ್ಮ ಕೆಲಸವನ್ನು ಮಾಡಿಕೊಂಡು ವಾಸಿಸುತ್ತಿದ್ದರು. ಕಾಡಿನಲ್ಲಿ ಕೆಲಸ ಮಾಡುತ್ತಾ ತಮ್ಮ ಜೀವನ ಸಾಗಿಸುತ್ತಿದ್ದರು. ಸೋಲಿಗರಲ್ಲಿ ಮಾತೃ ಪ್ರಧಾನ ಕುಟುಂಬವು ಹಿಂದೆ ಹೆಚ್ಚಾಗಿದ್ದು, ಸಮುದಾಯಗಳಲ್ಲಿ ಕುಟುಂಬವು ಪ್ರಧಾನವಾಗಿ ಮಕ್ಕಳ ಲಾಲನೆ ಪಾಲನೆ, ಪೋಷಣೆಯನ್ನು ಮಾಡುವುದರ ಜೊತೆಗೆ ಸಮುದಾಯದಲ್ಲಿ ರೀತಿ, ನೀತಿಗಳು, ಸಹಬಾಳ್ವೆ ಇತ್ಯಾದಿಯಾಗಿ ಸಮುದಾಯದ ಒಟ್ಟಾರೆ ಚಿತ್ರಣವನ್ನು ಕುಟುಂಬದಲ್ಲಿ ಕಲಿಯಲು ಸಹಾಯಕವಾಗುತ್ತದೆ. ಸೋಲಿಗ ಸಮುದಾಯದ ಕುಟುಂಬದಲ್ಲಿ ಗಂಡ, ಹೆಂಡತಿ ಮತ್ತು ಅವರ ಮಕ್ಕಳು ವಾಸ ಮಾಡುತ್ತಾರೆ. ಮದುವೆಯಾದ ನಂತರದಲ್ಲಿ ತಮ್ಮ ಮಕ್ಕಳು ಪಕ್ಕದಲ್ಲಿಯೇ ಮತ್ತೊಂದು ಗುಡಿಸಲು ಕಟ್ಟಿಕೊಂಡು ಹೊಸದಾಗಿ ಕೂಡಿಕೊಂಡ ಗಂಡು ಹೆಣ್ಣು ವಾಸ ಮಾಡುತ್ತಾರೆ. ಸೋಲಿಗ ಕುಟುಂಬದಲ್ಲಿ ಅವರ ಮಕ್ಕಳಿಗೆ ಹೆಚ್ಚಿನ ಸ್ವತಂತ್ರವನ್ನು ನೀಡಿರುತ್ತಾರೆ. ಯಾವುದೇ ರೀತಿಯಾದ ನಿರ್ಬಂಧವನ್ನು ಅವರ ಮಕ್ಕಳಿಗೆ ವಿಧಿಸುವುದಿಲ್ಲ. ಮಗು ಬೆಳೆಯುವಾಗಲೇ ಕುಟುಂಬದ ರೀತಿ–ನೀತಿ, ಪರಿಸರ, ಆಚಾರ–ವಿಚಾರ, ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆ ಇತ್ಯಾದಿಗಳನ್ನು ಪರಿಸರದೊಟ್ಟಿಗೆ ಬೆಳೆಯುತ್ತ ಕಲಿಯುತ್ತಾರೆ.

### ೩.೨. ವಿವಾಹ ಮತ್ತು ವಿವಾಹದ ವ್ಯಾಖ್ಯೆಗಳು

ವಿವಾಹ ಎಂಬ ಪದವು ಸಂಸ್ಕೃತ ಭಾಷೆಯ 'ವಿ' 'ವಾಹ' ಎಂಬ ಶಬ್ದಗಳಿಂದ ಉತ್ಪತ್ತಿಯಾಗಿದೆ. 'ವಿ' ಎಂದರೆ 'ಎತ್ತಿಕೊಂಡು' ಎಂಬ ಅರ್ಥವಿದೆ. ಅಂದಿನ ದಿನಗಳಲ್ಲಿ ಸಾಮಾನ್ಯವಾಗಿ ವಧುವಿನ ಮನೆಯಲ್ಲಿ ವಿವಾಹದ ವಿಧಿ ವಿಧಾನಗಳು ನಂತರ ವರನು ವಧುವನ್ನು ಪಲ್ಲಕ್ಕಿಯಲ್ಲಿ ಎತ್ತಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗುತ್ತಿದ್ದನು."[೪] ಈ ರೀತಿಯಾದ ಸಂಬಂಧವನ್ನು ವಿವಾಹ ಎಂದು ಕರೆಯಲ್ಪಟ್ಟಿದೆ.

ವಿವಾಹವು ಒಂದು ಸಾಮಾಜಿಕ ಒಪ್ಪಂದ. ವಿವಾಹವು ಒಂದು ಪ್ರಮುಖವಾದ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ. ಮಾನವನ ಲೈಂಗಿಕ ಜೀವನವನ್ನು ಹಾಗೂ ಲೈಂಗಿಕ ಸಂಬಂಧವನ್ನು ನಿಯಂತ್ರಿಸುವುದಕ್ಕಾಗಿ ಸಮಾಜದಿಂದ ಸ್ಥಾಪಿತವಾದ ಸಂಸ್ಥೆಯಾಗಿದೆ. ವಿವಾಹದ ಬಗ್ಗೆ ಪಾಶ್ಚಿಮಾತ್ಯರು

ನೀಡಿರುವ ಒಂದೆರಡು ವ್ಯಾಖ್ಯೆಗಳು ಹೀಗಿವೆ- ವಿವಾಹವು ಸಂತಾನಾಪೇಕ್ಷೆಯುಳ್ಳ ಗಂಡು-ಹೆಣ್ಣುಗಳ ನಡುವೆ ಏರ್ಪಟ್ಟ ನಂಟು. ವಿವಾಹವೆಂಬುದು ಗಂಡು-ಹೆಣ್ಣುಗಳ ನಡುವಿನ ಕರಾರು ಅಥವಾ ಒಪ್ಪಂದ. 'ವಿವಾಹವು ಲೈಂಗಿಕ ಜೀವನ ನಡೆಸಲು ಮಾನವನಿಗೆ ನೀಡಲಾಗಿರುವ ಪರವಾನಗಿ' ಇತ್ಯಾದಿ. ಆಧ್ಯಾತ್ಮಿಕ ದೃಷ್ಟಿಯನ್ನು ಹೊಂದಿರುವ ಹಿಂದುಗಳು ವಿವಾಹವನ್ನು ಒಂದು 'ಪವಿತ್ರವಾದ ಧಾರ್ಮಿಕ ವಿಧಿ' ಎಂದೇ ಪರಿಗಣಿಸುತ್ತಾರೆ.

**ವಿವಾಹದ ವ್ಯಾಖ್ಯೆ**

ಆಲ್ ಫ್ರೇಡ್ ಮೆಟ್ಯುನ್ಲೀ ಅವರ ಅಭಿಪ್ರಾಯದಲ್ಲಿ ವಿವಾಹ ಸಂಸ್ಥೆಯು, ಗಂಡು-ಹೆಣ್ಣುಗಳ ನಿಶ್ಚಿತ ಬಹಿರಂಗದಲ್ಲಿ ಜತೆಗೂಡಿ ಪತಿ-ಪತ್ನಿರಾಗುವುದಕ್ಕೆ ವಿವಾಹ ಎಂದು ಹೇಳಬಹುದು. ವಿವಾಹವು ಆದಿ ಕಾಲದಿಂದಲೂ ಬೆಳೆದು ಬಂದಿರುವ ಮಾನವ ಜೀವಿಯ ಜೀವನವು ಲೈಂಗಿಕವಾಗಿ ಸ್ತ್ರೀ ಪುರುಷರ ಮಿಲನದಿಂದ ಪರಿಪೂರ್ಣವಾಗುತ್ತದೆ. ಈ ವಿವಾಹ ಸಂಸ್ಥೆಯು ಸಮಾಜದಲ್ಲಿ ಸಾರ್ವತ್ರಿಕವಾದುದು. ಜನಾಂಗದ ಉದ್ಧಾರಕ್ಕೊಸ್ಕರ ವಿವಾಹ ಅವಿಭಾಜ್ಯ ಅಂಗವಾದ ಸಾಮಾಜಿಕ ಸಂಸ್ಥೆ ಎಂದಿದ್ದಾರೆ.

**ವೆಷ್ಟರ್ ಮಾರ್ಕ್** ಎಂಬಾತನು ತನ್ನ **"ಹಿಸ್ಟರಿ ಆಫ್ ಹ್ಯೂಮನ್ ಮ್ಯಾರೇಜ್"** ಎಂಬ ಕೃತಿಯಲ್ಲಿ ತಿಳಿಸಿರುವಂತೆ, ಪ್ರಜೋತ್ಪಾದನೆಯ ಕ್ರಿಯೆಯಾದ ಶಿಶುವಿನ ಜನನದವರೆಗೆ ಮಾತ್ರ ಮುಂದುವರಿಯುತ್ತದೆ. ನಂತರವೂ ಸಾಮಾನ್ಯವಾಗಿ ಹೆಚ್ಚು ಕಾಲ ಮುಂದುವರಿಯುವ ಗಂಡು-ಹೆಣ್ಣಿನ ಸಂಬಂಧಕ್ಕೆ 'ವಿವಾಹ' ಎನ್ನಬಹುದು.

**ಎಚ್ ಲೋವಿ** ಅವರ ಪ್ರಕಾರ ಸಮಾಜ ಅಂಗೀಕಾರ ಪಡೆದ ಸಂಗಾತಿಗಳ ಶಾಶ್ವತವಾದ ಸಂಯೋಗವೇ ವಿವಾಹ.

**ಮ್ಯಾಲಿನೋಸ್ಕಿ** ಅವರ ಪ್ರಕಾರ ವಿವಾಹ ಸ್ತ್ರೀ ಪುರುಷರ ನಡುವೆ ಲೈಂಗಿಕ ಹಾಗು ಮಾನಸಿಕ ಸಂಬಂಧಗಳನ್ನು ಏರ್ಪಡಿಸಿಕೊಂಡ ಒಪ್ಪಂದವಾಗಿದೆ.

**ಜಾಕಬ್ ಮತ್ತು ಸ್ಟೇರ್ನ** ಅವರು 'ಪತಿ ಪತ್ನಿಯರ ನಡುವಿನ ಸಾಮಾಜಿಕ ಸಂಬಂಧ ಅಥವಾ ದಾಂಪತ್ಯ ಜೀವನದ ಜೊತೆಗಾರರನ್ನು ಒಂದುಗೂಡಿಸುವ ಸಮಾರಂಭವೇ ವಿವಾಹ' ಎಂದಿದ್ದಾರೆ.

**ಗಿಲಿನ್ ಮತ್ತು ಗಿಲಿನ್** ಅವರ ಪ್ರಕಾರ ಮಕ್ಕಳನ್ನು ಪಡೆಯಲು ಹಾಗೂ ಸಂಸಾರವನ್ನು ಹೂಡಲು ಸಮಾಜ ನೀಡಿದ ಒಪ್ಪಿಗೆಯೇ ವಿವಾಹ ಎಂದಿದ್ದಾರೆ.

ಕುಟುಂಬ ಮತ್ತು ವಿವಾಹ ಸಮಾಜದ ಎರಡು ಪ್ರಮುಖ ಸಂಸ್ಥೆಗಳು. ವಿವಾಹವು ಮಾನವನ ಆಸೆ-ಆಕಾಂಕ್ಷೆ ಹಾಗೂ ಬೇಡಿಕೆಗಳನ್ನು ಪೂರೈಸುತ್ತವೆ. ಮಾನವನು ಸಮಾಜದಲ್ಲಿ ವಿವಾಹದ ಧ್ಯೇಯೋದ್ದೇಶಗಳ ಪೂರೈಕೆಗಾಗಿ ಈ ಪದ್ಧತಿಯ ಮೇಲೆ ಅನೇಕ ಕಟ್ಟುಪಾಡುಗಳನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬರುತ್ತಿದ್ದಾನೆ. ಎಲ್ಲಾ ಸಮಾಜದಲ್ಲೂ ವಿವಾಹ ಒಂದು ಕೌಟುಂಬಿಕ ವ್ಯವಸ್ಥೆಯ ನಿರ್ಮಾಣಕ್ಕೆ ಅಡಿಗಲ್ಲಾಗಿ ನಿಂತಿದೆ. ಇದು ಸ್ತ್ರೀ ಪುರುಷರಿಬ್ಬರೂ ಕಾಯ, ವಾಚ, ಮನಸ, ಸತಿ-ಪತಿಗಳಾಗಿ ತಮ್ಮ ದಾಂಪತ್ಯ ಬದುಕನ್ನು ಕಟ್ಟಿಕೊಳ್ಳಲು ಸಮಾಜ ನೀಡಿರುವ ಮಾನ್ಯತೆಯ

ಆಯುಧವಾಗಿದೆ. ಇಂದಿಗೂ ಭಾರತೀಯ ಸಮಾಜದಲ್ಲಿ ವಿವಾಹವಾದ ಸ್ತ್ರೀ ಪುರುಷರಿಗೆ ಉತ್ತಮ ಸ್ಥಾನಮಾನಗಳು ದೊರೆಯುವುದನ್ನು ನಾವು ಕಾಣಬಹುದು. ಆದರೆ ವಿವಾಹ ಪದ್ಧತಿಯ ಕ್ರಮಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದು ವಿಶೇಷ. ಅಂದರೆ, ಕೆಲವು ಸಮಾಜಗಳು ಆಡಂಬರದ ಮದುವೆಗೆ ಒತ್ತುಕೊಟ್ಟರೆ ಮತ್ತೆ ಕೆಲವು ಸಮಾಜ ಮತ್ತು ಸಮುದಾಯಗಳು ಸರಳ ವಿವಾಹಗಳಿಗೆ ಮಹತ್ವ ನೀಡುತ್ತದೆ. ಒಟ್ಟಾರೆಯಾಗಿ ವಿವಾಹ ಎನ್ನುವುದು ಆ ಸಮುದಾಯದ ಪರಿಸರ ಮತ್ತು ಆರ್ಥಿಕತೆಯನ್ನು ಅವಲಂಬಿತವಾಗಿಯೇ ರೂಢಿಗೆ ಬಂದಿರುತ್ತದೆ ಎಂಬುದನ್ನು ನಾವು ಮುಖ್ಯವಾಗಿ ಅರಿಯಬೇಕು.

ಸೋಲಿಗ ಬುಡಕಟ್ಟು ಸಮಾಜವು ತನ್ನ ಭೌಗೋಳಿಕತೆಗೆ ಅನುಗುಣವಾಗಿಯೇ ವೈವಾಹಿಕ ಸಂಬಂಧವನ್ನು ಬೆಳೆಸಲು ಅನುಮತಿಯನ್ನು ಕೊಟ್ಟಿದೆ. ಆರ್ಥಿಕವಾಗಿ ಕೆಳಮಟ್ಟದಲ್ಲಿರುವ ಈ ಸಮುದಾಯವು ತನ್ನ ಸರಳ ಸುಂದರ ವಿವಾಹ ಪದ್ಧತಿಗಳ ಮುಖೇನ ಇತರ ಸಮಾಜಗಳಿಗೆ ಮಾದರಿಯಾಗಿ ತನ್ನ ಸಮುದಾಯದ ಸ್ಥಾನಮಾನಗಳನ್ನು ವೃದ್ಧಿಗೊಳಿಸುವಲ್ಲಿ ಯಶಸ್ವಿಯಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಸೋಲಿಗರಲ್ಲಿ ಕುಲವು ಮದುವೆ ಸಂದರ್ಭದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಒಂದೇ ಕುಲದ ಹೆಣ್ಣು ಮತ್ತು ಗಂಡು, ಅಣ್ಣ–ತಂಗಿ ಎಂಬ ಭಾವನೆ ಹೊಂದಿದ್ದಾರೆ. ಆದ್ದರಿಂದ ಒಂದೇ ಕುಲದವರಲ್ಲಿ ಮದುವೆ ಅಸಾಧ್ಯ. ಸೋಲಿಗರಲ್ಲಿ ಐದು ಕುಲದ ಸೋಲಿಗರು, ಏಳು ಕುಲದ ಸೋಲಿಗರು ಮತ್ತು ಹನ್ನೆರಡು ಕುಲದ ಸೋಲಿಗರು ಇದ್ದಾರೆ. ಬೇರೆ ಬೇರೆ ಕುಲ ಕುಟುಂಬದ ಜೊತೆ ಮದುವೆ ಮಾಡಿಕೊಳ್ಳುತ್ತಾರೆ. ಪ್ರಸ್ತುತ ದಿನಗಳಲ್ಲಿ ಕೆಲವೊಂದು ಮದುವೆಗಳು ಒಂದೇ ಕುಲದಲ್ಲಿ ನಡೆದಿರುವುದನ್ನು ಸಂಶೋಧನೆಯ ಮೂಲಕ ತಿಳಿಯಲಾಗಿದೆ.

**೩.೨.೧. ಸೋಲಿಗರು ವಿವಾಹ**

ಸೋಲಿಗರ ವಿವಾಹವು ಒಂದು ಸಾಮಾಜಿಕ ವ್ಯವಸ್ಥೆಯಾಗಿದೆ. ಮಾನವನ ಸಭ್ಯತೆಯು ಬೆಳೆದ ತರುಣದಲ್ಲಿ ಸಾಮಾಜವು ನಿರ್ಮಾಣವಾಯಿತು. ವಿವಾಹದ ಮೂಲಕ ಸ್ತ್ರೀ–ಪುರುಷರಲ್ಲಿ ಪರಸ್ಪರ ಸಂಬಂಧವು ಬೆಸೆಯಲ್ಪಡುತ್ತದೆ. ವಿವಾಹದಿಂದ ಪರಿವಾರವಾಯಿತು. ಹಿಮಾಚಲ ಪ್ರದೇಶದ ಗಿರಿಜನರಲ್ಲಿ ಮದುವೆಯಾಗುವ ಹುಡುಗಿಯು ತನ್ನ ಗಂಡನಾಗುವವನ ಮನೆಗೆ ಕದ್ದು ಹೋಗಿ ಅವಿತುಕೊಳ್ಳುತ್ತಾಳೆ. ಭಾವಿ ಅತ್ತೆ ಅಥವಾ ಮನೆಯ ಇತರ ಹಿರಿಯರು ಅವಳನ್ನು ಹೊರಗೆ ಕಳುಹಿಸಲು ಪ್ರಯತ್ನಿಸುತ್ತಾರೆ. ಆದರೆ ಹುಡುಗಿಯು ಪಟ್ಟು ಹಿಡಿದು ಅಲ್ಲೇ ನಿಲ್ಲುತ್ತಾಳೆ. ಹೀಗೆ ಹತ್ತು ದಿನಗಳು ನಡೆದ ನಂತರ ಗಂಡಿನ ಮನೆಯವರು ಹೆಣ್ಣನ್ನು ಮೆಚ್ಚಿ ಮದುವೆ ನಡೆಸುತ್ತಾರೆ. ಹೆಣ್ಣೆಂದರೆ 'ಆಸ್ತಿ' ಎಂದು ಪರಿಗಣಿಸುವ ಕೆಲವು ಪಂಗಡಗಳು ಇವೆ.

ಸೋಲಿಗರಲ್ಲಿ ವಿವಾಹವಾದ ನಂತರ ಗಂಡ–ಹೆಂಡತಿ, ತಂದೆ–ತಾಯಿಯ ಮನೆಯ ಅಕ್ಕ–ಪಕ್ಕದಲ್ಲಿಯೇ ತಮ್ಮದೊಂದು ಪ್ರತ್ಯೇಕ ಗುಡಿಸಲು ಕಟ್ಟಿಕೊಂಡು ಹತ್ತಿರವೇ ವಾಸ ಮಾಡುತ್ತಾರೆ. ಇದರಿಂದ ಸಂಬಂಧ, ಪ್ರೀತಿ, ವಿಶ್ವಾಸಕ್ಕೇನು ಕಡಿಮೆ ಇರುವುದಿಲ್ಲ. ಯಾರಿಗೂ ಧಕ್ಕೆಯಾಗದಂತೆ ಎಂದಿನಂತೆಯೇ ಜೀವನ ವಿಧಾನ ನಡೆಯುತ್ತದೆ. ಸೋಲಿಗರಲ್ಲಿ ಮದುವೆಯ ವಿಧಿ ವಿಧಾನವು ತುಂಬಾ ಆಕರ್ಷಕವಾಗಿರುತ್ತದೆ. ಪ್ರಸ್ತುತದಲ್ಲಿಯೂ ಈ ರೀತಿಯಲ್ಲಿಯೇ ಜೀವನ ನಡೆಸುತ್ತಾರೆ. ಆದರೆ

ಇವುಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಬದಲಾವಣೆಗಳು ಆಗಿವೆ. ಗುಡಿಸಲು ಬದಲಾಗಿ ಸರಕಾರದ ಮನೆ ಬಂದಿದೆ. ಜಾಗದ ಸಮಸ್ಯೆಯಿಂದ ಒಂದೇ ಮನೆಯಲ್ಲಿ ಹಲವಾರು ಕುಟುಂಬಗಳು ಒಂದೇ ಮನೆಯಲ್ಲಿ ಕೆಲವು ಸಲ ವಾಸ ಮಾಡುತ್ತಿರುವುದು ಕಂಡು ಬಂದಿದೆ.

ಸೋಲಿಗರ ವಿವಾಹ ತುಂಬಾ ಸರಳವಾದುದು. ಅವರ ಸಂಪ್ರದಾಯದ ಪ್ರಕಾರ ಮದುವೆಗೆ ಖರ್ಚಾಗುವ ವೆಚ್ಚ ಕೇವಲ ಒಂದು ಕಾಲು ರೂಪಾಯಿಯಿಂದ ಹನ್ನೆರಡುವರೆ ರೂಪಾಯಿಗಳು ಮಾತ್ರ. ಕೆಲವು ಮದುವೆಗಳು ಹಾಗೆಯೇ ನಡೆದುಹೋಗುತ್ತದೆ. ಮತ್ತೆ ಕೆಲವು ಸಲ ನ್ಯಾಯಸ್ಥರ, ಕುಲಸ್ಥರ ಮುಂದೆ ವೀಳ್ಯದೆಲೆ ಮತ್ತು ಅಡಿಕೆ ಕೊಡುವ ಮೂಲಕ ನಡೆಯುತ್ತದೆ. ಕುಟುಂಬ ಮತ್ತು ವಿವಾಹ ಸಮಾಜದ ಎರಡು ಪ್ರಮುಖ ಸಂಸ್ಥೆಗಳು. ವಿವಾಹವು ಮಾನವನ ಆಸೆ-ಆಕಾಂಕ್ಷೆ ಹಾಗೂ ಬೇಡಿಕೆಗಳನ್ನು ಪೂರೈಸುತ್ತವೆ. ಸೋಲಿಗರು ಅಲೆಮಾರಿ ಜೀವನವನ್ನು ಮಾಡುತ್ತಾ ತಮ್ಮ ಸಂಗಾತಿಯನ್ನು ಹಾಡಿ, ಪೋಡುಗಳಲ್ಲಿ ಆಯ್ಕೆ ಮಾಡಿಕೊಂಡು ಸಂಸಾರ ಮಾಡುತ್ತಿದ್ದರು. ಹುಡುಗಿ ಅಥವಾ ಹುಡುಗನ ಆಯ್ಕೆಯಲ್ಲಿ ಯಾವುದೇ ರೀತಿಯ ನಿರ್ಬಂಧ ಇರುತ್ತಿರಲಿಲ್ಲ. ತಮಗಿಷ್ಟ ಬಂದವರ ಜೊತೆ ಹೋಗಿ ಸಂಸಾರ ಮಾಡುತ್ತಾ ಮಕ್ಕಳು ಆದ ಮೇಲೆ ಪ್ರತ್ಯೇಕ ಗುಡಿಸಲು ಕಟ್ಟಿಕೊಂಡು ಕಾಡಿನ ಮಧ್ಯೆ ವಾಸ ಮಾಡುತ್ತಿದ್ದರು. ಮಾದೆ ಗೌಡರು ಹೇಳುವ ಪ್ರಕಾರ "ನಮಗೆ ಯಾವ ವಾದ್ಯ, ಸಪ್ಪರ, ಮದ್ದಳೆ ಸದ್ದು ಇಲ್ಲೆ, ಹೊಸ ಬಟ್ಟೆ, ಸ್ಯಾಲೆ ಸೀರೆ ರವಿಕೆ ಇಲ್ಲದೇ ಮಾಂಗಲ್ಯ, ಸಿನ್ನ(ಚಿನ್ನ) ಇದ್ಯಾವುದೂ ಇಲ್ಲದೆ ತಮಗಿಷ್ಟ ಬಂದವರನ್ನು ಆರಿಸಿಕೊಂಡು ನಾವು ಕೂಡುತ್ತಿದ್ದೆವು, ಸಂಸಾರ ಮಾಡುತ್ತಿದ್ದೆವು".

ಸೋಲಿಗರಿಗೆ ಮದುವೆಯಾಗಲೂ ಯಾವುದೇ ರೀತಿಯ ವಾದ್ಯ, ಚಪ್ಪರ, ಹೊಸ ಬಟ್ಟೆ, ಮಾಂಗಲ್ಯಗಳ ಅಗತ್ಯವಿರುವುದಿಲ್ಲ. ಪ್ರಸ್ತುತ ಸಹ ಈ ರೀತಿಯ ಮದುವೆಗಳು ನಡೆಯುತ್ತವೆ. ಕಾಲಾನಂತರದಲ್ಲಿ ಸೋಲಿಗರು ಅಲೆಮಾರಿ ಜೀವನದಿಂದ ಕುಮ್ರಿ ಬೇಸಾಯ ಮಾಡುತ್ತಾ, ಅಲ್ಲಲ್ಲಿ ನೆಲೆ ನಿಂತು ವ್ಯವಸಾಯ ಮಾಡತೊಡಗಿದರು. ನಂತರದಲ್ಲಿ ಚಿಕ್ಕ-ಚಿಕ್ಕ ಹುಲ್ಲಿನ ಗುಡಿಸಲುಗಳ ಗುಂಪು ಕಟ್ಟಿಕೊಂಡು (೫ರಿಂದ ೧೦ ಮನೆ) ಕಾಡಿನಲ್ಲಿ ಸಿಗುವ ಗೆಡ್ಡೆ-ಗೆಣಸು, ಸೊಪ್ಪು-ಹಣ್ಣುಗಳನ್ನು ತಮ್ಮ ಆಹಾರಕ್ಕಾಗಿ ಉಪಯೋಗಿಸುತ್ತಾ ತಾವಿರುವ ಜಾಗದಲ್ಲಿಯೇ ಕಳಕೊಟ್ಲು ಬೇಸಾಯ ಮಾಡಿಕೊಂಡು ಗಂಡ-ಹೆಂಡತಿ ಜೊತೆ ತಮ್ಮ ಪುಟ್ಟ ಮಕ್ಕಳ ಜೊತೆಗೂಡಿ ಹೊಲದಲ್ಲಿ ವ್ಯವಸಾಯ ಮಾಡುತ್ತಾ ಮಿಶ್ರಬೆಳೆ ಬೆಳೆಗಳನ್ನು ಒಂದೇ ಜಮೀನಿನಲ್ಲಿ ಬೆಳೆಯುತ್ತಿದ್ದರು. ಹೊಲದಲ್ಲಿಯೇ ಸಣ್ಣ ಗುಡಿಸಲು ಅಥವಾ ಅಟ್ನಿ-ಅಟ್ಟಣಿ (ಮನೆ) ಕಟ್ಟಿಕೊಂಡು ಅಲ್ಲಿಯೇ ಉಳಿಯುತ್ತಿದ್ದರು. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸೋಲಿಗರು ಸರಳ ಜೀವನವನ್ನು ರೂಢಿಸಿಕೊಂಡು ಬಂದಿರುವ ಸಂಪ್ರದಾಯ, ಆಚಾರ-ವಿಚಾರ, ಪ್ರಕೃತಿಯೊಂದಿಗಿನ ಸಂಬಂಧ, ಸ್ಥಳೀಯ, ಸಾಮಾಜಿಕ, ಸಾಮುದಾಯಿಕ ವ್ಯವಸ್ಥೆ ತಮ್ಮದೇ ಆದ ವಲಯದ ಜೀವನ ಪ್ರತ್ಯೇಕವಾದ ಜೀವನ ಪದ್ಧತಿ, ಹೊರಗಿನ ಜನರ ಸಂಪರ್ಕ ಇಲ್ಲದಿರುವುದು, ಸಂಪರ್ಕದ ಕೊರತೆ ಈ ಎಲ್ಲಾ ಕಾರಣಗಳು ಸೋಲಿಗರ ಸರಳವಾದ ಮದುವೆಗೆ ಕಾರಣವಾಗಿವೆ.

### ೩.೨.೧.೧. ಸೋಲಿಗರಲ್ಲಿ ವಿವಿಧ ಬಗೆಯ ವಿವಾಹಗಳು

ಅಪಹರಣ ವಿವಾಹ, ಸೇವಾ ವಿವಾಹ, ಅಕ್ರಮ ಪ್ರವೇಶ ವಿವಾಹ, ಬಹುಪತ್ನಿತ್ವ ವಿವಾಹ, ಮೈದುನ ವಿವಾಹ, ಏಕ ಸಂಗಾತಿ ವಿವಾಹ, ವಿಧವಾ ವಿವಾಹ, ಬಲವಂತ ವಿವಾಹ(Marriage

by force), ಪ್ರೇಮ ಪ್ರಕರಣ ವಿವಾಹ, ಒಪ್ಪಂದ ವಿವಾಹ(Arrange Marriage) ಹೀಗೆ ವಿವಿಧ ಬಗೆಯ ವಿವಾಹಗಳು ಪ್ರಚಲಿತದಲ್ಲಿವೆ.

ಸೋಲಿಗರಲ್ಲಿಯೂ ಓಡಿಹೋಗಿ ಹೆಣ್ಣು-ಗಂಡು ಕೂಡಿಕೊಳ್ಳುವುದು(ವಿವಾಹವಾಗುವುದು) ಇದೆ. ಹಿಂದೆ ಕಾಡಿಗೆ ಓಡಿಹೋಗುತ್ತಿದ್ದರು. ಇತ್ತೀಚೆಗೆ ಅಕ್ಕ-ಪಕ್ಕದ ಸಂಬಂಧಿಕರ ಮನೆ, ಚಿಕ್ಕಮ್ಮನ ಮನೆ, ದೊಡ್ಡಮ್ಮನ ಮನೆ ಹಾಗೂ ಪೋಡುಗಳಿಗೆ ಹೋಗುತ್ತಾರೆ. ಹೆಣ್ಣೆಂದರೆ ಆಸ್ತಿ ಎನ್ನುವುದು ಪ್ರಸ್ತುತ ಸೋಲಿಗರಲ್ಲಿಯೂ ಇದೆ. ಯಾಕೆಂದರೆ ಗಂಡು ತಾ ಮೆಚ್ಚಿದ ಹುಡುಗಿಯನ್ನು ಪಡೆಯಬೇಕಾದರೆ, ವರ್ಷಾನುಗಟ್ಟಲೆ ಭಾವಿ ಅತ್ತೆಯ ಮನೆಯಲ್ಲಿ ಸೇರಿಕೊಂಡು ಸತ್ವ ಪರೀಕ್ಷೆಯ ರೀತಿಯಲ್ಲಿ ಎಲ್ಲಾ ರೀತಿಯ ಕೆಲಸವನ್ನು ಮಾಡಬೇಕು. ಹುಡುಗ ಸರಿ ಇದ್ದಾನೆಯೇ? ನಮ್ಮ ಮಗಳನ್ನು ಚೆನ್ನಾಗಿ ಸಾಕುತ್ತಾನೆಯೇ? ಎಂದು ಹಾಗೂ ಆ ಸಂದರ್ಭದಲ್ಲಿ ಹುಡುಗ-ಹುಡುಗಿ ಅರ್ಥ ಮಾಡಿಕೊಂಡಿದ್ದರೆ ಮಾತ್ರ ಮದುವೆ ನೆರವೇರುತ್ತದೆ. ಇಲ್ಲದಿದ್ದರೆ ಆ ಮದುವೆ ನಡೆಯುವುದಿಲ್ಲ. ಯಾವ ಗಲಾಟೆಯೂ ಇಲ್ಲದೆ ಬೇರೆಯಾಗುತ್ತಾರೆ. ಸಮಾಜ ಸುಖಕರವಾಗಿ ಇರಲು ಹಾಗು ಸಂಸಾರದಲ್ಲಿ ಗಂಡ-ಹೆಂಡತಿ ಸುಖಕರವಾಗಿ ಬಾಳಲು ಗಂಡು-ಹೆಣ್ಣು ಮುಖ್ಯವಾಗಿ ತಮ್ಮ ಬಾಳ ಸಂಗಾತಿಯನ್ನು ತಾವೇ ಸ್ವತಂತ್ರವಾಗಿ ಆಯ್ಕೆ ಮಾಡಿಕೊಳ್ಳಬೇಕು ಎಂಬ ಸರಳವಾದ ನಂಬಿಕೆ ಸೋಲಿಗರಲ್ಲಿದೆ. ಕಾಡಿನ ಒಳಗೆ ಎಷ್ಟೋ ವರ್ಷಗಳ ಹಿಂದೆ ಸೋಲಿಗರು ಅಲೆಮಾರಿ ಜೀವನವನ್ನು ನಡೆಸುತ್ತಾ ತಮ್ಮ ಸಂಗಾತಿಯನ್ನು ಆಯಾ ಗುಂಪುಗಳಲ್ಲಿ ಹಾಗೆಯೇ ಗಂಡ-ಹೆಂಡತಿಯಾಗಿ ಕೂಡಿಕೊಂಡು ಸಂಸಾರ ಮಾಡುತ್ತಿದ್ದರು. ಹುಡುಗಿ ಅಥವಾ ಹುಡುಗನ ಆಯ್ಕೆಯಲ್ಲಿ ಯಾವುದೇ ರೀತಿಯ ನಿರ್ಬಂಧ ಇರುತ್ತಿರಲಿಲ್ಲ. ಮಕ್ಕಳಾದ ಮೇಲೆ ಆಯಾಯ ಕುಟುಂಬದ ಕಲ್ಪನೆಯಲ್ಲಿಯೇ ಗುಡಿಸಲು ಕಟ್ಟಿಕೊಂಡು ಕಾಡಿನ ಮಧ್ಯೆ ವಾಸ ಮಾಡುತ್ತಾರೆ.

**ಪ್ರೇಮ ಪರಾರಿ ವಿವಾಹ ಅಥವಾ ಓಡಿ ಹೋಗಿ ಮದುವೆಯಾಗುವುದು**

ಸೋಲಿಗರಲ್ಲಿ ಹೆಚ್ಚು ಪ್ರಚಲಿತವಾಗಿರುವ ವಿವಾಹ ಇದಾಗಿದ್ದು, ಪರಸ್ಪರ ಒಬ್ಬೊರನ್ನೊಬ್ಬರು ಇಷ್ಟಪಟ್ಟ ಗಂಡು ಹೆಣ್ಣು ಸಮುದಾಯದಲ್ಲಿನ ಯಾರ ಅಪ್ಪಣೆಯನ್ನು ಪಡೆಯದೇ ಕಾನನಗಳ ಮಧ್ಯೆ ಅಥವಾ ಅಕ್ಕಪಕ್ಕದ ಅವರ ಸಂಬಂಧಿಕರ ಪೋಡುಗಳಿಗೆ ಓಡಿ ಹೋಗುತ್ತಾರೆ. ಅಂದರೆ ಸೋಲಿಗರಲ್ಲಿ ಹುಡುಗ-ಹುಡುಗಿ ಪ್ರೀತಿಸಿ ಮದುವೆಯಾಗುವುದನ್ನು ಪ್ರೇಮ ಪರಾರಿ ವಿವಾಹ ಎಂದು ಕರೆಯುತ್ತಾರೆ. ಪ್ರೇಮ ಪರಾರಿ ವಿವಾಹವು ವಿಶೇಷವಾಗಿ ಸೋಲಿಗರ ಹಬ್ಬಗಳಾದ ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ, ಜಡೆಸ್ವಾಮಿ ಹಬ್ಬ ಹಾಗೂ ಬಿಳಿಗಿರಿ ರಂಗಪ್ಪನ ಚಿಕ್ಕತೇರಿನ ಜಾತ್ರೆ, ದೊಡ್ಡತೇರಿನ ಜಾತ್ರೆ, ಇಂತಹ ವಿಶೇಷ ದಿನಗಳಲ್ಲಿ ನಡೆದು ಹೋಗುತ್ತದೆ. ಮದುವೆಯಾಗಲು ಹುಡುಗ ಹುಡುಗಿಯು ಮೊದಲೇ ತಮಗಿಷ್ಟವಾದವರನ್ನು ಪೋಡು, ಕಾಲೋನಿಗಳಲ್ಲಿ ನೋಡಿಕೊಂಡು ಪ್ರೀತಿಸಿ ಪರಸ್ಪರ ಒಪ್ಪಿಗೆಯನ್ನು ಸೂಚಿಸಿಕೊಂಡಿರುತ್ತಾರೆ. ಆದರೆ ಅವರಿಬ್ಬರೂ ಕೂಡಿಕೊಳ್ಳಲು(ಮದುವೆಯಾಗಲು) ಒಂದು ವಿಶೇಷ ದಿನಕ್ಕಾಗಿ ಕಾಯುತ್ತಿರುತ್ತಾರೆ. ಈ ರೀತಿಯ ವಿಶೇಷ ದಿನಗಳಲ್ಲಿ ಮದುವೆಯಾಗಲು ಸೋಲಿಗ ಸಮುದಾಯದಲ್ಲಿ ಹಲವಾರು ಕಾರಣಗಳಿವೆ. ಅವುಗಳೆಂದರೆ ತಾವು ಮದುವೆಯಾದ ದಿನವನ್ನು ಗುರುತಿಸುವುದು, ತಮಗೆ ಮದುವೆಯಾಗಿ ಎಷ್ಟು ವರ್ಷಗಳಾಗಿದೆ ಎಂಬುದನ್ನು ತಿಳಿಯಲು ಇವರು ವಿಶೇಷ ದಿನಗಳಿಗಾಗಿ ಕಾಯುತ್ತಾರೆ. ಹಿಂದೆ ಸೋಲಿಗರು ಮದುವೆಗೆ ಯಾವುದೇ ರೀತಿಯ ಮದುವೆ ಕರೆಯೋಲೆಗಳನ್ನು ಮಾಡಿಸುತ್ತಿರಲಿಲ್ಲ. ಹಬ್ಬ, ಜಾತ್ರೆ, ವಿಶೇಷ ದಿನಗಳೇ ಇವರ ಮದುವೆ ದಿನವನ್ನು ನೆನಪಿಸಿಕೊಳ್ಳಲು, ಇವರಿಗೆ ಮದುವೆಯ ಪತ್ರಗಳಾಗಿರುತ್ತಿದ್ದವು.

ಸೋಲಿಗರು ಕಾಡಿಗೆ ಓಡಿಹೋಗುವುದರ ಮೂಲಕ ಮದುವೆಯು ನಡೆದುಹೋಗುತ್ತದೆ. ರೊಟ್ಟಿ ಹಬ್ಬ ಅಥವಾ ಯಾವುದೇ ಹಬ್ಬದ ದಿನದಲ್ಲಿ ಗೋರುಕಾನ ಕುಣಿತ ಮಾಡುತ್ತಿರುವಾಗ ಇಷ್ಟಪಟ್ಟಿರುವ ಇಬ್ಬರೂ ಸನ್ನೆಯನ್ನು ಕಲ್ಲು ಎಸೆಯುವುದರ ಮೂಲಕ ತಿಳಿಸಿ ಕಾಡಿನ ದಾರಿಗೆ ಹೋಗುತ್ತಾರೆ. ಪ್ರಕೃತಿಗೆ ಸಂಬಂಧಿಸಿದ ರೊಟ್ಟಿ ಹಬ್ಬ, ಗೊರಕನಕುಣಿತ ಮತ್ತು ಇತರೆ ಹಬ್ಬ–ಹರಿದಿನಗಳಲ್ಲಿ ತಮ್ಮ ಸಂಗಾತಿಯನ್ನು ಹುಡುಕಿಕೊಂಡು ಮಹಿಳೆಯರೇ ಸ್ವತಂತ್ರವಾಗಿ ಯಾರ ಭಯವಿಲ್ಲದೇ ತಮ್ಮ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ಆಯ್ಕೆ ಮಾಡಿಕೊಳ್ಳುವ ವಿಧಾನದಲ್ಲಿ ರೊಟ್ಟಿ ಹಬ್ಬದ ಸಂದರ್ಭದಲ್ಲಿ ಹುಡುಗ ಅಥವಾ ಹುಡುಗಿ ರಾತ್ರಿಯ ವೇಳೆ ತಮ್ಮ ಪ್ರೇಮ ಪ್ರಸಂಗವನ್ನು ವ್ಯಕ್ತಪಡಿಸಿ, ಕಾಡಿಗೆ ಓಡಿಹೋಗುವ ಮೂಲಕ ಕೆಲವೊಂದು ಸೂಚನೆಗಳನ್ನು ತಮಗೆ ತಾವೇ ತಿಳಿಸಿಕೊಳ್ಳುತ್ತಾರೆ. ಉದಾ: ರಾತ್ರಿ ವೇಳೆಯಲ್ಲಿ ಓಡಿಹೋಗಲು ಸಿದ್ಧವಿರುವಾಗ ಹುಡುಗ ಮುಂಚಿತವಾಗಿ ಕಾಡಿನೊಳಗೆ ಹೋಗುವಾಗ ಮರದ ಸೊಪ್ಪಿನ ಎಲೆಗಳನ್ನು ಕಿತ್ತು ದಾರಿಯ ಉದ್ದಕ್ಕೂ ಹಾಕಿ, ದಾರಿಯನ್ನು ತೋರಿಸುತ್ತಾನೆ. ಹುಡುಗಿಯು ಆ ಎಲೆಯ ಸೊಪ್ಪಿನ ದಾರಿಯನ್ನು ಹಿಡಿದು ಮುಂದೆ ಸಾಗುತ್ತಾಳೆ. ಆ ನಂತರದಲ್ಲಿ ಹುಡುಗ–ಹುಡುಗಿ ತಮ್ಮ ಬಾಳಸಂಗಾತಿಯನ್ನು ಆಯ್ಕೆ ಮಾಡಿಕೊಂಡು ಕಾಡಿನೊಳಗೆ ೨ರಿಂದ ೪ ದಿನಗಳ ಕಾಲ ಕಳೆದು ಪಕ್ಕದ ಸಂಬಂಧಿಕರ ಪೋಡುಗಳಿಗೆ ಹೋಗಿ ಜೀವನ ಸಾಗಿಸುತ್ತಾಳೆ. ಈ ರೀತಿಯಾಗಿ ಹಿಂದೆ ಸೋಲಿಗರಲ್ಲಿ ಮದುವೆಯು ತಮ್ಮದೇ ಆದ ಪಾರಂಪರಿಕ ಹಾಗೂ ಸಾಂಪ್ರದಾಯಿಕ ವ್ಯವಸ್ಥೆಯೊಳಗೆ ನಡೆದುಹೋಗುತ್ತಿತ್ತು. ಆನಂತರದಲ್ಲಿ ತಮ್ಮ ಪೋಡಿಗೆ ಮರಳಿದ ನಂತರ ಕುಲಸ್ಥರ ಮೂಲಕ ತಪ್ಪೊಪ್ಪಿಗೆಯ ಕಾಣಿಕೆಯಾಗಿ ಹನ್ನೆರಡುವರೆ ರೂಪಾಯಿಯನ್ನು ವೀಳ್ಯದೆಲೆ ಕೊಟ್ಟು ಎಲ್ಲರ ಸಮ್ಮುಖದಲ್ಲಿ ಆಶೀರ್ವಾದ ಪಡೆದು ಸತಿ–ಪತಿಗಳಾಗುತ್ತಾರೆ. ಹೀಗೆ ಅವರಿಬ್ಬರು ಗಂಡ–ಹೆಂಡತಿ ಎಂದು ಮಾನ್ಯತೆ ಪಡೆದ ನಂತರದಲ್ಲಿ ತಮ್ಮ ಸಂಬಂಧಿಕರ ಮನೆಯ ಅಕ್ಕಪಕ್ಕದಲ್ಲಿಯೇ ಒಂದು ಗುಡಿಸಲನ್ನು ಕಟ್ಟಿಕೊಂಡು ಯಾರ ಹಂಗಿನಲ್ಲೂ ಇರದೇ ಸ್ವತಂತ್ರವಾಗಿ ಬದುಕು ಸಾಗಿಸುತ್ತಾರೆ.

**'ಸೋಲಿಗರ ಪ್ರೇಮ ಪ್ರಸಂಗದ ಹಾಡು'**

ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.
ನೀರಿಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಸೊಪ್ಪಿಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.
ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.
ಸೌದೆಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಕಾಡಿಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.
ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.
ಅಣಬೆಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಬಿದಿರು ಕಳಲೆಗೆ ಹೋದವಾ ಬಂದಿಲ್ಲಾ ಕಮ್ಮಿ ಲೇಲಂಗಡಿ ಲೇಲಾ
ಲೇಲಾ ಲಲ್ಲಲಾ ಲಲ್ಲಾ ಲಾಲಾಲಾ ಲಲಾ ಲಲ್ಲಾಲಾ ಲಾಲಲಾ ಲಲ್ಲಾ ಲಾಲಲಾ.

ಎಂದು ತಮ್ಮದೇ ಆದ ಜಾನಪದ ಶೈಲಿಯಲ್ಲಿ ಹುಡುಗ ಹುಡುಗಿಯ ಮೇಲೆ ಹಾಡನ್ನು ಕಟ್ಟಿ ಯಾವ ಹುಡುಗ ಹುಡುಗಿ ಪ್ರೇಮ ಪರಾರಿಯಾಗಿ ಕದ್ದು ಓಡಿ ಹೋಗಿರುತ್ತಾರೋ ಅವರ ಮೇಲೆ ಹಾಡನ್ನು ಹಾಡುತ್ತಾರೆ. ಈ ರೀತಿಯಲ್ಲಿ ಹಾಡುವಾಗಲೇ ಅಕ್ಕಪಕ್ಕದವರು ಯಾರು ಪೋಡಿನಲ್ಲಿದ್ದಾರೆ, ಯಾರು ಕಾಣೆಯಾಗಿದ್ದಾರೆ ಎಂದು ಗಮನಿಸಿಸುತ್ತಾರೆ. ಆನಂತರದಲ್ಲಿ ಆ ಪೋಡಿನಲ್ಲಿ ಯಾವುದೋ ಹುಡುಗ ಅಥವಾ ಹುಡುಗಿ ಕಾಣೆಯಾಗಿದ್ದರೆ ಇವರು ಪ್ರೇಮ ಪರಾರಿಯಾಗಿ ಗಂಡು-ಹೆಣ್ಣು ಇಷ್ಟಪಟ್ಟು ಓಡಿಹೋಗಿದ್ದಾರೆ ಎಂದು ತಿಳಿಯುತ್ತಾರೆ. ಜೊತೆಗೆ ಅವರು ಯಾವ ಕಡೆ ಯಾವ ಪೋಡಿನಲ್ಲಿದ್ದಾರೆ ಎಂಬುದನ್ನು ತಿಳಿದುಕೊಳ್ಳುತ್ತಾರೆ. ಕೆಲವರು ಸ್ವಲ್ಪ ದಿನದಲ್ಲಿಯೇ ಹಿಂತಿರುಗಿ ತಮ್ಮ ಪೋಡಿಗೆ ಬಂದು ಸೇರುತ್ತಾರೆ. ಮತ್ತೆ ಕೆಲವರು ಒಂದು ತಿಂಗಳು ಅಥವಾ ಅದಕ್ಕಿಂತ ಹೆಚ್ಚಿನ ದಿನ ಅವರ ಸಂಬಂಧಿಕರ ಮನೆಯಲ್ಲಿಯೇ ಇದ್ದು ಆಮೇಲೆ ಇಬ್ಬರೂ ಕೂಡಿಕೊಂಡು ತಮ್ಮ ಪೋಡಿಗೆ ಬಂದು ಸೇರುತ್ತಾರೆ. ಇದನ್ನೇ ಪ್ರೇಮ ಪರಾರಿ ಅಥವಾ ಓಡಿ ಹೋಗಿ ಮದುವೆಯಾಗುವುದು ಎಂದು ಕರೆಯುತ್ತಾರೆ.

ಸೋಲಿಗರಲ್ಲಿ ಓಡಿಹೋಗಿ ಮದುವೆಯಾದ ಮೇಲೆ ಸುಮಾರು ೧೦ರಿಂದ ೧೫ ದಿನಗೊಳಗಾಗಿ ಊರಿಗೆ ಬಂದಾಗ ನೇರವಾಗಿ ತಮ್ಮ ಮನೆಗೆ ಬರುವುದಿಲ್ಲ. ಭಯದಿಂದ ಹತ್ತಿರದ ಸಂಬಂಧಿಕರ ಮನೆಗೆ ಅಂದರೆ, ಚಿಕ್ಕಪ್ಪ, ಭಾವ, ಅತ್ತೆ, ಅಣ್ಣ ಇವರ ಮೆನೆಕ(ಮನೆಗೆ) ಬರುತ್ತಾರೆ. ನಮಗೆ ಏನಾದರೂ ಹೇಳುತ್ತಾರೆ ಎಂದು ತಿಳಿಯುತ್ತಾರೆ. ಆದರೆ ಇವರು ಬಂದಿರುವುದು ಊರ ಜನರಿಗೇ ಗೊತ್ತಾಗಿರುತ್ತದೆ.

ತಂದೆಗೆ ಕೇಣ ಇರುತ್ತೆ(ಕೋಪ). ಆದರೆ ತಾಯಿಗೆ ಕೇಣ ಇರುವುದಿಲ್ಲ ತಾಯಿ ಕದ್ದು, ಬಿದ್ದು ಗಂಡನ ಕಣ್ಣು ತಪ್ಪಿಸಿ ಮಗಳನ್ನು ನೋಡುವುದಕ್ಕೆ ಹೊರಡುತ್ತಾಳೆ. ಅಲ್ಲಿಗೆ ೪ರಿಂದ ೧೦ ಜನ ಬಂದು ಸೇರುತ್ತಾರೆ. ಎಲ್ಲರೂ ಬಂದು ನೋಡಿ ಮಾತನಾಡಿಕೊಳ್ಳುತ್ತಾರೆ. ಅಲ್ಲಿಗೆ ಅವರಿಗೆ ವಿಶ್ವಾಸ ಬರುತ್ತದೆ. ಯಾಕೆ ಹೀಗೆ ಮಾಡಿದ್ದೀರಾ ಎಂದು ಬುದ್ಧಿ ಹೇಳಿ ಎಲ್ಲರೂ ಸೇರಿ ತಾಯಿಯೂ ಸೇರಿ ತನ್ನ ಮಗಳನ್ನು ಹುಡುಗನ ಮೆನೆಕ(ಮನೆಗೆ) ಕಳುಹಿಸುತ್ತಾರೆ.

ಸೋಲಿಗರಲ್ಲಿ ಮದುವೆ ಎಂದರೆ ಗಂಡು-ಹೆಣ್ಣು, ತಮಗಿಷ್ಟವಾದವರು ಕೂಡುವುದು, ಒಟ್ಟಿಗೆ ಸೇರುವುದು ಅಥವಾ ಅಕ್ಕಪಕ್ಕದ ಪೋಡು, ಊರುಗಳಿಗೆ ಹೋಗಿ ಸಂಬಂಧ ಬೆಳೆಸುವುದು, ಕೆಲವರು ಮತ್ತೆ ತಮ್ಮ ಪೋಡಿಗೆ ಬಂದು ಗಂಡನ ಅಥವಾ ತಾಯಿಯ ಮನೆಯ ಪಕ್ಕದಲ್ಲಿಯೇ ಗುಡಿಸಲು ಕಟ್ಟಿ ವಾಸಿಸುವುದೇ ಆಗಿರುತ್ತದೆ. ಸೋಲಿಗರು ಜೇನು ಕುರುಬರಿಗಿಂತ ನಾವು ಮೇಲು, ನಮ್ಮ ಸೋಲಿಗ ಜಾತಿ ದೊಡ್ಡದು, ನಾವೇ ಶ್ರೇಷ್ಠರು ಎಂದುಕೊಳ್ಳುತ್ತಾರೆ.

ಪ್ರೇಮ ಪರಾರಿ ಅಥವಾ ಕೂಡು ವಿವಾಹದಲ್ಲಿ ಹುಡುಗ ಹುಡುಗಿಯನ್ನು ತನ್ನ ಪೋಷಕರ ಒಪ್ಪಿಗೆ ಇಲ್ಲದೇ ಕಾಡಿಗೆ ಕರೆದುಕೊಂಡು ಹೋಗಿ ಸುಮಾರು ಒಂದು ವಾರಗಳ ಕಾಲ ಕಾಡಿನಲ್ಲಿದ್ದು ಪುನಃ ಪೋಡಿಗೆ ಬಂದಾಗ ಅವರಿಬ್ಬರ ಪೊಷಕರ್‍ಯಾರೂ ಪ್ರತಿಭಟಿಸುವುದಿಲ್ಲವಾದ ಕಾರಣ ಒಂದು ವಾರಗಳ ಕಾಲ ಕಾಡುಪ್ರಾಣಿಗಳ ನಡುವೆ ನಮ್ಮ ಹುಡುಗಿಯನ್ನು ರಕ್ಷಿಸಿಕೊಂಡು ಕಾಡಿನ ಗೆಡ್ಡೆ, ಗೆಣಸು, ಹಣ್ಣು ಹಂಪಲುಗಳನ್ನು ತಿಂದು ಜೀವನ ಮಾಡಿದವನು ಮುಂದೆ ನನ್ನ ಮಗಳನ್ನು ಸಾಕುವ

ಚೈತನ್ಯ ಇದೆ ಎನ್ನುವ ನಂಬಿಕೆಯಿಂದಾಗಿ ಮರುಮಾತಿಲ್ಲದೇ ಅವರಿಬ್ಬರನ್ನು ಸಂಸಾರ ಮಾಡಲು ಒಪ್ಪಿಗೆ ಸೂಚಿಸುತ್ತಾರೆ.

ಸೋಲಿಗರ ಪುಸುಮಾಲೆ ಮತ್ತು ಬಿಳಿಗಿರಿರಂಗಯ್ಯ ಯಾವ ರೀತಿ ಕಾಡಿನಲ್ಲಿ ಜೋಡಿಯಾಗಿ ಪ್ರೇಮಿಸಿ ಮದುವೆಯಾದರು ಎಂಬ ಪ್ರಸಂಗವನ್ನು ಒಂದು ಹಾಡಿನ ಮೂಲಕ ತಿಳಿಯಬಹುದಾಗಿದೆ.

ಸೋಲಗಿತ್ತಿಯಮ್ಮ ನಾಡಿ ಲಾಲಾ....ಲೇಲು
ಸೋಲಿಗ ಬೊಮ್ಮಯ್ಯನದೊಂದು ದೊಡ್ಡ ಬಾಳಾಟ
ಹಾರೆಯಾ ಕೋಲು ನೂರೇಯ ಗೆಳಸುಕಲ್ಯಾಣಿ ಕೊಳದ ಕಾಡು ದೊಡ್ಡಕಾಡು
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ಕರುವ ಕಟ್ಟೋದು ಸನ್ನದಾ ಗುಂಟ
ಮರಿಯ ಕಟ್ಟೋದು ಬೆಳ್ಳಿಯ ಗುಂಟ
ಸೋಲಗಿತ್ತಿಯಮ್ಮ ನಾಡಿ ಲಾಲಾ...ಲೇಲು

ಆರು ಮಂದಿಗಾ ಗೆಳಸು ಸಿಕ್ಕಿತಲ್ಲಾ
ಸೋಲಿಗ ಮಕ್ಕ ಸಿಕ್ಕಾ ಕಾಡು ದೊಡ್ಡ ಕಾಡು
ಪುಸುಮಾಲೆ ದೇವಿಗಾ ಗೆನಸು ಸಿಕ್ಕಾದೆ ಹೋಯಿತಲ್ಲಾ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ಆರು ಮಂದಿ ಗೆಳಸು ಹೊರೆ ಹೊತ್ರು ಹೋದಾರಲ್ಲಾ
ಕಾಯಂಬು ಗೆಳಸು ತೋಟಂಬು ತೋರ
ಹೂವೆಂಬು ಗೆಳಸು ಹೆಜ್ಜೋರಿ ತೋರ
ಕಡೆಯಲ್ಲಿ ಪುಸುಮಾಲೆ ದೇವಿಗಾ ಗೆಳಸು ಸಿಕ್ಕಿತ್ತಲ್ಲಾ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ಬಟ್ಟೆಯ ಹೊರೆಯ ಕಟ್ಟಿದಳ್ಳಲ್ಲೊ
ಗೆಳಸು ಹೋರೆ ಒಂದು ಬೆಟ್ಟಗ ಹೇಳದಿಲ್ಲಾಲ್ಲೋ
ಒಂದು ಅಯ್ಯನಾದರೂ ಬಂದಾಲೇ ಗೆಳಸಿನಾ ಹೊರೆಯ ಹೆತ್ತಕು
ಒಬ್ಬ ಕಜ್ಜಿ ದಾಸಯ್ಯ ಬಂದಾನಲ್ಲಾ
ನನ್ನ ಗೆಳಸಿನ ಹೊರೆ ಎತ್ತು ದಾಸಯ್ಯ ಎಂದಾಳು ಪುಸುಮಾಳೆ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ನಾನು ಗೆಳಸಿನ ಹೊರೆಯ ಎತ್ತೊದಲೇ ನನಗೇನಾ ಹೆಣ್ಣೆ?
ನಿನ್ನ ಅಪ್ಪಯ್ಯ ಅಂತೀನಿ ಎತ್ತು ದಾಸಯ್ಯ
ನಿನಗೆ ಅಣ್ಣಯ್ಯ ಅಂತೀನಿ ಎತ್ತು ದಾಸಯ್ಯ
ಆ ಬಿಟ್ಟು ಬೇರೆ ಹೇಳು ಹೆಣ್ಣೆ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ನಿನಗೆ ಮಡದಿಯಾಗುತ್ತೀನಿ ಎತ್ತು ದಾಸಯ್ಯ
ಆಗ ಕಿಲ ಕಿಲ ಅಂತಾ ನಗುತಾನ ದಾಸಯ್ಯ
ನನಗೆ ಮಡುದಿಯಾಗುತ್ತೀನಿ ಎಂದು ಬಾಷಾವ ಕೊಡುಎಣ್ಣೆ
ನನ್ನ ಜಾಗಾಟ ಹಿಡಿದು ಸತ್ಯ ಮಾಡನ್ಣೆ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ಜಾಗಾಟೆ ಹಿಡುದು ಸತ್ಯ ಮಾಡಿದವಳೆ ಸೋಲಗಿತ್ತಿಯಮ್ಮ
ಆಗ ಒಂದೇ ಕಿರು ಬೆರಳಲ್ಲಿ ಹೊರೆ ಮುಟ್ಟಿದವನೆ ದಾಸಯ್ಯ
ಪುಸುಮಾಲೆ ತಲೆಮೇಲೆ ಗೆಳಸಿನ ಹೊರೆಯ ಮಡಗಿ ಹೊರೆ ಮೇಲೆ ತಾ ಕುಳಿತವನೆ
ಕಗ್ಗಾಲ ಗುಂಟ ಹೊರಬಹುದು ಈ ದಾಸಯ್ಯನ ಹೊರಕಾಗಲ್ಲೆ
ಸೋಲಗಿತ್ತಿಯಮ್ಮ ನಾಡಿ ಲಲಾ ...ಲೇಲು

ಆತನ ತಟ್ಟಾನೆ ತಿಟ್ಟಾಕಿದವಳೆ
ಆಗ ಹೇಳಿದವನೇ ನಾ ಅಣ್ಣಾನು ಅಲ್ಲಾ ಅಪ್ಪಾನು ಅಲ್ಲಾ
ನನ್ನ ನಿಜ ರುಪ ನೋಡೆಣ್ಣೆ.

**ಸಾರಾಂಶ:** ಸೋಲಿಗರಲ್ಲಿ ಹಿಂದೆ ಕಟ್ಟುನಿಟ್ಟಾದ ಶಿಕ್ಷೆ ಇರುತ್ತಿತ್ತು. ಆದರೂ ತಪ್ಪುಗಳು ನಡೆಯುತ್ತಿದ್ದವು. ಅಂದರೆ ಸೋಲಿಗ ಸಮುದಾಯದಲ್ಲಿ ಹಿಂದಿನಿಂದಲೂ ಅವರ ತಾತ–ಮುತ್ತಾತ, ಅಜ್ಜಿ–ಮುತ್ತಜ್ಜಿ, ಅಪ್ಪ–ಅವ್ವ, ನೆರೆ–ಹೊರೆಯವರು, ಸಂಬಂಧಿಕರು, ಅಣ್ಣ–ಅಕ್ಕ, ಇವರುಗಳು ಇದೇ ರೀತಿಯಲ್ಲಿಯೇ ಪರಿಸ್ಥಿತಿಗೆ ಅನುಗುಣವಾಗಿಯೇ ಪರಾರಿಯಾಗಿ, ಓಡಿಹೋಗಿ, ಇಷ್ಟಪಟ್ಟು ಸೇವಾ ವಿವಾಹ, ಮೈದುನ ವಿವಾಹ, ವಿಧವಾ ವಿವಾಹ, ಏಕಪತ್ನಿತ್ವ, ಬಹುಪತ್ನಿತ್ವ, ಹೀಗೆ– ಸಮುದಾಯದಲ್ಲಿ ಹಿಂದಿನವರು ಮಾಡಿದ ರೀತಿಯನ್ನು ನೋಡಿ, ಪರೀಕ್ಷಿಸಿ ಕೇಳಿ, ತಮ್ಮ ಕುಟುಂಬದಿಂದಲೇ ನೋಡ–ನೋಡುತ್ತಾ ಆಯಾ ಸಮಯ, ಕಾಲಕ್ಕೆ, ಪರಿಸ್ಥಿತಿಗೆ ತಕ್ಕ ಹಾಗೆ ಹೊರಗಿನ ಸಂಪರ್ಕ ಸೋಲಿಗರಿಗೆ ಕಡಿಮೆ ಇದ್ದುದರಿಂದ ಈ ರೀತಿಯ ವಿವಾಹಗಳೇ ಹೆಚ್ಚಾಗಿ ಕಂಡು ಬರುತ್ತದೆ. ಸೋಲಿಗರಲ್ಲಿ ಕುಲ, ನ್ಯಾಯ ಪಂಚಾಯಿತಿ ಇದ್ದರೂ ಸಹ ಮದುವೆ ಅತೀ ಸರಾಗವಾಗಿ, ಸರಳವಾಗಿ ನಡೆಯುತ್ತಿತ್ತು. ತಮಗೆ ಇಷ್ಟವಿಲ್ಲದವರನ್ನೂ ಬಿಡಲೂ ಸಹ ಯಾವುದೇ ರೀತಿಯ ನಿರ್ಬಂಧ ಇರುವುದಿಲ್ಲ. ಬಿಟ್ಟ ಗಂಡು–ಹೆಣ್ಣು ತಮಗಿಷ್ಟ ಬಂದವರ ಜೊತೆ ಬೇಗ ಕೂಡಿಕೊಂಡು ದಾಂಪತ್ಯ ಜೀವನ ಮಾಡುತ್ತಾರೆ. ಸೋಲಿಗರಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಪೋಡು, ಕಾಲೋನಿ, ಹಾಡಿಗಳಲ್ಲಿ ಮಕ್ಕಳು ಬೆಳೆಯುತ್ತಿರುವಾಗ ಕೆಲವೊಂದು ಪ್ರದೇಶಗಳಲ್ಲಿ ಸೋಲಿಗರ ಮಕ್ಕಳು ಇನ್ನು ಮಕ್ಕಳು ೧೦–೧೫ ವರ್ಷ ಆಗುವುದರೊಳಗೆಯೇ ಪರಿಸ್ಥಿತಿಗೆ ಅನುಗುಣವಾಗಿ ಯಾವ ಬೇರೆ ದಾರಿಯೂ ಕಾಣದೇ ತಮಗೆ ಇಷ್ಟ ಇರುವವರ ಜೊತೆ ಕೂಡಿಕೊಳ್ಳುತ್ತಾರೆ.

**ಬಲವಂತ ವಿವಾಹ (Marriage by force)**

ಸೋಲಿಗರಲ್ಲಿ ಬಯಸಿದ ಕನ್ಯೆ ಅಥವಾ ವರನನ್ನು ಆಕೆಯ ಹಾಗೂ ಆತನ ಮನೆಯವರ ಅನುಮತಿ ಇಲ್ಲದೆ ಹುಡುಗ ಅಥವಾ ಹುಡುಗಿ ಬಲವಂತವಾಗಿ ಬೇರೆಡೆಗೆ ಕರೆದುಕೊಂಡು ಹೋಗಿ

ಮದುವೆ ಯಾಗುವುದನ್ನೇ ಬಲವಂತ ವಿವಾಹ(Marriage by force) ಎಂದು ಕರೆಯುತ್ತಾರೆ. ಸೋಲಿಗರಲ್ಲಿನ ಈ ವಿವಾಹ ಪದ್ಧತಿಯನ್ನು ಎಸ್.ಜಿ. ಮೊರಾಬ್ ಅವರು ಪರಿಚಯಿಸಿದ್ದಾರೆ.

**ಕಾರಣ:** ಹುಡುಗಿಗೆ ಹುಡುಗ ಇಷ್ಟವಿಲ್ಲದೇ ಇರಬಹುದು, ಹುಡುಗಿ ಕಡೆಯವರಿಗೆ ಹುಡುಗ ಕನ್ಯಾ ಶುಲ್ಕ ಕೊಡಲು ಸಾಧ್ಯವಿಲ್ಲದಿದ್ದಾಗ, ಕುಲ ಪಂಚಾಯಿತಿಗೆ ದಂಡ ಕೊಟ್ಟು ಕುಲಸ್ಥರಿಗೆ ಊಟದ ವ್ಯವಸ್ಥೆ ಮಾಡಬೇಕು. ಈ ನಿಯಮ ಪ್ರಕಾರ ಹುಡುಗನು, ಹುಡುಗಿಯನ್ನು ಬಲವಂತವಾಗಿ ಹೊರಗಡೆ ಕರೆದುಕೊಂಡು ಹೋಗಿ ಮದುವೆಯಾಗುತ್ತಾನೆ. ಹುಡುಗ ದುರ್ಬಲವಾಗಿದ್ದು, ಆ ಹುಡುಗಿ ನನಗೆ ಬೇಕೇ ಬೇಕು ಎಂದಾಗ ಆತನಲ್ಲಿ ಹಣವಿಲ್ಲದ ಸಂದರ್ಭದಲ್ಲಿ ಈ ರೀತಿಯಾದ ಬಲವಂತ ವಿವಾಹ (Marriage by force) ನಡೆಯುತ್ತದೆ.

**ಅಪಹರಣ ವಿವಾಹ**

ಅಪಹರಣ ವಿವಾಹಕ್ಕೆ ಸೋಲಿಗರು ತಮ್ಮದೇ ಆದ ಧಾರ್ಮಿಕ ವಿವಾಹ ಪದ್ಧತಿಯ ಸ್ವಾರಸ್ಯಕರ ಹಿನ್ನೆಲೆಯನ್ನು ತಿಳಿಸುತ್ತಾರೆ. ಇವರು ಹೇಳುವ ಪ್ರಕಾರ "ಪುಸುಮಾಲೆ ಸೋಲಿಗರ ಮಗಳು, ಬಿಳಿಗಿರಿರಂಗಪ್ಪ-ಪುಸುಮಾಲೆ ಗಂಡ, ನಮ್ಮ ಸೋಲಿಗರ ರಂಗಭಾವ. ಒಂದು ದಿನ ಕಾಡಿನಲ್ಲಿ ಸೋಲಿಗ ಬೊಮ್ಮೇಗೌಡನ ಮಗಳು ಪುಸುಮಾಲೆ(ಕುಸುಮಾಲೆ) ಯನ್ನು ನೋಡಿದನಂತೆ. ಅವಳನ್ನು ಪಡೆಯುವ ಇಚ್ಛೆಯಿಂದ ಅವಳ ಮನಸ್ಸನ್ನು ಕದ್ದು ಅವಳನ್ನು ಕರೆದುಕೊಂಡು ಕಾಡಿಗೆ ಹೋದನು ಇದು ಸೋಲಿಗರಲ್ಲಿ ಅಪಹರಣ ವಿವಾಹಕ್ಕೆ ಮೂಲವಾಯಿತು ಎಂಬುದು ಸೋಲಿಗರ ನಂಬಿಕೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಬಿಳಿಗಿರಿರಂಗಸ್ವಾಮಿ ಸೋಲಿಗನಲ್ಲ. ಆದರೆ ೫ ಕುಲದವರು, ೭ ಕುಲದವರು ಅವನನ್ನು 'ಭಾವ' ಎಂದೂ ಸಂಬೋಧಿಸುತ್ತಾರೆ. ಈ ಪ್ರಸಂಗ ಕೇವಲ ಪುರಾಣವಾಗಿರದೇ, ಊಹೆಗಳಿಂದ ಕೂಡಿಲ್ಲದೇ, ಇತಿಹಾಸದ ಪುಟದಲ್ಲಿ ನಡೆದಿದೆ. ಸೋಲಿಗರು ತಮ್ಮ ಕುಲವನ್ನು ಮೀರಿದ 'ಹೊರಬಾಂಧವ್ಯ' ವಿವಾಹಕ್ಕೆ ಇದೊಂದು ಅಪರೂಪದ ಹಾಗೂ ಮಹತ್ತರವಾದ ನಿದರ್ಶನವಾಗುತ್ತದೆ. ಈ ಬಗೆಗೆ ಮಾದಮ್ಮ ಹೀಗೆ ಹೇಳುತ್ತಾರೆ- "ಕಾಡೇನಮ್ಮ ದೇವರು ಬಿಳಿಗಿರಿರಂಗಪ್ಪ ನಮ್ಮ ದೇವರು "ಅವ ನಮ್ಮ ಮಗಳು ಸೂಲಗಿತ್ತಿ ಪುಸುಮಾಲೆಯನ್ನು ಮದುವೆಯಾದ ಮೇಲೆ ಅವನು ನಮ್ಮ ದೇವರು, ಮಹದೇಶ್ವರನೂ ನಮ್ಮ ದೇವರು ಅಲ್ಲವಾ" ಎಂದು ನಗುತ್ತಲೇ ಹೇಳುತ್ತಾರೆ.

ಮತ್ತೆ ಕೆಲವರು ಹೀಗೆ ಹೇಳುತ್ತಾರೆ- "ದೇವರೇ ಕದ್ದುಕೊಂಡು ಹೋಗಿ ಮದುವೆಯಾದ ಮೇಲೆ ನಾವು ಏನು ಮಾಡುವುದು? ನಾವು ಹಾಗಾವೆ ಮದುವೆಯಾಗಬೇಕು" ಎಂದು ಹೇಳುತ್ತಾರೆ. ಇಂತಹ ವಿವಾಹಗಳಿಗೆ ಬಿಳಿಗಿರಿರಂಗಪ್ಪನ ರಕ್ಷಣೆ ಇರುತ್ತದೆ ಎಂದು ನಂಬಿದ್ದಾರೆ.

**ಸೇವಾ ವಿವಾಹ ಅಥವಾ ಜೀತ ವಿವಾಹ/ಹುಡುಗಿಯ ಮನೆ ಸೇರುವುದು**

ಈ ಪದ್ಧತಿಯ ವಿವಾಹವು ಸೋಲಿಗರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹೊಟ್ಟೆ ತುಂಬಿಸಿಕೊಳ್ಳುವ ಸಲುವಾಗಿ, ಹಣವನ್ನು ಸಾಲವಾಗಿ ಪಡೆದು ಅದನ್ನು ತೀರಿಸುವ ಸಲುವಾಗಿ ಕುಟುಂಬದವನ್ನು ರಕ್ಷಿಸುವ ಸಲುವಾಗಿ, ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಜೀತಪದ್ಧತಿ ರೂಢಿಯಲ್ಲಿದೆ. ಆದರೆ ಸೋಲಿಗರಲ್ಲಿ ಹುಡುಗ ತಾನು ಬಯಸಿದ ಹುಡುಗಿಯನ್ನು ಮದುವೆಯಾಗಲು ಭಾವಿ ಅತ್ತೆಯ ಮನೆಯಲ್ಲಿ ಹೋಗಿ

ಸೇವೆಯ ರೀತಿಯಲ್ಲಿ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡುತ್ತ ಜೀತ ಮಾಡುತ್ತಾನೆ. ಇದನ್ನೇ ಸೋಲಿಗರು "ಸೇವಾ ವಿವಾಹ" ಅಥವಾ "ಜೀತ ವಿವಾಹ" ಎಂದು ಕರೆಯುತ್ತಾರೆ.

ಸೇವಾ ವಿವಾಹ ಪದ್ಧತಿಯು ಸೋಲಿಗರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೆಲವು ಸಂದರ್ಭದಲ್ಲಿ ಒಪ್ಪಿಗೆಯ ಮೂಲಕ ಹೆಣ್ಣಿನ ಮನೆಗೆ ಹುಡುಗ ಹೋಗಿ ಸೇರಿದಾಗ ಆ ಮನೆಯಲ್ಲಿ ಯಾರೂ ಗಂಡು ಮಕ್ಕಳು ಇಲ್ಲದ ಪಕ್ಷದಲ್ಲಿ ಮನೆಯ ಅಳಿಯನಾಗಿ ಆ ಮನೆಯ ಜವಾಬ್ದಾರಿಯನ್ನು ತಾನೇ ನಿಭಾಯಿಸಿದ ಉದಾಹರಣೆಗಳಿವೆ. ಅವನ ಭಾವಿಪತ್ನಿ ಹಾಗೂ ಅವಳ ಸೋದರಿಯರ ರಕ್ಷಣೆಯ ಜವಾಬ್ದಾರಿ ಸಹಜವಾಗಿಯೇ ಹುಡುಗನಿಗೆ ಬರುತ್ತದೆ. ಪೋಡು, ಕಾಲೋನಿ ಹಾಗೂ ಹಾಡಿಗಳಲ್ಲಿ ಹುಡುಗನಿಗೆ ಸಂಬಂಧಿಕರ ಸಂಬಂಧದಲ್ಲಿ ಹುಡುಗಿ ಇಷ್ಟವಾದಾಗ ಆ ಹುಡುಗನು ಹುಡುಗಿಯ ಮನೆಯನ್ನು ಹೋಗಿ ಸೇರಿಕೊಳ್ಳುತ್ತಾನೆ. ಅಥವಾ ಸಂಬಂಧದಲ್ಲಿ ಈ ಹುಡುಗ ನಮ್ಮ ಹುಡುಗಿಗೆ ಕೊಟ್ಟು ಮದುವೆ ಮಾಡುತ್ತೇವೆ ಎಂದು ಎರಡೂ ಕುಟುಂಬದವರು ಔಪಚಾರಿಕವಾಗಿ ಮಾತುಕತೆಯಾಗುತ್ತಿರುವ ಸಂದರ್ಭದಲ್ಲಿ ಹುಡುಗ-ಹುಡುಗಿಯ ಮನೆಯನ್ನು ಹೋಗಿ ಸೇರಿಕೊಳ್ಳುತ್ತಾನೆ. ಅಥವಾ ಹುಡುಗ-ಹುಡುಗಿಗೆ ಇಷ್ಟವಾಗಿದ್ದೇ ಯಾದರೆ, ಮನೆಯವರಿಗೆ ತಿಳಿಸುವ ಎನ್ನುವ ಸಂದರ್ಭದಲ್ಲಿ ಹುಡುಗಿ-ಹುಡುಗನ ಮನೆಯನ್ನು ಹೋಗಿ ಸೇರುತ್ತಾಳೆ.

ಮದುವೆಯಾಗುವ ಹುಡುಗನು ಹುಡುಗಿಯ ಮನೆ ಸೇರಲು ಹಲವಾರು ಕಾರಣಗಳಿವೆ.

- ಹುಡುಗ ಮೊದಲು ಧೈರ್ಯದಿಂದಿರುವನೇ,
- ಹುಡುಗ ದಿನನಿತ್ಯದ ಕೆಲಸ ಕಾರ್ಯವನ್ನು ಮಾಡುತ್ತಾನೆಯೇ,
- ಹುಡುಗನಿಗೆ ನಮ್ಮ ಹುಡುಗಿಯನ್ನು ಸಾಕಲು ಸಾಮರ್ಥ್ಯವಿದೆಯೇ,
- ಹುಡುಗ-ಹುಡುಗಿಯರ ಹೊಂದಾಣಿಕೆ,
- ಹುಡುಗನಿಗೆ ಯಾವುದಾದರೂ ಕೆಟ್ಟ ಚಟಗಳು, ಅಂದರೆ ಮದ್ಯಪಾನ, ಬೀಡಿ, ಗಾಂಜಾ, ಇತ್ಯಾದಿಗಳ ಅಭ್ಯಾಸವಿದೆಯೇ ಎಂದು ಪರೀಕ್ಷಿಸುವುದು.
- ಎಲ್ಲಕ್ಕಿಂತ ಮಿಗಿಲಾಗಿ ಹುಡುಗ-ಹುಡುಗಿಗೆ ತಾವು ಮುಂದೆ ಬಾಳುವವರು; ಇವರು ಎಷ್ಟರಮಟ್ಟಿಗೆ ಒಬ್ಬರನ್ನೊಬ್ಬರು ಅರಿತುಕೊಳ್ಳುತ್ತಾರೆ. ಮಾತು ಸಂಭಾಷಣೆ ಮುಖಾಮುಖಿ ಭೇಟಿಯಾಗಿ ಒಪ್ಪಿಗೆ ಸೂಚಿಸಿಕೊಳ್ಳುವುದು,
- ಯಾವುದಾದರೂ ಮನಸ್ತಾಪ ಅಥವಾ ಇಬ್ಬರಿಗೂ ಇಷ್ಟವಿಲ್ಲದಿದ್ದರೆ ಇಲ್ಲಿಂದಲೇ ಬೇರೆಯಾಗುವುದು.
- ಇಬ್ಬರೂ ಒಟ್ಟಿಗೆ ಕೂಡಿಕೊಂಡು ಕೂಲಿ ಕೆಲಸ, ಜಮೀನು ಕೆಲಸ, ಕಾಡಿನ ಕೆಲಸ, ಮನೆಯ ಕೆಲಸ ಇತ್ಯಾದಿಗಳನ್ನು ಮಾಡುವುದರಲ್ಲಿ ಯಾವುದೇ ರೀತಿಯ ನಿರ್ಬಂಧ ಇರುವುದಿಲ್ಲ.

ಸೋಲಿಗರಲ್ಲಿ ಕೂಡಿದ (ಮದುವೆಯಾದ ಮೇಲೆ) ಮೇಲೆ ಬಾಳುವೆ ಮಾಡುವವರು ಅವರಿಬ್ಬರೇ. ಯಾರು ಅವರೊಟ್ಟಿಗೆ ಬರುವುದಿಲ್ಲ ಹಾಗು ಮದುವೆ ಆದ ತಕ್ಷಣ, ಆ ಪೋಡಿನಲ್ಲಿಯೇ ಮತ್ತೊಂದು ಗುಡಿಸಲನ್ನು ಕಟ್ಟಿಕೊಂಡು ಬೇರೆ ಜೀವನ ಸಾಗಿಸುತ್ತಾರೆ. ಆದುದರಿಂದ ಇದು ಒಬ್ಬರನ್ನೊಬ್ಬರು

ಅರಿತಿಕೊಳ್ಳುವುದಕ್ಕೆ ಸಹಾಯಕವಾಗುತ್ತದೆ. ಒಂದುವೇಳೆ ಇಬ್ಬರಲ್ಲಿ ಯಾರೊಬ್ಬರಿಗೂ ಇಷ್ಟವಿಲ್ಲ ಎಂದಂತಾದರೆ ಮದುವೆ ಆಗುವುದು, ಗಂಡ-ಹೆಂಡತಿ ಆಗುವುದು ಮುರಿದು ಬೀಳುತ್ತದೆ. ಇಬ್ಬರಲ್ಲಿ ಯಾರಿಗೂ ವೈಮನಸ್ಸು ಇರುವುದಿಲ್ಲ. ಕೆಲವರು ಹುಡುಗನ ಮನೆಗೆ ಹುಡುಗಿಯನ್ನು ಕರೆದುಕೊಂಡು ಬರುತ್ತಾರೆ. ಹೀಗೆ ಸೇವಾ ವಿವಾಹವು ಪ್ರಸ್ತುತದಲ್ಲಿಯೂ ಸೋಲಿಗರಲ್ಲಿರುವುದು ಕಂಡು ಬರುತ್ತದೆ.

**ಏಕಪತ್ನಿತ್ವ ವಿವಾಹ**

ಈ ಬಗೆಯ ವಿವಾಹ ಪದ್ಧತಿ ಸೋಲಿಗರಲ್ಲಿ ಸಾಮಾನ್ಯವಾಗಿದೆ. ಆದರೆ ಸೋಲಿಗರಲ್ಲಿ ಏಕಪತ್ನಿ ವಿವಾಹ ಪದ್ಧತಿ ಕಡ್ಡಾಯವಾಗಿ ಇರುವಂಥದ್ದು, ಸೋಲಿಗ ಸಮುದಾಯದಲ್ಲಿ ಎಷ್ಟೋ ಕುಟುಂಬಗಳು ಏಕಪತ್ನಿವ್ರತಸ್ಥರಾಗಿ ಸಂಸಾರ ಸಾಗಿಸಿಕೊಂಡು ಸುಖೀ ಸಂಸಾರಿಗಳಾಗಿರುವುದನ್ನು ಕಾಣುತ್ತೇವೆ. ಸಾಂಸಾರಿಕ ಜೀವನದಲ್ಲಿ ಗಂಡನಂತೆಯೇ ಹೆಂಡತಿಗೂ ಸಮಾನ ಪಾತ್ರವೂ ಪ್ರಮುಖವಾಗಿರುತ್ತದೆ. ಸಾಮಾನ್ಯವಾಗಿ ಶ್ರಮದ ಕೆಲಸವನ್ನು ಗಂಡ-ಹೆಂಡತಿ ಇಬ್ಬರೂ ನಿರ್ವಹಿಸುತ್ತಾರೆ. ಇದಲ್ಲದೇ ಗಂಡ-ಹೆಂಡತಿ ಇಬ್ಬರೂ ಸಹ ಕಾಡಿನ ಕಿರುಉತ್ಪನ್ನ ಸಂಗ್ರಹಿಸುವ ಕೆಲಸ, ಕೂಲಿ ಕೆಲಸ, ಅರಣ್ಯ ಇಲಾಖೆಯ ಕೆಲಸ ಹಾಗೂ ಮನೆಯಲ್ಲಿ ಮತ್ತು ತಮ್ಮ ಹೊಲದಲ್ಲಿನ ಕೆಲಸ ಕಾರ್ಯವನ್ನು ಇಬ್ಬರೂ ಸೇರಿಕೊಂಡು ಸಮನಾಗಿ ಮಾಡುತ್ತಾರೆ. ಶಿಕ್ಷಣ ಪಡೆದ ಗಂಡ-ಹೆಂಡತಿಯಾಗಿದ್ದರೆ ಹೊರಗಡೆ ಕೆಲಸಕ್ಕೆ ಹೋಗುವವರು ಕಡಿಮೆ. ಅಂಥವರು ಬೆರಳೆಣಿಕೆಯಷ್ಟು ಮಂದಿ ಮಾತ್ರ, ಆಸ್ಪತ್ರೆ, ಅಂಗನವಾಡಿ, ಕಛೇರಿ, ಇತ್ಯಾದಿ ಸರ್ಕಾರಿ ಅಥವಾ ಸಂಘ-ಸಂಸ್ಥೆಗಳಲ್ಲಿ ಹಾಗೂ ಆಶಾ ಕಾರ್ಯಕರ್ತೆಯರಾಗಿ ಕೆಲಸ ಮಾಡುತ್ತಿರುವುದು ಕಂಡು ಬರುತ್ತದೆ.

**ಬಹುಪತ್ನಿತ್ವ ವಿವಾಹ**

ಸೋಲಿಗರು ಎರಡು ಮದುವೆ ಮಾಡಿಕೊಳ್ಳಬಾರದು. ಅದು ಅಪರಾಧ. ಅದರಿಂದ ನಮಗೇ ತೊಂದರೆ ಎಂಬ ಭಾವನೆ ಅವರ ಮನಸ್ಸಿನಲ್ಲಿದೆ. ಆದರೂ ಸಹ ಕೆಲವೊಂದು ಎರಡು ಮದುವೆ ಆಗಿರುವ ಪ್ರಸಂಗವೂ ಇದೆ. ಕಾರಣ ತಿಳಿದಾಗ, ಅಕ್ಕನಿಗೆ ಮಕ್ಕಳಾಗದೇ ಇದ್ದಾಗ ಆಕೆಯ ತಂಗಿಯನ್ನು ಮದುವೆಯಾಗಿರುವುದು, ಅನಾರೋಗ್ಯ ಪೀಡಿತರಾಗಿದ್ದಾಗ ಎರಡನೇ ಮದುವೆ ಆಗಿರುವುದು ಹೀಗೆ ಅನೇಕ ವಿಷಯಗಳಲ್ಲಿ ಎರಡನೇ ಮದುವೆ ನಡೆದಿರುವುದು ಕಂಡು ಬರುತ್ತದೆ.

ಒಬ್ಬ ವ್ಯಕ್ತಿ ಮರುಮದುವೆ ಮಾಡಿಕೊಂಡನೆಂದರೆ, ಅವನ ಮೊದಲ ಹೆಂಡತಿಯನ್ನು ಬಿಟ್ಟಂತೆಯೇ ವಾಡಿಕೆ. ಆ ವ್ಯಕ್ತಿಯ ಮೊದಲ ಹೆಂಡತಿ ಮತ್ತೆ ಬೇರೆ ಗಂಡಿನೊಡನೆ ಕೂಡಿಕೆ ಮಾಡಿಕೊಳ್ಳುತ್ತಾಳೆ. ಅಂದರೆ ಆಕೆಯೂ ಸಹ ಮದುವೆಯಾಗದಿರುವ ಅಥವಾ ಮದುವೆಯಾಗಿ ತನ್ನ ಹೆಂಡತಿಯನ್ನು ಬಿಟ್ಟಿರುವ ಪುರುಷನನ್ನು ಸೇರಿಕೊಳ್ಳುವ ಅವಕಾಶ ಇರುತ್ತದೆ.

ಸೋಲಿಗರಲ್ಲಿ ಕುಲ ಪಂಚಾಯಿತಿ ಇದೆ. ಆದರೂ ಸಹ ಮದುವೆಗೆ ಸಂಬಂಧಿಸಿದಂತೆ ಹೆಚ್ಚಿನ ಕಟ್ಟುಪಾಡುಗಳಿರುವುದಿಲ್ಲ. ಸೋಲಿಗರೇ ಹೇಳುವ ಪ್ರಕಾರ "ನಾಯಿ ತಿಂದಿರುವುದನ್ನು ನಾಯಿಗೆ ಹಾಕಿ ಬಿಡಿ" ಅಂದರೆ, ಅವರಿಗೇ ಬಿಟ್ಟು ಬಿಡಿ. ಅವರೇ ಅನುಭವಿಸಲಿ ಎಂದು ಕೆಲವು ಸಂದರ್ಭದಲ್ಲಿ ಕುಲಸ್ಥರು ತಪ್ಪುಕಾಣಿಕೆ ಪಡೆದು ವೀಳ್ಯಕೊಟ್ಟು ಸರಿಪಡಿಸುತ್ತಾರೆ. ಸೋಲಿಗರಲ್ಲಿ ಮದುವೆ ಸರಳವಾಗಿ ಆಗುವುದರಿಂದ ವಿಚ್ಛೇದನವೂ ಸುಲಭವಾಗಿ ನಡೆದುಹೋಗುತ್ತದೆ. ಮರು ಮದುವೆಯೂ ಸುಲಭವಾಗಿ ಆಗುತ್ತದೆ.

"ಸೋಲಿಗರಲ್ಲಿ ಬಹುಪತ್ನಿತ್ವ ವಿವಾಹ ಪದ್ಧತಿ ಅವರ ಆರ್ಥಿಕ ಅಧೋಗತಿಗೆ ಪರೋಕ್ಷ ಕಾರಣವಾಗಿದೆ. ಹೆಂಡತಿಯರನ್ನು ಹುಡುಕುವುದರಲ್ಲೇ ಅವರ ಜೀವನ ಪರ್ಯಾವಸಾನವಾಗುತ್ತದೆ. ಸೋಲಿಗರಲ್ಲಿ ಗಂಡು–ಹೆಣ್ಣುಗಳ ಹೊಂದಾಣಿಕೆ ಬಹಳ ಅಪರೂಪವಾದುದು". ಸೋಲಿಗರಲ್ಲಿ ಗಂಡ–ಹೆಂಡತಿ ತುಂಬಾ ಅನ್ಯೋನ್ಯತೆಯಿಂದ ಪ್ರೀತಿಯಿಂದ ಸಹಬಾಳ್ವೆ ನಡೆಸುವುದು ಕಡಿಮೆ. ಯಾವುದೇ ಕಷ್ಟ–ಸುಖ, ಬಂದರೂ ಸಹ ಹೊಂದಾಣಿಕೆ ಮಾಡಿಕೊಂಡು ಮಕ್ಕಳಿಗಾಗಿ ಅವರ ಮುಂದಿನ ಭವಿಷ್ಯಕ್ಕಾಗಿ ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಜೊತೆಯಾಗಿ ಕೂಡಿ ಬಾಳಬೇಕು ಎಂಬ ಗುಣ ಸೋಲಿಗರಲ್ಲಿ ಸ್ವಲ್ಪ ಕಡಿಮೆ ಎಂದು ಹೇಳಬಹುದು. ಆದುದರಿಂದಲೇ ಬಹಳ ಬೇಗ ಗಂಡ–ಹೆಂಡತಿ ಇಷ್ಟವಿಲ್ಲದಿರುವಾಗ ವಿಚ್ಛೇದನವನ್ನು ಅವರೇ ಬಹಳ ಸುಲಭವಾಗಿ ಪಡೆದು ಅಂದರೆ ಅವರೇ ಬೇರೆಯಾಗುತ್ತಾರೆ. ಇತ್ತೀಚಿನ ದಿನಗಳಲ್ಲಿ ಹೊರ ಸಮಾಜದ ಸಂಪರ್ಕ, ಮಾಧ್ಯಮಗಳ ಪ್ರಭಾವ, ಮದ್ಯಪಾನ ಇತ್ಯಾದಿ ವ್ಯವಸ್ಥೆಗಳು ನೇರ ಕಾರಣಗಳಾಗಿವೆ.

**ವಿಧವಾ ವಿವಾಹ(ಕೂಡುವಳಿ ವಿವಾಹ)**

"ಮನುಧರ್ಮದ ಪ್ರಕಾರ ಮೇಲ್ವರ್ಗದ ಸಮಾಜದಲ್ಲಿ ಮದುವೆಯಾಗಿ ಪ್ರಾಪ್ತ ವಯಸ್ಸಿನಲ್ಲಿ ಗಂಡ ಅಕಾಲ ಮರಣಕ್ಕೆ ತುತ್ತಾಗಿದ್ದರೆ, ಇನ್ನೂ ತಾರುಣ್ಯದ ಹೊಸ್ತಿಲಲ್ಲಿರುವ ಹೆಣ್ಣುಮಗಳಿಗೆ ಮರು ಮದುವೆಯಾಗುವ ಅವಕಾಶ ಇರಲಿಲ್ಲ". ಆದರೆ ಸೋಲಿಗರಲ್ಲಿ ಯಾರೇ ಆಗಲಿ ಗಂಡು ಅಥವಾ ಹೆಣ್ಣು ಮರಣ ಹೊಂದಿದಾಗ ಇಬ್ಬರೂ ಸಹ ಅಂದರೆ ಗಂಡ ಮರಣ ಹೊಂದಿದರೆ ಹೆಂಡತಿ ಮತ್ತೆ ಬೇರೆ ಯಾರನ್ನಾದರೂ ಮದುವೆಯಾಗಬಹುದು. 'ಇದನ್ನು **ಕೂಡುವಳಿ**' ಎಂದು ಕರೆಯುತ್ತಾರೆ. ಹೆಂಡತಿ ಮರಣ ಹೊಂದಿದರೆ ಗಂಡ ಇನ್ನೊಂದು ಮದುವೆಯಾಗಬಹುದು. ಇದಕ್ಕೆ ಯಾರ ತಕರಾರು ಇರುವುದಿಲ್ಲ. ಹಾಗೂ ಯಾರ ನಿರ್ಬಂಧವೂ ಇಲ್ಲ. ತಮಗಿಷ್ಟವಾದ ಬೇರೆ ಗಂಡು–ಹೆಣ್ಣನ್ನು ಇಷ್ಟಪಟ್ಟು ಸೇರಿಕೊಂಡು ಗಂಡ–ಹೆಂಡತಿಯಾಗುತ್ತಾರೆ. ವಿಧವೆಯನ್ನು ಮದುವೆಯಾಗುವ ಪುರುಷನು ತನ್ನ ಮೊದಲ ಪತ್ನಿಯನ್ನು ಕಳೆದುಕೊಂಡಿರಬಹುದು ಅಥವಾ ಮದುವೆಯಾಗದೇ ಇರುವ ಹುಡುಗನು ಮೊದಲ ಬಾರಿಗೆ ವಿಧವೆಯನ್ನು ಮದುವೆಯಾಗಿರುವ ನಿದರ್ಶನಗಳು ಸಿಕ್ಕುತ್ತವೆ. ಇದು ಸೋಲಿಗರ ಸಾಮಾಜಿಕ ಸಮ್ಮತಿ ಇಲ್ಲದಿದ್ದರೂ ನಡೆದುಕೊಂಡು ಬರುತ್ತಿರುವುದನ್ನು ಕಾಣಬಹುದು.

ಸೋಲಿಗ ಪುರುಷನೊಬ್ಬ ಬಂಡೆಯ ಮೇಲೆ ಇರುವ ಜೇನು ಕೊಯ್ಯಲು ಹೊರಟು ಆ ಸಮಯದಲ್ಲಿ ಅಚಾನಕ್ಕಾಗಿ(ಅಕಸ್ಮಿಕ) ಕೈ ತಪ್ಪಿ ಬಂಡೆಯ ಮೇಲಿಂದ ಕೈ ಬಿಟ್ಟು ಕೆಳಗೆ ಬಂಡೆಯ ಮೇಲೆ ಬಿದ್ದು ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ಆಗ ಆತನ ಹೆಂಡತಿಗೆ ವಿಷಯ ತಿಳಿದು ಕಾಡಿಗೆ ದುಃಖದಿಂದ ತೆರಳುತ್ತಾಳೆ. ಸೋಲಿಗ ಸಮುದಾಯದವರೆಲ್ಲರೂ ಅಲ್ಲಿಗೆ ಬಂದು ಸೇರುತ್ತಾರೆ. ಅಲ್ಲಿ ಹೆಂಡತಿ ಮತ್ತು ಮಕ್ಕಳ ಆಕ್ರಂದನ ನೋಡಿ ಅಲ್ಲಿ ಇದ್ದ ಒಬ್ಬ ಸೋಲಿಗ ನಾಯಕ, ಮೂಲಪುರುಷ ಕಾರಯ್ಯ ಹೀಗೆ ಹೇಳುತ್ತಾನೆ. "ನೋಡು ಮಗಳೇ, ನೀವು ದುಃಖಿಸಬೇಡಿ ಈ ಸಾವು ಸಹಜ, ಭೂಮಿಯ ಮೇಲೆ ಹುಟ್ಟಿದ ಎಲ್ಲರಿಗೂ ಒಂದಲ್ಲಾ ಒಂದು ರೀತಿಯಲ್ಲಿ ಸಾವು ಬರುತ್ತದೆ. ಅದೇ ರೀತಿಯಲ್ಲಿ ಪ್ರತಿಯೊಬ್ಬರೂ ಈ ಭೂಮಿಯ ಮೇಲೆ ಹುಟ್ಟಿ ತಮ್ಮ ದೇಹದಿಂದ ಆತ್ಮವನ್ನು ತ್ಯಜಿಸುತ್ತಾರೆ ದೇಹ ಮಾತ್ರ ಸುಟ್ಟು ಬೂದಿಯಾಗುತ್ತದೆ. ಆದರೆ, ಆತ್ಮ ಮಾತ್ರ ನಮ್ಮ ಸುತ್ತಲೂ ಸುತ್ತುತ್ತಿರುತ್ತದೆ. ಇಗೋ ನೋಡು, ಕಾಡಿನಲ್ಲಿರುವ ಮಲ್ಲಿಗೆ ಹೂವನ್ನು ಮೇಲೆ ಮಾತ್ರ ಸೋಲೆ ಇರುತ್ತದೆ. ಪುಸುಮ

ಇದೆ ಅದನ್ನು ಬಿಚ್ಚಿ ಒಳಗೆ ನೋಡಿದರೆ ಬೀಜ ಸಿಗುತ್ತದೆ. ಅದೇ ಗಟ್ಟಿ ಬೀಜ ಆ ಬೀಜವನ್ನು ಮತ್ತೆ ಭೂಮಿಯ ಮೇಲೆ ಹಾಕಿದರೆ ಹಳೆ ಬೀಜದಿಂದ ಹೊಸ ಗಿಡವಾಗಿ, ಹೊಸ ಬೀಜ ಸಿಗುತ್ತದೆ" ಎಂದು ಹಿರಿಯರು ತಿಳಿಸಿರುತ್ತಾರೆ. ಅಂದರೆ ಭೂಮಿಯ ಮೇಲೆ ಹುಟ್ಟಿದ ಮನುಷ್ಯರಿಗೆ ಸಾವು ಖಚಿತ. ಹುಟ್ಟು ಸಾವು ನಿರಂತರ ದೇಹ ಮಾತ್ರ ಭೂಮಿಯಲ್ಲಿ ಮಣ್ಣಾಗುತ್ತದೆ ಪ್ರಾಣ ಮಾತ್ರ ಎಲ್ಲಾ ಕಡೆ ಸುತ್ತುತ್ತಿರುತ್ತದೆ ಗಂಡೇ ಆಗಲಿ, ಹೆಣ್ಣೇ ಆಗಲಿ, ಯಾರೇ ಮರಣ ಹೊಂದಿದರೂ ಸಮಾಧಾನದಿಂದಿದ್ದು ಅವರು ಇನ್ನೊಂದು ಮದುವೆಯನ್ನು ತಮಗೆ ಇಷ್ಟವಿರುವವರ ಜೊತೆಯಲ್ಲಿ ಮಾಡಿಕೊಳ್ಳುವ ಅವಕಾಶವಿರುತ್ತದೆ ಎಂದು ಹೇಳುವ ಮೂಲಕ ವಿವಾಹ ಕುಟುಂಬ, ಸಂಬಂಧ ಮಕ್ಕಳೂ ಎಲ್ಲರೂ ಕೂಡ ಈ ಭೂಮಿಯ ಮೇಲೆ ಸೌಖ್ಯದಿಂದ ಇರುವುದು ಒಳ್ಳೆಯದು ಎಂದು ಹೇಳುವ ಸೌಜನ್ಯದ ಮನೋಭಾವನೆ ಯಿಂದ ವಿಧವೆಯನ್ನು ಗೌರವಿಸಬೇಕು. ಅವಳನ್ನು ಒಂಟಿಯಾಗಿ ಬಿಡದೆ ಸಮುದಾಯದಲ್ಲಿ ಬಾಳಲು ಮತ್ತೊಂದು ಕೂಡುವಳಿ ಮಾಡಿಕೊಳ್ಳುವುದರ ಮೂಲಕ ಅವಕಾಶ ಮಾಡಿಕೊಡಬೇಕೆಂದು ಹೇಳುತ್ತಾರೆ.

ಆದರೆ ಇತ್ತೀಚೆಗೆ ಪೋಡು, ಗುಂಪು ಮನೆ, ಕಾಲೋನಿ, ಪ್ರಾರಂಭವಾಗಿ ವಾಸ ಮಾಡುವುದು ಪ್ರಾರಂಭವಾದ ತರುವಾಯ ಕುಲದ ಆಚರಣೆ ಒಂದು ನ್ಯಾಯದ ಮೂಲಕ ಕುಲಸ್ಥರು ವಿಧವೆಯ ಹೆಣ್ಣು ಮತ್ತು ಗಂಡನ್ನು ಸೇರಿಸಿ, ೫ ಕುಲದವರು, ೭ ಕುಲದವರು, ೧೨ ಕುಲದವರು ಹೀಗೆ ಕುಲದ ಸಂಪ್ರದಾಯದಂತೆ ಇಬ್ಬರಿಗೂ ಬುದ್ಧಿ ಮಾತನ್ನು ಹೇಳಿ, ಇತ್ತೀಚೆಗೆ ಹೆಣ್ಣಿನ ಸೀರೆಯ ಸೆರಗನ್ನು ಗಂಡಿನ ಪಂಚೆಯ ಸೆರಗಿಗೆ ಕಟ್ಟುತ್ತಾರೆ. ಕೆಲವರು ತಾಳಿಯನ್ನು ಗಂಡು ತನ್ನ ಕೈಯಿಂದ ಹೆಣ್ಣಿನ ಕೊರಳಿಗೆ ಕಟ್ಟುತ್ತಾನೆ. ಅಲ್ಲಿ ೫ ಕುಲದವರು ವಿಭೂತಿಯನ್ನು ತೆಗೆದುಕೊಂಡು ನಾವು ಕಟ್ಟಿದ ಕಟ್ಟು ಸಾಯುವವರೆಗೂ ಇರಲಿ ಎಂದು ಮೂರು ಮೂರು ಸಾರಿ ಹೇಳಿ ಗಂಡು-ಹೆಣ್ಣುಗಳ ಹಣೆಗೆ ವಿಭೂತಿ ಧರಿಸುತ್ತಾರೆ. ನಂತರ "ನಾನು ಪೋಡಿಗೆ ಹೋಗಿಬಿಟ್ಟು ಬತ್ತಿನಿ, ಇಂದಾ ಈ ಕೂಸು, ಎಂದು ಹೇಳಿಸಿ, ಹೆಣ್ಣಿನ ಕೈಗೆ ಕೂಸು ಕೊಡಿಸುತ್ತಾರೆ. ಹೀಗೆಯೇ ಗಂಡನಿಗೆ ನಾನು ಪೋಡಿಗೆ ಹೋಗಿ ಬರುತ್ತೀನಿ ಇಂದಾ ಕೂಸು" ಎಂದು ಹೇಳಿಸಿ ಸಂಭಾಷಣೆ ನಡೆದು ಗಂಡ-ಹೆಂಡತಿಯರೆಂಬ ಸಾಮಾಜಿಕ ಮನ್ನಣೆ ದೊರೆಯುತ್ತದೆ.

ವಿಧವಾ ವಿವಾಹ ಪದ್ಧತಿಯ ಮತ್ತೊಂದು ಆಚರಣೆ ಎಂದರೆ ಎಳೆಯ ಕುನ್ನಿಯನ್ನು ಎತ್ರೋಗಿ ಗಂಡಿನ ಕೈಗೆ ನೀಡಿ, ಮತ್ತೆ ಆ ಮಗುವನ್ನು ಹೆಂಗಸಿನ ಕೈಗೆ ನೀಡುತ್ತಾ, ನಾನು ಪೋಡಿಗೆ ಹೋಗಿ ಬರ್ತೀನಿ, ಇಂದಾ ಈ ಕುನ್ನಿಯ ಎಂದು ಹೇಳುತ್ತಾನೆ. ಆನಂತರ ಆ ಕುನ್ನಿಯನ್ನು ಗಂಡಿನ ಕೈಗೆ ನೀಡುತ್ತಾ, ನಾನು ಕಾಡಿಗೆ ಹೋಗಿ ಸೀಗೆ ಸೊಪ್ಪು ಕೂಯ್ದು ಬರುತ್ತೀನಿ, ಇಂದಾ ಈ ಕುನ್ನಿಯಾ, ಎಂದು ಹೇಳುತ್ತಾಳೆ. ಗಂಡ ಹೆಂಡಿರ ನಡುವೆ ಇಲ್ಲಿ ವಿಶೇಷವಾಗಿ ಸೋಲಿಗರು ಮರುಮದುವೆಯಾದರೂ ತಮ್ಮ ಮಕ್ಕಳನ್ನು ಚೆನ್ನಾಗಿ ಸಾಕುತ್ತಾರೆ. ಎರಡನೆಯ ಗಂಡನಾದವನು, ಮೊದಲನೇ ಗಂಡನಿಗೆ ಹುಟ್ಟಿದ ಮಗುವನ್ನು ತನ್ನ ಮಗುವೆಂದು ಸಾಕಿ ಸಲಹುತ್ತಾನೆ. ಯಾವುದೇ ರೀತಿಯ ಭೇದಭಾವ ಇರುವುದಿಲ್ಲ. ಆಸ್ತಿಯ ಪಡೆಯುವಿಕೆಯ ಪ್ರಜ್ಞೆಯ ಬಗ್ಗೆ ಅರಿವು ಇಲ್ಲಿ ಸೋಲಿಗರಿಗೆ ಇರುವುದಿಲ್ಲ. ಸಾಮಾನ್ಯವಾಗಿ ಯಾರೂ ಸಹ ಹಣ-ಸಂಪತ್ತಿನ ರೂಪದ ಆಸ್ತಿ ಮಾಡಿರುವುದಿಲ್ಲ. ಇವರಿಗೆ ಆಸ್ತಿ ಎಂದರೆ ಮಕ್ಕಳು. ಅದರಲ್ಲೂ ಸ್ವಲ್ಪ ಪ್ರಮಾಣದಲ್ಲಿ ಇತ್ತೀಚೆಗೆ ಅದು ಕೆಲವರು ಮಾತ್ರ ಭೂಮಿಯನ್ನು ೧/೨ ಗುಂಟೆ, ೧ ಎಕರೆ, ೨ ಎಕರೆ ಇತ್ಯಾದಿ ಅವರವರ ಸಾಮರ್ಥ್ಯಕ್ಕೆ ತಕ್ಕ ಹಾಗೆ ಹೊಂದಿರುತ್ತಾರೆ.

ಅದರಲ್ಲೂ ಈ ರೀತಿಯ ಭೂಮಿ ಹಕ್ಕು ಪತ್ರ ಇದ್ದರೂ ಇರುತ್ತದೆ. ಕೆಲವರಿಗೆ ಇರುವುದಿಲ್ಲ ಹಾಗೆಯೇ ದಾಖಲೆಗಳೂ ಕೂಡ ಇರುವುದಿಲ್ಲ. ಆದುದರಿಂದ ಸೋಲಿಗರಲ್ಲಿ ಆಸ್ತಿಯ ಕಲ್ಪನೆ ಇನ್ನೂ ಬಂದಿಲ್ಲ. ಸೋಲಿಗರು ಎಷ್ಟು ಸುಲಭವಾಗಿ ಮದುವೆಯಾಗುವರೋ, ಅಷ್ಟೇ ಸುಲಭವಾಗಿ ತಮ್ಮ ಕುಲ ಪಂಚಾಯಿತಿಯಿಂದ ವಿವಾಹ ವಿಚ್ಛೇದನ ಪಡೆದು ಮರುಮದುವೆಗೆ ತೊಡಗುವರು.

**ಮಿಶ್ರದಾಯದಿ ವಿವಾಹ (Cross Cousin Marriage)**

ಸಾಮಾನ್ಯವಾಗಿ ಭಾರತೀಯ ಸಮಾಜದ ಸಾಮಾನ್ಯ ವರ್ಗದಲ್ಲೂ ಈ ಪದ್ಧತಿಯು ರೂಢಿಯಲ್ಲಿದೆ. ಹಾಗೆಯೇ ಬುಡಕಟ್ಟು ಸಮುದಾಯಗಳಲ್ಲಿ ಮಿಶ್ರದಾಯದಿ ವಿವಾಹ ಪದ್ಧತಿ ಇರುವುದನ್ನು 'ರಾಬರ್ಟ್ ಲೋವಿಯವರು' ಹೀಗೆ ತಿಳಿಸಿದ್ದಾರೆ. "When Primitive People favour in marrigage, this is nearly always limited to those relative technically known as cross cousins. While parallel or identical cousins are barred from inter marrying by incest rule."[6]

ಇಲ್ಲಿ 'ಮಿಶ್ರ ದಾಯಾದಿ' ಎಂಬ ಮಾತೇ ಹೆಚ್ಚು ಅರ್ಥಗರ್ಭಿತವಾಗಿದೆ. ಒಬ್ಬ ಯುವಕನ ತಂದೆಯ ಸೋದರರನ ಮಗಳು ಆ ಯುವಕನಿಗೆ ದಾಯಾದಿ ಅಂದರೆ ತಂಗಿಯೂ ಒಂದೇ ಕುಲದವಳೂ ಆಗುತ್ತಾಳೆ. ಇದೇ ಮಾತುಗಳು ಆ ಯುವಕನ ತಾಯಿಯ ತಂಗಿ ಮಗಳಿಗೂ ಅನ್ವಯವಾಗುತ್ತದೆ. ಆದರೆ ಆ ಯುವಕನ ತಂದೆಯ ಸೋದರಿ ಮಗಳು ಹಾಗೂ ತಾಯಿಯ ಸೋದರನ ಮಗಳಿಗೆ ಅನ್ವಯಿಸುವುದಿಲ್ಲ. ಬೇರೊಂದು ಕುಲಕ್ಕೆ ಸೇರಿದವಳೂ ಪತ್ನಿಯಾಗಿ ಸ್ವೀಕರಿಸಲು ಯಾವುದೇ ಅಡ್ಡಿ ಆತಂಕ ಇರುವುದಿಲ್ಲ. "ಕುಲವನ್ನು" ಅವಲಂಬಿಸಿ ಈ ರೀತಿಯ ವಿವಾಹ ಪದ್ಧತಿ ತೀರ್ಮಾನವಾಗುತ್ತದೆ. ಸೋಲಿಗರಲ್ಲಿ ಈ ರೀತಿಯ ವಿವಾಹ ಪದ್ಧತಿಯು ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. ಹುಡುಗಿಯು ಮೊದಲು ಮೈನೆರೆದಾಗ (ಮುಟ್ಟು ಆದಾಗ) ಸೋದರಮಾವ ಸೊಪ್ಪಿನ ನೆರಕೆ ಹಾಕುವುದು, ಮದುವೆ ಆಗುವ ಸಮಯದಲ್ಲಿ ಕೆಲವು ಶಾಸ್ತ್ರ-ಸಂಪ್ರದಾಯಗಳಲ್ಲಿ ಸೋದರ ಮಾವ ಭಾಗವಹಿಸುವುದು ಬಹುಮುಖ್ಯವಾದುದ್ದಾಗಿದೆ. ಸೋದರಮಾವ ಸೀರೆ ಇತ್ಯಾದಿ ಹತ್ತಿರದ ಸಂಬಂಧಗಳಲ್ಲಿ ನಡೆಯುವುದು ಕಂಡು ಬರುತ್ತದೆ. ಇಂದಿಗೂ ಸಹ ಈ ರೀತಿಯ ವಿವಾಹವನ್ನು ಕಾಣುತ್ತೇವೆ.

ಮಿಶ್ರದಾಯದಿ ವಿವಾಹದಲ್ಲಿ ಈ ರೀತಿಯಲ್ಲಿ ಸರಳವಾಗಿ ವಿವಾಹ ನಡೆಯಲು ಕಾರಣವನ್ನು ನೋಡಿದಾಗ,

- ಸೋದರ, ಸೋದರಿಯರಿಂದ ಪ್ರೀತಿ ವಾತ್ಸಲ್ಯ ಅವರ ಮಕ್ಕಳ ಪರಸ್ಪರ ವಿವಾಹದಿಂದ ಗಟ್ಟಿಯಾಗುತ್ತದೆ.
- ಸೋದರ ಸಂಬಂಧವಾದ್ದರಿಂದ ಯಾವುದೇ ತೊಂದರೆ ಇಲ್ಲದೆ ದುಬಾರಿ ಖರ್ಚಾಗದೆ ಇದ್ದಿದ್ದರಲ್ಲೇ ಮದುವೆ ನಡೆದುಹೋಗುತ್ತದೆ.
- ಅನುಸರಿಸಿಕೊಂಡು ಹೋಗುವ ಗುಣ ಸ್ವಭಾವ ಗಂಡ-ಹೆಂಡತಿಯರಲ್ಲಿ ಹೆಚ್ಚಾಗಿರುತ್ತದೆ. ತಾವು, ತಮ್ಮದು ಎನ್ನುವ ಭಾವನೆ ಹೆಚ್ಚಾಗಿ ಬೆಳೆಯುತ್ತದೆ.
- ಅಲ್ಪ-ಸ್ವಲ್ಪ ಆಸ್ತಿ ಅಥವಾ ಇನ್ನಾವುದೇ ಇದ್ದರೂ ಬೇರೆಯವರಿಗೆ ಹೋಗುವುದಿಲ್ಲ ಎಂಬ ಭಾವನೆ ಮನೆಯವರನ್ನು ಅತ್ತೆ-ಮಾವನನ್ನು ಆರೋಗ್ಯಕರವಾಗಿ ನೋಡಿಕೊಳ್ಳುತ್ತಾಳೆ ಎಂಬ ಭಾವನೆ ಬೆಳೆಯುತ್ತದೆ.

ಸೋಲಿಗರಲ್ಲಿ ಇಂದಿಗೂ ಸಹ ಈ ರೀತಿಯ ವಿವಾಹ ಪದ್ಧತಿಯು ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ. ಈ ರೀತಿಯ ವಿವಾಹ ಪದ್ಧತಿ ದ್ರಾವಿಡ ಬುಡಕಟ್ಟಿನ ಜನಾಂಗದ ಒಂದು ವಿಶಿಷ್ಟ ಲಕ್ಷಣ ಎಂದು ಕೆ.ಎಂ. ಕಪಾಡಿಯರವರು ಹೇಳಿದ್ದಾರೆ. ಸೋಲಿಗರು ದ್ರಾವಿಡ ಜನಾಂಗದ ಒಂದು ಗುಂಪು ಎಂಬುದನ್ನು ಸಮರ್ಥಿಸಲು ಇದೊಂದು ನಿದರ್ಶನ ಅಂಶವಾಗಿದೆ.

**ಒಪ್ಪಂದ ವಿವಾಹ** (Arrange Marriage)

ಇತ್ತೀಚೆಗೆ ಸೋಲಿಗರಲ್ಲಿ ಅವರ ವಿವಾಹದ ವಿಧಾನಗಳಲ್ಲಿ 'ಒಪ್ಪಂದದ ವಿವಾಹ'ವೂ ಸೇರಿಕೊಂಡಿದೆ. ಒಪ್ಪಂದ ವಿವಾಹವು ಸೋಲಿಗರು ಹೊರ ಸಮಾಜದ ಪ್ರಭಾವ, ಒಡನಾಟ, ಕಾಡಿನಿಂದ ಪುನರ್ವಸತಿ ಗೊಂಡ ಕೆಲವು ಸೋಲಿಗರಲ್ಲಿ, ಶಿಕ್ಷಣದ ಪ್ರಭಾವ, ಇನ್ನಿತರ ಹಲವಾರು ಕಾರಣಗಳಿಂದ ಸೋಲಿಗರಲ್ಲಿ ಒಪ್ಪಂದ ವಿವಾಹವನ್ನು ತುಂಬಾ ಕಡಿಮೆ ಪ್ರಮಾಣದಲ್ಲಿ ಇತ್ತೀಚೆಗೆ ಕಂಡುಬರುತ್ತದೆ. ಸೋಲಿಗರಲ್ಲಿ ಆರ್ಥಿಕವಾಗಿ ಸ್ವಲ್ಪ ಸಬಲವಾಗಿರುವವರು, ಕೆಲವರು ಸಾಲ ಮಾಡಿ, ನಾಡವರ ರೀತಿ ಶಾಸ್ತ್ರ-ಸಂಬಂಧ, ಚಪ್ಪರ ವಾದ್ಯ-ಗೋಷ್ಠಿ ಇವುಗಳನ್ನು ಮಾಡುವುದರ ಮೂಲಕ ತಮ್ಮ ಮಗಳಿಗೆ ಅಥವಾ ಮಗನಿಗೆ ಮದುವೆಯನ್ನು ಮಾಡಬೇಕು ಎಂದು ಸೋಲಿಗರು ಇತ್ತೀಚಿನ ದಿನಗಳಲ್ಲಿ ತೀರ್ಮಾನ ಮಾಡುತ್ತಾರೆ. **'ಒಪ್ಪಂದ ಮದುವೆ'** ಎಂದರೆ ಸೋಲಿಗರು ನಾಡವರು(ಇತರೆ ಸಮುದಾಯ) ಮದುವೆ ಯಾಗಲು ಗಂಡಿನ ಕಡೆಯವರು, ಹೆಣ್ಣಿನ ಕಡೆಯವರು ನೋಡಿ, ಒಪ್ಪಿ, ಮದುವೆಯನ್ನು ಹಿರಿಯರು, ತಂದೆ-ತಾಯಿ-ಬಂಧುಗಳು ನಿಶ್ಚಯಿಸುವ ಮದುವೆಯನ್ನು ಒಪ್ಪಂದದ ಮದುವೆ ಎಂದು ಕರೆಯುತ್ತಾರೆ. ಮದುವೆಯನ್ನು ಮಾಡುವ ರೀತಿಯಲ್ಲಿ ಗಂಡು ಹೆಣ್ಣು ನೋಡಿ ಒಪ್ಪಂದ ಮಾಡಿಕೊಂಡು ವೀಳ್ಯಶಾಸ್ತ್ರ ಮಾಡಿ, ಶಾಸ್ತ್ರ ಸಂಬಂಧಗಳ ಮೂಲಕ ಮದುವೆಯನ್ನು ಮಾಡುವುದಕ್ಕೆ ಒಪ್ಪಂದ ವಿವಾಹ ಎಂದು ಕರೆಯುತ್ತಾರೆ. ಮದುವೆ ಮುಂಚೆ ಗಂಡು-ಹೆಣ್ಣು ಮದುವೆಗೆ ಒಪ್ಪಿಗೆಯಾಗಿದ್ದಾರೆ ಎಂದು ಎರಡೂ ಮನೆಯ ಕಡೆಯವರು ಹೆಣ್ಣಿನ ಮನೆಯಲ್ಲಿ 'ಒಪ್ಪಂದ ಶಾಸ್ತ್ರ' ಮಾಡುತ್ತಾರೆ. ವೀಳ್ಯದೆಲೆಯನ್ನು ಹೆಣ್ಣಿನ ಕಡೆಯವರು ಹಾಗೂ ಗಂಡಿನ ಕಡೆಯವರು ಕೊಡುವುದರ ಮೂಲಕ ಸೋಲಿಗರಲ್ಲಿ ಮದುವೆಗೆ ಒಪ್ಪಿಗೆಯನ್ನು ಸೂಚಿಸುತ್ತಾರೆ. ಸೋಲಿಗರು ಈ ರೀತಿಯಾಗಿ ಮಾಡುವ ಒಪ್ಪಂದ ಮದುವೆಯಲ್ಲಿ ಸಮುದಾಯದಲ್ಲಿನ ತಮ್ಮಡಿಯೇ ಮದುವೆಯನ್ನು ನೆರವೇರಿಸುತ್ತಾರೆ.

ಹಲವಾರು ವಿಧಾನಗಳ ಜೊತೆಯಲ್ಲಿ ಒಪ್ಪಂದ ವಿವಾಹವು ಕಡಿಮೆ ಪ್ರಮಾಣದಲ್ಲಿ ನಡೆಯುತ್ತದೆ. ಗಂಡಿಗೆ-ಹೆಣ್ಣಿಗೆ ಹೊಸಬಟ್ಟೆ, ಸೀರೆ, ಪಂಚೆ, ಶರ್ಟು ಖರೀದಿಸುವ ಸಂಪ್ರದಾಯವಿದೆ. ಕೆಲವರು ದೇವಸ್ಥಾನದಲ್ಲಿ ಮದುವೆಯನ್ನು ಮಾಡುತ್ತಾರೆ. ಕೆಲವರು ಆರ್ಥಿಕವಾಗಿ ಉಳ್ಳವರು, ಅತೀ ಕಡಿಮೆ ಮಂದಿ ಛತ್ರದಲ್ಲಿ ಮದುವೆಯನ್ನು ಮಾಡುತ್ತಾರೆ. ಮದುವೆಯ ಪತ್ರವನ್ನೂ ಸಹ ಇತ್ತೀಚೆಗೆ ಮಾಡಿಸುವ ಪದ್ಧತಿ ಸೋಲಿಗರಲ್ಲಿದೆ. ಹಾಗೂ ಹಿಂದೆ ತಮ್ಮಲ್ಲಿ ಎಲ್ಲಾ ರೀತಿಯ ಮದುವೆ ಇನ್ನಿತರ ಶುಭಕಾರ್ಯಗಳಿಗೆ ನ್ಯಾಯ ಕುಲ ಪದ್ಧತಿ ಹಾಜರಿರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಮದುವೆಗೆ ಹೊರಗಡೆಯಿಂದ ಪುರೋಹಿತರನ್ನು ಕರೆಸಿ ಮದುವೆಯನ್ನು ಮಾಡಿಸುವ ಪದ್ಧತಿಯು ರೂಢಿಗೆ ಬಂದಿದೆ. ಸೋಲಿಗರಲ್ಲಿ ಹೊರಗಿನ ಸಮುದಾಯಗಳ ಸಂಪರ್ಕದಿಂದ ಒಪ್ಪಂದ ವಿವಾಹ ಪದ್ಧತಿಯು ಸೇರಿಕೊಂಡಿದೆ. ಉದಾ: ಶ್ರೀಮತಿ ಕೇತಮ್ಮ ಬೊಮ್ಮೇಗೌಡ, ಜಿಲ್ಲಾ ಪಂಚಾಯಿತಿ ಮಾಜಿ ಉಪಾಧ್ಯಕ್ಷರು, ಬಂಗ್ಲೇ ಪೋಡು, ಬಿಳಿಗಿರಿರಂಗನಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. ಇವರು ತಮ್ಮ ಮಗಳು

ಸೌಮ್ಯಳ ಮದುವೆಯನ್ನು ಒಪ್ಪಂದ ವಿವಾಹ ಪದ್ಧತಿಯಲ್ಲಿ ಸಂತೆಮರಳ್ಳಿ 'ಛತ್ರ' ಯಳಂದೂರು ತಾಲ್ಲೂಕಿನ 'ಒಂದು ಛತ್ರದಲ್ಲಿ' ಮದುವೆಯನ್ನು ಮಾಡಿದರು. ಈ ಮದುವೆಯಲ್ಲಿ ಸೋಲಿಗರಿಗಿಂತ ನಾಡವರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದರು. ಕಾರಣ ತಿಳಿದಾಗ ದೂರದಿಂದ ನಾಡ ಸೀಮೆಗೆ ಸೋಲಿಗರಿಗೆ ಬರುವುದು ಕಷ್ಟ, ಈ ರೀತಿಯ ಮದುವೆಗೆ ಬರಬೇಕಾದರೆ 'ರೇಸುಮೆ' ಸೀರೆ(ರೇಷ್ಮೆ) ಬೇಕು ಎಂಬ ಕಲ್ಪನೆ ಅವರಲ್ಲಿದೆ. ಆ ಸೀರೆ ಸೋಲಿಗರಲ್ಲಿ ಹೆಚ್ಚು ಮಹಿಳೆಯರಿಗೆ ಇರುವುದಿಲ್ಲ. ಮದುವೆ ಈ ರೀತಿಯಲ್ಲಿ ಹೊರಗಡೆ ನಡೆಯುವ ಮದುವೆಗೆ ಹೋಗಲು ಕಿವಿಗೆ, ಮೂಗಿಗೆ ಸಿನ್ನ(ಚಿನ್ನ) ಆಭರಣ ಬೇಕು. ಇಲ್ಲದಿದ್ದರೆ ಬೇರೆಯವರು ನೋಡಿ ಆಡಿಕೊಳ್ಳುತ್ತಾರೆ ಎಂಬ ಕೀಳರಿಮೆ ಇವರಲ್ಲಿದೆ. ಸೋಲಿಗರ ಹತ್ತಿರ ಆಭರಣ ಇರುವುದಿಲ್ಲ. ಈ ರೀತಿಯ ಮದುವೆಗೆ ಹೋದರೆ ಹೆಣ್ಣಿಗೆ ಅಥವಾ ಗಂಡಿಗೆ 'ಮುಯ್ಯು'(Gift)ಯನ್ನು ಕೊಡುವ ಪದ್ಧತಿ ಸೋಲಿಗರಲ್ಲಿ ಇಲ್ಲ. ಯಾವುದು ಎಷ್ಟು, ಹೇಗೆ? ಎಷ್ಟು ಕೊಡಬೇಕು ಎಂಬ ಗೊಂದಲ ಹಾಗೂ ಹಲವರಲ್ಲಿ ಹಣಕಾಸಿನ ತೊಂದರೆ ಕಾಣಿಸುತ್ತದೆ. ಸೋಲಿಗರು ಸಾಮಾನ್ಯವಾಗಿ ದೂರದ ಸ್ಥಳಗಳಿಗೆ ಹೋಗಲು ಇಷ್ಟಪಡುವುದಿಲ್ಲ. ಮತ್ತೊಂದು ಕಡೆ ಸೋಲಿಗರಲ್ಲಿಯೇ ಈ ರೀತಿಯಾಗಿ ಮದುವೆ ಮಾಡುವವರು ಹಣ ಇರುವವರು. ನಾವು ಬಡವರು, ಇಲ್ಲದವರು ಆ ಮದುವೆಗೆ ಏಕೆ ಹೋಗುವುದು ಎಂಬ ಭಾವನೆ ಇದೆ. ಈ ರೀತಿಯಲ್ಲಿ ಹೊರಗಡೆ ಛತ್ರದಲ್ಲಿ ಮದುವೆಯಾದರೆ ಊರು, ಪಟ್ಟಣಕ್ಕೆ ಸೋಲಿಗರಿಗೆ ಬಂದು ಹೋಗಲು ಸರಿಯಾದ ಸಮಯಕ್ಕೆ ವಾಹನ ಸೌಲಭ್ಯದ ಕೊರತೆ ಇರುತ್ತದೆ.

ಸೋಲಿಗರಲ್ಲಿ ಪ್ರಸ್ತುತದಲ್ಲಿ ಒಪ್ಪಂದ ಮದುವೆ ನಡೆಯುತ್ತದೆ. ಆದರೂ ಸಹ ಅಂತಹ ಮದುವೆಗಳಲ್ಲಿ ಕೆಲವರು ಸಮುದಾಯದ ಒಳಗೆ ಭಾಗವಹಿಸಿದರೂ ಮತ್ತೆ ಕೆಲವರು ಸಮುದಾಯದ ಹೊರಗಡೆಯಿಂದ ಭಾಗವಹಿಸುತ್ತಾರೆ. ಸೋಲಿಗರು ಬಹಳ ಹೆಮ್ಮೆಯಿಂದ ನಾವೂ ಸಹ ನಾಡವರ ರೀತಿಯಲ್ಲಿ ಹಣವನ್ನು ಖರ್ಚುಮಾಡಿ ಮದುವೆ ಮಾಡುತ್ತೇವೆ ಎಂದು ತಮ್ಮೊಳಗೆ ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಇದರ ಪರಿಣಾಮವಾಗಿ, ಸೋಲಿಗರಲ್ಲಿ ಹಲವಾರು ಅಂಶಗಳು ಹೊರ ಬರುತ್ತವೆ. ಅವುಗಳೆಂದರೆ,

- ಹೆಣ್ಣು-ಗಂಡು ಎಲ್ಲರ ಸಮ್ಮುಖದಲ್ಲಿ ಸತಿ-ಪತಿಗಳಾಗಿದ್ದಾರೆ.
- ಹೆಣ್ಣಿಗೆ ಒಂದು ಭದ್ರತೆ ಇರುತ್ತದೆ.
- ಗಂಡು ಯಾವುದೇ ಸಂದರ್ಭದಲ್ಲಿಯೂ ಸಹ ಹೆಣ್ಣನ್ನು ಬಿಡುವಂತಿಲ್ಲ. ಚೆನ್ನಾಗಿ ನೋಡಿ ಕೊಳ್ಳಬೇಕು.
- ಒಂದುವೇಳೆ ಹೆಣ್ಣು-ಗಂಡಿನ ನಡುವೆ ಏನಾದರೂ ತೊಂದರೆಯಾದರೆ ಕಾನೂನು ಪೋಲೀಸ್ ವ್ಯವಸ್ಥೆ ಇರುತ್ತದೆ ಎಂಬ ನಂಬಿಕೆ.
- ಇವರು ಓಡಿ ಹೋಗಿ ಮದುವೆಯಾಗಿಲ್ಲ. ಎಲ್ಲರ ಸಮ್ಮುಖದಲ್ಲಿಯೇ ಮದುವೆಯಾಗಿದ್ದಾರೆ ಎಂಬ ನಂಬಿಕೆ.

ಕುಲದಲ್ಲಿನ ಕಟ್ಟುನಿಟ್ಟಿನ ಸ್ಥಾನಮಾನ ಕಡಿಮೆಯಾಗುತ್ತಿದೆ. ಕುಲದ ಆಚರಣೆ ಸಡಿಲವಾಗುತ್ತಿದೆ. ಪೋಲೀಸ್, ಕಾನೂನು, ಕೋರ್ಟ್ ವ್ಯವಸ್ಥೆ ಪೋಡು, ಹಾಡಿ ದೊಡ್ಡಿ ಮತ್ತು ಕಾಲೋನಿಗಳಿಗೂ ಬಂದಿದೆ.

ಸೋಲಿಗರು ಮೇಲಿನ ಎಲ್ಲಾ ವಿವಾಹ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಆದರೂ ಸಹ ಸೋಲಿಗರಲ್ಲಿ ಹುಡುಗಿಯ ಮನೆ ಸೇರುವುದು ಅಥವಾ ಸೇವಾ ವಿವಾಹ, ಅಪಹರಣಾ ವಿವಾಹ ಅಥವಾ ಓಡಿಹೋಗಿ ವಿವಾಹವಾಗುವುದು, ಹಿರಿಯರ ಸಮ್ಮುಖದಲ್ಲಿ ವಿವಾಹವಾಗುವುದು ಹೆಚ್ಚಾಗಿ ಕಂಡು ಬರುತ್ತದೆ. ಒಪ್ಪಂದ ವಿವಾಹವು ಕೆಲವೇ ಕೆಲವು ಮಂದಿ ಸೋಲಿಗರಲ್ಲಿ ಇತ್ತೀಚೆಗೆ ಮಾತ್ರ ಕಂಡು ಬರುತ್ತದೆ.

ಸಾಮಾಜಿಕ ಬದಲಾವಣೆ ಪ್ರಕೃತಿಯ ಸಹಜ ನಿಯಮ ಸೋಲಿಗ ಸಮುದಾಯವೂ ಈ ನಿಯಮಕ್ಕೆ ಹೊರತಾಗಿಲ್ಲ. ವ್ಯಕ್ತಿಯು ಜೀವನದಲ್ಲಿ ರಕ್ಷಣೆ ಮತ್ತು ಭದ್ರತೆಗಾಗಿ ಚಡಪಡಿಸುವಂತೆ ಸಮಾಜವೂ ಶಾಶ್ವತವಾದ ಸ್ಥಿರತೆಯನ್ನು ಬಯಸುವುದು ತನ್ನ ವಿವಿಧ ನಿಯಂತ್ರಣಗಳ ಸಾಧನಗಳ ಮೂಲಕ ಸಮಾಜವು ತನ್ನ ಸ್ಥಿರತೆಯನ್ನು ಉಳಿಸಿಕೊಳ್ಳಲು ಹೋರಾಡುವುದು. ಅದೇ ರೀತಿಯಲ್ಲಿಯೇ ಸೋಲಿಗ ಸಮುದಾಯವೂ ಸಹ ತನ್ನದೇ ಆದ ಸಮುದಾಯವನ್ನು ಪಾರಂಪರಿಕ ಜ್ಞಾನದ ಮೂಲಕ ಕಾಡಿನ ಪರಿಸರದ–ಪ್ರಾಣಿ–ಪಕ್ಷಿಗಳ ಜೊತೆಯಲ್ಲಿಯೇ ಉಳಿಸಿಕೊಂಡು ಹೋಗುತ್ತಾ ಸಾಗುತ್ತಿರುವ ಪ್ರಯತ್ನಗಳನ್ನು ಮಾಡುತ್ತಿರುತ್ತದೆ. ಆದರೆ ಬದಲಾವಣೆ ನಿಸರ್ಗದ ನಿಮಯ. ಯಾವ ಸಮಾಜ, ಸಮುದಾಯವೂ ಇದರಿಂದ ಹೊರತಾಗಿಲ್ಲ. ಆದರೆ ಆಗುವಂತಹ ಪರಿವರ್ತನೆ, ಬದಲಾವಣೆಗಳು ಆ ಸಮುದಾಯದಲ್ಲಿ ಯಾವ ಕಡೆ ಹೋಗುತ್ತದೆ, ಅದರ ಸಾಧಕ–ಬಾಧಕಗಳೇನು, ಅದರ ಅಭಿವೃದ್ಧಿಗೆ ಆ ಸಮುದಾಯದ ಉಳಿಯುವಿಕೆಗೆ ಪೂರಕವಾಗುತ್ತಿದೆಯೇ ಎಂಬಿತ್ಯಾದಿ ಅಂಶಗಳನ್ನು ಗುರುತಿಸುವುದು ಇಲ್ಲಿ ಮುಖ್ಯ ವಾಗಿರುತ್ತದೆ.

**೩.೨.೨. ಸೋಲಿಗರು ಮದುವೆ ಮಾಡುವ ವಿಧಾನ ಮತ್ತು ಸ್ಥಳಗಳು**

ಮನೆಗಳಲ್ಲಿ ಚಪ್ಪರ ಹಾಕಿ, ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ಮದುವೆ ಮಾಡಿಕೊಡುತ್ತಾರೆ. ಹತ್ತಿರದ ದೇವಸ್ಥಾನ ಅಂದರೇ ಮಹದೇಶ್ವರ, ಬಿಳಿಗಿರಿರಂಗಪ್ಪ, ಕೇತಪ್ಪ, ಗೋಪಾಲಸ್ವಾಮಿ ಬೆಟ್ಟ, ಪಾರ್ವತಿ ಬೆಟ್ಟ ಇತ್ಯಾದಿ ಕಡೆಗಳಲ್ಲಿ ಮದುವೆ ಮಾಡುತ್ತಾರೆ.

ಮದುವೆ ಸ್ಥಳ ಮನೆಯ ಮುಂದಿನ ಜಾಗ ಅಥವಾ ಕಾಡಿನ ತಮ್ಮ ಮನೆಯ ದೇವಸ್ಥಾನದಲ್ಲಿ ನಡೆಯುತ್ತದೆ. ಕುಲದವರ ಪಾತ್ರ ಯಜಮಾನ, ಕೋಲುಕಾರ, ಛಲವಾದಿ, ಪಟ್ಟೆಗಾರ ಇತ್ಯಾದಿ ಕುಲಸ್ಥರು ಸೇರಿಕೊಂಡು ಮದುವೆಯ ಕಾರ್ಯದಲ್ಲಿ ಭಾಗವಹಿಸುತ್ತಾರೆ. ಸಾಮಾನ್ಯವಾಗಿ ಸೋಲಿಗರ ಮದುವೆ ಕಾರ್ಯ ಅಥವಾ ಇನ್ನಾವುದೇ ಕಾರ್ಯಗಳಲ್ಲಿ ಕುಲದವರು ಮುಖ್ಯವಾಗಿ ಪಾಲ್ಗೊಳ್ಳುತ್ತಾರೆ. ಒಂದುವೇಳೆ ಕುಲಸ್ಥರಲ್ಲಿ ಯಜಮಾನ, ಕೋಲುಕಾರ, ಚಲುವಾದಿ, ಪಟ್ಟೆಗಾರ, ದಳವಾಯಿ ಯಾರಾದರೂ ಅನುಪಸ್ಥಿತರಿದ್ದರೆ ಅವರ ಸ್ಥಾನದಲ್ಲಿ ಇನ್ನೊಬ್ಬರು ನಿಂತು ಕಾರ್ಯವನ್ನು ನಡೆಸಿಕೊಡುತ್ತಾರೆ. ಒಟ್ಟಿನಲ್ಲಿ ಕುಲದ ಮುಂದೆ ಎಲ್ಲಾ ಕೆಲಸ ಕಾರ್ಯ ನಡೆಯಬೇಕು ಎಂಬುದು ಸೋಲಿಗರ ನಂಬಿಕೆ ಹಾಗು ಕುಲವು ಸೋಲಿಗರಲ್ಲಿ ಬಹಳ ಮುಖ್ಯವಾದುದ್ದಾಗಿರುತ್ತದೆ. ಸೋಲಿಗರು ಅವರವರ ಶಕ್ತಿಗನುಸಾರವಾಗಿ ಊಟದ ವ್ಯವಸ್ಥೆಯನ್ನು ಏರ್ಪಡಿಸುತ್ತಾರೆ. ಇತ್ತೀಚೆಗೆ ಊಟದಲ್ಲಿ ಅನ್ನ, ಸಾಂಬಾರು, ಪಲ್ಯ, ಹಪ್ಪಳ, ಉಪ್ಪಿನಕಾಯಿ ಅವುಗಳಲ್ಲಿ ಒಂದು ಸಿಹಿ ತಿನಿಸು ಪಾಯಸ ಇರುತ್ತದೆ. ಊಟ ಮುಗಿಸಿಕೊಂಡು ಕೆಲವರು ತಮ್ಮ ತಮ್ಮ ಮನೆಗೆ ತೆರಳುತ್ತಾರೆ. ಕೆಲವು ಹತ್ತಿರದ ಬಂಧುಗಳು ಒಂದು ಅಥವಾ ಎರಡು ದಿನ ಅಲ್ಲಿಯೇ ಉಳಿದ ಆನಂತರ ಹೆಣ್ಣು–ಗಂಡಿನ ಜೊತೆಯಲ್ಲಿ ಗಂಡಿನ ಊರಿಗೆ ತೆರಳುತ್ತಾರೆ.

ಸೋಲಿಗರ ಮದುವೆಗಳಲ್ಲಿ ನಾಡ ಪೂಜಾರಿ, ಬ್ರಾಹ್ಮಣ ಪುರೋಹಿತರು ಪೌರೋಹಿತ್ಯ ಮಾಡಿಸಲು ಬರುವುದಿಲ್ಲ ಹಾಗೂ ಮದುವೆ ಮಾಡಿಸುವುದರಲ್ಲಿ ಪ್ರವೇಶವಿಲ್ಲ. ಸೋಲಿಗರ ತಮ್ಮಡಿ ಕುಲಸ್ಥರು ಹಾಗೂ ಮನೆಯವರೇ ಇಲ್ಲಿ ಪ್ರಮುಖರು.

ಕಾಡಿನ ಮಧ್ಯದಲ್ಲಿ ವಾಸ ಮಾಡುತ್ತಿರುವ ಕೆರೆದಿಂಬ, ಗೊಂಬೆಗಲ್ಲು ಇಂತಹ ಹಲವಾರು ಕಡೆಗಳಲ್ಲಿ ಶಾಸ್ತ್ರ ಸಂಬಂಧ ಅಕ್ಕಿಕಾಳು ಅರಿಶಿಣ, ಕುಂಕುಮ ಇತ್ಯಾದಿಗಳನ್ನು ಉಪಯೋಗಿಸುವುದಿಲ್ಲ. ಕೆರೆದಿಂಬದಲ್ಲಿ ಇವರ ಮನೆ ದೇವರು ಜಡೇಸ್ವಾಮಿ, ಹೆಣ್ಣು ದೇವರು ರಾಕ್ಕಾಸಮ್ಮ, ಇವರಲ್ಲಿ ಈಗಲೂ ಸಹ ಮದುವೆಯನ್ನು ಮಾಡುವ ಹಾಗಿಲ್ಲ. ಶಾಸ್ತ್ರ ಸಂಬಂಧ ಅಕ್ಕಿಕಾಳು ಅರಿಶಿಣ, ಕುಂಕುಮ ಇವನ್ನು ಉಪಯೋಗಿಸಿ ಮದುವೆ ಮಾಡಿದರೆ ನಮ್ಮ ದೇವರಿಗೆ ಕೋಪ ಬಂದು ಅಕ್ಕಪಕ್ಕದಲ್ಲಿ ಒಂದು ಕಡೆ ಇದ್ದಕ್ಕಿದ್ದ ಹಾಗೆ ಯಾರ ಮೇಲಾದರೂ ಮರದ ಕೊಂಬೆ ಅಥವಾ ಮರದ ಬುಡ ಬೀಳುವುದು, ನೀರಿನ ಚೆಂಬು ಕೆಳಗೆ ಬಿದ್ದು ತಲೆಕೆಳಗಾಗುವುದು, ಹೀಗೆ ಹಲವಾರು ಕೆಟ್ಟ ಘಟನೆಗಳು ಸಂಭವಿಸುತ್ತದೆ. ಆದುದರಿಂದ ನಮ್ಮ ಕುಲ, ಕುಲದಲ್ಲಿ ನಾವು ಮದುವೆ ಎಂದರೆ ಗಂಡ-ಹೆಂಡತಿ ನಂಬಿಕೆಯಾಗಿ ಹೊಂದಿಕೊಂಡು ಹೋಗೋದೇ ಆಗಿದೆ ಎಂಬ ನಂಬಿಕೆ ಈಗಲೂ ಸಹ ಸೋಲಿಗರಲ್ಲಿದೆ. ಆದರೆ ಇತ್ತೀಚೆಗೆ ಸೋಲಿಗರ ಕುಲದಲ್ಲಿ ಸಡಿಲಿಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ ಹಾಗೂ ಮದುವೆ ಆಚರಣೆಯಲ್ಲಿಯೂ ಸಹ ಸ್ವಲ್ಪ ಪ್ರಮಾಣದಲ್ಲಿ ಹೊರಗಿನವರ ಪ್ರಭಾವದಿಂದ ಬದಲಾವಣೆ ಯಾಗುತ್ತಿರುವುದನ್ನು ಗುರುತಿಸಬಹುದಾಗಿದೆ.

ಮದುವೆಯ ಕಾರ್ಯ ಎಂದರೆ ಹಿಂದೆ ಬಿಳಿಗಿರಿರಂಗಪ್ಪ ನಮ್ಮ ಹೆಂಗಸು(ಹುಡುಗಿ) ಪುಸುಮಾಲೆಯನ್ನು ಯಾವ ರೀತಿ ಕದ್ದು ಕರೆದುಕೊಂಡು ಹೋದನೋ ಈಗ ಅದೇ ರೀತಿಯಾಗಿ ಮಾಡಲಾಗದು. ಬದಲಾಗಿ ಮದುವೆಯಾಗುವ ಹುಡುಗಿಯ ಮನೆಗೆ ಹುಡುಗ ಮತ್ತು ಹುಡುಗನ ಮನೆಯ ಕಡೆಯವರು ಗುರುವಾರದ ದಿನ ಹೋಗಿ ಹುಡುಗಿಯ ಮನೆಯಲ್ಲಿ ಊಟ ಮಾಡಿ, ಮಾತುಕತೆ ನಡೆಸಿ ಹೆಣ್ಣಿನ ಮನೆಯಲ್ಲಿ ಆ ದಿನ ಉಳಿಯದೇ ಹಿಂತಿರುಗಿ ಗಂಡಿನ ಮನೆಗೆ ಬರುತ್ತಾರೆ. ನಂತರದಲ್ಲಿ ಮತ್ತೆ ಭಾನುವಾರ ಹುಡುಗ ಹುಡುಗಿಯವರು ಹುಡುಗಿಯರ ಮನೆಯವರು ಸೇರಿಕೊಂಡು ಹುಡುಗಿಗೆ **'ತಾಲೀನೂಲು'** ತೆಗೆದುಕೊಂಡು ನೆಲದಲ್ಲಿ ಚಾಪೆ ಹಾಕಿ ಕುಲದವರ, ಬಂಧು ಬಳಗದವರ ಸಮ್ಮುಖದಲ್ಲಿ ತಾಳಿಯನ್ನು ಹುಡುಗಿಗೆ ಕಟ್ಟುತ್ತಾರೆ. ಯಾವ ಸಮಯದಲ್ಲಿ ಕಟ್ಟಬೇಕು, ಕಟ್ಟಬಾರದು ಎಂದು ನಿರ್ಬಂಧ ಇಲ್ಲ. ಆದರೂ ಸೋಲಿಗರಲ್ಲಿ ಸೂರ್ಯ ಹೊತ್ತು ಏರಬೇಕು ಆದರೆ, ಅದೇ ಮಾರ್ಗದಲ್ಲಿ ಹೊತ್ತು ಇಳಿಯುತ್ತವೆ ಎಂದು ಅಲ್ಲದೇ ಹೊತ್ತು ಏರಬಾರದು ಅಂದರೆ, ಸೋಲಿಗರು ಯಾವಾಗಲೂ ಅವರ ಬದುಕು, ಅವರ ಬಾಳು ಬಹಳ ಶಾಂತಿಯುತವಾಗಿ ಏರುತ್ತಲೇ ಇರಬೇಕು ಎಂದು ತಿಳಿಯುತ್ತಾರೆ.

ಕಾಲೇಜು ಮಟ್ಟದಲ್ಲಿ ಓದುತ್ತಿರುವ ಗಂಡು ಮತ್ತು ಹೆಣ್ಣುಮಕ್ಕಳು ಗೊಂದಲದ ಪರಿಸ್ಥಿತಿಯಲ್ಲಿದ್ದಾರೆ. ನಾವು ಯಾರ ಜೊತೆ ಮದುವೆಯಾಗುವುದು, ಹೆಣ್ಣುಮಗಳು ಕಲಿತಿದ್ದರೆ ಆಕೆಗೆ ಓದಿದ ಅಥವಾ ಅವಳಿಗಿಂತ ಸ್ವಲ್ಪ ಮುಂದೆ ಇರುವ ಹುಡುಗ ಬೇಕು ಎನ್ನುವುದು ಅಥವಾ ನಾವು ಓದಿರುವ ಹೆಣ್ಣು ಮಕ್ಕಳು ಓದಿಲ್ಲದ ಗಂಡು ಮಕ್ಕಳನ್ನು ಮದುವೆಯಾದರೆ ಅವರು ನಮ್ಮನ್ನು ಸಾಕುತ್ತಾರೆಯೇ ಎಂಬ ಪ್ರಶ್ನೆ. ಮತ್ತೆ ಕೆಲವರು ಹುಡುಗರು ಮದ್ಯಪಾನ ಮಾಡುತ್ತಾರೆ ಎನ್ನುವ ಭಯ. ಈ ರೀತಿಯಾದರೆ

ಮತ್ತೆ ಅದೇ ಪೋಡಿನಲ್ಲಿ ಹೋಗಿ ಜೀವನ ಸಾಗಿಸಬೇಕು. ಈ ಎಲ್ಲಾ ಗೊಂದಲಗಳ ನಡುವೆ ಅಲ್ಲೊಂದುಇಲ್ಲೊಂದು ಸೋಲಿಗರಲ್ಲಿ ಅರಣ್ಯವಾಸಿಗಳ ಸಮುದಾಯದ ಇತರೇ ಬುಡಕಟ್ಟುಗಳ ಜೊತೆ ಸೋಲಿಗ ಹುಡುಗ, ಹುಡುಗಿಯರು ಮದುವೆಯಾಗುತ್ತಿರುವುದು ಕಂಡು ಬಂದಿದೆ.

ಸೋಲಿಗರ ಮದುವೆಯಲ್ಲಿ ಸರಳತೆ ಇದ್ದರೂ ಇತ್ತೀಚೆಗೆ ನಾಡವರ ಸಹವಾಸ, ಹೊರಜಗತ್ತಿನ ಸಂಪರ್ಕದಿಂದ 'ಸಾಲವನ್ನಾದರೂ' ಮಾಡಿ, ತಾಳಿ, ಸೀರೆ, ಮದುವೆ ಊಟ ಇತ್ಯಾದಿ ಮಾಡಿ ಮಗಳು ಅಥವಾ ಮಗನನ್ನು ಮದುವೆ ಮಾಡಿಕೊಡಬೇಕು ಎಂಬಂತಹ ಮಟ್ಟಿಗೆ ಬಂದು ನಿಂತಿದೆ. ಎರಡನೆಯದಾಗಿ ಗಂಡು, ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಹೋಗುವುದು, ಹೆಣ್ಣು ಗಂಡಿಗೆ ಇಬ್ಬರಿಗೂ ದೇವರ ಹತ್ತಿರ ಪ್ರಸಾದ ಕೇಳುವುದು, ಹೂವು ಬಲಗಡೆ ಬಿದ್ದಲೆ(ಬಿದ್ದರೆ) ಒಳ್ಳೆಯದು. ಮುಖ್ಯವಾಗಿ ಸೋಲಿಗರು ಯಾವ ವಾರ ಅಥವಾ ಯಾವ ದಿನ ಹೋಗಿ ಹೆಣ್ಣನ್ನು ನೋಡಬೇಕು ಎಂಬುದನ್ನು ಅವರದೇ ಆದ ಪಾರಂಪರಿಕ ಜ್ಞಾನದ ಮೂಲಕ ತಿಳಿಯುತ್ತಾರೆ ಅವುಗಳೆಂದರೆ, **'ಗುರುವಾರ' ಮತ್ತು 'ಭಾನುವಾರ'**, ಈ ದಿನಗಳು ವಿಶೇಷವಾದ ದಿನಗಳು; ಈ ದಿನಗಳಲ್ಲಿ ಮಾತ್ರ ವಿಶೇಷ ಆಚರಣೆ ಮತ್ತು ಹೆಣ್ಣು ನೋಡುವುದು ಮುಂತಾದ ಶುಭ ಕಾರ್ಯಗಳನ್ನು ಮಾಡುತ್ತಾರೆ. ಅಂದರೆ ಗುರು ಬಲ ಇರುತ್ತದೆ ಎಂಬ ನಂಬಿಕೆ. **ಗುರುವಾರ** ಅಂದರೆ ಗುರುವಿನ ವಾರ; ಈ ವಾರದಲ್ಲಿ ಮದುವೆಯಾದರೆ ಗುರು, ಭಗವಂತನ ಬಲ ನಮಗೆ ಹೆಚ್ಚಾಗಿ ಇರುತ್ತದೆ. ನಮಗೆ ಗುರು ಕೃಪೆ ಇರುತ್ತದೆ, ಯಾವ ತೊಂದರೆಯೂ ಇರುವುದಿಲ್ಲ ಎಂಬುದು ಸೋಲಿಗರಲ್ಲಿ ಕಂಡುಬರುವ ನಂಬಿಕೆ. ಅದೇ ರೀತಿಯಲ್ಲಿ ಉಳಿದ ವಾರಗಳಲ್ಲಿ ಸೋಲಿಗರು ಹೆಣ್ಣು ನೋಡಲು ಹೋಗುವುದಿಲ್ಲ. **ಭಾನುವಾರ** ಮದುವೆಯಾದ ಹೆಣ್ಣು-ಗಂಡಿನ ಸಂಸಾರ ಚೆನ್ನಾಗಿರುತ್ತದೆ, ಸಂತೋಷವಾಗಿ ದಾಂಪತ್ಯ ಜೀವನ ಸಾಗಿಸುತ್ತಾರೆ, ಯಾವುದೇ ತೊಂದರೆ ಇರುವುದಿಲ್ಲ ಎಂಬ ನಂಬಿಕೆ ಸೋಲಿಗರಲ್ಲಿದೆ.

ಸೋಲಿಗರಲ್ಲಿ ಮದುವೆ ಮಾಡಲು ಶುಭ ಮತ್ತು ಅಶುಭ ದಿನಗಳ ಕಲ್ಪನೆ ಹೀಗಿದೆ–

- **ಸೋಮವಾರ:** ಈ ವಾರ ಎಲ್ಲಾ ಕಾರ್ಯಗಳೂ ಸೋತುಹೋಗುತ್ತವೆ. ಈ ವಾರದಲ್ಲಿ ಹೆಣ್ಣು ನೋಡೋಕೆ ಗಂಡಿನ ಕಡೆಯವರು ಹೋದರೆ ಮದುವೆ ಕಾರ್ಯದಲ್ಲಿ ಸೋಲಬೇಕಾಗುತ್ತದೆ ಎಂಬ ನಂಬಿಕೆಯಿದೆ.

- **ಮಂಗಳವಾರ:** ಅಂದರೆ 'ಅಂಗಳ ತುಂಬಿದಾಗ' (ಹುಡುಗಿಯ ಮನೆಯಲ್ಲಿ ಅವರ ಕುಟುಂಬದ ಎಲ್ಲರೂ ಒಂದೇ ಕಡೆ ನೆಲೆಸಿದ್ದು, ಒಂದೇ ಮನೆಯಲ್ಲಿದ್ದು, ಇವಳೊಬ್ಬಳೇ ನಾನು ಬೇರೆ ಹೊರಗಡೆ ಹೋಗುತ್ತೀನಿ ಎಂಬ ಭಾವನೆ ಮದುವೆಯಾಗುವ ಹುಡುಗಿಯ ಮನಸಿನಲ್ಲಿ ಬಂದುಬಿಟ್ಟರೆ) ಹುಡುಗಿ ಯಾವತ್ತೂ ಈ ಕಡೆ ಅಂದರೆ ಗಂಡನ ಮನೆಯ ಕಡೆ ಕಿತ್ತು(ಬಿಡಿಸಿಕೊಂಡು) ಬರನಾರ(ಬರುವುದಿಲ್ಲ) ಅಂದರೆ ಮನೆ ಬಿಟ್ಟು ಹೊರಕ್ಕೆ ಗಂಡನ ಮನೆಗೆ ಹೋಗುವುದಕ್ಕೆ ಮನಸ್ಸಾಗುವುದಿಲ್ಲ ಎಂಬುದು ಸೋಲಿಗರ ನಂಬಿಕೆ.

- **ಬುಧವಾರ:** ಭೂಮಿ ಹುಟ್ಟಿದ ವಾರ. ಭೂತ ಅವಳ ಜೊತೆ ಬಂದುಬಿಡುತ್ತದೆ ಎಂಬ ನಂಬಿಕೆ.

- **ಗುರುವಾರ:** ಗುರುವಿನ ವಾರ ಈ ವಾರದಲ್ಲಿ ಮದುವೆಯಾದರೆ ಗುರು, ಭಗವಂತನ ಬಲ ನಮಗೆ ಹೆಚ್ಚಾಗಿ ಇರುತ್ತದೆ, ನಮಗೆ ಗುರು ಕೃಪೆ ಇರುತ್ತದೆ, ಯಾವ ತೊಂದರೆಯೂ ಇರುವುದಿಲ್ಲ

• **ಶುಕ್ರವಾರ:** ಶುಕ್ರವಾರದಲ್ಲಿ ಎಲ್ಲಾ ಸುಟ್ಟು ಹುಂಡು ಹೋಗುತ್ತದೆ. ಅಂದರೆ ಬೆಂಕಿಯ ವಾರ. ಬೆಂಕಿಯಿಂದ ಎಲ್ಲ ಸುಟ್ಟು ಹೋಗುತ್ತದೆ ಎಂದು ಸೋಲಿಗರ ನಂಬಿಕೆ.

• **ಶನಿವಾರ:** ಶನಿ ತುಂಬಿರುತ್ತದೆ. ಕೆಟ್ಟದ್ದು ಆಗುತ್ತದೆ, ಎಂಬುದು ಸೋಲಿಗರ ನಂಬಿಕೆ.

ಹೀಗೆ ವಾರದ ದಿನಗಳ ಬಗ್ಗೆ ತಿಳಿದುಕೊಂಡು ಸೋಲಿಗರು ಭಾನುವಾರ ಮತ್ತು ಗುರುವಾರ ಹೆಣ್ಣಾ ನೋಡಮಗೆ(ನೋಡುವುದಕ್ಕೆ) ಹೋಗುತ್ತಾರೆ.

**೩.೨.೩. ಜನನ ಮತ್ತು ಬಾಣಂತಿಯ ಆರೈಕೆ**

ಸೋಲಿಗರಲ್ಲಿ ಹೆರಿಗೆ ತವರುಮನೆಯಲ್ಲಿಯೇ ನಡೆಯಬೇಕೆಂಬ ಪದ್ಧತಿ ಇಲ್ಲ. ಹಿಂದೆ ಗಂಡ–ಹೆಂಡತಿ ಎಲ್ಲಿ ವಾಸಿಸುತ್ತಿದ್ದರೋ ಅಲ್ಲೇ ಹೆರಿಗೆ ಮಾಡಿಸುತ್ತಿದ್ದರು. ಸೋಲಿಗರು ಹೆರಿಗೆ ನೋವು ಬಂದ ಕೂಡಲೇ ತಾನು ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಎರಡೂ ಕಾಲಿನ ಹೆಬ್ಬೆರಳನ್ನು ನೆಲಕ್ಕೆ ಭದ್ರವಾಗಿ ಅದುಮಿ ಕುಳಿತುಕೊಳ್ಳುತ್ತಾರೆ. ಸ್ವಲ್ಪ ಸಮಯದಲ್ಲಿಯೇ ಹೆರಿಗೆ ಆಗಿಬಿಡುತ್ತದೆ. ಎರಡು ಕೈಯಿಂದ ಮಗುವನ್ನು ಹಿಡಿದುಕೊಂಡು ನನ್ನ ಗಂಡನನ್ನು ಕರೆದು ಅವರ ಸಹಾಯದಿಂದ ಬಿದಿರಿನ ಚೆಕ್ಕೆ ಅಥವಾ ಕುಡುಗೋಲಿನಿಂದ ಹೊಕ್ಕಳ ಬಳ್ಳಿಯನ್ನು ಕೊಯ್ದು ಮಗುವನ್ನು ಬಟ್ಟೆಯಲ್ಲಿ ಸುತ್ತಿ ಪಕ್ಕದಲ್ಲಿ ಮಲಗಿಸಿ, ತಾನು ಸ್ನಾನ ಮಾಡಿಕೊಂಡು, ಆನಂತರ ಗಂಡನ ಕೈಯಲ್ಲಿ ಕುಡಿಯಲು, ತಿನ್ನಲು ಮುದ್ದೆ–ಕಾಡು ಸೀಗೆಸೊಪ್ಪಿನ ರಸ ಮಾಡಿಸಿ, ಊಟ ಮಾಡಿ ಮಗುವಿಗೆ ಹಾಲು ಕುಡಿಸುತ್ತೇವೆ ಎಂದು ಹೇಳುತ್ತಾರೆ. ಸೋಲಿಗರಲ್ಲಿ ಅತ್ತೆ ಮನೆ ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳುಹಿಸುವುದು, ಅತ್ತೆ–ಸೊಸೆ, ಇವೆಲ್ಲವೂ ಇಲ್ಲ, ಇದ್ದರೂ ಕೂಡ ಇತ್ತೀಚೆಗೆ, ಹೊರಗಿನ ನಾಡವರ ಸಂಪರ್ಕದಿಂದ ಕಲಿಯುತ್ತಿದ್ದಾರೆ. ಆದುದರಿಂದ ಗಂಡ –ಹೆಂಡತಿ–ಮಕ್ಕಳು ಕೂಡಿಯೇ ಜೀವನ ಸಾಗಿಸುತ್ತಾರೆ.

ಬಸುರಿ ಹೆಂಗಸಿಗೆ ಹೆರಿಗೆಯ ದಿನ ಸಮೀಪಿಸುತ್ತಿದ್ದಂತೆಯೇ ಅವರು ವಾಸವಾಗಿರುವ ಗುಡಿಸಲು ಪಕ್ಕದಲ್ಲಿಯೇ ಇನ್ನೊಂದು ಗುಡಿಸಲನ್ನು ತಾತ್ಕಾಲಿಕವಾಗಿ ನಿರ್ಮಿಸುತ್ತಾರೆ. ಹಿಂದೆ ಈ ರೀತಿಯ ಗುಡಿಸಲನ್ನು ಹೆಚ್ಚು ಹೆರಿಗೆಗೆಂದೇ ಕಟ್ಟುತ್ತಿದ್ದರು. ಆದರೆ ಇತ್ತೀಚೆಗೆ ಈ ರೀತಿಯ ಗುಡಿಸಲುಗಳ ಸಂಖ್ಯೆ ಸ್ವಲ್ಪ ಕಡಿಮೆಯಾಗಿದೆ. ಕಾಡಂಚಿನ ಸೋಲಿಗರು ಮತ್ತು ಸರ್ಕಾರ ನಿರ್ಮಿಸಿಕೊಟ್ಟಿರುವ ಕಾಲೋನಿಗಳಲ್ಲಿ ವಾಸವಾಗಿರುವ ಸೋಲಿಗರಲ್ಲಿ ಸ್ವಲ್ಪ ವ್ಯತ್ಯಾಸವನ್ನು ಕಾಣಬಹುದು. ಹೆರಿಗೆಯನ್ನು ಮನೆಯ ಜಗುಲಿಯಲ್ಲಿ ಅಥವಾ ಮನೆಯ ಮುಂದೆ ಎರಡು ಕಂಬ(ಗಳು) ಹಾಕಿ ಮುಂದಕ್ಕೆ ಬಗ್ಗಿಸಿದ ಹಾಗೆ ಪ್ಲಾಸ್ಟಿಕ್ ಟಾರ್ಪಲ್ ಅಥವಾ ಶೀಟ್ ಹಾಕಿ ಚಿಕ್ಕ ಕೋಣೆಯ ರೀತಿಯಲ್ಲಿ ಎಡಭಾಗ ಅಥವಾ ಬಲಭಾಗದಲ್ಲಿ ಮಾಡಿಕೊಂಡಿರುತ್ತಾರೆ. ಹೆರಿಗೆಯನ್ನು ಈ ಸ್ಥಳದಲ್ಲಿ ಮಾಡಿಸುತ್ತಾರೆ.

ಸೋಲಿಗರು ಪೋಡುಗಳಲ್ಲಿ, ಕಾಲೋನಿಗಳಲ್ಲಿ, ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸುತ್ತಾರೆ. ಹತ್ತಿರದ ಪ್ರಾಥಮಿಕ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆ, ಜಿಲ್ಲಾ ಆಸ್ಪತ್ರೆ, ಇವುಗಳನ್ನು ಪರಿಚಯಿಸುವ ಕೊಂಡಿಯಾಗಿ 'ಆಶಾ' ಆಯಾ ಸಮುದಾಯದಲ್ಲಿ ಕೆಲಸ ಮಾಡುತ್ತಿದ್ದಾರೆ. ೧೦೮ ಎಂಬ ಅಂಬುಲೆನ್ಸ್ ಸೌಲಭ್ಯ ಬಂದಿದೆ. ದಾದಿಯರು, ವೈದ್ಯರು, ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸುತ್ತಾರೆ. ಅಲ್ಲದೇ 'ಸಿಸೇರಿಯನ್'(ಹೊಟ್ಟೆ ಕೊಯ್ದು ಕೂಸು ತೆಗೆಯುವುದು) ಹೆರಿಗೆಯ ಪದ ಕೇಳರಿಯದ, ಅದರ

ಕಲ್ಪನೆಯೂ ಇಲ್ಲದ ಸೋಲಿಗರಲ್ಲಿ ಕಡಿಮೆ ಪ್ರಮಾಣದಲ್ಲಿ ಕೆಲವರು ಸಿಸೇರಿಯನ್ ಮಾಡಿಸಿಕೊಂಡವರು ಇದ್ದಾರೆ.

ಸುಮಾರು ೫೦-೬೦ ವರ್ಷದ ಹಿಂದೆ ಮಗು ಹುಟ್ಟಿದ ತಕ್ಷಣ ಸ್ನಾನ ಮಾಡಿ, ಕಾಡಿನ ತೇಕಿನ ಎಲೆ, ಮುತ್ತುಗದ ಎಲೆ, ಕೂಗೆಲೆ ಇತ್ಯಾದಿ ಎಲೆಗಳನ್ನು ಜೋಡಿಸಿ, ಕಟ್ಟಿಕೊಂಡು ಕಾಡಿನ ಹುಲ್ಲನ್ನು ತಂದು ಹುಲ್ಲಿನ ಒಂದು ಪಕ್ಕದಲ್ಲಿ ಹಾಸಿ, ಅದರ ಮೇಲೆ ಎಲೆಯನ್ನು ಹಾಸಿ ಸೊಗದೆ ಮರದಿಂದ ಅಗಲವಾಗಿ ಚೆಕ್ಕೆಯನ್ನು ಗುದ್ದಿ, ಅದನ್ನು ಗೋಣಿಚೀಲದ ರೀತಿಯಲ್ಲಿ ಮಾಡಿ ಅದರ ಮೇಲೆ ತಾಯಿ ಮತ್ತು ಮಗುವನ್ನು ಮಲಗಿಸುತ್ತಿದ್ದರು. ಆನಂತರ ಬಾಣಂತಿಗೆ ಕುಡಿಯಲು ಕಾಡಿನ ಜೀರಿಗೆ, ಮೆಣಸು, ಮಂಡಸೀಗೆ ರಸವನ್ನು ಮಾಡಿ ಕೊಡುತ್ತಿದ್ದರು. ಅಲ್ಲದೇ ಕಾಡಿನಲ್ಲಿ ಸಿಗುವ ಬೆಲ್ಲರೆಗೆಣಸು, ನೂರೆಗೆಣಸು, ಕಾಸಿಸೊಪ್ಪು(ಗಣಿಕೆ) ತೆಳ್ಳಗಿನ ಹಾಲುರಾಗಿ ಹಿಟ್ಟು ಇವುಗಳನ್ನು ಊಟದಲ್ಲಿ ಕೊಡುತ್ತಾರೆ. ಆದರೆ, ಈ ರೀತಿಯ ವ್ಯವಸ್ಥೆಯಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಕೆಲವರು ಹಿಂದಿನ ಪದ್ಧತಿಯನ್ನು ಅನುಸರಿಸುತ್ತಾರೆ. ಕಾಡಿನಿಂದ ಹೊರಗಡೆ, ಅಂಚಿನಲ್ಲಿ ವಾಸ ಮಾಡುವವರು ಆಸ್ಪತ್ರೆಗೆ ಹೋಗಿ ಹೆರಿಗೆ ಮಾಡಿಸಿಕೊಳ್ಳುತ್ತಾರೆ. ಹಾಗೂ ಕೆಲವು ಹೊರ ಸಮಾಜದ ಪದ್ಧತಿಯನ್ನು ಅನುಸರಿಸುತ್ತಾರೆ.

ಬಾಣಂತಿಗೆ ಆಕೆಯ ಗಂಡ, ತಂದೆ, ತಾಯಿ, ಅಜ್ಜಿ, ಹತ್ತಿರದಲ್ಲಿದ್ದು, ೧ ವಾರ ಮಾತ್ರ ಸಹಾಯ ಮಾಡುತ್ತಾರೆ. ೧ ವಾರದವರೆಗೆ ಬಾಣಂತಿಗೆ ವಿಶ್ರಾಂತಿ ಮಾತ್ರ. ೧ ವಾರ ಆದ ನಂತರ ಬಾಣಂತಿಯು ಎಂದಿನಂತೆ ಎಲ್ಲ ಕೆಲಸವನ್ನು ಆಕೆಯೇ ಮಾಡಬೇಕು.

**ಎರಡನೆಯ ಕಾರ್ಯ:** ಸೋಲಿಗರಲ್ಲಿ ಹೆಣ್ಣಿನ ಸೋದರಮಾವನು ಮುಖ್ಯ ಪಾತ್ರವಹಿಸುತ್ತಾನೆ. ಸೂತಕ ಕಳೆಯುವ ಸಿದ್ಧತೆ, ಮನೆಯವರು ದೇವರ ಗುಡಿಗೆ ಹೋಗಿ ಪೂಜೆ ಮಾಡಿಸಿ ದೇವರ ಆ ತೀರ್ಥವನ್ನು ಮನೆಗೆಲ್ಲಾ ಹಾಕಿ(ಪ್ರೋಕ್ಷಿಸಿ) ಅಕ್ಕಪಕ್ಕದ ಮನೆ, ಬಂಧುಗಳ ಮನೆಗೂ ತೀರ್ಥ ಹಾಕುತ್ತಾರೆ. ಕೋಲುಗಾರ ಅಥವಾ ದೇವರಗುಡ್ಡ ಬಂದು ಗುಡಿಸಲು ಅಥವಾ ಮನೆಯ ಒಳಗೆ ಕಳಸವನ್ನು ನೋಡಿ, ಆನಂತರ ಸಿದ್ಧಗೊಳಿಸಿರುವ ಅಡುಗೆಯನ್ನು ದೇವರಿಗೆ ಎಡೆಯನ್ನಿಟ್ಟು ಪೂಜೆ ಮಾಡಿ ಮನೆಮಂದಿಗೆಲ್ಲ ತೀರ್ಥ ಕೊಡುವ ಮೂಲಕ ಸೂತಕ ಕಳೆಯುತ್ತಾರೆ. ಇದೇ ಸಂದರ್ಭದಲ್ಲಿ ಮಗುವಿಗೆ ನಾಮಕರಣ ಮಾಡುತ್ತಾರೆ. ಸೋಲಿಗರು ಇದನ್ನು "ಕೂಸಿಗೆ ಹೆಸರಿಡೋದು" ಎಂದು ಕರೆಯುತ್ತಾರೆ. ತಮ್ಮ ದೇವರುಗಳ ಹೆಸರು, ಹಿರಿಯರ ಹೆಸರುಗಳನ್ನು ಮಗುವಿಗೆ ಇಡುತ್ತಾರೆ. ಏಳು ಕುಲದ ಸೋಲಿಗರು ಮತ್ತು ಹನ್ನೆರಡು ಕುಲದ ಸೋಲಿಗರು ಕೆಲವು ಕಡೆಗಳಲ್ಲಿ ಕೆಳಕಂಡಂತೆ ಆಚರಿಸುತ್ತಾರೆ.

**ಬಳಕೆ:** ಬಳಕೆ ತೆಗೆಯುವುದಕ್ಕೆ ಮನೆಯನ್ನು ಸ್ವಚ್ಛಗೊಳಿಸಿದ ಕಾರ್ಯ ಮುಗಿದ ತಕ್ಷಣ ದೇವರಿಗೆ ಎಡೆ ಹಾಕುತ್ತಾರೆ. ೫ ಮುದ್ದೆ, ೫ ಜೊನ್ನೆ(ಸೂಟೆ) ಪ್ರತಿಯೊಂದು ಜೊನ್ನೆಗೂ ಒಂದೊಂದು ರಾಗಿ ಮುದ್ದೆಯನ್ನು ಹಾಕಬೇಕು. ೧ ಬಾಳೆಎಲೆ, ಬಾಳೆಎಲೆಗೆ ೩ ನಾಮ ಹಾಕಿ, ಆ ಎಲೆಯನ್ನು ಸ್ವಲ್ಪ ಗೋಡೆಗೆ ಆನಿಸಿಟ್ಟು ಎಲ್ಲವನ್ನೂ ಅದರ ಮುಂದೆ ಇಟ್ಟು, ಅನ್ನ-ಕೋಳಿ ಸಾಂಬಾರು, ಮುದ್ದೆ, ಪೂಜೆ ಸಾಮಾನು ಇಟ್ಟು ತುಳಸಿ ತೀರ್ಥ ಮಾಡಿ ದೇವರ ಹತ್ತಿರ ಇಟ್ಟು ನಂತರ ಕೋಲುಕಾರ ಮಗುವಿಗೆ ೩ ನಾಮ ಹಾಕಿ ಹೆಸರನ್ನು ಕರೆಯುವ ಶಾಸ್ತ್ರ ಮಾಡುತ್ತಾರೆ. ಒಂದೇ ಕುಲದವರು ಹೆಸರನ್ನು ಕಟ್ಟುವ ಹಾಗಿಲ್ಲ. ಬೇರೆ ಕುಲದವರು ಬಂದು ಹೆಸರನ್ನು ಕೊಡಬೇಕು(ಕರೆಯಬೇಕು). ಎಲ್ಲಾ ಮುಗಿದ ಮೇಲೆ

ಕಾರ್ಯಕ್ರಮದಲ್ಲಿ ಭಾಗಿಯಾದ ಎಲ್ಲರಿಗೂ ಊಟ ನೀಡುತ್ತಾರೆ. ಇತ್ತೀಚೆಗೆ ಕೆಲವರು ತಮ್ಮ ಶಕ್ತಿಗನುಸಾರವಾಗಿ ಮಾಂಸಹಾರವನ್ನು ಇಲ್ಲದಿದ್ದಲ್ಲಿ ಸಿಹಿ ತಿಂಡಿ ಮತ್ತು ಪಾಯಸ ಅಡುಗೆಯನ್ನೂ ಮಾಡಿ ಬಂದವರಿಗೆ ಊಟ ಬಡಿಸುತ್ತಾರೆ. ಇಲ್ಲಿಗೆ ಮಡಕೆ ಹಿಟ್ಟು ಅಥವಾ ಸೂತಕ ಕಾರ್ಯ ಮುಗಿಯುತ್ತದೆ.

**೪ನೇ ದಿನದ ಬಳಕೆ ತೆಗೆಯುವುದು:** ಗಂಡು ಮಗುವಿಗೆ ಯಾವುದೇ ಖರ್ಚು ಇರುವುದಿಲ್ಲ. ಸೂತಕ ಬೇಗ ಮುಗಿದರೆ ಒಳ್ಳೆಯದು ಎಂದು ಸೋಲಿಗರು ಹೇಳುತ್ತಾರೆ.

**೫ನೇ ದಿನಕ್ಕೆ ಯಾಕೆ ಬಳಕೆ ತೆಗೆಯಬೇಕು?:** ಸೋಲಿಗರಲ್ಲಿ ೫ನೇ ದಿನ ಎಂದಾಗ ಸ್ವಲ್ಪ ನಿಧಾನವಾಗಿ ಆಗಲಿ ಮತ್ತು ಮುಂದೆ ಆ ಹೆಣ್ಣು ಮೊದಲು ಋತುಮತಿಯಾದಾಗಲೂ ಸಹ ಅವಳು ೫ ದಿನ ಹೊರಗಡೆಯೇ ಉಳಿಯಬೇಕು. ಹೆಣ್ಣು ಮದುವೆಯಾಗುವಾಗ 'ಹೊಸಗೆ' ಮಾಡುವಾಗಲೂ ಅವಳು ೫ ದಿನ ಒಳಗೆ ಕುಳಿತುಕೊಳ್ಳಬೇಕು. ಆದ್ದರಿಂದ, ಈ ೫ ದಿನದ ಪರಿಚಯ ಆ ಮಗುವಿಗೆ ಹುಟ್ಟಿನಿಂದಲೇ ಪರಿಚಯವಾಗಿ ಪ್ರಕೃತಿದತ್ತವಾಗಿಯೇ ಬಂದುಬಿಡುತ್ತದೆ. ಇಲ್ಲಿ ಹೆಣ್ಣುಮಕ್ಕಳಿಗೆ ಯಾರೂ ಸಹ ಇದರ ಬಗ್ಗೆ ಪಾಠ ಹೇಳಿಕೊಡುವ ಅಗತ್ಯವಿರುವುದಿಲ್ಲ. ಸಮುದಾಯದಲ್ಲಿ ಆಚರಣೆಯ ಮೂಲಕವಾಗಿಯೇ ಕಲಿಯುತ್ತಾರೆ. ಇದರಿಂದ ಸೋಲಿಗರಲ್ಲಿಯೂ ಸೂತಕವನ್ನು ಆಚರಣೆ ಮಾಡುವ ಪದ್ಧತಿ ಇದೆ ಎಂಬುದು ತಿಳಿದುಬರುತ್ತದೆ. ಸೋಲಿಗರು ಮುಟ್ಟಾದ ಐದು ದಿನಗಳ ಕಾಲ ಮನೆಯ, ಗುಡಿಸಲಿನ ಹೊರಗಡೆ ಇರುವ ಪದ್ಧತಿಯನ್ನು ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಸೋಲಿಗರು ಮದುವೆಯ ಸಾಮಾಜಿಕ ಆಚರಣೆಗಳನ್ನು ಅನ್ಯ ಸಮಾಜವನ್ನು ನೋಡಿ ಕಲಿಯುತ್ತಿರುವುದನ್ನು ಅಧ್ಯಯನದ ಮೂಲಕ ತಿಳಿಯಲಾಗಿದೆ.

**ತುಳಸಿ ತೀರ್ಥ ಮಾಡುವ ವಿಧಾನ:** ಸಾಮಾನ್ಯವಾಗಿ ಸೋಲಿಗರಲ್ಲಿ ತುಳಸಿ ಅಥವಾ ಬಿಲ್ವಪತ್ರೆಯಿಂದ ತೀರ್ಥ ಮಾಡಿಕೊಂಡು ಎಲ್ಲರಿಗೂ ಕೊಡುತ್ತಾರೆ. ಸೋಲಿಗರು ಹೇಳುವ ಪ್ರಕಾರ ಹೆತ್ತಮುಟ್ಟು, ಸತ್ತಮುಟ್ಟು, ದಯ್ಯ, ದೇವತೆ, ಪೀಡೆ, ಪಿಶಾಚಿ ಎಲ್ಲವೂ ಅಲ್ಲಿಗೆ ಕಳೆದುಹೋಯಿತು. ಇನ್ನು ನಮಕ ಗುರು ಬೆಂಬಲ ಬಂತು ಎಂದು ತುಳಸಿಯನ್ನು ಅದರಲ್ಲೂ ದೇವರ ತುಳಸಿಯನ್ನು ತೆಗೆದುಕೊಂಡು ಬಂದು ಅದನ್ನು ಕೂಗೆಲೆ, ತೇಕಿನೆಲೆ, ಮುತ್ತಗದ ಎಲೆ ಇವುಗಳಲ್ಲಿ ಯಾವುದಾದರೂ ಒಂದು ಎಲೆಯಿಂದ ಜೊನ್ನೆ ಮಾಡಿ(ಸೊಟ್ಟೆ), ತುಳಸಿ ಸೊಪ್ಪು ನುಣ್ಣಗೆ ಅರೆದು, ಸ್ವಲ್ಪ ಬೆಲ್ಲ, ನೀರು ಸೇರಿಸಿ ಎಲ್ಲವನ್ನು ಬೆರೆಸಿ ಕಟ್ಟಿರುವ ಜೊನ್ನೆಗೆ ಹಾಕಿ ದೇವರ ಮುಂದೆ ಇಟ್ಟು ಪೂಜೆ ಮಾಡಿ ರಂಗಪ್ಪನ ಹೆಸರು, ಮಾದಪ್ಪನ ಹೆಸರು ಅಥವಾ ಅವರ ಮನೆ ದೇವರ ಹೆಸರು ಹೇಳಿ ಪೂಜೆ ಮಾಡಿ ಹೀಗೆ ಹೇಳುತ್ತಾ, "ಎಂಥ ಕಾಟ, ಕರ್ಮವಿದ್ದರೂ ಇಲ್ಲಿಗೆ ಕಡೆದು(ಕಳೆದು) ಹೊರಟು ಹೊಯ್ತು" ಎಂದು ಹೇಳಿ ಎಲ್ಲರಿಗೂ ತೀರ್ಥ ಕೊಟ್ಟು ಮನೆಗೆಲ್ಲಾ ಹಾಕಿ ತಾವು ಕುಡಿದು ಸೂತಕ ಕಳೆಯುತ್ತಾರೆ.

**ಗುಂದಿ:** ಸೋಲಿಗರು ಬಾಣಂತಿ ಹಾಗೂ ಮಗುವಿಗೆ ಸ್ನಾನ ಮಾಡಿಸುವ ಹಾಗೂ ಬಟ್ಟೆ ತೊಳೆಯುವ ನೀರನ್ನು ಹೊರಕ್ಕೆ ಎಲ್ಲೆಂದರಲ್ಲಿ ದಾರಿಗೆ ಬಿಡುವುದಿಲ್ಲ. ಗುಡಿಸಲಿನ ಅಥವಾ ಹೆಂಚಿನ ಮನೆಯ ಪಕ್ಕದಲ್ಲಿಯೇ ಒಂದು ಮೂಲೆಯಲ್ಲಿಯೇ ಒಂದು ಗುಂದಿ(ಗುಂಡಿ)ಯನ್ನು ತೆಗೆಯುತ್ತಾರೆ. ಸ್ನಾನ ಮಾಡಿದ ನೀರು ಆ ಗುಂಡಿಗೆ ಹೋಗಿ ಸೇರುತ್ತದೆ. ಅಲ್ಲಿಗೆ ಹೋಗುವ ನೀರು ಆ ಗುಂಡಿಯಲ್ಲಿಯೇ ಜಪ್ಪಾಗುತ್ತದೆ(ಹಿಂಗುತ್ತದೆ). ಏಕೆಂದರೆ ಮಗುವಿಗೆ ಮತ್ತು ತಾಯಿಗೆ ಕಣ್ಣೆಸುರು(ದೃಷ್ಟಿ)

ಆಗಬಾರದು, ಗಾಳಿ, ಗ್ರಹಚಾರ ಹಿಡಿದರೆ ತಾಯಿ ಮಗುವಿಗೂ ತೊಂದರೆಯಾಗುತ್ತದೆ. ಅಲ್ಲದೆ ಆ ಗುಂದಿ ಬರೀ ಗುಂದಿ ಅಲ್ಲ ಅವಳು ಗುಂದಿದೇವತೆ ಅವಳು ಹೊರಚೇರಿ(ಹೊರಗೆ) ಸ್ನಾನ ಮಾಡಿಸಿದರೆ ಮಗು ಮತ್ತು ತಾಯಿ ಸಾವನ್ನಪ್ಪುತ್ತಾರೆ ಎಂಬ ನಂಬಿಕೆ ಸೋಲಿಗರಲ್ಲಿದೆ.

**ಆಸ್ಪತ್ರೆ ಹೆರಿಗೆ:** ಇತ್ತೀಚೆಗೆ ಸೋಲಿಗರ ಪಾರಂಪರಿಕ ಹೆರಿಗೆ ಪದ್ಧತಿಯ ಜೊತೆಗೆ ಆಸ್ಪತ್ರೆ ಹೆರಿಗೆಯೂ ಪರಿಚಯವಾಗಿದೆ. ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸಿಕೊಳ್ಳದಿದ್ದರೆ ನಿಮಗೆ ಸರಕಾರದಿಂದ ಬರುವ ಸೌಲಭ್ಯ ಸಿಗುವುದಿಲ್ಲ. ಗರ್ಭಿಣಿ, ಬಾಣಂತಿ ದಾಖಲಾತಿ ಕಡ್ಡಾಯವಾಗಿ ಆಗಬೇಕು ಎಂದು ಅಂಗನವಾಡಿ ಕಾರ್ಯಕರ್ತೆಯರು, ಆಶಾ ಕಾರ್ಯಕರ್ತೆಯರು ಮನೆ ಮನೆಗೆ ಬಂದು ಯಾವ ಗರ್ಭಿಣಿ ಹೆಂಗಸನ್ನೂ ಬಿಡದೆ ದಾಖಲು ಮಾಡಿಕೊಳ್ಳುತ್ತಿದ್ದಾರೆ. ಆದರೂ ಸಹ ಕಾಡಿನ ಒಳಗೆ, ಕಾಡಂಚಿನಲ್ಲಿ ವಾಸ ಮಾಡುತ್ತಿರುವ ಸೋಲಿಗರಲ್ಲಿ ಗರ್ಭಿಣಿ ದಾಖಲಾತಿ ೨೧/₃ ತಿಂಗಳಿಗೆ ಕೆಲವೊಮ್ಮೆ ಆಗುವುದಿಲ್ಲ. ಕಾರಣ ಪೋಡು, ಕಾಲೋನಿ, ಹಾಡಿಗಳಲ್ಲಿ ವಾಸ ಮಾಡುತ್ತಿದ್ದ ಇಬ್ಬರು ಯುವ ಪ್ರೇಮಿಗಳು ಅಂದರೆ ಹುಡುಗ–ಹುಡುಗಿ ಬೇರೆ ಪೋಡಿಗೆ, ಅಕ್ಕನ ಮನೆ ಅಥವಾ ಅವರ ಸಂಬಂಧಿಕರ ಮನೆಗೆ ಓಡಿ ಹೋಗಿರುತ್ತಾರೆ. ಸ್ವಲ್ಪ ದಿನ ಮನೆಯವರಿಗೆ ಗೊತ್ತಾದರೂ ಸಹ ಆ ಹೆಣ್ಣು ಮಗಳು ಗರ್ಭಿಣಿಯಾಗಿರುತ್ತಾಳೆ. ಈ ವಿಷಯವು ಆಶಾ ಕಾರ್ಯಕರ್ತೆಯರಿಗೆ ಬೇಗ ತಿಳಿಯುವುದಿಲ್ಲ. ಮತ್ತೆ ಆಕೆ ತಮ್ಮ ಊರಿಗೆ ಬರುವಾಗ ಮೂರು ತಿಂಗಳಿನಿಂದ ಏಳು ತಿಂಗಳಾಗಿರಬಹುದು, ಕೆಲವು ಸಲ ಬೇಗನೇ ಆಗಬಹುದು, ಈ ಕಾರಣಗಳಿಂದ ಕೆಲವು ಸಂದರ್ಭದಲ್ಲಿ ಗರ್ಭಿಣಿಯ ದಾಖಲಾತಿ ಸರಿಯಾದ ಸಮಯಕ್ಕೆ ಆಗುವುದಿಲ್ಲ.

ಆಸ್ಪತ್ರೆ ಹೆರಿಗೆಯು ಸೋಲಿಗರ ಪೋಡು, ಕಾಲೋನಿಗೂ ಬಂದುಬಿಟ್ಟಿದೆ. ಕೆಲವರು ಆಸ್ಪತ್ರೆಗೆ ಹೋಗಲು ಭಯಪಡುತ್ತಾರೆ. ಏನಾದರೂ ತೊಂದರೆ ಆಗಬಹುದು ಅಥವಾ ಸರಕಾರದಿಂದ ಬರುವ ಸೌಲಭ್ಯ ನಿಂತುಹೋಗುತ್ತದೆ. ನಮ್ಮ ಎಲೆಕ್ಷನ್ ಕಾರ್ಡನ್ನು ತೆಗೆದುಹಾಕುತ್ತಾರೆ ಎಂದು ತಿಳಿದು ಭಯದಿಂದಲೇ ಆಸ್ಪತ್ರೆಗೆ ತೆರಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಸೋಲಿಗರಲ್ಲಿ ಮನೆಯಲ್ಲಿ ಮಾಡುವ ಹೆರಿಗೆ ಕಡಿಮೆಯಾಗುತ್ತಿದೆ. ಕಾರಣ ಆಸ್ಪತ್ರೆಯ ಹೆರಿಗೆಯಿಂದ ಸೂಲಗಿತ್ತಿಯರು, ವಯಸ್ಸಾದವರು, ನುರಿತವರು ಕಡಿಮೆಯಾಗುತ್ತಿದ್ದಾರೆ. ಹಾಗೂ ಸೋಲಿಗರಲ್ಲಿ 'ಸೂಲಗಿತ್ತಿ' ಹೆರಿಗೆ ಮಾಡುವ ಪಾರಂಪರಿಕ ಜ್ಞಾನವನ್ನು ಮರೆಯುತ್ತಿದ್ದಾರೆ. ಯುವತಿಯರಿಗೆ ಕಲಿಯಲು ಮನೆಯಲ್ಲಿ ಹೆರಿಗೆ ಆಗುವುದು ಕಡಿಮೆಯಾಗುತ್ತಿರುವುದರಿಂದ ಅವಕಾಶ ಸಿಗುವುದಿಲ್ಲ.

**ಬಾಣಂತಿಯ ಆರೈಕೆ:** ಹೆರಿಗೆಯಾದ ನಂತರ ಬಾಣಂತಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ, ನೂಲಿನ ಬಟ್ಟೆಯನ್ನು ಉದ್ದವಾಗಿ ಸುತ್ತಿ ಅದನ್ನು ಬಾಣಂತಿಯ ಹೊಟ್ಟೆಯನ್ನು ಮೇಲಕ್ಕೆತ್ತಿ ಬಿಗಿಯಾಗಿ ಕಟ್ಟುತ್ತಾರೆ. ಕಾರಣ ಹೆರಿಗೆಯಾದ ನಂತರ ಹೊಟ್ಟೆ ಕೆಳಗೆ ಜೋತು ಬೀಳುತ್ತದೆ ಹಾಗೂ ಮುಂದೆ ಹೊಟ್ಟೆ ದಪ್ಪವಾಗುತ್ತದೆ ಎಂದು ಸೋಲಿಗರು ಬಟ್ಟೆಯಿಂದ ಹೊಟ್ಟೆಯನ್ನು ಬಿಗಿಯಾಗಿ ಕಟ್ಟುತ್ತಾರೆ.

ಆನಂತರ ಕೆಳಗೆ ಗೋಣಿಚೀಲ ಹಾಸಿ, ಕೆಳಗೆ ಭತ್ತದ ಹುಲ್ಲು, ರಾಗಿ ಹುಲ್ಲು ಹಾಕಿ, ಅದರ ಮೇಲೆ ಇತ್ತೀಚಿನ ಚಾಪೆಯನ್ನು ನೂಲಿನ ಬಟ್ಟೆ ಹಾಸಿ, ಮಗುವನ್ನು ಪಕ್ಕಕ್ಕೆ ಮಲಗಿಸಿ ಹಾಲು ಕುಡಿಸಲು ಹೇಳುತ್ತಾರೆ. ಬಾಣಂತಿಗೆ ಮಂಡಸೀಗೆ ಸೊಪ್ಪಿನ ರಸ, ಜೀರಿಗೆ, ಮೆಣಸು, ಬೆಳ್ಳುಳ್ಳಿ ಖಾರ ಮಾಡಿ ರಾಗಿಮುದ್ದೆಯನ್ನು ಉಣ್ಣಲು ಕೊಡುತ್ತಾರೆ ಹಾಗೂ ಒಂದು ಲೋಟದಲ್ಲಿ ಮಂಡಸೀಗೆ

ಸೊಪ್ಪಿನ ರಸವನ್ನು ಕುಡಿಯಲು ಕೊಡುತ್ತಾರೆ. ಇದು ಬಾಣಂತಿ ಹೆಂಗಸಿಗೆ ಅಂಟಿಬಯೋಟಿಕ್ ಆಗಿ ಕೆಲಸ ಮಾಡುತ್ತದೆ. ಗರ್ಭದಲ್ಲಿ ಉಳಿದಿರುವ ಕೆಟ್ಟ ರಕ್ತವನ್ನೆಲ್ಲ ಹೊರಕ್ಕೆ ಹಾಕುತ್ತದೆ. ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಿ ಬಾಣಂತಿಯಲ್ಲಿ ಹಾಲಿನ ಉತ್ಪತ್ತಿ ಹೆಚ್ಚಾಗುವಂತೆ ಮಾಡುತ್ತದೆ. ಸಾಮಾನ್ಯವಾಗಿ ಸೋಲಿಗರು ಈ ಸಮಯದಲ್ಲಿ ಬಾಣಂತಿಗೆ ಹಾಲು ಬುಂಡಿಗ ರಾಗಿಯನ್ನು ಊಟಕ್ಕೆ ಕೊಡುತ್ತಾರೆ. ಈ ರಾಗಿ ಉಪಯೋಗಿಸುವುದರಿಂದ ತಾಯಿಗೆ ಎದೆಹಾಲು ಹೆಚ್ಚಾಗಿ ಪಚನ ಕ್ರಿಯೆಯು ಸರಾಗವಾಗಿ ಆಗುತ್ತದೆ ಎಂದು ಹಿರಿಯರಾದ ನಾಟಿವೈದ್ಯೆ ಶ್ರೀಮತಿ ಮಾದಮ್ಮನವರು ಬಾಣಂತಿಯ ಆರೈಕೆಯ ಬಗ್ಗೆ ಹೇಳುತ್ತಾರೆ. ಇದೇ ಮಾತನ್ನು ಜಲ್ಲೆ ಸಿದ್ಧಮ್ಮನ ಮಗಳು ಜಡೆಮಾದಮ್ಮನೂ ಸಹ ಹೇಳುತ್ತಾ ಮುಂದುವರೆದು, ಕಾಡಿನಲ್ಲಿ ಸಿಗುವ ಸೊಪ್ಪು, ಹಣ್ಣು, ತರಕಾರಿ, ರಾಗಿಮುದ್ದೆ, ಕಾಡುಜೀರಿಗೆ, ಕಾಡು ಮೆಣಸು, ಬೆಳ್ಳುಳ್ಳಿ ಖಾರ, ರಾಗಿಮುದ್ದೆಯನ್ನು ಸ್ವಲ್ಪ ತೆಳ್ಳಗೆ(ತೆಳುವಾಗಿ) ಬಾಣಂತಿಗೆ ಕೊಡಬೇಕು ಆಗ ಅವಳ ಆರೋಗ್ಯ ಚೆನ್ನಾಗಿದ್ದು, ಮಗುವಿಗೆ ಕುಡಿಯಲು ಹಾಲು ಸಹ ಹೆಚ್ಚಾಗಿ ಬರುತ್ತದೆ ಎಂದು ಹೇಳುತ್ತಾರೆ.

ಬಾಣಂತಿಯು ಸಾಮಾನ್ಯವಾಗಿ ಹೊರಗಡೆ ದಿನನಿತ್ಯದ ಕೆಲಸಕ್ಕೆ ಹೋದಾಗ ಒಂದು ಕೈಯಲ್ಲಿ ಕುಡುಗೋಲನ್ನು, ಚಿಕ್ಕಚಾಕುವನ್ನು ಅಥವಾ ಮತ್ಯಾವುದೇ ಕಬ್ಬಿಣದ ವಸ್ತುವನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಾರೆ.

ಇತ್ತೀಚೆಗೆ ಬಾಣಂತಿಯರಿಗೆ ಅಂಗನವಾಡಿಯಲ್ಲಿ ಅನೇಕ ರೀತಿಯ ಸೌಲಭ್ಯಗಳನ್ನು ಕೊಡುತ್ತಾರೆ. ಮಡಿಲುಕಿಟ್ಟು, ಪೌಷ್ಠಿಕ ಆಹಾರ, ಬಾಣಂತಿಯ ಆರೈಕೆ, ಭಾಗ್ಯಲಕ್ಷ್ಮಿ ಯೋಜನೆ, ತಾಯಿಭಾಗ್ಯ, ಚುಚ್ಚುಮದ್ದಿನ ಸೇವೆ, ಜನನಿ ಸುರಕ್ಷಾ ಹೀಗೆ ಹಲವಾರು ಯೋಜನೆಗಳ ಮೂಲಕ ಅನುಕೂಲ ಮಾಡಿಕೊಡುತ್ತಿದೆ. ಆದರೂ ಸಹ ಈ ಎಲ್ಲಾ ಯೋಜನೆಗಳ ಬಗ್ಗೆ ಅರಿವು, ತಿಳುವಳಿಕೆ ರೂಢಿಸಿಕೊಳ್ಳುವ ಗುಣ ಸೋಲಿಗರಲ್ಲಿ ಇನ್ನೂ ಕಡಿಮೆ. ಇವರುಗಳಿಗೆ ಹೆಚ್ಚಿನ ಆಸಕ್ತಿಯ ಕೊರತೆಯು ಕಂಡು ಬರುತ್ತದೆ ಮತ್ತು ಅದರಿಂದ ನಮಗೇನು ಲಾಭ? ಎಂದು ಹೇಳುತ್ತಾರೆ. ಸೋಲಿಗರು ಪ್ರಸ್ತುತದಲ್ಲಿಯೂ ಸಹ ಬಾಣಂತಿ ತನ್ನ ಹಸಿಗೂಸನ್ನು ತೆಗೆದುಕೊಂಡು ಗಂಡ–ಹೆಂಡತಿ ಇಬ್ಬರೂ ತಮ್ಮ ಮನೆಯ ಪಕ್ಕದಲ್ಲಿಯೇ ಇರುವ ಹೊಲಕ್ಕೆ ಹೋಗಿ ಕೂಸನ್ನು ಒಂದು ಮರದಲ್ಲಿ ಜೋಲಿ ಕಟ್ಟಿ ಮಲಗಿಸಿ, ಇಬ್ಬರೂ ಬೇಸಾಯ, ಕಳೆ ತೆಗೆಯುವುದು ಹೀಗೆ ವ್ಯವಸಾಯ ಮಾಡಿ ರಾಗಿ, ಜೋಳ, ಅವರೆ, ಸಾಸಿವೆ ಮತ್ತು ಸೊಪ್ಪು, ಗೆಣಸು ಬೆಳೆದು ಜೀವನ ಮಾಡುತ್ತಾರೆ. ಬಾಣಂತಿಯೂ ಸಹ ನನಗೆ ವಿಶ್ರಾಂತಿ ಬೇಕು ಎಂದು ಕೇಳದೆ, ಮನೆಯಲ್ಲಿ ಕುಳಿತುಕೊಳ್ಳದೆ ಗಂಡನ ಜೊತೆಯಲ್ಲಿ ಸಮನಾಗಿ ಕೆಲಸದಲ್ಲಿ ತೊಡಗುತ್ತಾಳೆ. ಹೆರಿಗೆ ಒಂದು ಸಹಜ ಪ್ರಕ್ರಿಯೆ ಅದಕ್ಕೆ ಅಂಟಿಕೊಳ್ಳದೇ ಪ್ರಸವದ ಕಾರ್ಯ ಮುಗಿದ ನಂತರ ಯಥಾವತ್ತಾಗಿ ತಮ್ಮ ಕೆಲಸಕಾರ್ಯಗಳಲ್ಲಿ ಮಹಿಳೆ ತೊಡಗುತ್ತಾಳೆ. ಇವರನ್ನು ನೋಡನೋಡುತ್ತಲೇ ಇವರ ಮಕ್ಕಳು ಸಹಜವಾಗಿಯೇ ಕಲಿತು ವಯಸ್ಸಿಗೆ ಬಂದ ಮೇಲೆ ಅವರೂ ಸಹ ಸ್ವತಂತ್ರವಾಗಿ ಬದುಕುವುದನ್ನು ಕಲಿತುಬಿಡುತ್ತಾರೆ. ಎಷ್ಟೇ ಸ್ವತಂತ್ರವಾಗಿದ್ದರೂ ಸಹ ಸಮುದಾಯದಲ್ಲಿ ಕೂಡಿ ಬಾಳುವ ಗುಣವನ್ನು ಮೈಗೂಡಿಸಿಕೊಂಡಿರುತ್ತಾರೆ.

### ೩.೨.೪. ಶವಸಂಸ್ಕಾರ ಆಚರಣೆ

ಸೋಲಿಗರಲ್ಲಿ ವ್ಯಕ್ತಿಯು ಮರಣಹೊಂದಿದ ದಿನ ಸಮುದಾಯದ ಎಲ್ಲರೂ ಸೇರಿಕೊಂಡು ಶವ ಸಂಸ್ಕಾರಕ್ಕೆ ಸಿದ್ಧತೆ ಮಾಡುತ್ತಾರೆ. ಯಾವುದೇ ಸಂದರ್ಭದಲ್ಲಿ ಒಂದುಗೂಡದಿದ್ದರೂ ಸಾವಿನ ದಿನ ಎಲ್ಲರೂ ಸೇರಿಕೊಳ್ಳುತ್ತಾರೆ. ಇತ್ತೀಚೆಗೆ ಮೊಬೈಲ್ ಮೂಲಕ ಎಲ್ಲರಿಗೂ ವಿಷಯವನ್ನು ಮುಟ್ಟಿಸುತ್ತಾರೆ. ಸಾಮಾನ್ಯವಾಗಿ ಸೋಲಿಗರು ಮರಣ ಹೊಂದಿದ ವ್ಯಕ್ತಿಯನ್ನೂ ಗುಂಡಿ ತೆಗೆದು ಹೂಳುವ ಪದ್ಧತಿ ಇದೆ. ಆದರೆ ಇತ್ತೀಚೆಗೆ ಬಾವಿ, ಕೆರೆಗೆ ಬಿದ್ದ ವ್ಯಕ್ತಿ, ನೇಣು ಹಾಕಿಕೊಂಡ ವ್ಯಕ್ತಿಗಳನ್ನು ಸುಡುವುದನ್ನೂ ಸಹ ರೂಡಿಸಿಕೊಂಡಿದ್ದಾರೆ. ವ್ಯಕ್ತಿಯು ಮರಣ ಹೊಂದಿದ ಮೊದಲ ದಿನ ಮನೆಯ ಮುಂದೆ ಕೊಳ್ಳಿ ಹಾಕಬೇಕು 'ಹೊಗೆಹಾಕಿ' ಅಂದರೆ ಕಾಡಿನಿಂದ ಸೌದೆಯನ್ನು ಸಮುದಾಯದವರೆಲ್ಲಾ ಸೇರಿಕೊಂಡು ಸಾವಿನ ಮನೆಯ ಮುಂದೆ ಕಿಚ್ಚಿನ(ಬೆಂಕಿಯ) ಗುಂಡಿಯನ್ನು ಹಾಕುತ್ತಾರೆ. ಹೆಣವನ್ನು ಆ ಪೋಡಿನ, ಕಾಲೋನಿಯಲ್ಲಿನ ಹಿರಿಯರು, ತಮ್ಮಡಿಗಳು, ಯಜಮಾನರ ಗುಂಪು, ಹಿರಿಯ ಮಹಿಳೆಯರು, ಸತ್ತಿರುವ ವ್ಯಕ್ತಿಯ ಮನೆಯಲ್ಲಿ ಆ ಹೆಣವನ್ನು ಕಾಯುವ ಕೆಲಸವನ್ನು ಅಲ್ಲಿಯೇ ಬೆಳಿಗ್ಗೆಯಿಂದ ರಾತ್ರಿ ಅಥವಾ ಕಾಡಿಗೆ ತೆಗೆದುಕೊಂಡು ಹೋಗಿ ಶವಸಂಸ್ಕಾರ ಮಾಡುವವರೆಗೂ ಇದ್ದು ಕಾಯುತ್ತಾರೆ. ಸತ್ತ ವ್ಯಕ್ತಿಯ ಪಕ್ಕದಲ್ಲಿ ಒಂದು ಮಣ್ಣಿನ ಸೊಳ್ಳು(ದೀಪ)ವನ್ನು ಹಚ್ಚಿ ಧೂಪ ಹಾಕುತ್ತಾರೆ.

ಗಂಡ ಸತ್ತರೆ ಹೆಂಡತಿಗೆ ಬಳೆ, ಹೂವು, ಹೊಸ ಸೀರೆಗಳನ್ನು ಅವರ ಸಂಬಂಧಿಕರು ತಂದು ಮುಡಿಸುತ್ತ, ಸತ್ತ ವ್ಯಕ್ತಿಗೆ ಸ್ನಾನ ಮಾಡಿಸಿ, ಇಬ್ಬರಿಗೂ ಕಡೆಶಾಸ್ತ್ರ ಎಂದು ಮಾಡುತ್ತಾರೆ. ಬಿದಿರಿನಿಂದ ಚಟ್ಟ ಕಟ್ಟಿಕೊಂಡು ೪ ಜನ ಹೊತ್ತುಕೊಂಡು ಕಾಡಿಗೆ ಹೋಗಿ ಗುಂಡಿ ಹತ್ತಿರ ಕುಲದವರು, ಪೂಜೆ ಮಾಡಿ ಶವವನ್ನು ಗುಂಡಿಗೆ ಹಾಕಿ, ಅವರು ಉಪಯೋಗಿಸುತ್ತಿದ ಬಟ್ಟೆ, ೧ ತಟ್ಟೆ ಲೋಟ ಎಲ್ಲವನ್ನೂ ಅವರ ತಲೆಯ ದಂಡೇಲಿ(ಹತ್ತಿರ) ಇಡುತ್ತಾರೆ. ಈ ಆಚರಣೆಯಲ್ಲಿ ಬಳೆ ತೊಡುವುದು, ಸೀರೆ ಉಡಿಸುವುದು, ಹೊಸಬಟ್ಟೆ ಕೊಡುವುದು ಇತ್ಯಾದಿ ಆಚರಣೆಗಳು ಹಿಂದೆ ಸೋಲಿಗರಲ್ಲಿ ಮಾಡುತ್ತಿರಲಿಲ್ಲ. ಇವುಗಳನ್ನು ಇತ್ತೀಚೆಗೆ ಸೋಲಿಗರು ಹೊರ ಸಮಾಜದ ಸಂಪರ್ಕ ಮತ್ತು ಸಹವಾಸಗಳಿಂದ ನೋಡಿ, ಅನುಸರಿಸುತ್ತಿದ್ದಾರೆ.

ಇತ್ತೀಚೆಗೆ ಸೆಟ್ಟದ ತಡಕೆ ಮತ್ತು ಮರವನ್ನು ಸೇರಿಸಿ ಚಟ್ಟ ಕಟ್ಟುತ್ತಾರೆ. ಇದನ್ನು ೪ ಜನರು ಹೊತ್ತುಕೊಂಡು ಹೋಗುತ್ತಾರೆ. ಹೋಗುವಾಗ ಮನೆಯ ಕಡೆಗೆ ತಲೆ ಇರಬೇಕು. ಸುಮಾರು ೧೦೦ ಮೀಟರ್ ೨೦೦ ಮೀಟರ್‌ವರಗೆ ಈ ರೀತಿಯಲ್ಲಿ ಹೊತ್ತಿಕೊಂಡು ಹೋಗುತ್ತಾರೆ.

**ಶಾಂತಿ ಶಾಸ್ತ್ರ ಮಾಡುವುದು: 'ಕಾಲುಕರಗ'** ಅಂದರೆ ಮನೆಯಲ್ಲಿ ಅರಿಶಿಣ, ಸೀಗೆಕಾಯಿ, ಎಣ್ಣೆ ಹಾಕಿ ಸ್ನಾನ ಮಾಡಿಸಿದ ನೀರನ್ನು ಕುಡುಕೆಯಲ್ಲಿ ಅಥವಾ ಮಡಕೆಯಲ್ಲಿ ಹಾಕಿಕೊಂಡು ಹೋಗುವ ನೀರು. ಈ ನೀರಿನಿಂದ ಮತ್ತೆ ಶವದ ಕಾಲು, ಕೈಗೆ ಹಾಕಿ, ಪೂಜೆ ಮಾಡಿ, ೩ ಸಲ ಇಳಿತೊಡೆದು, ಮಡಕೆಯನ್ನು ಕಾಲ ಹತ್ತಿರ ೩ ಕಲ್ಲು ಇಟ್ಟು ಒಡೆಯುತ್ತಾರೆ. ಆನಂತರ, ೩ ಕಲ್ಲು ದಬಾಕಿ(ಮಗುಚಿ) ಶವದ ತಲೆಯನ್ನು ಕಾಡಿನ ಕಡೆಗೆ ಮಾಡಿಕೊಂಡು ಹೋಗುತ್ತಾರೆ.

**ಶವದ ಗುಂಡಿ:** ಸೋಲಿಗರಲ್ಲಿ ವ್ಯಕ್ತಿಯು ಮರಣ ಹೊಂದಿದಾಗ ಮನೆಯ ಹತ್ತಿರದ ಆಚರಣೆಯ ಕಾರ್ಯವನ್ನು ಮನೆಯಲ್ಲಿಯೇ ಮಾಡುತ್ತಾರೆ. ಆ ಸಮಯದಲ್ಲಿ ಕೆಲವು ಮಂದಿ ಗಂಡಸರು ಕಾಡಿನಲ್ಲಿ

ಅಂದರೆ, ಸಗ್ಗದಲ್ಲಿ ಹೋಗಿ ಶವದ ಗುಂಡಿಯನ್ನು ತೆಗೆದು ಪೋಡಿನಿಂದ ಶವವನ್ನು ತೆಗೆದುಕೊಂಡು ಬರುವುದರೊಳಗೆ ಶವದ ಗುಂಡಿಯ ಎಲ್ಲ ಕೆಲಸಗಳನ್ನು ಮುಗಿಸಿರುತ್ತಾರೆ. ಸೋಲಿಗರಲ್ಲಿ ಶವದ ಗುಂಡಿಯನ್ನು **'ನೆಟ್ಟಗುಳಿ'** ಎಂದು ಕರೆಯುತ್ತಾರೆ. ಅಂದರೆ ಗುಂಡಿಯನ್ನು ಗೋರಿಯ ರೀತಿಯಲ್ಲಿ ತೆಗೆದು ಅದರ ಒಳಗೆ ಸತ್ತ ವ್ಯಕ್ತಿಯು ಆರಾಮವಾಗಿ ಮಲಗಬೇಕು; ಗುಂಡಿಯ ಒಳಗೆ ಗೋಡೆಯ ರೀತಿಯಲ್ಲಿ ಕೆರೆದು(ತೆಗೆದು) ಹೆಣಕ್ಕೆ ಮಣ್ಣು ಬೀಳಬಾರದು ಎಂದು ಮನೆಯ ರೀತಿಯಲ್ಲಿಯೇ ಮಾಡುತ್ತಾರೆ. ಇದನ್ನು ಸೋಲಿಗರು **'ಶವದ ಗುಳಿಕ ಗೋಡೆ'** ಎಂದು ಕರೆಯುತ್ತಾರೆ.

ಸೋಲಿಗರಲ್ಲಿ ಶವ ಗುಂಡಿಯ ಒಳಗಡೆ ಗೋಡೆ ಆಕಾರ ಮಾಡಿ ಕಾಡಿನ ಮರದ ಕಡ್ಡಿಯನ್ನು ಕಡಿದು ಒಳಗೆ ನೆಡುತ್ತಾರೆ. ಅಂದರೆ ಹೆಣಕ್ಕೆ ಒತ್ತು ಕೊಡುವುದು. ಕಾರಣ ಕಾಡಿನಲ್ಲಿ ಹೂತಿರುವ ಹೆಣವನ್ನು ಪ್ರಾಣಿ ಹಾಗೂ ಹಂದಿ ಬಂದು ತೆಗೆಯಬಾರದೆಂದು ಈ ರೀತಿ ಮಾಡುತ್ತಾರೆ. ಸೋಲಿಗರು ಹೆಣದ ಗುಂಡಿಯೊಳಗೆ ಮೊರಗಾಡಿ ಮರ, ಬಿಳಿ ಕೋಲಿ ಮರ, ಆಲದ ಮರ ಈ ಮೂರು ಮರವನ್ನು ಬಿಟ್ಟು ಉಳಿದ ಕಾಡಿನ ಎಲ್ಲಾ ಮರಗಳನ್ನು ಹಾಕುತ್ತಾರೆ. ಈ ಮರಗಳು ದೇವತೆಗೆ ಸಲ್ಲುವುದಿಲ್ಲ. ಈ ಮರವನ್ನು ಹಾಕಿದರೆ ದೇವತೆಯೇ ಸತ್ತು ಹೋಗುತ್ತದೆ. ಇವುಗಳನ್ನು 'ಗಾಳಿ ಚೆಕ್ಕೆ' ಎಂದು ಕರೆಯುತ್ತಾರೆ. ಇವುಗಳಲ್ಲಿ ಬಹಳ ಶಕ್ತಿ ಇರುತ್ತದೆ. ಇವುಗಳನ್ನು ಸಗ್ಗದ ಗುಳಿಕ(ಗುಳಿಗೆ) ಹಾಕಿದರೆ ಅಲ್ಲಿರುವ ಗಾಳಿಗೆ ಸಮಸ್ಯೆಯಾಗಿ ಸತ್ತ ವ್ಯಕ್ತಿಯ ಆತ್ಮವನ್ನೇ ಬಿಡುವುದಿಲ್ಲ. ಹೆಣಕ್ಕೆ ಕಷ್ಟವನ್ನು ಕೊಡುತ್ತದೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಸಾಮಾನ್ಯವಾಗಿ ಯಾವ ಮನೆಯಲ್ಲಿ ಗಾಳಿ, ಗ್ರಹಚಾರ, ಭೂತ, ಪ್ರೇತ ಸೇರಿಕೊಂಡಿರುತ್ತದೆಯೋ ಅಥವಾ ರಾತ್ರಿಯ ಸಮಯದಲ್ಲಿ ಭೂತ, ಪಿಶಾಚಿಗಳು ಕಾಟ ಕೊಡುತ್ತಿದ್ದರೆ ಇಂತಹ ಮರದ ಗಾಳಿ ಚೆಕ್ಕೆಯನ್ನು ತೆಗೆದುಕೊಂಡು ಹೋಗಿ ಮನೆಯ ಮುಂಭಾಗ ಯಾರಿಗೂ ಗೊತ್ತಾಗದ ಹಾಗೆ ಒಂದು ಜಾಗದಲ್ಲಿ ಇಡುತ್ತಾರೆ ಅಥವಾ ಕಟ್ಟುತ್ತಾರೆ. ಆಗ ಆ ಮನೆಗೆ ಯಾವುದೇ ಕಡೆಯಿಂದ ಭೂತವು ಸುಳಿಯುವುದಿಲ್ಲ ಎಂದು ಸೋಲಿಗರು ನಂಬುತ್ತಾರೆ.

ಮರಣ ಹೊಂದಿದ ವ್ಯಕ್ತಿಯನ್ನು ಗುಂಡಿಯಲ್ಲಿ ಹಾಕಿದ ನಂತರ ಮೊದಲು ಯಜಮಾನ ಒಂದು ಹಿಡಿ ಮಣ್ಣನ್ನು ಹಾಕುತ್ತಾನೆ. ನಂತರ ಹೆಂಡತಿಯ ಕೈಯಿಂದ ಒಂದು ಹಿಡಿ ಮಣ್ಣು ಹಾಕಿಸುತ್ತಾರೆ. ನಂತರ ಎಲ್ಲರೂ ಮಣ್ಣು ಹಾಕಿ ಗುಂಡಿಯನ್ನು ಮುಚ್ಚುತ್ತಾರೆ. ಗುಂಡಿಯ ಮೇಲ್ಭಾಗದಲ್ಲಿ ಹೆಚ್ಚು ಮಣ್ಣು ಗುಡ್ಡೆ ಬಂದರೆ ಆ ವ್ಯಕ್ತಿಗೆ ಇನ್ನೂ ಹೆಚ್ಚು ಆಯಸ್ಸು ಇತ್ತು ಎಂಬ ನಂಬಿಕೆ ಇದೆ. ಎಲ್ಲಾ ಮುಗಿದ ಮೇಲೆ ಮನೆಯವರು, ಕುಲದವರು ಸೇರಿ ಸಮಾಧಿಗೆ ಪೂಜೆ ಸಲ್ಲಿಸಿ ಅಲ್ಲಿಗೆ ತೆಗೆದುಕೊಂಡು ಹೋಗಿರುವ ಹಣ್ಣು, ಕಾಯಿ, ಕಡ್ಲೆ ಪುರಿ ಎಲ್ಲವನ್ನು ಸಮಾಧಿಯ ಮೇಲೆ ಇಟ್ಟು ಉಳಿದುದನ್ನು ಎಲ್ಲರೂ ಸಮವಾಗಿ ಅಲ್ಲಿಯೇ ಒಂದು ಕಡೆ ಕುಳಿತು ಹಂಚಿ ತಿನ್ನುತ್ತಾರೆ. ಅದಾದ ನಂತರ, ಕಾಡಿನಲ್ಲಿಯೇ ಹಳ್ಳದ ಕೆರೆಯಲ್ಲಿ ಕೈ ಕಾಲು ತೊಳೆದುಕೊಂಡು ಪೋಡಿಗೆ ಬರುತ್ತಾರೆ. ಮರಣ ಹೊಂದಿದ ವ್ಯಕ್ತಿಯ ಮನೆಗೆ ಬಂದು ಅಲ್ಲಿ ಎಣ್ಣೆಯಿಂದ ಹಚ್ಚಿದ ದೀಪ, ಕನ್ನಡಿ, ಕೈಎಣ್ಣೆ ಸೊಳ್ಳು ನೋಡಿ, ಹುಳಿ ಕೈಗೆ ಸವರಿಕೊಂಡು ತಮ್ಮ ತಮ್ಮ ಮನೆಗೆ ಹೋಗುತ್ತಾರೆ. ಪೂಜೆಯನ್ನೂ ಸಹ ಮೊದಲು ಯಜಮಾನರೇ ಮಾಡುತ್ತಾರೆ. ಸೋಲಿಗರಲ್ಲಿ ಹುಟ್ಟಿನಿಂದ ಸಾಯುವವರೆಗೂ ಯಜಮಾನನ ಪಾತ್ರವು ಮುಖ್ಯವಾಗಿ ಕಂಡುಬರುತ್ತದೆ.

**ಎರಡನೆಯ ದಿನ: 'ಹಿಟ್ಟು ಇಡೋದು'** ವ್ಯಕ್ತಿಯು ಸತ್ತ ಎರಡನೆಯ ದಿನಕ್ಕೆ ಅವರವರ ಶಕ್ತಿಗೆ ಅನುಗುಣವಾಗಿ ರಾಗಿ, ಮಾಂಸದ ಅಡುಗೆ ಮಾಡಿ ೫ ಜನರನ್ನು ಕರೆದು ಒಂದು ಬಿದಿರು ಪುಟ್ಟಿಯ ಸುತ್ತ ಬೂದಿ ಅಥವಾ ರಾಗಿ ತುಂಬಿ ಮನೆಯವರೆಲ್ಲರೂ ಮರೆಯಾಗುತ್ತಾರೆ. ಬುರುಡೆ ಕರೆಯುವುದು ಮತ್ತು ಕಲ್ಲನ್ನು ಹಿಡಿಯುವ ಆಚರಣೆಯು ಸೋಲಿಗ ಸಮುದಾಯದಲ್ಲಿ ಮಾಡುತ್ತಾರೆ. ಆ ಮೂಲಕ ಮರಣ ಹೊಂದಿದ ವ್ಯಕ್ತಿಗೆ ಅನ್ನ ನೀರು ಹಾಕಿ ಅವರನ್ನು ತಮ್ಮ ಸಗ್ಗದ ಮನೆಯವರ ಹತ್ತಿರ ಸೇರಿಸುತ್ತಾರೆ.

ಸಾಮಾನ್ಯವಾಗಿ ಸೋಲಿಗರಲ್ಲಿ ವ್ಯಕ್ತಿ ಮರಣ ಹೊಂದಿದ ಐದನೇ ದಿನಕ್ಕೆ ತಿಥಿಯನ್ನು ಮಾಡುವ ವಾಡಿಕೆ ರೂಢಿಯಲ್ಲಿದೆ. ಐದನೇ ದಿವಸಕ್ಕೆ ತಿಥಿ ಕಾರ್ಯವನ್ನು ಮಾಡಲು ಅನುಕೂಲವಾಗದ ಕೆಲವರು ಹನ್ನೆರಡನೇ ದಿನಕ್ಕೆ ತಿಥಿಯನ್ನು ಮಾಡುತ್ತಾರೆ. ತಿಥಿಯನ್ನು ಮಾಡಲು ಪೋಡಿನ ಹತ್ತಿರದಲ್ಲಿರುವ ಹಳ್ಳ ಅಥವಾ ಕೆರೆಯ ಜಾಗವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ತಿಥಿ ಕಾರ್ಯಕ್ಕೆ ನೀರಿನ ಅವಶ್ಯಕತೆ ಇರುವುದರಿಂದ ಇಂತಹ ಜಾಗವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ ಎಂದು ಹೇಳಬಹುದು. ಈ ಸಮಯದಲ್ಲಿ ಸೋಲಿಗರಲ್ಲಿ ಕಂಡುಬರುವ ಐದು ಕುಲದ ಮುಖ್ಯಸ್ಥರ ಪಾತ್ರ ಪ್ರಮುಖವಾಗಿರುತ್ತದೆ. ತಿಥಿಗಾಗಿ ರಾಗಿ ಮುದ್ದೆ ಮತ್ತು ಮಾಂಸದ ಸಾರನ್ನು ಸಿದ್ಧಗೊಳಿಸುತ್ತಾರೆ. ತರುವಾಯ ಮುಸ್ಸಂಜೆಯ ವೇಳೆಗೆ ಹಳ್ಳದಲ್ಲಿ ಮುತ್ತುಗದ ಎಲೆಗೆ ರಾಗಿ ಮುದ್ದೆ ಮತ್ತು ಮಾಂಸದ ಆಹಾರವನ್ನು ಇಟ್ಟು, ಮರಣ ಹೊಂದಿದ ವ್ಯಕ್ತಿಗೆ ಎಡೆಯಿಟ್ಟು ಪೂಜಿಸುತ್ತಾರೆ. ಇದಾದ ಬಳಿಕ ಐದು ಕುಲದ ಮುಖ್ಯಸ್ಥರು ಊಟ ಮಾಡಿ ಕಲ್ಲನ್ನು ಹಿಡಿಯಲು ಅರಣ್ಯಕ್ಕೆ ತೆರಳುತ್ತಾರೆ. ಇದು ಸೋಲಿಗರಲ್ಲಿನ ತಿಥಿ ಕಾರ್ಯದ ಪ್ರಮುಖ ಘಟ್ಟವಾಗಿದೆ. ಹೀಗೆ ಕಾಡಿಗೆ ತೆರಳುವ ವ್ಯಕ್ತಿಗಳಲ್ಲಿ ಯಾರಿಗಾದರೂ ಒಬ್ಬನಿಗೆ ಒಂದು ಕಲ್ಲಿನಲ್ಲಿ ಸತ್ತವ್ಯಕ್ತಿಯ ಆತ್ಮ ಇರುವಂತೆ ಭಾಸವಾಗುತ್ತದೆ. ಆಗ ಆತ **'ಘೂ'** ಎಂದು ಹೇಳಿ ಆ ಕಲ್ಲನ್ನು ಎತ್ತಿ ತನ್ನ ಎದೆಗೆ ಅಪ್ಪಿಕೊಂಡು ಹಳ್ಳದ ಹತ್ತಿರಕ್ಕೆ ತರುತ್ತಾನೆ. ಹೀಗೆ ತಂದ ಕಲ್ಲನ್ನು ಚೆನ್ನಾಗಿ ತೊಳೆದು **ತೇಗ ಅಥವಾ ಮುತ್ತುಗದ ಎಲೆಯ ಮೇಲಿಟ್ಟು** ಪೂಜಿಸುತ್ತಾರೆ. ಹೀಗೆ ಕಲ್ಲನ್ನು ಪೂಜಿಸಿದ ನಂತರ ಸತ್ತ ವ್ಯಕ್ತಿಯ ಕುಟುಂಬಸ್ಥರೆಲ್ಲರೂ ಒಬ್ಬೊಬ್ಬರಾಗಿ ಒಂದು ಕಲ್ಲನ್ನು ಮುಟ್ಟಿ ನಮಸ್ಕರಿಸುತ್ತಾರೆ. ನಮಸ್ಕರಿಸುತ್ತಿರುವ ಸಂದರ್ಭದಲ್ಲಿ ಆ ಕುಟುಂಬದ ಯಾರಾದರೂ ಒಬ್ಬ ರಹಸ್ಯವಾಗಿ ಪ್ರಜ್ಞೆ ತಪ್ಪಿ ಬೀಳುತ್ತಾನೆ. ಪ್ರಜ್ಞೆ ತಪ್ಪಿ ಬಿದ್ದಿರುವ ವ್ಯಕ್ತಿಯ ಮೇಲೆ ಸತ್ತಿರುವವನು ಅಪಾರವಾದ ಪ್ರೀತಿಯನ್ನು ಹೊಂದಿದ್ದನೆಂದು ಉಳಿದವರೆಲ್ಲರೂ ನಂಬುತ್ತಾರೆ. ಇಲ್ಲಿಗೆ ತಿಥಿಯ ಕಾರ್ಯ ಪೂರ್ಣವಾಗಿ ಮುಗಿಯುತ್ತದೆ. ಈ ರೀತಿಯಾಗಿ ತಿಥಿಯನ್ನು ಮಾಡಿದ ಮೇಲೆ ಸತ್ತ ಸೂತಕ ಕಳೆಯುತ್ತದೆ ಎಂದೇ ಸೋಲಿಗರು ಭಾವಿಸುತ್ತಾರೆ.

**ಕಲ್ಲನ್ನು ಗುಡಿಗೆ ಸೇರಿಸುವುದು:** ಸೋಲಿಗರಲ್ಲಿ ಸತ್ತವರಿಗೆ ಹನ್ನೊಂದು ಮತ್ತು ಹನ್ನೆರಡನೇ ದಿನದ ಕಾರ್ಯಕ್ಕೆ **"ಜಿನ ಮಾಡುವುದು ಅಥವಾ ಹಿಟ್ಟಿಡೋದು"** ಕಾರ್ಯ ಎನ್ನುತ್ತಾರೆ. ಮುಗಿದ ತಕ್ಷಣ ಕೊನೆಯಲ್ಲಿ ಸತ್ತ ವ್ಯಕ್ತಿಯನ್ನು ಸಗ್ಗಕ್ಕೆ ಸೇರಿಸುವ ಅಂದರೆ, ಆಯಾಯ ಕುಟುಂಬದ ಸಗ್ಗ ಅಥವಾ **'ಕಲ್ಲು ಗುಡಿಗೆ'** ಸೇರಿಸುವ ಕಾರ್ಯ ಮುಖ್ಯವಾಗಿರುತ್ತದೆ. ಈ ಕೊನೆಯ ಭಾಗದಲ್ಲಿ ಐದು ಜನ ಸೋಲಿಗರು ಕಾಡಿಗೆ ಹೋಗುತ್ತಾರೆ. ಇತ್ತೀಚೆಗೆ ಐದು ಜನರಿಗಿಂತ ಜೊತೆಗೆ ಹೆಚ್ಚು ಮಂದಿ ಸೇರಿಕೊಂಡು ಹೋಗುತ್ತಾರೆ. ಹಾಗೆ ಹೋಗುವಾಗ ಅವರಲ್ಲಿ ಯಾರಾದರೂ ಒಂದು ಕಲ್ಲನ್ನು ಬಂದು ಮೆಟ್ಟುತ್ತಾರೆ.

ಅಂದರೆ ಕಾಲಿನಲ್ಲಿ ತೋರಿಸುವುದು, ತುಳಿದು ಹಿಡಿಯುವುದು ಆನಂತರದಲ್ಲಿ ಮರಣ ಹೊಂದಿದ ವ್ಯಕ್ತಿಯ ಮನೆಯವರಲ್ಲಿ ಯಾರಾದರೂ ಒಬ್ಬರು ಬಂದು ಆ ಗುರುತಿಸಿದ ಕಲ್ಲನ್ನು ತೆಗೆದುಕೊಂಡು ಹೋಗಿ ಚೆನ್ನಾಗಿ ಎಣ್ಣೆ, ಸೀಗೆಕಾಯಿ ಹಾಕಿ ತೊಳೆದು ಶುಚಿ ಮಾಡಿದ ನಂತರ, ಮತ್ತೊಮ್ಮೆ ಅದನ್ನು ಕುಲಸ್ಥರು ತೊಳೆದು ಶುಚಿ ಮಾಡುತ್ತಾರೆ. ಆ ನಂತರ ಆ ಕಲ್ಲನ್ನು ಪೂಜಿಸಿ ಆ ಕಲ್ಲಿಗೆ ಗಾಳಿಯನ್ನು ಕರೆಯುತ್ತಾರೆ. ಮರಣ ಹೊಂದಿದ ವ್ಯಕ್ತಿಯನ್ನು ಆ ಕಲ್ಲಿಗೆ ಬರಮಾಡಿಕೊಳ್ಳುವುದು ಅಥವಾ ತಮ್ಮಡಿ ಮೇಲೆ ಗಾಳಿಯನ್ನು ಸೋಸಿ(ಹುಡುಕಾಡಿ) ಎತ್ತುತ್ತಾನೆ(ಬರಮಾಡಿಕೊಳ್ಳುತ್ತಾನೆ). ಅಂದರೆ, ಗಾಳಿಯನ್ನು ಕರೆಯುವುದು. ಸತ್ತ ವ್ಯಕ್ತಿಯನ್ನು ಆ ಕಲ್ಲಿಗೆ ಬರಮಾಡಿಕೊಳ್ಳುತ್ತಾ ತನ್ನ ಮೇಲೆ ಬಂದ ಗಾಳಿಯನ್ನು ಮರಣ ಹೊಂದಿದ ಮನೆಯವರಲ್ಲಿ ಯಾರಾದರೂ ಒಬ್ಬರ ಹತ್ತಿರ ಕಳುಹಿಸುತ್ತಾರೆ. ಆನಂತರ ಆ ಕಲ್ಲನ್ನು ತಮ್ಮಡಿಯು ತಟ್ಟನೆ ತನ್ನ ಎದೆಯ ಮೇಲೆ ಇಟ್ಟುಕೊಂಡು ಒಂದೇ ಕ್ಷಣದಲ್ಲಿ ಆ ಕಲ್ಲನ್ನು ಕೆಳಗೆ ಇಡುತ್ತಾನೆ. ಹೀಗೆ ಕಲ್ಲನ್ನು ಗುಡಿಗೆ ಸೇರಿಸುವ ಆಚರಣೆಯು ನಡೆಯುತ್ತದೆ.

**ಕುಲದವರ ಎರಡು ತೋಳುಗಳನ್ನು ತೊಳೆಯುವ ಆಚರಣೆ:** ಐದು ಕುಲದವರ ಹೆಗಲ ತೊಳೆಯುವ ಕಾರ್ಯದಲ್ಲಿ ಕುಲದವರನ್ನು ನಿಲ್ಲಿಸಿ ಗರಿಕೆಯನ್ನು ತೆಗೆದುಕೊಂಡು ಒಬ್ಬೊಬ್ಬರಾಗಿ ಅವರ ಎಡ ತೋಳಿನ ಮೇಲೆ ಗರಿಕೆ ಇಟ್ಟು ನೀರು ಹಾಕಿ ತೊಳೆಯುತ್ತಾರೆ. ಆ ನೀರು ಕಲ್ಲಿನ ಮೇಲೆ ಬೀಳುತ್ತಿರಬೇಕು. ಅಂದರೆ ಆ ಕಾಡಿನ ಕಲ್ಲನ್ನು ತಗೆದುಕೊಂಡು ಕುಲಸ್ಥರ ಮೂಲಕ ಶುದ್ಧಿ ಮಾಡುವುದು. ಅಂದರೆ ಸೋಲಿಗ ಸಮುದಾಯದಲ್ಲಿ ಧಾನ್ಯದ ಒಂದು ಪೊಟ್ಟಣವನ್ನು ಕಟ್ಟಿಕೊಂಡು ಅಥವಾ ಒಂದು ಚಿಕ್ಕ ಪಾತ್ರೆಯಲ್ಲಿ ತುಂಬಿ ಅದನ್ನು ತೆಗೆದುಕೊಂಡು ಎಡಗೈ ಮೇಲೆ ಬಲಗೈ ಇಟ್ಟು, ಕಲ್ಲಿಗೆ ಒಂದೇ ಸಮನೆ ನೀರು ಬಿಡುತ್ತಾರೆ. ಇಲ್ಲಿಗೆ ಎಲ್ಲವೂ ಮುಗಿಯಿತು. ನಮ್ಮ ಅವರ ಋಣ ಎಂದು ಭಾವಿಸಿ ಕಲ್ಲನ್ನು ಕಲ್ಲಿನ ಗುಡಿಗೆ ಸೇರಿಸುತ್ತಾರೆ. ಇವರ ಜೊತೆಯಲ್ಲಿ ಸುಮಾರು ಐದರಿಂದ ಇಪ್ಪತ್ತು ಜನರು ಇರುತ್ತಾರೆ. ಸೋಲಿಗ ವ್ಯಕ್ತಿ ಮರಣ ಹೊಂದಿದಾಗ ಅವರನ್ನು ತಮ್ಮದೇ ಆದ ವಿಧಿ–ವಿಧಾನಗಳ ಮೂಲಕ ಶವಸಂಸ್ಕಾರವನ್ನು ಮಾಡಿ ಸಮಾಧಿ ಮಾಡುತ್ತಾರೆ. ಸಾಮಾನ್ಯವಾಗಿ ಮರಣ ಹೊಂದಿದ ವ್ಯಕ್ತಿಯ ಬಗ್ಗೆ ಹೆಚ್ಚು ಕೊರಗುವುದಿಲ್ಲ. ಅವನ ಋಣ ಮುಗಿಯಿತು, ನಮ್ಮ ಹಾಗೆ ಮರಣ ಹೊಂದಿದವರು ಸಗ್ಗದಲ್ಲಿ ನಮ್ಮ ಕುಟುಂಬದವರೊಟ್ಟಿಗೆ ಸೇರಿಕೊಂಡು ಬಿಡುತ್ತಾರೆ. ಅಲ್ಲಿಯೂ ಅವರು ಒಂಟಿಯಾಗಿ ಇರುವುದಿಲ್ಲ, ಅಲ್ಲಿಯೂ ಸಮುದಾಯದವರೊಟ್ಟಿಗೆ ಬದುಕುತ್ತಾರೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಆದುದರಿಂದಲೇ ಸೋಲಿಗರು ಸತ್ತ ವ್ಯಕ್ತಿಯ ಬಗ್ಗೆ ಹೆಚ್ಚು ಕೊರಗುವುದಿಲ್ಲ ಮತ್ತು ಚಿಂತೆಮಾಡುವುದಿಲ್ಲ.

**ಸೋಲಿಗರ ಕಲ್ಲು ಗುಡಿಗಳು**

ಸೋಲಿಗರಲ್ಲಿ ಆಯಾಯ ಕುಲದವರಿಗೆ ಸಂಬಂಧಿಸಿದಂತೆ ಕಲ್ಲು ಗುಡಿಗಳಿರುತ್ತವೆ. ಆ ಗುಡಿಯಲ್ಲಿಯೇ ತಮ್ಮ ಸತ್ತ ವ್ಯಕ್ತಿಯ ಕಲ್ಲನ್ನು ತೆಗೆದುಕೊಂಡು ಹೋಗಿ ಸೇರಿಸುತ್ತಾರೆ. ಹೀಗೆ ಸೇರಿಸುವ ಸೋಲಿಗರ ಕಲ್ಲು ಗುಡಿಗಳು ಈ ಕೆಳಗಿನಂತಿದೆ–

- ಆನವಳಿಕೆರೆ ಕಲ್ಲುಗುಡಿ – ಇದು ಸೆಳಕರು ಕುಲದವರು
- ನಿಡುಮಡು ಕಲ್ಲುಗುಡಿ – ಹಾಲೇರು ಕುಲದವರು
- ಪಟ್ಟಡಿಹರೆ ಕಲ್ಲುಗುಡಿ – ಬೆಳ್ಳೀರು ಕುಲದವರು

• ಹೊರ್‍ರಲಾರೆ ಕಲ್ಲುಗುಡಿ – ತೇನೇರು ಕುಲದವರು

• ಮತ್ತಿಹರೆ ಕಲ್ಲುಗುಡಿ – ಶೂರುರು ಕುಲದವರು

ಸೋಲಿಗ ಸಮುದಾಯದವರು ತಮ್ಮ ಕುಲಕ್ಕೆ ಸಂಬಂಧಿಸಿದ ಕಲ್ಲು ಗುಡಿಗಳನ್ನು ಕಾಡಿನ ಕೆರೆ, ಹಳ್ಳ, ಕಟ್ಟೆ, ಪ್ರಾಣಿ, ಮರ, ಪಕ್ಷಿ ಹಾಗೂ ಪರಿಸರದ ಮಧ್ಯದಲ್ಲಿಯೇ ಗುರುತು ಮಾಡಿಕೊಂಡಿರುತ್ತಾರೆ. ಸೋಲಿಗರ ಮುಖಂಡರಾದ ಪುಟ್ಟರಂಗ ಸೋಲಿಗ ಕಲ್ಲು ಗುಡಿ ಮತ್ತು ಅವುಗಳಿಗೆ ಸಂಬಂದಿಸಿದ ಕೆಲವು ಮಾಹಿತಿಗಳನ್ನು ಈ ರೀತಿಯಾಗಿ ನೀಡಿದ್ದಾರೆ.

- **ಪಟ್ಟಡಿ:** ಅಂದರೆ ಮಚ್ಚನ್ ಅಥವಾ ಅಂದಲು, ಅಟ್ಟಣಿ ಅಟ್ಣಿ ಎಂದು ಸೋಲಿಗರು ತಮ್ಮದೇ ಆದ ಗುರುತುಗಳನ್ನು ಮಾಡಿಕೊಂಡಿದ್ದಾರೆ.

- **ಹರ್‍ರೆ:** ಕಲ್ಲು, ಬಂಡೆಗಳ ಸಮೂಹದಲ್ಲಿರುವ ಸೋಲಿಗರ ಕಲ್ಲು ಗುಡಿಗಳು.

- **ನಿಡು:** ಮಧ್ಯದಲ್ಲಿರುವುದು, (ಸೆಂಟರ್.)

- **ಮತ್ತಿಹರೆ:** ಮತ್ತಿ ಒಂದು ಜಾತಿಯ ಕಾಡಿನ ಮರ. ಈ ಮರವು ಮತ್ತಿ ಹಣ್ಣನ್ನು ಬಿಡುತ್ತದೆ, ಈ ಮರದ ಗುರುತಿನಲ್ಲಿ ಸೋಲಿಗರ ಕಲ್ಲು ಗುಡಿಗಳಿರುತ್ತವೆ ಅಥವಾ ತಮ್ಮಡಿ ಮೇಲೆ ಆ ಗಾಳಿಯನ್ನು ಸೋಸಿದಾಗ ಕಲ್ಲನ್ನು ಎತ್ತಿ ತನ್ನ ಎದೆಯ ಮೇಲೆ ಇಟ್ಟು ನಂತರ ಕೆಳಗಿಟ್ಟು ಸೋಲಿಗರಲ್ಲಿ ಮರಣ ಹೊಂದಿದ ವ್ಯಕ್ತಿಗೆ ಅಂತಿಮವಾಗಿ ಕೈಗೊಳ್ಳುವ ಧಾರ್ಮಿಕ ಆಚರಣೆ ಮುಗಿದಂತೆಯೇ. ಸತ್ತ ವ್ಯಕ್ತಿಯ ವಂಶಸ್ಥರಿಗೆ ಪಾರಂಪರಿಕವಾಗಿ ಬಂದಿರುವ ಕಲ್ಲುಗುಡಿಗೆ ತಿಥಿಯ ದಿನದಂದು ಪೂಜಿಸಿಟ್ಟು ಕಲ್ಲನ್ನು ತೆಗೆದುಕೊಂಡು ಹೋಗಿ ಇಡುವುದಕ್ಕೆ ಕಲ್ಲನ್ನು ಗುಡಿಗೆ ಸೇರಿಸುವುದು ಎನ್ನುತ್ತಾರೆ.

### ೩.೨.೫. ಬುರುಡೆ ಸೋಲಿಗರಲ್ಲಿ ಜಿನ ಮಾಡುವ ಕಾರ್ಯಕ್ರಮ
### (ಮರಣ ಹೊಂದಿದ ವ್ಯಕ್ತಿಯ ಹನ್ನೊಂದು ಮತ್ತು ಹನ್ನೆರಡನೇ ದಿನದ ಕಾರ್ಯಕ್ರಮ)

ಸೋಲಿಗರಲ್ಲಿ ಈ ರೀತಿಯಾಗಿ ಕಲ್ಲನ್ನು ಗುಡಿಗೆ ಸೇರಿಸಿದರೆ ಮಾತ್ರ ಆತನಿಗೆ ಮೋಕ್ಷ ದೊರೆಯುತ್ತದೆ ಎಂದು ಕೆಲವರು ಹೇಳಿದರೆ, ಮತ್ತೆ ಕೆಲವರು ಕಲ್ಲನ್ನು ಗುಡಿಗೆ ಸೇರಿಸುವುದರಿಂದ ಅವನು, ಈಗಾಗಲೇ ಸತ್ತು ಆ ಕಲ್ಲು ಗುಡಿಯಲ್ಲಿ ನೆಲೆಯೂರಿರುವ ತಮ್ಮ ವಂಶದ ಪೂರ್ವಿಕರನ್ನು ಸೇರಿಕೊಂಡು ಇಲ್ಲಿಯಂತೆಯೇ ಅಲ್ಲಿಯೂ ಜೀವನ ಸಾಗಿಸುತ್ತಾನೆ ಎಂಬ ನಂಬಿಕೆಯನ್ನು ಹೊಂದಿರುತ್ತಾರೆ. ಆ ನಂತರದಲ್ಲಿ ಅಲ್ಲಿಗೆ ಕಲ್ಲನ್ನು ಕಾಡಿನ ಸಗ್ಗದ ಮನೆಯಲ್ಲಿಟ್ಟು ಕುಲಸ್ಥರು ಮತ್ತು ಮನೆಯವರು ಸಗ್ಗದ ಮನೆಗೆ ಸೇರಿಸಿ ಹಿಂತಿರುಗಿ ನೋಡದೆ ಎಲ್ಲರೂ ತಮ್ಮ ತಮ್ಮ ಪೋಡಿಗೆ ಬರುತ್ತಾರೆ. ಹೀಗೆ ಸೋಲಿಗರಲ್ಲಿ ಮರಣ ಹೊಂದಿದ ಪ್ರತಿಯೊಬ್ಬ ವ್ಯಕ್ತಿಗೂ ಈ ರೀತಿಯ ಆಚರಣೆ ಮಾಡುತ್ತಾರೆ.

ಗುಂಡ್ಲಪೇಟೆ ತಾಲ್ಲೂಕು ಮತ್ತು ಹೆಚ್.ಡಿ. ಕೋಟೆ ಸುತ್ತಮುತ್ತಲೂ ವಾಸವಾಗಿರುವ ಸೋಲಿಗರು ತಮ್ಮ ಶವಸಂಸ್ಕಾರವನ್ನು ೧೧–೧೨ನೇ ದಿನದ ಕಾರ್ಯವನ್ನು ಬಹಳ ವಿಶೇಷವಾಗಿ ಆಚರಿಸುತ್ತಾರೆ. ಇವರು ಸತ್ತ ವ್ಯಕ್ತಿಯನ್ನು ಹೂಳುತ್ತಾರೆ. ಜೊತೆಗೆ ತುಂಬಾ ಖಾಯಿಲೆಯಿಂದ ಸತ್ತಾಗ ನೀರಿಗೆ, ಮರದಿಂದ, ಪ್ರಾಣಿಗಳಿಂದ, ಸತ್ತ ವ್ಯಕ್ತಿಯನ್ನು ಸುಡುವ ಪದ್ಧತಿಯೂ ಇದೆ. ಅಲ್ಲದೆ, ಸತ್ತ ವ್ಯಕ್ತಿಯ ೧೧ನೇ ದಿನದ ಕಾರ್ಯವನ್ನು ಬಹಳ ಅಚ್ಚುಕಟ್ಟಾಗಿ ಸಮುದಾಯದ ಎಲ್ಲರೂ ಸೇರಿಕೊಂಡು ಆ

ಮನೆಯ ಕೆಲಸ ಕಾರ್ಯದಲ್ಲಿ ಭಾಗವಹಿಸುತ್ತಾರೆ. ೧೧ನೇ ದಿನದ ಕಾರ್ಯವನ್ನು **'ಜಿನ ಮಾಡುವುದು' 'ದೇವರು ಕರೆಯುವುದು'** ಎಂದು ಕರೆಯುತ್ತಾರೆ. ಈ ಕಾರ್ಯವನ್ನು ಮಾಡುವಾಗ ಮೊದಲು ಯಾವ ವ್ಯಕ್ತಿಯೂ ಮರಣ ಹೊಂದಿದ್ದಾನೆ ಅವನ ಮನೆಯಲ್ಲಿ ಸೂತಕ ಇರುತ್ತದೆ. ಆ ಮನೆಯವರು ಮನೆಯನ್ನೆಲ್ಲಾ ಸ್ವಚ್ಛ ಮಾಡಿ ಗುಡಿಯಿಂದ, ದೇವಸ್ಥಾನದಿಂದ ತೀರ್ಥವನ್ನು ತಂದು ತಮ್ಮ ಮನೆಗೆ ಹಾಕಿಕೊಂಡು ಗಂಗೆ ಪೂಜೆ ಮಾಡುತ್ತಾರೆ. ಗಂಗೆಯನ್ನು ತರುವಾಗ ಅಲ್ಲಿ ನೀರನ್ನು ಹೊತ್ತಿರುವ ಒಬ್ಬರಲ್ಲಿ ಯಾರಾದರೂ ಒಬ್ಬರಿಗೆ ಮೈಮೇಲೆ ಮನೆದೇವರು ಬರುತ್ತದೆ. ಇದಕ್ಕೆ ಸೋಲಿಗರ ಭಾಷೆಯಲ್ಲಿ **'ಆವೇಷ' ಬರುವುದು'** ಎನ್ನುತ್ತಾರೆ. ಮೈಮೇಲೆ ಆವೇಷ ಬಂದಾಗ ಅವರು 'ಉಷ್. ಉಷ್. ಉಷ್ ಎಂದು ಶಬ್ದ ಮಾಡುತ್ತ ಒಂದೆರಡು ಮಾತನಾಡಿ ನಾನಿದ್ದೇನಿ ಮಾಡು ನಿನ್ನ ಕೆಲಸ ಕಾರ್ಯವನ್ನು, ಧೈರ್ಯವಾಗಿರಿ.. ನಿನ್ನ ಗಾಳಿಯನ್ನು ತಂದುಕೊಡುತ್ತೇನೆ, ಹೆದರಬೇಡ ಹೋಗು ಮಗನೇ.. ಎಂದು ತಟ್ಟನೆ ಮೈಯನ್ನು ಒದರಿ ಬಿಡುತ್ತಾನೆ. ಅಲ್ಲಿಗೆ ಎಲ್ಲವೂ ಸರಿ ಎಂದು ತಿಳಿಯುತ್ತಾರೆ. ಒಂದುವೇಳೆ ಆ ಮನೆಯವರಲ್ಲಿ ಹತ್ತಿರದ ಸಂಬಂಧಿಕರಲ್ಲಿ ಹಿಂದೆ ಏನಾದರೂ ಕಾಣಿಕೆ, ದೇವರಕಾರ್ಯ ಇತ್ಯಾದಿ ಮಾಡದೆ ಉಳಿದುಕೊಂಡಿದ್ದರೆ 'ನೋಡು ಮಗನೇ ನಿಮಗೆ ತೊಂದರೆ ಇದೆ. ಹಿಂದಿನ ಮಾತನ್ನು ನೀನು ಉಳಿಸಿಕೊಂಡಿಲ್ಲ. ನಿನಗೆ ಆಪತ್ತು ಇದೆ ಎನ್ನುತ್ತದೆ. ಅದಕ್ಕೆ ಪ್ರತಿಯಾಗಿ, ಮಾನವ ಸರಿ ಅದನ್ನೆಲ್ಲಾ ನೀನೇ ತಾನೇ ನೋಡಬೇಕು, ನೀನು ಕಣ್ಣು ಮುಚ್ಚಿ ಕುಳಿತಿದ್ದೆಯ...? ನಮಗೆ ಹಾಗೆ ಆಗುವುದಕ್ಕೆ ಏನು ತೊಂದರೆ? ಎಂದು ನಿನಗೆ ಗೊತ್ತಿಲ್ಲವೇ? ಅದಕ್ಕೆ ಏನು ಪರಿಹಾರ ಕೊಡು ಎನ್ನುತ್ತಾನೆ. ಅದಕ್ಕೆ ಪ್ರತಿಯಾಗಿ ದೇವರು ಸರಿ ಮಗನೆ ಒಂದು ಅರಿಶಿಣ **ಬಟ್ಟೆಯಲ್ಲಿ ನಾಲ್ಕಾಣೆ** ತಾಯತ ಮಾಡಿ ಕಾಣಿಕೆಯ ರೂಪದಲ್ಲಿ ತಪ್ಪಾಯಿತು ಎಲ್ಲವನ್ನು ನಿನ್ನ **ಹೊಟ್ಟೆಗೆ ಹಾಕಿಕೊಂಡು** ನಮ್ಮ ಕೆಲಸ ಕಾರ್ಯ ಮಾಡಿಕೊಂಡು ಎಂದು ಒಂದು ಹಸಿರು ಗಿಡಕ್ಕೆ ಅದನ್ನು ಧೂಪ ಹಾಕಿ ಕಟ್ಟಿಬಿಡು ಮಗನೆ, ಎಲ್ಲ ಕಾರ್ಯವು ಸುಲಭವಾಗುತ್ತದೆ ಎಂದು ಹೇಳಿ ಮೈ ಬಿಡುತ್ತಾನೆ. ಆ ನಂತರದಲ್ಲಿ ಸಂಜೆಯ ಕಾರ್ಯಕ್ಕೆ ಎಲ್ಲವನ್ನು ಸಿದ್ಧತೆ ಮಾಡಿಕೊಳ್ಳುತ್ತಾರೆ.

**ಬುಡ್ನೋಟ ನೋಡುವುದು(ಮುನ್ನೋಟ ನೋಡುವುದು, ಪ್ರಾಕ್ ಕಲ್ಪನೆ)**

ಬುರುಡೇ ಸೋಲಿಗರಲ್ಲಿ ಈ ಬುಡ್ನೋಟ ನೋಡುವುದು ಬಹಳ ಪ್ರಮುಖವಾದುದು. ಸತ್ತ ವ್ಯಕ್ತಿಗೆ ಜಿನ ಮಾಡುವುದು ಇನ್ನು ೩-೪ ದಿನ ಇರುತ್ತದೆ ಎನ್ನುವ ಹಾಗೆ ಊರಿನಲ್ಲಿ ಅಥವಾ ಪಕ್ಕದ ಊರಿನಿಂದ ತಮ್ಮಡಿ ದೇವರು ಕರೆಯುವವರನ್ನು ಕರೆದುಕೊಂಡು ಅವರಿಗೆ ಪ್ರತ್ಯೇಕವಾದ ವೀಳ್ಯ ಕೊಟ್ಟು ಆಮಂತ್ರಿಸುತ್ತಾರೆ. ಅವರು ಜಿನ ಮಾಡುವುದಕ್ಕೆ ಮುಂಚಿತವಾಗಿ ೧೧-೧೨ನೇ ಜಿನದ ಕಾರ್ಯ ಸುಗಮವಾಗಲು ಸಗ್ಗದವರು, ಅವರ ಸತ್ತ ಬಂಧುಗಳು ದೇವರು-ದಿಂಡರು ಎಲ್ಲರನ್ನೂ ಮೈಮೇಲೆ ಇಳಿಸಿಕೊಂಡು ಸತ್ತ ವ್ಯಕ್ತಿಗೆ ಯಾವುದಾದರೂ ಕೊಕ್ಕೆ(ತೊಂದರೆ)ಗಳಿವೆಯೇ? ಇಲ್ಲವೆ ಅಥವಾ ಸತ್ತ ವ್ಯಕ್ತಿಯನ್ನು ಯಾರಾದರೂ ತಡೆಹಿಡಿಯುತ್ತಾರೆಯೋ? ಇಲ್ಲವೆ ಅಲ್ಲದೆ ಅನ್ನ-ನೀರು ತಿಂದು ಸಗ್ಗವನ್ನು ಸೇರಿಕೊಳ್ಳಲು ಏನಾದರೂ ತೊಂದರೆಗಳಿದೆಯೇ? ಇಲ್ಲವೆ ಇತ್ಯಾದಿ ಎಲ್ಲವನ್ನು ಮುಂಜಾಗೃತವಾಗಿ ಗಮನಿಸಿ ಆ ೧೧-೧೨ ದಿನದ ಕಾರ್ಯ ಈ ರೀತಿ ಇರಬೇಕು, ಇರಬಹುದು ಎಂಬುದನ್ನು ತಿಳಿದುಕೊಳ್ಳುವುದೇ ಬುಡ್ನೋಟ. ಇದರ ಮೂಲಕ ಏನಾದರೂ ತೊಂದರೆಗಳಿದ್ದರೆ, ಮನೆಯವರು ಕೇಳಿ ಸರಿಪಡಿಸಿಕೊಳ್ಳಲು ಸಹಾಯಕವಾಗುತ್ತದೆ. ಅಲ್ಲದೆ ಮನೆಯವರಿಗೂ ಆ ಕಾರ್ಯವನ್ನು

ಮಾಡಲು ವ್ಯವಸ್ಥೆ ಮಾಡಿಕೊಳ್ಳಲು ಸಹಾಯವಾಗುತ್ತದೆ. ಇದು ಪೂರ್ವ ತಯಾರಿಯಾಗಿರುತ್ತದೆ. ನಂತರದ ಕಾರ್ಯದಲ್ಲಿ ೧೧ನೇ ದಿನ ರಾತ್ರಿ 'ಹಸೆಮಣೆ ಹೂಡುವುದು' ಪ್ರಾರಂಭವಾಗಿ ರಾತ್ರಿಯೆಲ್ಲಾ ಒಂದು ಗುಂಪು ಮಹಿಳೆಯರು **'ದೇವರ ಪದ ಸೊಲ್ಲು'** ಹೇಳುವರು, ಮತ್ತೊಂದು ಗುಂಪು ತಮ್ಮಡಿ ಅಥವಾ ದೇವರು ಕರೆಯುವವರು ಕುಳಿತುಕೊಳ್ಳುತ್ತಾರೆ ಪಕ್ಕದಲ್ಲಿಯೇ, ದೊಡ್ಡದಾದ 'ಬೆಂಕಿ ಗುಳಿ' ಹಾಕುತ್ತಾರೆ. ಹುಡುಗರು–ಹುಡುಗಿಯರು, ವಯಸ್ಸಾದವರು, ಮಕ್ಕಳು ಎಲ್ಲರೂ ಅಲ್ಲಿ ಬಂದು ಸೇರುತ್ತಾರೆ. ಹಸೆಮಣೆಗೆ ಪೂಜಾ–ಧೂಪ ಹಾಕಿದ ನಂತರ ಬುರುಡೆಯನ್ನು ಕರೆಯುತ್ತಾರೆ. ಎರಡೂ ಕೈಯಿಗೂ ೨ ಸೋರೆ ಬುರುಡೆಯನ್ನು ತಮ್ಮ ಎರಡು ಎದೆಯ ಹಾಗೂ ಎರಡು ಭುಜಕ್ಕೂ ಬಡಿಯುತ್ತಾ,

ಹಾಡಿತ್ತು ಬಂದ ಚಿಕ್ಕಮ್ಮ ತಾಯಿ
ಕೂಗಿತ್ತು ಬಂದ ಚಿಕ್ಕಮ್ಮಾ...
ಸಣ್ಣ ಸೀರಾ ಸಾಬೀನಾ ಬಿಟ್ಟು ಇವಳ್ಯಾರಮ್ಮಾ
ಗಂಡಾ ನಿಲದಾ ಪುಂಡುಗಾತಿ ಇವಳ್ಯಾರಮ್ಮ
ಕೂಗು ಕೂಗು ಮಾದೇವಿನಾ
ಕೂಗಿ ಕರ್ದೂರು ಮಾದೇವನಾ.....

ಹೀಗೆ ಒಂದೊಂದು ದೇವರುಗಳನ್ನು ತಮ್ಮ ಮೈಮೇಲೆ ಇಳಿಸಿಕೊಂಡು ದೇವರ ಜೊತೆ ಸಂಭಾಷಣೆ ನಡೆಯುತ್ತದೆ. ದೇವರ ಜೊತೆ ಜೋರಾಗಿ ಬೈಯುವುದು, ಪೈಪೋಟಿ ಮಾಡುವುದು ನಡೆಯುತ್ತದೆ. "ಹುಷ್, ಹುಷ್, ಮಗನೇ ನನ್ನನ್ನು ಯಾಕೆ ಕರೆದಪ್ಪ ಮಗನೆ, ನನ್ನಿಂದ ನಿನಗೆ ಏನು ಆಗಬೇಕು ಎಂದು ದೇವರು ಹೇಳಿದಾಗ, ಅದಕ್ಕೆ ಪ್ರತಿಯಾಗಿ ಸಂಭಾಷಣೆ ಮಾಡುವವರು **'ಓ ನಿನಗೆ ಕಣ್ಣು ಕಾಣುವುದಿಲ್ಲವೇ ನಾನು ನಿನ್ನನ್ನು ಕರೆದಿರುವುದು ನಿನಗೆ ಗೊತ್ತಿಲ್ವಾ ನೀನು ಕಣ್ಣು ಮುಚ್ಚಿಕೊಂಡು ಕುಳಿತಿದ್ದೀಯಾ** ಎಂದು ಹೇಳುತ್ತಾರೆ. ಮತ್ತೆ ಮಧ್ಯದಿಂದ ಮತ್ತೊಬ್ಬ ಮಾತನಾಡುತ್ತ ನಮ್ಮ ಎಲ್ಲಾ ಕಷ್ಟವನ್ನು ನೀನು ತೆಗೆದುಕೊಳ್ಳಬೇಕು **ಇಲ್ಲದಿದ್ದರೆ, ನಿನ್ನ ಗುಡಿಗೆ ಬಂದು ಮೆಣಸಿನಕಾಯಿ ಹೊಗೆ ಹಾಕಿಸ್ತೀನಿ** ಎಂದು ಹೇಳುತ್ತಾರೆ. ಹೀಗೆ ಒಬ್ಬರ ಮೇಲೆ ಮತ್ತೊಬ್ಬರು ದೇವರ ಜೊತೆ ಸಂಭಾಷಣೆ ನಡೆಸುತ್ತಾ, ಅವರ ಎಲ್ಲಾ ದೇವರುಗಳನ್ನು ಕರೆದು ಮಾತನಾಡಿಸಿ ಬಲಪಡಿಸಿಕೊಳ್ಳುತ್ತಾರೆ. ಅಂದರೆ ಸೋಲಿಗರಲ್ಲಿ ತಮ್ಮ ಕುಟುಂಬದಲ್ಲಿ ಈಗಾಗಲೇ ಮರಣಹೊಂದಿದ ವ್ಯಕ್ತಿಗೂ ಸಹ ತಮ್ಮ ಕುಟುಂಬಸ್ಥರ ಬಗ್ಗೆ ಜವಾಬ್ದಾರಿ ಇರಬೇಕು ಇಲ್ಲದಿದ್ದರೆ ಅವರನ್ನು ತಮ್ಮಡಿಯ ಮೈಮೇಲೆ ಅಥವಾ ತಮಗೆ ಇಷ್ಟಪಡುವವರ ಮೈಮೇಲೆ ಕರೆದು ಧೈರ್ಯವಾಗಿ ಮಾತನಾಡುತ್ತಾರೆ ಅವರನ್ನೂ ಸಹ ಬೆದರಿಸುವ ಶಕ್ತಿಯನ್ನು ಹೊಂದಿರುತ್ತಾರೆ. ಸಾಮಾನ್ಯವಾಗಿ ಮೈದುಂಬಿಸಿಕೊಳ್ಳುವ(ದೇವರು ಅಂದರೆ ತಮ್ಮ ಮೈಮೇಲೆ ಬರುವ ದೇವರುಗಳು) ಈ ಕೆಳಗಿನಂತಿವೆ.

- ಮಾದಪ್ಪ ಮಹದೇಶ್ವರ, ವಣಕಾರಯ್ಯ
- ಗೋಪಾಲಸ್ವಾಮಿ,
- ತಾವರೆಗಟ್ಟ ಮಾದಪ್ಪ

- ನೂರಾಳಯ್ಯ
- ಹದರುಗಾಳಪ್ಪ
- ಬೇಲದ ಕುಪ್ಪಯ್ಯ
- ಕೊಂಗಾಳಯ್ಯ
- ಸಿದ್ದಾಪ್ಪಾಜಿ
- ಏಳುಕೇರಿ ಮಾರಮ್ಮ
- ಚಿಕ್ಕಮ್ಮ ತಾಯಿ
- ದೊಡ್ಡಮ್ಮ ತಾಯಿ
- ಸೀಗನ ಮುಂಟಿ ಮಾರಮ್ಮ
- ಕಾರಯ್ಯ

ಸೋಲಿಗರು ಶವಸಂಸ್ಕಾರ ಕಾರ್ಯ ಮಾಡುವಾಗ ತಮ್ಮ ಕುಟುಂಬದಲ್ಲಿ ಮರಣ ಹೊಂದಿದ ಎಲ್ಲರನ್ನು ಅಂದರೆ, ಎಲ್ಲಾ ಸಗ್ಗದವರು(ಮರಣಹೊಂದಿರುವವರು), ಎಲ್ಲರನ್ನು ಕರೆದು, ಮೈದುಂಬಿಸಿ, ಮೈ ಇಳಿಸಿಕೊಂಡು, ತಮ್ಮ ಎಲ್ಲಾ ಕಷ್ಟ–ಸುಖ, ನೀವು ಹೇಗಿದ್ದೀರಾ? ಎಂದು ನೇರವಾಗಿ ಸಂಭಾಷಣೆ ಮಾಡಿ, ವಿಚಾರಿಸಿಕೊಂಡು ಸಮಾಧಾನಪಡುತ್ತಾರೆ. ಹೀಗೆ ರಾತ್ರಿಯಲ್ಲಿ ಒಂದರ ಮೇಲೊಂದರಂತೆ ಕಾರ್ಯಕ್ರಮಗಳು ನಡೆಯುತ್ತದೆ. ಮಧ್ಯದಲ್ಲಿ ಹಾಸ್ಯ ಚಟಾಕಿಗಳು ನಡೆಯುತ್ತದೆ. ಮಧ್ಯ ಮಧ್ಯದಲ್ಲಿ ಟೀಯನ್ನು ಅದೇ ಬೆಂಕಿ ಗುಳಿಯಲ್ಲಿ ಆಗಾಗ ಮಾಡಿ ಎಲ್ಲರಿಗೂ ಕೊಡುತ್ತಾರೆ. ಹಾಗೂ ಬುರುಡೆ ಕರೆಯುವ ಕಾರ್ಯವನ್ನು ಕೈ ಬದಲಾವಣೆ ಮಾಡಿಕೊಳ್ಳುತ್ತಾರೆ. ಅಂದರೆ ಬೇರೆಯವರು ಬಂದು ಬುರುಡೆಯನ್ನು ಕರೆಯಲು ಕುಳಿತುಕೊಳ್ಳುತ್ತಾರೆ. ಈ ಮೂಲಕ ಹೊಸ ಬುರುಡೆಯನ್ನು ಕರೆಯುವ ಕಲಿಕೆಯು ಮಧ್ಯ ಮಧ್ಯದಲ್ಲಿ ನಡೆಯುತ್ತದೆ. ಮಹಿಳೆಯರಿಗೆ ಅಡಿಕೆ ಎಲೆ ಹಂಚುತ್ತಾರೆ. ಸಮರಾತ್ರಿ ಬರುತ್ತಿದ್ದಂತೆಯೇ(ಮಧ್ಯರಾತ್ರಿ ಸಮಯದಲ್ಲಿ) **'ಗಾಂವ್'ಸೀಳುವ ಕಾರ್ಯಕ್ರಮ' 'ಗಾಂವ್'** ಎಂದರೆ, ಭೂತಕ್ಕೆ ಬಲಿ ಕೊಡುವುದು. **ಗಾಂವ್ ಸಿಗಿದು ಅಂದರೆ, ಭೂತಕ್ಕೆ ರಕ್ತದ ಊಟಕೊಟ್ಟು ಸತ್ತ ವ್ಯಕ್ತಿಯ ಆತ್ಮವನ್ನು ಹೊರತರುವುದು.** ಆಗ ದೇಹ ಮಾತ್ರ ಉಳಿದು ಆತನ ಆತ್ಮವು ಮಾತ್ರ ಆ ಜಾಗಕ್ಕೆ ಯಾವುದೇ ತೊಂದರೆ ಇಲ್ಲದೆ ಬರುತ್ತದೆ. ದೇಹದ ಮೇಲೆ ಬಂದು ಅನ್ನ ನೀರು ತಿಂದು, ತನಗಿಷ್ಟವಾದವರ ಮೇಲೆ ಬಂದು ಒಂದೆರಡು ಮಾತನಾಡಿ, ನಾನು ಈ ಕಾರಣಕ್ಕೆ ಸತ್ತೆ ನನಗೆ ಈ ರೀತಿಯ ತೊಂದರೆ ಇತ್ತು, ನನಗೆ ಇಂತಹವರ ಕಡೆಯಿಂದ ತೊಂದರೆಯಾಗಿತ್ತು ಹಾಗೂ ಮಾಟಲ ಜಾಟಲ ಮಾಡಿಸಿದ್ದರು, ಹೋದವನು ನಾನು ಹೋಗಿದ್ದೇನೆ ಇನ್ನು ನೀವು ಸುಖವಾಗಿರಿ ನಾನು ನನ್ನ ಸಗ್ಗದವರ ಜೊತೆ ಸೇರಿಕೊಂಡು, ನಿಮ್ಮನ್ನು ಕಾಯುತ್ತೇನೆ ಎಂದು ಅಳುತ್ತಾ ಎಲ್ಲರನ್ನೂ ದಿಟ್ಟಿಸಿ ನೋಡುತ್ತ ನಾನು ಬರುತ್ತೇನೆ ಎಂದು ಕೈಹಿಡಿದು ಮಾತನಾಡಿಸುತ್ತ ತನಗೆ ಇಷ್ಟವಾದವರ ಮೇಲೆ ಬಂದು, ತನಗೆ ಇಷ್ಟವಾದ ಎಲ್ಲಾ ತಿಂಡಿ ತಿನಿಸುಗಳನ್ನು ತಿಂದು ಆನಂತರ ಬಂದವರ ಮೈ(ದೇಹವನ್ನು) ಬಿಟ್ಟು ಹೋಗುತ್ತದೆ.

ಕೊನೆಯದಾಗಿ **'ಎಣ್ಣೆ ಬಿಡುವ ಕಾರ್ಯ 'ಎಣ್ಣೆ ಕೈ ಹಿಡಿಸುವುದು'** ಅಂದರೆ ಎಲ್ಲಾ ಕಾರ್ಯ ಮುಗಿದ ನಂತರ ಹರಳೆಣ್ಣೆಯನ್ನು ಒಂದು ಬಟ್ಟಲಿನಲ್ಲಿ ಕತ್ತಿನವರೆಗೆ ತುಂಬ ಹಾಕಿ ಹಸಿ ಗರಿಕೆಯಿಂದ ಲೋಟದಲ್ಲಿರುವ ಎಣ್ಣೆಯನ್ನು ಅದಕ್ಕೆ ಅದ್ದಿ, ಇಷ್ಟ ಇರುವವರು, ಮನೆಯಲ್ಲಿರುವ ಎಲ್ಲರೂ ಬಿಡುತ್ತಾರೆ. ಎಣ್ಣೆಯ ತೊಟ್ಟು ಒಂದಕ್ಕೊಂದು ಹಿಡಿದುಕೊಂಡಾಗ ಸತ್ತ ವ್ಯಕ್ತಿ ಸುಖವಾಗಿ ಸಗ್ಗಕ್ಕೆ ಸೇರಿಕೊಂಡಿದ್ದಾನೆ ಎಂದು ತಿಳಿಯುತ್ತಾರೆ. ಅದಾದ ನಂತರ, ಸಗ್ಗಕ್ಕೆ ಹೋಗಿ ಮನೆಯವರು ಮಾಡಿದ ಎಲ್ಲಾ ಪದಾರ್ಥಗಳನ್ನು ಸಮಾಧಿಯಲ್ಲಿ ಇಟ್ಟು ಪೂಜೆ ಸಲ್ಲಿಸಿ ಕಲ್ಲುಗಳನ್ನು ಗುಡ್ಡೆ ಮಾಡಿ ಗುರುತು ಮಾಡಿ ಮತ್ತೆ ಮನೆಗೆ ಬರುತ್ತಾರೆ. ಕೊನೆಯದಾಗಿ ಕಾರ್ಯ ಮಾಡಿದ ಮನೆಯವರು ಸಮುದಾಯದವರ ಸಹಾಯ ಪಡೆದು ಊಟೋಪಚಾರಗಳನ್ನು ಮಾಡಿರುತ್ತಾರೆ. ಜಿನ ಮಾಡಲಿಕ್ಕೆ ಬಂದ ಎಲ್ಲರೂ ಊಟ ಮಾಡಿಕೊಂಡು ತಮ್ಮ ತಮ್ಮ ಪೋಡು, ಕಾಲೋನಿಗೆ ಹೊರಡುತ್ತಾರೆ. ಅಥವಾ ಕೆಲವರು ತಮ್ಮ ತಮ್ಮ ಸಂಬಂಧಿಕರ ಮನೆಯಲ್ಲಿ ಸ್ವಲ್ಪ ದಿನ, ೧ ವಾರದ ತನಕವೂ ಉಳಿದು, ನಂತರ ತಮ್ಮ ಪೋಡಿಗೆ ಹೊರಡುತ್ತಾರೆ.

ಈ ಎಲ್ಲಾ ಕಾರ್ಯಗಳು ಹಿಂದೆ ಕಾಡಿನೊಳಗಡೆಯೇ ನಡೆಯುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಅಂದರೆ ೧೯೭೨ರ ವನ್ಯಜೀವಿ ಸಂರಕ್ಷಣಾ ಕಾಯ್ದೆಯ ತಿದ್ದುಪಡಿಯಿಂದ ವಲಸೆ ಬಂದ ಸೋಲಿಗರು ಅಲ್ಲಲ್ಲಿ ತಮ್ಮ ಸಗ್ಗ ಮಾಡಿಕೊಂಡು ಹೊಲದ ಮಧ್ಯ ಹಾಗು ಕಾಡಿನ ಅಂಚಿನಲ್ಲಿ ಶವ ಸಂಸ್ಕಾರ ಮಾಡುತ್ತಾರೆ. ಕೆಲವು ಕಡೆ ಇನ್ನೂ ಕಾಡಿನ ಒಳಗೆ ಈ ರೀತಿಯ ಶವಸಂಸ್ಕಾರ ಕಾರ್ಯ ನಡೆಯುತ್ತದೆ. ಬುರುಡೆ ಕರೆಯುವ ಆಚರಣೆಯು ಈಗಲೂ ಪ್ರಚಲಿತದಲ್ಲಿದೆ. ಆದರೆ ಕಾಡಿನಿಂದ ಹೊರಬಂದ ಹೊರ ಸಮಾಜದ ವಾತಾವರಣಕ್ಕೆ ಹೊಂದಿಕೊಂಡಂತೆ ಇರುವ ಯುವ ಪೀಳಿಗೆಯು ಇಂತಹ ಆಚರಣೆಗಳಲ್ಲಿ, ಅಭ್ಯಾಸಗಳಲ್ಲಿ ತೊಡಗಿಸಿಕೊಳ್ಳುವುದು ಸ್ವಲ್ಪ ಕಡಿಮೆ ಎಂದೇ ಹೇಳಬಹುದು. ಹಿಂದೆ ಇಂತಹ ಆಚರಣೆಗಳು ಎರಡು ಮೂರು ದಿನಗಳ ಕಾಲ ನಡೆಯುತ್ತಿತ್ತು. ಆದರೆ ಇತ್ತೀಚೆಗೆ ಇಂತಹ ಆಚರಣೆಯು ಕೇವಲ ಒಂದೇ ದಿನದಲ್ಲಿ ಮುಗಿಯುತ್ತದೆ. ಕಾರಣ ಪೋಡು ಮತ್ತು ಕಾಲೋನಿಗಳಲ್ಲಿ ಕುಡಿದು ಗಲಾಟೆ ಮಾಡುತ್ತಾರೆ, ಕೆಲವೊಂದು ಸಲ ಬುರುಡೆ ಕರೆಯುವವರು ಬೇರೆ ಊರಿನಿಂದ ಬಂದಿರುತ್ತಾರೆ, ಅವರು ಬೇಗ ತಮ್ಮ ಊರಿಗೆ ಹೋಗಬೇಕಾಗಿರುತ್ತದೆ. ಹೀಗೆ ಇನ್ನೂ ಹಲವಾರು ಕಾರಣಗಳಿಂದ ಇತ್ತೀಚೆಗೆ ಬುರುಡೆ ಸೋಲಿಗರಲ್ಲಿ ಇಂತಹ ಆಚರಣೆಯನ್ನು ಕೇವಲ ಒಂದೇ ದಿನದಲ್ಲಿ ಮಾಡಿ ಮುಗಿಸುತ್ತಾರೆ.

ಬುರುಡೆ ಕರೆಯುವಾಗ **ಗಾಂವ್ ಸೀಳುವುದು** ಇಲ್ಲಿ ಮುಖ್ಯವಾಗಿರುತ್ತದೆ. ಈ ಕಾರ್ಯದಲ್ಲಿ ತಮ್ಮಡಿಯು ದೇವರನ್ನು ತನ್ನ ಮೈಮೇಲೆ ಆವಾಹನೆ ಮಾಡಿಕೊಂಡು **ಕೋಳಿಯನ್ನು ತನ್ನ ಬಾಯಿಂದ ಕಚ್ಚಿ ರಕ್ತವನ್ನು ಕುಡಿದು** ಆ ಕೋಳಿಯನ್ನು ಬೀಸಾಡುತ್ತಾನೆ. ಆಚರಣೆಯ ಪದ್ಧತಿಯಲ್ಲಿ ಪದೇ ಪದೇ ಈ ರೀತಿಯಾಗಿ ಮಾಡುವುದರಿಂದ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರಬಹುದು ಎನ್ನುವುದು ನನ್ನ ಅಭಿಪ್ರಾಯ. ಇದರಿಂದ ಏನೇ ತೊಂದರೆ ಆದರೂ ಅವರು ಇದು ದೇವರ ಕೆಲಸ, ನಮ್ಮಿಂದ ಯಾವುದೂ ಇಲ್ಲ ಎಂದು ತಿಳಿದು ಈ ರೀತಿಯಾಗಿ ಯಾರಿಗಾದರೂ ಅನಾರೋಗ್ಯ ಉಂಟಾದಾಗ ಆಸ್ಪತ್ರೆಗೆ ತೋರಿಸದೆ ಹೆಚ್ಚು ಜನ ಮನೆಯಲ್ಲಿಯೇ ಉಳಿಯುತ್ತಾರೆ.

- ನಾಲಿಗೆಯ ಮೇಲೆ **ಕರ್ಪೂರವನ್ನು ಇಟ್ಟುಕೊಂಡು** ಪೂಜೆ ಮಾಡುವ ಮೂಲಕ **ಶೌರ್ಯವನ್ನು ಆವೇಶದ ಮೂಲಕ ಮಾಡುತ್ತಾರೆ:** ಈ ಪದ್ಧತಿಯ ಆಚರಣೆಯಿಂದ ನಾಲಿಗೆಯು ಸುಟ್ಟು ಅದರಿಂದ

ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ. ಇದನ್ನು ತಮ್ಮಡಿಯವರು ಗಮನಕ್ಕೆ ತೆಗೆದುಕೊಳ್ಳದೆ ಪದೇ ಪದೇ ಈ ರೀತಿಯ ಆಚರಣೆಯಲ್ಲಿ ತೊಡಗುತ್ತಾರೆ.

▪ ಗಾಳಿಯನ್ನು ಮೈಮೇಲೆ ಆವಾಹನೆ ಮಾಡಿಕೊಂಡಾಗ **ಗಾಂಜಾ, ಭಂಗಿ, ಬೀಡಿ ಇತ್ಯಾದಿ ಧೂಮಪಾನಗಳನ್ನು ಎಲ್ಲರ ಸಮ್ಮುಖದಲ್ಲಿಯೇ ಸೇದುತ್ತಾರೆ. ಇದರಿಂದ ಅಲ್ಲಿ ಯುವ ಪೀಳಿಗೆಯವರು ಇದನ್ನು ನೋಡುವ ಮೂಲಕ ಮಾಡುವ, ಕಲಿಯುವ ಕೆಲಸ ಹೆಚ್ಚು ನಡೆಯುತ್ತದೆ.** ಅಲ್ಲದೆ ಮುಖ್ಯವಾಗಿ ತಮ್ಮಡಿಯು ಪದೇ ಪದೇ ಈ ರೀತಿಯ ಆಚರಣೆಯಲ್ಲಿ ತೊಡಗುವುದರಿಂದ ಅವರ ಆರೋಗ್ಯದ ಮೇಲೂ ಕೆಟ್ಟ ಪರಿಣಾಮ ಬೀರುತ್ತದೆ.

ಹೀಗೆ ಕೆಲವು ಆಚರಣೆಗಳನ್ನು ಬುರುಡೆ ಸೋಲಿಗರು ಮಾಡುವಾಗ ಬಹಳ ಎಚ್ಚರಿಕೆಯಿಂದ, ಆರೋಗ್ಯದ ದೃಷ್ಟಿಯಿಂದ ಇಂತಹ ಕೆಲವು ಆಚರಣೆಗಳನ್ನು ಬಿಟ್ಟು ಉಳಿದ ತಮ್ಮ ಆಚರಣಾ ಪದ್ಧತಿಗಳನ್ನು ಮುಂದುವರಿಸುವುದು ಮುಖ್ಯವಾಗಿರುತ್ತದೆ.

### ಸಗ್ಗದ ಮನೆಯ ಕಲ್ಪನೆ

ಸೋಲಿಗರಿಗೆ ಸಗ್ಗದ ಮನೆಯು ಬಹಳ ಮಹತ್ವವಾದುದ್ದು. ತಮ್ಮ ಸಮುದಾಯದಲ್ಲಿ ಮರಣ ಹೊಂದಿದ ಪ್ರತಿಯೊಬ್ಬರಿಗೂ ಇನ್ನೊಂದು ಮನೆ ಇರುತ್ತದೆ. ಅದುವೇ, 'ಸಗ್ಗದ ಮನೆ' ಅಂದರೆ, ಆಯಾಯ ಕುಟುಂಬ, ಕುಲಕ್ಕೆ ಸಂಬಂಧಿಸಿದಂತೆ ಅನಾದಿ ಕಾಲದಿಂದಲೂ ಕಾಡಿನಲ್ಲಿ ತಮ್ಮ ಮನೆಯಲ್ಲಿ ಮರಣ ಹೊಂದಿದ ವ್ಯಕ್ತಿಗಳನ್ನು ಹೂಳಲು, ಮಣ್ಣು ಮಾಡಲು ಶುದ್ಧವಾದ ಜಾಗ ಬೇಕು ಈ ಜಾಗವನ್ನು ಸೋಲಿಗರು ಗುರುತು ಮಾಡಿಕೊಂಡಿರುತ್ತಾರೆ. ಆಯಾ ಕುಲದವರು ಗುರುತು ಮಾಡಿಕೊಂಡ ಸ್ಥಳದಲ್ಲಿಯೇ ಅವರ ಸತ್ತ ವ್ಯಕ್ತಿಯ ಶವವನ್ನು ಆ ಜಾಗದಲ್ಲಿ ಶವ ಸಂಸ್ಕಾರವನ್ನು ಮಾಡುತ್ತಾರೆ. ಬೇರೆ ಕಡೆಗೆ ಎಲ್ಲಿಯೂ ಹೋಗುವ ಹಾಗೆ ಇಲ್ಲ. ಆದ್ದರಿಂದ ಸೋಲಿಗ ಸಮುದಾಯದಲ್ಲಿ ಮರಣ ಹೊಂದಿದವರನ್ನು ಸಗ್ಗದ ಮನೆಗೆ ಕಳುಹಿಸುತ್ತಾರೆ. ಇದುವೇ ಸೋಲಿಗರ ಸಗ್ಗದ ಮನೆ, ಆ ಮನೆಯಲ್ಲಿ ಇಲ್ಲಿ ನಾವು ಹೇಗಿರುತ್ತೇವೆ ಹಾಗೆಯೇ ಇರುತ್ತಾರೆ ಎಂಬುದು ಸೋಲಿಗರ ನಂಬಿಕೆ. ಆದುದರಿಂದಲೇ ಸೋಲಿಗರು ಸತ್ತ ವ್ಯಕ್ತಿಯ ಬಗ್ಗೆ ಹೆಚ್ಚು ಕೊರಗುವುದಿಲ್ಲ ಮತ್ತು ಯೋಚನೆ ಮಾಡುವುದಿಲ್ಲ. ಸೋಲಿಗರು ತಮ್ಮದೇ ಆದ ಸಾಮುದಾಯಿಕ, ಸಾಂಸ್ಕೃತಿಕ, ಸಾಮಾಜಿಕ, ಪ್ರಾಕೃತಿಕವಾಗಿ, ಮಾನಸಿಕವಾಗಿ ಹೀಗೆ ಹಲವಾರು ಅಂಶಗಳ ಜೊತೆ-ಜೊತೆಗೆ ಬದುಕುತ್ತ ಆತ್ಮ, ದೇವರುಗಳು, ಪ್ರಕೃತಿ, ಇವರುಗಳ ಸಹಬಾಳ್ವೆಯಿಂದ ಬದುಕುತ್ತಾರೆ. ಈ ರೀತಿಯಲ್ಲಿ ಸೋಲಿಗರು ನಂಬಿಕೆಯನ್ನಿಟ್ಟು ಸರಳವಾಗಿ ಬದುಕುವುದನ್ನು ರೂಢಿಸಿಕೊಂಡಿದ್ದಾರೆ.

ನಮಗೆ ಮನೆ ಇರುವ ಹಾಗೆ ಸತ್ತವರಿಗೂ 'ಸಗ್ಗದ' ಮನೆ ಇದೆ ಎಂಬ ನಂಬಿಕೆ. ಒಂದೊಂದು ಕುಟುಂಬದವರೂ ಸಹ ಒಂದೊಂದು ಸಗ್ಗದ ಮನೆಯಲ್ಲಿ ಅವರ ಜೊತೆಗೆ ಇರುತ್ತಾರೆ ಎಂಬ ನಂಬಿಕೆ. ನಮಗೇನಾದರೂ ಕಷ್ಟ, ತೊಂದರೆ, ಸಭೆ, ಸಮಾರಂಭ ಒಳ್ಳೆಯ ಕಾರ್ಯ ಹೀಗೆ ಸೋಲಿಗರು ಏನೇ ಕೆಲಸ ಕಾರ್ಯ ಮಾಡುವಾಗಲೂ ಮೊದಲು ದೇವರನ್ನು ಕೇಳುವ ಪೂಜಿಸುವ ರೀತಿಯಲ್ಲಿಯೇ ಸತ್ತಿರುವ ಹಿರಿಯರನ್ನು ಸಗ್ಗದ ಹಿರಿಯ ಮನೆಯವರನ್ನು ಕರೆದು ಕೇಳಿ ಆ ನಂತರ ಕಾರ್ಯ ಮಾಡುತ್ತಾರೆ. ಸೋಲಿಗರಿಗೆ ಕುಟುಂಬದಲ್ಲಿ ಏನಾದರೂ ಕೆಟ್ಟದಾದರೂ, ತೊಂದರೆಗಳಾದರೂ

ಸಹ ಸಗ್ಗದವರನ್ನು ಕರೆದು 'ನಿಮಗೆ ಮೆಣಸಿನಕಾಯಿಯ ಬೆಂಕಿಯ ಹೊಗೆ ಕೊಡುತ್ತೇವೆ' ಧೂಪ, ದೀಪ ಮಾಡುವುದಿಲ್ಲ. 'ನೀವು ಕಣ್‌ಮುಚ್ಚಿಕೊಂಡಿದ್ದೀರಾ' ನಮ್ಮ ಕಷ್ಟ–ನೋವು ನಿಮಗೆ ಕಾಣಿಸುವುದಿಲ್ವಾ ಎಂದು ಬೈಯುತ್ತಾರೆ. ಅದರ ಹಕ್ಕನ್ನೂ ಸಹ ಸೋಲಿಗರು ಹೊಂದಿರುತ್ತಾರೆ. ಭಯ, ಭಕ್ತಿಯಿಂದ ಸತ್ತವರಿಗೆ ಎಡೆ ಇಟ್ಟು ಸಗ್ಗಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಈ ರೀತಿಯ ಆಚರಣೆ ಮಾಡುವುದರಿಂದ, ಸೋಲಿಗರಲ್ಲಿ **ಮಾನಸಿಕವಾಗಿ, ದೈಹಿಕವಾಗಿ, ಸಾಮಾಜಿಕವಾಗಿ** ತಮ್ಮಲ್ಲಿಯೇ ಒಂದು ಒಳ್ಳೆಯ ಪರಿಣಾಮ ಬೀರುತ್ತದೆ. ನಮ್ಮ ಮನೆಯವರನ್ನು ಸಗ್ಗದ ಮನೆಗೆ ಬಿಟ್ಟು ಬಂದಿದ್ದೇವೆ ಎಂಬ ಒಂದು ನಂಬಿಕೆ ಅವರಿಗೆ ಸಮಾಧಾನ ತರುತ್ತದೆ.

ಕೆಲವು ಬಾರಿ ಬೇರೆ ಊರು ಸ್ಥಳಗಳಲ್ಲಿ ಕೆಲಸಕ್ಕೆಂದು ಹೋಗಿ, ಇನ್ನು ಆಯಸ್ಸು ಮುಗಿಯದೇ ಸತ್ತಿರುವ ವ್ಯಕ್ತಿಗಳು, ಬುರುಡೆ ಕರೆದು ಮಾಡಿದರೂ ಸಗ್ಗದ ಮನೆಗೆ ಬರುವುದಿಲ್ಲ. ಅವರಿಗೆ ಅನ್ನ ನೀರು ಹಾಕಲು ಕೆಲವು ಅಡತಡೆಗಳು ಎದುರಾಗುತ್ತವೆ. ಅಂತಹ ಸಮಯದಲ್ಲಿ, ಸತ್ತ ವ್ಯಕ್ತಿಯು **'ಪರ್‌ಗಾಳಿ'ಯಾಗಿಯೇ(ಪಿಶಾಚಿ)** ಹೊರಗಡೆ ಸುತ್ತುತ್ತಿರುತ್ತಾರೆ ಎಂಬ ನಂಬಿಕೆ ಇವರದು. ಮುಂದಿನ ದಿನಗಳಲ್ಲಿ ಆ ವ್ಯಕ್ತಿಗೆ ಕೆಲವು ಕಟ್ಟಳೆಗಳನ್ನು ಮಾಡಿ ಅನ್ನ–ನೀರು ಹಾಕಿ ಸಗ್ಗಕ್ಕೆ ಸೇರಿಸುತ್ತಾರೆ. ಇಲ್ಲವಾದರೆ ಅವರು ಪರುಗಾಳಿಯಾಗಿ ಅಲ್ಲಲ್ಲಿ ಸುತ್ತಾಡುತ್ತಾರೆ. ಅಂತಹವರನ್ನೂ ಸಗ್ಗದವರು ತಮ್ಮ ಮನೆಗೆ ಸೇರಿಸುವುದಿಲ್ಲ ಎಂಬ ನಂಬಿಕೆಯೊಡನೆ ಇಂದಿಗೂ ಸಹ ಬುರುಡೆ ಸೋಲಿಗರು ನಂಬುತ್ತಾರೆ. ಪರಿಣಾಮವಾಗಿ ಸೋಲಿಗರಿಗೆ ಮರಣ ಹೊಂದಿದವರಿಗೆ ಅವರದೇ ಆದ ಜಾಗ, ಜಮ್ಮ, ಸ್ಥಳದ ಕಲ್ಪನೆ ಇದೆ. ಇವುಗಳು ಕಾಡಿನ ಒಳಗೆ ಇರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಇವರ ಮರಣದ ಆಚರಣೆಯನ್ನು ಹಿಂದೆ ಮಾಡುವ ರೀತಿಯಲ್ಲಿ ಸ್ವತಂತ್ರವಾಗಿ ಮಾಡುವುದಕ್ಕೆ ಆಗುವುದಿಲ್ಲ. ಕಾರಣ ಅರಣ್ಯ ಇಲಾಖೆಯವರ ನಿರ್ಬಂಧ ಮತ್ತು ಒಂದು ವೇಳೆ ಕಾಡಿಗೆ ಹೋಗಿ ಈ ರೀತಿಯ ಆಚರಣೆ ಮಾಡಿದರೂ ಸಹ ಹಿಂದೆ ಇದ್ದಂತಹ ಸ್ವಾತಂತ್ರ್ಯ ಸೋಲಿಗರಲ್ಲಿ ಈಗ ಕಂಡುಬರುವುದಿಲ್ಲ. ಮತ್ತೊಂದು ಕಡೆ ಸೋಲಿಗರ ಸಗ್ಗದ ಮನೆಯನ್ನು ಹಲವರು ತಮ್ಮ ಜಮೀನುಗಳಾಗಿ ಮಾಡಿಕೊಂಡಿದ್ದಾರೆ. ಇದರ ಪರಿಣಾಮವಾಗಿ ಸೋಲಿಗರು ಶವಸಂಸ್ಕಾರ ಮಾಡಲು ಜಾಗ ಇಲ್ಲದಂತಾಗಿ, ಕೆಲವರು ತಮ್ಮ ಹೊಲದಲ್ಲಿಯೇ ಮಾಡಿಕೊಳ್ಳುತ್ತಿದ್ದಾರೆ. ಹಿಂದೆ ಸತ್ತ ವ್ಯಕ್ತಿಯ ಆತ್ಮ ಅನ್ನ, ನೀರು ತಿನ್ನಲು ಸುಮಾರು ಎರಡು ಮೂರು, ನಾಲ್ಕು ದಿನಗಳಾದರೂ ಬರುತ್ತಿರಲಿಲ್ಲ. ಅದು ಬರುವವರೆಗೆ ಕಾಯಬೇಕಾಗಿತ್ತು. ಆದರೆ ಇತ್ತೀಚೆಗೆ ಆ ಕಾರ್ಯವನ್ನು ಒಂದೇ ದಿನದಲ್ಲಿ ಮುಗಿಸುತ್ತಾರೆ. ತಮ್ಮಡಿಗಳು, ಬುರುಡೆ ಕರೆಯುವವರು ಸಮುದಾಯದಲ್ಲಿ ಹಿರಿಯರ ಸಂಖ್ಯೆ ಕಡಿಮೆಯಾಗುತ್ತಿದೆ ಹಾಗೂ ಯುವ ಪೀಳಿಗೆಯವರಲ್ಲಿ ಕಲಿಯುವ ಆಸಕ್ತಿಯೂ ಸಹ ಕಡಿಮೆಯಾಗುತ್ತಿದೆ.

ಸೋಲಿಗರಲ್ಲಿ ಹಿಂದೆ, ಯಾರ ಮನೆಯಲ್ಲಿ ಹುಷಾರಿಲ್ಲ, ಏನೋ ತೊಂದರೆಯಾಗಿದೆ ಹಾಗು ಯಾವುದಾದರೂ ಸಹ ಕೆಲಸ ಕಾರ್ಯ ಮಾಡಬೇಕು ಎನ್ನುವಾಗ ಮೊದಲು ಸಗ್ಗದವರು ಆನಂತರ, ದೇವರನ್ನು ಕರೆದು ಕೇಳಿ ಪರಿಹಾರ, ಒಪ್ಪಿಗೆ ಸಲಹೆ ಪಡೆಯುತ್ತಿದ್ದರು. ಆದರೆ ಇವುಗಳಲ್ಲಿ ಇತ್ತೀಚೆಗೆ ಸ್ವಲ್ಪ ಬದಲಾಣೆಯಾಗುತ್ತಿದೆ. ಸೋಲಿಗರಲ್ಲಿ ಹಿಂದೆ ಇದ್ದಂತಹ ಮಾಟ, ಮಂತ್ರ, ಗಾಳಿ, ಗ್ರಹಚಾರ, ದೆವ್ವ, ಗಾಳಿ ಬಿಡಿಸುವುದು ಇತ್ತೀಚೆಗೆ ಕಡಿಮೆಯಾಗುತ್ತಿದೆ. ಈ ರೀತಿ ಮಾಡುವ ಹಿರಿಯರು ಮರಣ ಹೊಂದುತ್ತಿದ್ದಾರೆ. ಬದಲಿಗೆ ಅವರನ್ನು ನೋಡಿ ಅವರಿಂದ ಕಲಿಯುವವರು ಕಡಿಮೆ. ಈ ರೀತಿಯಾಗಿ

ಮಾಡಿದಾಗ ಸೋಲಿಗರು ತಮ್ಮ ಆಚಾರ–ವಿಚಾರ, ವಿಧಿ–ವಿಧಾನಗಳನ್ನು, ನಂಬಿಕೆ, ಒಳ್ಳೆಯ ಆಚರಣೆಯನ್ನು ಬೆಳೆಸುತ್ತ, ಮೂಢನಂಬಿಕೆ ಕೆಲವು ಅನಿಷ್ಟ ಪದ್ಧತಿಗಳನ್ನು ಬಿಟ್ಟು ಹೋಗುವುದರಿಂದ ಸಮುದಾಯವು ಸುಖಕರವಾಗಿ ಮುಂದೆ ಸಾಗಲು ಕಾರಣೀಭೂತವಾಗುತ್ತದೆ.

**೩.೩. ಸೋಲಿಗರು ಬುಡಕಟ್ಟಿನ ಕುಲಗಳು**

ಇತರೆ ಸಮುದಾಯಗಳಲ್ಲಿ ಕಂಡುಬರುವಂತೆಯೇ ಸೋಲಿಗರಲ್ಲಿ ಕುಲ ಪದ್ಧತಿ, ಕುಲದ ವಿಂಗಡಣೆ. ಇದೆ. 'ಕುಲದಲ್ಲಿ ಬಡವನಾದರೂ, ಕುಲದಲ್ಲಿ ಬಡವನೇ...? ಎಂದು ಕನ್ನಡದಲ್ಲಿ ಒಂದು ಗಾದೆ ಇರುವಂತೆ ಸೋಲಿಗರು ಕುಲವನ್ನು ಬಿಟ್ಟು ಬದುಕುವುದು ಸಾಧ್ಯವಿಲ್ಲ. ಸೋಲಿಗರು ಕುಟುಂಬದಲ್ಲಿ ಹೆದರದವರು ಕುಲಕ್ಕೆ ಹೆದರುತ್ತಾರೆ. ಕುಲಕ್ಕೆ ಅಂಜಿ ಅದಕ್ಕೆ ತಕ್ಕಂತೆ ತನ್ನ ಜೀವನವನ್ನು ರೂಪಿಸಿಕೊಳ್ಳುತ್ತಾನೆ. 'ಕುಲ' ಅದರಲ್ಲಿ ವ್ಯಕ್ತಿಗಿಂತ ಹೇಗೆ ಮುಖ್ಯವಾಗಿ ನಿಲ್ಲುತ್ತದೆ ಎಂಬುದು ಸೋಲಿಗರ ಪುರಾಣಗಳಲ್ಲಿಯೇ ವ್ಯಕ್ತವಾಗುತ್ತದೆ. ನೀಲಯ್ಯ ಮತ್ತು ಮಡದಿ ಸಂಕಮ್ಮನ ಕಥೆಯಲ್ಲಿ ನೋಡಬಹುದಾಗಿದೆ. ಕುಂಬುಡ್ಕಿ ಬೆಟ್ಟದಲ್ಲಿ ನೀಲಯ್ಯ ತನ್ನ ಮಡದಿ ಸಂಕಮ್ಮನನ್ನೇ ಒಬ್ಬಂಟಿಯಾಗಿ ಬಿಡಲಾರದೇ ಒಲ್ಲದ ಮನಸ್ಸಿನಿಂದ ಸಂಕಮ್ಮನನ್ನು ಕಾಡಿನಲ್ಲಿಯೇ ಬಿಟ್ಟು ಕುಲದವರ ಜೊತೆಯಲ್ಲಿ ೬ ತಿಂಗಳುಗಳ ಕಾಲ ಕುಲದ ಪದ್ಧತಿಯಂತೆ ಹೆಜ್ಜೇನು ಬೇಟೆಗೆ ಹೊರಡುತ್ತಾನೆ ಎಂಬುದು ಸೋಲಿಗರ ಮೌಖಿಕ ಸಾಹಿತ್ಯದಲ್ಲಿಯೇ 'ನೀಲಯ್ಯ ಮಡದಿ ಸಂಕಮ್ಮ ಹಾಗು ಮನೆ ದೇವರಾದ ಮಹದೇಶ್ವರ' ಕಥೆಯಲ್ಲಿ ವ್ಯಕ್ತವಾಗಿದೆ. ಸೋಲಿಗರಲ್ಲಿ ಯಾವುದನ್ನೂ ಲೆಕ್ಕಿಸದವನು ಕುಲವನ್ನೂ, ಕುಲ ಪಂಚಾಯಿತಿಯನ್ನೂ ಲೆಕ್ಕಿಸುತ್ತಾನೆ. ಸೋಲಿಗರಲ್ಲಿ ಯಾವುದೇ ಧಾರ್ಮಿಕ ವಿಧಿಯಾಗಲಿ, ಹುಟ್ಟಿನಿಂದ ಸಾಯುವವರೆಗೆ ನಡೆಯುವ ಆಚರಣೆಯು ಕುಲವನ್ನು ಪ್ರತಿನಿಧಿಸುತ್ತ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ಸೋಲಿಗರಲ್ಲಿ ಇರುವ ಈ ಬಗೆಯ ಕುಲದ ವ್ಯವಸ್ಥೆ ಸಮಾಜ, ಸಮುದಾಯದಲ್ಲಿನ ರೀತಿ ನೀತಿಗಳನ್ನು ಸಮುದಾಯದ ನಿಯಮಗಳಿಗನುಸಾರವಾಗಿ ಕಲಿಸುವ, ಅವರಿಗೆ ಬಂಧುತ್ವವನ್ನು ಗುರುತಿಸಿಕೊಳ್ಳುವ ಸಲುವಾಗಿಯೂ, ನೆಂಟಸ್ತಿಕೆ ಬೆಳೆಸುವ ಸಲುವಾಗಿಯೂ ಹಾಗೂ ವೈವಾಹಿಕ ಸಂಬಂಧವನ್ನು ಬೆಳೆಸುವ ಸಲುವಾಗಿಯೂ ನಾವು ನಮ್ಮ ಬಂಧುಗಳು, ನಮ್ಮ ಸಮುದಾಯ ಬೆಳೆಸುವ ಸಲುವಾಗಿಯೂ ಅವಶ್ಯಕತೆಗಳಿಗೆ ಕಾರಣವಾಗಿದೆ ಎಂದು ಹೇಳಬಹುದು.

ಎಸ್ ಜಿ ಮೊರಾಬ್ ಅವರು ತಮ್ಮ ಪುಸ್ತಕವಾದ "ದಿ ಸೋಲಿಗಾ ಆಫ್ ಬಿಳಿಗಿರಿರಂಗನ ಹಿಲ್ಸ್"ನಲ್ಲಿ ೧೯೭೭ರಲ್ಲಿ ಸೋಲಿಗರ ಕುಲದ ಬಗ್ಗೆ ಈ ರೀತಿಯಾಗಿ ತಿಳಿಸಿದ್ದಾರೆ, "The soliga are known different parts by the number of the clans they have . For example, there are the Soligs of five –clans as in the Biligirirangana Hills, and Sevan Clans(Ayyapan 1948; Luiz 1963; Subbayya 1965). Thurston (1909) sayas that the Uralis and Soliga the desendants of Karayya Shivacharis makes, and sivacharis(Lingayats) and diet Mahadeswara. But aiyappan makes the distinction between the urali and the soliga thus: "Uralis clains to be children of the billayya and to have sevan kulams(while the sholagas, the children of karayya, are of five kulams). They call themselves Urlis or urulas"[17] (ibid: 129)" ಇವರಲ್ಲಿ ಐದು ಕುಲದ ಸೋಲಿಗರು ಮತ್ತು ಏಳು ಕುಲದ ಸೋಲಿಗರ ಬಗ್ಗೆ ಇರುವ ಮಾಹಿತಿಯನ್ನು ಕಾಣಬಹುದಾಗಿದೆ.

In days of year there lived two brothers in Geddaha Hills, by name Karayaya and Billaya of Mahadheswara the uralis and Soligas are descended from Karayan and Shivcharis (Lingayath) from Mahadeswara/P.No.381- The soligas are said to call themselves men of five kulams or exogamous septs amongst which are Chalikiri, Teneru, Belleri, Surya (the sun) and Aleru, by members of the twelve kumlam class.'[7]( Rangachari K, Edgar Thurston: 1909:379).

ಕಾಳೇನಹಳ್ಳಿ ಚಂದ್ರು ಅವರು ಸೋಲಿಗರ ಕುಲದ ಬಗ್ಗೆ ಈ ರೀತಿಯಲ್ಲಿ ತಿಳಿಸಿದ್ದಾರೆ. ಅವುಗಳೆಂದರೆ ಸೋಲಿಗರಲ್ಲಿ ಐದು ಕುಲದ ಸೋಲಿಗರು ಮತ್ತು ಏಳು ಕುಲದ ಸೋಲಿಗರಿದ್ದು, ಇವರಲ್ಲಿ ಐದು ಕುಲದವರೆಂದರೆ ಹೊಂಗೆಲರ ಕುಲ, ಆಲೂರು ಕುಲ, ಬೆಲ್ಲರ ಕುಲ, ಸೂರ್ಯ ಕುಲ, ತನೇರು ಕುಲ. ಈ ಐದು ಕುಲದವರ ಜೊತೆಯಲ್ಲಿ ಜೇನು ಕುಲ, ಕುಂಬಳ ಕುಲ.

ಇವುಗಳ ಜೊತೆಯಲ್ಲಿ ಏಳು ಕುಲದವರು ಮತ್ತು ಹದಿನಾಲ್ಕು ಕುಲದವರು ತಾವು ನಿರ್ದಿಷ್ಟ ಕುಲದವರಿಗೆ ಸೇರಿದವರ ಹಿನ್ನೆಲೆಯ ಐತಿಹ್ಯವನ್ನು ಕುಲ ಕಥೆಯಾಗಿ ಹೇಳಿಕೊಳ್ಳುತ್ತಾರೆ ಎಂದು ಹೇಳಿದ್ದಾರೆ. ಆದರೆ ಸುನಂದಮ್ಮ ಅವರು ತಮ್ಮ ಅಧ್ಯಯನದಲ್ಲಿ ಸೋಲಿಗರ ಕುಲದಲ್ಲಿ ಐದು ಕುಲ ಸೋಲಿಗರು ಏಳು ಕುಲದ ಸೋಲಿಗರು ಮತ್ತು ಹದಿನಾಲ್ಕು ಕುಲದ ಸೋಲಿಗರ ಬಗ್ಗೆ ತಿಳಿಸಿದ್ದಾರೆ. ಅದರಲ್ಲಿ ಐದು ಮತ್ತು ಏಳು ಕುಲದ ಹೆಸರುಗಳನ್ನು ಬರೆದಿದ್ದಾರೆ. ಆದರೆ, ಹದಿನಾಲ್ಕು ಕುಲದವರ ಹೆಸರುಗಳನ್ನು ತಿಳಿಸಿರುವುದಿಲ್ಲ.(ಸೋಲಿಗರ ಸಂಸ್ಕೃತಿ, ೨೧೧೧:೪೬)

ಮಧು ಗುಂಡ್ಲುಪೇಟೆಯವರು ತಮ್ಮ ಕರ್ನಾಟಕ ಬುಡಕಟ್ಟು ಜನಾಂಗಗಳ ಅಭಿವೃದ್ಧಿ ಎಂಬ ಪುಸ್ತಕದಲ್ಲಿ ಸೋಲಿಗರಲ್ಲಿ ಐದು ಕುಲದವರು ಮತ್ತು ಏಳು ಕುಲದವರ ಹೆಸರು ಮತ್ತು ಅವರ ಬಗ್ಗೆ ಇರುವ ಮಾಹಿತಿಯನ್ನು ತಿಳಿಸಿದ್ದಾರೆ ಹಾಗು ಚಂದ್ರಪ್ಪನವರು ಹೇಳಿರುವ(೧೯೯೦:೬೦) ಏಳು ಕುಲದವರು ಮತ್ತು ಹದಿನಾಲ್ಕು ಕುಲದವರು ತಾವು ನಿರ್ದಿಷ್ಟ ಕುಲಕ್ಕೆ ಸೇರಿದವರು ಎನ್ನುವ ಮಾಹಿತಿಯನ್ನು ತಿಳಿಸಿದ್ದಾರೆ.(ಮಧು ಗುಂಡ್ಲುಪೇಟೆ:೨೦೦೨:೨೭)

ಮೇತ್ರಿ ಕೆ ಎಂ ಅವರು ತಮ್ಮ ಬುಡಕಟ್ಟು ಕುಲಕಸುಬು ಪುಸ್ತಕದಲ್ಲಿ ಸೋಲಿಗರ ಕುಲಗಳ ಬಗ್ಗೆ ಈ ರೀತಿಯಲ್ಲಿ ತಿಳಿಸಿದ್ದಾರೆ. ಸೋಲಿಗರಲ್ಲಿ ೧ ಚಲಕಿರಿ, ೨ ಥೇಣ್ಣೆರು, ೩ ಬೆಳ್ಳೇರಿ, ೪ ಸೂರ್ಯ ಮತ್ತು ೫ ಆಲೇರು ಎಂದು ಐದು ಕುಲಗಳಿವೆ(ಮೇತ್ರಿ ಕೆ ಎಂ:೨೦೦೨:೨೨೧).

ಮೇತ್ರಿ ಕೆ ಎಂ ಅವರು ತಮ್ಮ ಸೂಕ್ಷ್ಮ ಆದಿವಾಸಿಗಳು ಎಂಬ ಪುಸ್ತಕದಲ್ಲಿ ಸೋಲಿಗರ ಕುಲಗಳ ಬಗ್ಗೆ ಈ ರೀತಿಯಲ್ಲಿ ತಿಳಿಸಿದ್ದಾರೆ. **೫ ಕುಲದ ಸೋಲಿಗರು**–ಸಳಕರ ಕುಲ/ಹೊಂಗೆಲರ ಕುಲ, ಆಲೂರು ಕುಲ, ಬೆಲ್ಲರ ಕುಲ, ಸೂರೂರು ಕುಲ, ತೇನೇರು ಕುಲ. **ಈ ೫ ಕುಲದ ಜೊತೆಗೆ** ಜೇನು ಕುಲ, ಕುಂಬಳ ಕುಲ."[೮]

ಚಾಮರಾಜನಗರ ಜಿಲ್ಲೆಯಲ್ಲಿ ಕುಲದ ಬಗ್ಗೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ, ಸಾಹಿತ್ಯ ಅಧ್ಯಯನ ಹಾಗೂ ಕ್ಷೇತ್ರಕಾರ್ಯದ ಮೂಲಕ ಹಿರಿಯರು, ಪುರುಷರು ಮತ್ತು ಮಹಿಳೆಯರ ಮೂಲಕ ಪಡೆದ ಮಾಹಿತಿಯ ಪ್ರಕಾರವಾಗಿ ಸೋಲಿಗರಲ್ಲಿ ೫ ಕುಲದ ಸೋಲಿಗರು, ೭ ಕುಲದ

ಸೋಲಿಗರು ಹಾಗೂ ೧೨ ಕುಲದ ಸೋಲಿಗರು ಇದ್ದಾರೆ. ಇವರುಗಳ ಬಗ್ಗೆ ಮಾಹಿತಿಯನ್ನು ಪಡೆದು ಸಂಶೋಧನ ವಿಷಯಕ್ಕೆ ಸಂಬಂಧಿಸಿದಂತೆ ಕುಲಗಳ ಬಗ್ಗೆ ತಿಳಿಯಲಾಗಿದೆ. ಅವುಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

೧. ಹಾಲಾರು ಕುಲ

೨. ಸೂರುರು ಕುಲ

೩. ತೆನೇರು ಕುಲ

೪. ಸಳಕಿರು ಕುಲ

೫. ಬೆಳ್ಳಿರು ಕುಲ

ಇವುಗಳ ಜೊತೆಗೆ ಸೋಲಿಗರ ಕುಲವನ್ನು ಏಳು ಕುಲದವರಿಗೆ ಹೇಳುವಾಗ ಈ ರೀತಿಯಾಗಿದೆ.

೧. ವೆಳ್ಳಗ ಕುಲ

೨. ಸಂಬಾ ಕುಲ

೩. ಕಲ್ಕಟ್ಟಿ ಕುಲ

೪. ಪೋರಿಗರ್ ಕುಲ

೫. ಕೊಡವರ್ ಕುಲ

೬. ಕುಪ್ಪ ಕುಲ

೭. ಕುರುಣಾಗ ಕುಲ

ಇವುಗಳ ಜೊತೆಗೆ ಸೋಲಿಗರ ಕುಲವನ್ನು ಹನ್ನೆರಡು ಕುಲದವರಿಗೆ ಹೇಳುವಾಗ ಈ ರೀತಿಯಾಗಿದೆ.

೧. ಹಾಲಾರು ಕುಲ

೨. ಸೂರುರು ಕುಲ

೩. ತೆನೇರು ಕುಲ

೪. ಸಳಕಿರು ಕುಲ

೫. ಬೆಳ್ಳಿರು ಕುಲ

೬. ಜೇನು ಕುಲ

೭. ಕುಂಬಳ ಕುಲ

೮. ಹೊಂಗೆಲರ ಕುಲ

೯. ಬಳೇರು ಕುಲ

೧೦. ಬೆಳ್ಳಿ ಕುಲ

೧೧. ಸಂಪಿಗೆ ಕುಲ

೧೨. ಹನ್ನೆರಡು ಬಣ್ಣದವರು ಕುಲ

ಇವರಲ್ಲಿ ಹನ್ನೆರಡು ಕುಲದ ಸೋಲಿಗರು ತಮ್ಮ ಕುಲವನ್ನು ಹೀಗೆ ಹೇಳುತ್ತಾರೆ. ಹನ್ನೆರಡು ಬಣ್ಣದ ಸೋಲಿಗರು ಅಂದರೆ, ಬುರುಡೆ ಸೋಲಿಗರು ತಮ್ಮ ಮದುವೆಯ ಕಾರ್ಯದಲ್ಲಿ ಮತ್ತು ಇತರೆ ಆಚರಣೆಯಲ್ಲಿ ಬಾಸಿಂಗ, ಚಪ್ಪರ, ವಾಲಗ, ಹಸಮಣೆ, ನಿಂಗದೀರಪ್ಪ, ತಂಬಡಪ್ಪ, ಕೆಲ್ಸಿ, ಹಗಸರು, ತಮ್ಮಡಿ, ಕಳಸ, ಗುಂಬ, ಗಂಗೆ– ಇವುಗಳನ್ನು ಬುರುಡೆ ಸೋಲಿಗರ ಅಚರಣೆಗಳಲ್ಲಿ ಹನ್ನೆರಡು ಬಣ್ಣಗಳ ಮಹತ್ವವನ್ನು ಕಾಣಬಹುದು.

ಇವುಗಳಲ್ಲಿ ಐದು ಕುಲದ ಸೋಲಿಗರೆಂದರೆ ಮಲೆ ಸೋಲಿಗರು, ಕಾಡು ಸೋಲಿಗರು, ಮತ್ತು ದೇವ ಸೋಲಿಗರು(ದೇವರು ಸೋಲಿಗರು), ಏಳು ಕುಲದ ಸೋಲಿಗರೆಂದರೆ ಊರಾಳಿ ಸೋಲಿಗರು ಹಾಗು ಹನ್ನೆರಡು ಕುಲದ ಸೋಲಿಗರೆಂದರೆ ಬುರುಡೆ ಸೋಲಿಗರು.

ಹಿಂದೆ ಈ ಐದು ಕುಲದವರು ಏಳು ಕುಲದವರ ಮನೆಯಿಂದ ಹೆಣ್ಣು ತರುವುದು, ಕೊಡುವುದನ್ನು ಮಾಡುತ್ತಿರಲಿಲ್ಲ. ಆದರೆ ಒಳಗುಂಪಿನ ಆಧಾರದ ಮೇಲೆ ಸಂಬಂಧ ಬೆಳೆಸುವುದನ್ನು ಕಾಣಬಹುದು. ಆದರೆ "ಒಂದೇ ಕುಲದ ಒಳಗೆ ಕೊಟ್ಟು ತರುವುದು ಇಲ್ಲ. ಏಕೆಂದರೆ ಅವರು ಅಣ್ಣ–ತಂಗಿಯರಾಗುತ್ತಾರೆ. ಆದುದರಿಂದ ಬೇರೆ ಬೇರೆ ಕುಲದ ಒಳಗಿನಿಂದ ಹೆಣ್ಣು–ಗಂಡು ತರಬೇಕು. ಅದು ಸಂಬಂಧ ಕೂಡಿ ಬರುತ್ತದೆ. ಆದರೂ ಸಹ ಕೆಲವು ಸಂದರ್ಭಗಳಲ್ಲಿ ಕೆಲವು ಕಡೆ ಕಡಿಮೆ ಪ್ರಮಾಣದಲ್ಲಿ ಒಂದೇ ಕುಲದ ಒಳಗೆ ಪ್ರೇಮಿಸಿ ವಿವಾಹವಾಗಿರುವುದು ಕಂಡುಬರುತ್ತದೆ. ಹಿಂದೆ ಇದ್ದಂತಹ ಕಟ್ಟುನಿಟ್ಟಿನ ಕುಲದ ವ್ಯವಸ್ಥೆಯು ಇತ್ತೀಚೆಗೆ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗಿದೆ. ಕಾರಣ ಸೋಲಿಗರನ್ನು ಕಾಡಿನಿಂದ ಸ್ಥಳಾಂತರಿಸಿ ಪುನರ್ವಸತಿ ಮಾಡಿರುವುದು ಜೊತೆಗೆ ಹೊರಸಮಾಜದ(ನಾಡವರ) ಸಂಪರ್ಕ ಬೆಳೆಯತೊಡಗಿರುವುದು. ಪ್ರಸ್ತುತ ಕುಲ, ನ್ಯಾಯ ಪಂಚಾಯಿತಿಯ ಜೊತೆಯಲ್ಲಿ ಕಾನೂನು ವ್ಯವಸ್ಥೆಯೂ, ಸೋಲಿಗರ ಪೋಡು, ಕಾಲೋನಿಗಳಲ್ಲಿ ಕಂಡುಬರುತ್ತದೆ.

**ಕೋಷ್ಟಕ: ೩.೩.೧. ಮಲೆ ಸೋಲಿಗರ ಕುಲಗಳಲ್ಲಿರುವ ಪದನಾಮ ಹಾಗೂ ನಿರ್ವಹಿಸುವ ಕೆಲಸಗಳು**

| ಕ್ರಸಂ | ಕುಲ | ಪದನಾಮ | ಕೆಲಸ |
|---|---|---|---|
| ೧. | ಸಳಕಿರು | ಯಜಮಾನ | ಮುಖ್ಯಸ್ಥರು, ಸೋಲಿಗಿತಮ್ಮ ಪುಸುಮಾಲೆಯ ಮುದ್ರೆ ಉಂಗುರಕ್ಕೆ ಹಕ್ಕುದಾರರು, ನ್ಯಾಯದಲ್ಲಿ ತೀರ್ಮಾನ ತಿಳಿಸುವವರು. |
| ೨. | ಹಾಲರುಕುಲ | ದಳವಾಯಿ | ಕೋಲುಕಾರಂತೆ ಇತರೆ ಕೆಲಸ ಮಾಡುವವರು. |
| ೩. | ಬೆಳ್ಳಿರು | ಕೋಲುಕಾರ | ಶಿಸ್ತನ್ನು ಕಾಪಾಡುವ ಅಧಿಕಾರಿ, ಕೊಂಡಿ, ಕೋಲನ್ನು ಕೈಯಲ್ಲಿ ಹಿಡಿದಿರುತ್ತಾನೆ. |
| ೪. | ಸೂರುರು | ಚಲುವಾದಿ | ಯಜಮಾನರಿಗೆ ಸಹಾಯ ಮಾಡುವುದು. |
| ೫. | ತೇನೇರು | ಪಟ್ಟೆಗಾರ | ಇವರು ಪುಸುಮಾಲೆ ಕುಲದವರೆಂದು ಪ್ರಸಿದ್ಧಿ. ನ್ಯಾಯಕ್ಕೆ ದಿನ ಗೊತ್ತು ಮಾಡುವರು. ಪೋಡು, ಕಾಲೋನಿಗಳಲ್ಲಿ ಆಶೀರ್ವಾದ ಹೇಳುವವರು. |

**ಸಳಕಿರು ಕುಲ (ಹೊಂಗೆಲರ ಕುಲ):** ಸಿದ್ಧೇಶ್ವರ ಇವರ ಕುಲದೇವತೆ. ಒಮ್ಮೆ ಈ ಗುಂಪಿನ ಸೋಲಿಗರು ಹೊಂಗೆಯ ಮರವನ್ನು ಒಂದು ಬಂಡೆಯ ಹತ್ತಿರ ಕಡಿಯುತ್ತಿದ್ದಾಗ ಈ ದೇವತೆ ಇರುವುದರ ಅರಿವಾಯಿತು. ಅಂದಿನಿಂದ ಹೊಂಗೆ ಮರವನ್ನು ಕಡಿಯುವುದನ್ನೂ ಹಾಗೂ ಅದನ್ನು ಒಲೆಗೆ ಹಾಕುವುದನ್ನು ಸೋಲಿಗರು ಮಾಡುವುದಿಲ್ಲ.

**ಹಾಲರು ಕುಲ:** ಇವರ ಕುಲದೇವತೆ 'ಮಹದೇಶ್ವರ' ಬಿಳಿರಂಗನ ಬೆಟ್ಟ ಹತ್ತಿರ ಇರುವ ಕನ್ನೇರಿ ಕಾಲೋನಿ ಹತ್ತಿರದಲ್ಲಿರುವ **'ಕ್ಯಾತದೇವರು'** ಈ ಕುಲದೇವತೆಯಾಗಿದೆ.

**ಬೆಳ್ಳಿರು ಕುಲ:** ಇದನ್ನು 'ಬೆಳ್ಳಿಕುಲ' ಎಂದು ಕರೆಯುತ್ತಾರೆ. **'ಪಂದೇಶ್ವರ'** ಎಂಬ ಬೆಟ್ಟದಲ್ಲಿ ನೆಲೆಸಿರುವ ದೇವತೆ ಇವರ 'ಕುಲದೇವತೆ'. ಈ ಬೆಟ್ಟವು ಕೊಯಂಬತ್ತೂರು ಜಿಲ್ಲೆಯ **"ಭಾನಲಿ"** ತಾಲ್ಲೂಕಿನಲ್ಲಿದೆ. ಪಂದೇಶ್ವರ ದೇವತೆಯು ಸೋಲಿಗರನ್ನು ಅವರ ಕುಲದ ಬಗ್ಗೆ ವಿಚಾರಿಸುತ್ತಿದ್ದಾಗ ನಾಡಿನ ಆಚಾರಿಗಳು ಚಿನ್ನಬೆಳ್ಳಿ ಕೆಲಸದಲ್ಲಿ ತೊಡಗಿದ್ದರು. ಆದುದರಿಂದ ಅವರಿಗೆ **'ಬೆಳ್ಳಿ ಕುಲ'** ಎಂದು ಹೆಸರಾಯಿತು.

**ಸೂರುರು ಕುಲ:** ಇವರ ದೇವತೆ 'ಬರಮಸ್ವಾಮಿ'. ಇದು ಕೊಳ್ಳೇಗಾಲ ತಾಲ್ಲೂಕಿನ 'ಮಾತಳ್ಳಿಯಲ್ಲಿದೆ'. ಈ ಸುತ್ತಲಿನ ಜನರಿಗೆ **ಕೈಲಿ ಚೂರಿ** ಹಿಡಿದಿದ್ದರಿಂದ (ಸೋಲಿಗರು) ಈ ಹೆಸರು ಬಂತು ಎಂದು ನಂಬಿಕೆ. ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತ ಈ ಕುಲದ ಸೋಲಿಗರಿದ್ದಾರೆ.

**ತೇನೇರು ಕುಲ:** ಮಹದೇಶ್ವರ ಇವರ ಕುಲದೇವತೆ. ಮಹದೇಶ್ವರರು ಸೋಲಿಗರನ್ನು ಕಾಡಿನಲ್ಲಿ ತಡೆದು ಮಾತನಾಡಿಸುತ್ತಿರುವಾಗ **ರಾಗಿ ತೆನೆಯ** ಹೊರೆಯನ್ನು ತಲೆಯ ಮೇಲೆ ಹೊತ್ತಿದ್ದರು. ಆದುದರಿಂದ ಇವರಿಗೆ ತೆನೆಯವರ ಕುಲ ಎಂದು ಹೆಸರಾಯಿತು.

ಇದೇ ರೀತಿಯಲ್ಲಿ ೭ ಕುಲದವರು ೧೨ ಕುಲದವರು ತಾವು ನಿರ್ದಿಷ್ಟ ಕುಲಕ್ಕೆ ಸೇರಿದವರು ಎಂದು ಹಿನ್ನೆಲೆಯ ಕುಲದ ಕಥೆಯನ್ನು ಹೇಳುತ್ತಾರೆ. ಈ ಕುಲ ಪದ್ಧತಿಯು ಸೋಲಿಗರಲ್ಲಿ ಸಂಬಂಧವನ್ನು ಬೆಳೆಸುವ ತಮ್ಮನ್ನು ತಾವು ಗುರುತಿಸಲು ಹಾಗೂ ಕಷ್ಟ ಸುಖಗಳಲ್ಲಿ ಭಾಗಿಯಾಗುವ ಹಾಗೂ ಮದುವೆ ಸಂದರ್ಭದಲ್ಲಿ ಅಲ್ಲದೇ ಅವರ ಹುಟ್ಟಿನಿಂದ ಕೊನೆಯ ಘಟ್ಟದವರೆಗೂ ಸೋಲಿಗರು ಆಚರಣೆಯಲ್ಲಿ ವಿಶೇಷವಾಗಿ ಕುಲ ಪದ್ಧತಿಯು ಕಂಡುಬರುತ್ತದೆ. ಸೋಲಿಗರು ತಮ್ಮನ್ನು ದೇವರ ಮಕ್ಕಳು ಎಂಬುದಾಗಿ ಭಾವಿಸಿರುವುದರಿಂದ ತಮ್ಮ ಸಮುದಾಯದ ಹುಟ್ಟಿನ ವಿಚಾರವನ್ನು ದೈವತ್ವದ ಪರಿಕಲ್ಪನೆಯಲ್ಲಿ ಕಟ್ಟಿಕೊಂಡು ಹೇಳುತ್ತಾರೆ. ಮೌಖಿಕ ಪರಂಪರೆಯ ಮೂಲಕ ಸಾಗಿ ಬಂದಿರುವ ಶಿವ ಪಾರ್ವತಿಯರ ಕಥೆ ಇದಕ್ಕೆ ನಿದರ್ಶವಾಗಿದೆ.

ಬಿರಿಗಿರಿರಂಗಸ್ವಾಮಿ ಬೆಟ್ಟದಲ್ಲಿ ವಾಸಿಸುವ ಸೋಲಿಗರಲ್ಲಿ ಪ್ರಮುಖವಾಗಿ ಐದು ಕುಲಗಳಿದ್ದು, ಪ್ರತಿ ಕುಲಕ್ಕೆ ಕುಲದೇವತೆ ಮತ್ತು ಕುಲಚಿನ್ಹೆಗಳಿವೆ. ಮುಂದುವರಿದು ಮಲೆ ಸೋಲಿಗರು ಐದು ಕುಲಗಳ ಜೊತೆಗೆ ಆರನೇ ಕುಲವಾಗಿ 'ಬಳೇರ ಕುಲ'ವು ತಮ್ಮ ಕುಲ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ತಿಳಿಸಿರುತ್ತಾರೆ.

ಕೋಷ್ಟಕ: ೩.೩.೨. ಮಲೆ ಸೋಲಿಗರ ಕುಲಗಳು, ಕುಲಚಿನ್ಹೆ ಮತ್ತು ಕುಲದೇವತೆಗಳು

| ಕ್ರಸಂ. | ಕುಲ | ಕುಲದೈವ/ದೇವತೆ | ಕುಲಚಿನ್ಹೆ |
|---|---|---|---|
| ೧ | ಸಳಕಿರು ಕುಲ | ಐದು ಮಂದಿ ಅಮ್ಮ, ಕೋಣುರು–ಮಾರಿ | ಮಾರಿ ಮಲ್ಲಿಗೆ |
| ೨ | ಹಾಲೂರುಕುಲ | ಕಾರಯ್ಯ, ಬಿಲ್ಲಯ್ಯ | ಹಾಲು ಮಲ್ಲಿಗೆ |
| ೩ | ಬೆಲ್ಲರ | ಹಾಲ ಕೇತಪ್ಪ | ಸುತ್ತು ಮಲ್ಲಿಗೆ |
| ೪ | ಸೂರುರು | ದೊಡ್ಡ ಸಂಪಿಗೆ | ಕೆಂಡ ಮಲ್ಲಿಗೆ |
| ೫ | ತೇನೇರು ಕುಲ | ಜಡೇಸ್ವಾಮಿ | ಬೊಡ್ಡೆಗೆಣ್ಣ ಮಲ್ಲಿಗೆ |
| ೬ | ಬಳೇರ | ಚಿಕ್ಕಸಂಪಿಗೆ | ಬಿಳಿ ಮಲ್ಲಿಗೆ |

ಕೋಷ್ಟಕ: ೩.೩.೩. ಉರಳಿ ಸೋಲಿಗರ ಕುಲಗಳು, ಕುಲದೇವತೆಗಳು

| ಕ್ರಸಂ. | ಕುಲ | ಕುಲದೈವ/ದೇವತೆ |
|---|---|---|
| ೧. | ವೆಳ್ಳಗ ಕುಲ | ಭೂದೇವಿ ಮಾರಿಯಮ್ಮ |
| ೨. | ಸಂಬಾ ಕುಲ | ಹಾಲುಮಲ್ಲೈ |
| ೩. | ಕಲ್ಕಟ್ಟಿ ಕುಲ | ವೆಂಗಿಪತಿಮಾರಿ |
| ೪. | ಪೋರಿಗರ್ ಕುಲ | ಮುನಿಯಪ್ಪ |
| ೫. | ಕೊಡವರ್ ಕುಲ | ನಾಗರೂರುಮಾರಿ |
| ೬. | ಕುಪ್ಪ ಕುಲ | ಏಳೂರುಮಾರಿ |
| ೭. | ಕುರುಣಾಗ ಕುಲ | ಪುಳಿಯಗೊಂಬಮಾರಿ |

ಸೋಲಿಗರಲ್ಲಿ ಮುಖ್ಯವಾಗಿ ತಮ್ಮ ಕುಲದ ಲಾಂಛನ ಹಾಗೂ ಕುಲದ ಹಿರಿಯರನ್ನು ಅತ್ಯಂತ ಗೌರವದಿಂದ ಕಾಣುತ್ತಾರೆ. ಹಿರಿಯರು ಹೇಳಿದ ತೀರ್ಮಾನವನ್ನು ಒಪ್ಪಿ ತಲೆ ಬಾಗುವುದು. ಕುಲಪದ್ಧತಿ, ಕುಲಕಸುಬನ್ನು ಅತ್ಯಂತ ನಿಷ್ಠೆಯಿಂದ ಮುಂದುವರಿಸಿಕೊಂಡು ಬರುವುದು ಮುಖ್ಯ ತಮ್ಮ ಕುಲ ಲಾಂಛನವನ್ನು ಪವಿತ್ರವೆಂದು ಭಾವಿಸಿ ಅದನ್ನು ದೈವದ ಸಂಕೇತವಾಗಿ ಪೂಜೆಗೈಯುವುದುಂಟು. ತಮ್ಮಲ್ಲೇ ಅಳಿದುಹೋದ ವೀರರನ್ನು ಆರಾಧ್ಯ ದೈವವನ್ನಾಗಿ ಆರಾಧಿಸುವುದು ಉಂಟು. ಬುಡಕಟ್ಟು ಸಮುದಾಯದ ಕುಲ ಲಾಂಛನವು ಯಾವುದೋ ಒಂದು ಕಾಲದಲ್ಲಿ ನೀಡಿದ ಕೊಡುಗೆಯಾಗಿರುತ್ತದೆ. ಅಂದರೆ ಪ್ರಕೃತಿಯಲ್ಲಿನ ಸಸ್ಯ, ಜೀವಿ ಇಲ್ಲವೇ ವಸ್ತುವನ್ನು ಆವಿಷ್ಕರಿಸಿ ಇಲ್ಲವೆ ಸಂಶೋಧಿಸಿ ಅದರ ಉಪಯೋಗವನ್ನು ತಿಳಿಸಿಕೊಟ್ಟಿದ್ದಾಗಿರುತ್ತದೆ; ಒಂದಕ್ಕೊಂದು ಪೂರಕವಾಗಿರುತ್ತವೆ.

ಸೋಲಿಗರ ಸಾಮಾಜಿಕ ವ್ಯವಸ್ಥೆಯ ಅನ್ವಯ ಒಂದೇ ಕುಲಕ್ಕೆ ಸೇರಿದವರ ನಡುವೆ ವೈವಾಹಿಕ ಸಂಬಂಧಗಳು ನಡೆಯುವಂತಿಲ್ಲ. ಏಕೆಂದರೆ ಅವರು ಸಂಬಂಧದಲ್ಲಿ ಸೋದರರಾಗುತ್ತಾರೆ. ಹಾಗಾಗಿ ಸಂಬಂಧಗಳು ಬೇರೆ ಬೇರೆ ಕುಲದವರ ನಡುವೆ ನಡೆಯುವುದು ರೂಢಿಯಲ್ಲಿದೆ. ಇತರೆ ಜನರಲ್ಲಿ

ಕಂಡುಬರುವಂತೆಯೇ ಸೋಲಿಗರಲ್ಲಿ ಕುಲ ಪದ್ಧತಿ, ಕುಲದ ವಿಂಗಡಣೆ ಇದೆ. **'ಕುಳದಲ್ಲಿ ಬಡವನಾದರೂ, ಕುಲದಲ್ಲಿ ಬಡವನೇ'** ಎಂದು ಕನ್ನಡದಲ್ಲಿ ಒಂದು ಗಾದೆ ಇರುವಂತೆ ಸೋಲಿಗರ ಕುಲವನ್ನು ಬಿಟ್ಟು ಯಾರೂ ಬದುಕುವುದು ಸಾಧ್ಯವಿಲ್ಲ. 'ಸೋಲಿಗರಲ್ಲಿ ಕುಟುಂಬದಲ್ಲಿ ಹೆದರದವನು ಕುಲಕ್ಕೆ ಹೆದರುತ್ತಾರೆ. ಕುಲಕ್ಕೆ ಅಂಜಿ ಅದಕ್ಕೆ ತಕ್ಕಂತೆ ತನ್ನ ಜೀವನವನ್ನು ರೂಪಿಸಿಕೊಳ್ಳುತ್ತಾನೆ. 'ಕುಲ' ಅದರಲ್ಲಿ ವ್ಯಕ್ತಿಗಿಂತ ಹೇಗೆ ಮುಖ್ಯವಾಗಿ ನಿಲ್ಲುತ್ತದೆ ಎಂಬುದು ಸೋಲಿಗರ ಪುರಾಣಗಳಲ್ಲಿಯೇ ವ್ಯಕ್ತವಾಗುತ್ತದೆ. ಇಲ್ಲಿ ನೀಲಯ್ಯ ಮತ್ತು ಮಡದಿ ಸಂಕಮ್ಮನ ಕಥೆಯಲ್ಲಿ ನೋಡಬಹುದಾಗಿದೆ. ಸೋಲಿಗರಲ್ಲಿ ಯಾವುದನ್ನು ಲೆಕ್ಕಿಸದವನು ಕುಲವನ್ನೂ ಕುಲ ಪಂಚಾಯಿತಿಯನ್ನು ಲೆಕ್ಕಿಸುತ್ತಾನೆ. ಸೋಲಿಗರಲ್ಲಿ ಯಾವುದೇ ಧಾರ್ಮಿಕ ವಿಧಿಯಾಗಲಿ, ಹುಟ್ಟಿನಿಂದ ಸಾಯುವವರೆಗೆ ನಡೆಯುವ ಆಚರಣೆಯು ಕುಲವನ್ನು ಪ್ರತಿನಿಧಿಸುವ ಹಿರಿಯರ ಸಮ್ಮುಖದಲ್ಲಿ ನಡೆಯುತ್ತದೆ. ಸೋಲಿಗರಲ್ಲಿ ಇರುವ ಈ ಬಗೆಯ ಕುಲದ ವ್ಯವಸ್ಥೆ ಅವರಿಗೆ ಬಂಧುತ್ವವನ್ನು ಗುರುತಿಸಿಕೊಳ್ಳುವ ಸಲುವಾಗಿಯೂ, ನೆಂಟಸ್ತಿಕೆ ಬೆಳೆಸುವ ಸಲುವಾಗಿಯೂ ಹಾಗೂ ವೈವಾಹಿಕ ಸಂಬಂಧವನ್ನು ಬೆಳೆಸುವ ಸಲುವಾಗಿಯೂ ನಾವು ನಮ್ಮ ಬಂಧುಗಳು, ನಮ್ಮ ಸಮುದಾಯ ಬೆಳೆಸುವ ಸಲುವಾಗಿಯೂ ಅವಶ್ಯಕತೆಗಳಿಗೆ ಕಾರಣವಾಗಿದೆ ಎಂದು ಹೇಳಬಹುದು.

ಸೋಲಿಗರಲ್ಲಿ ೫ ಕುಲದ ಸೋಲಿಗರು, ೭ ಕುಲದ ಸೋಲಿಗರು ಹಾಗೂ ೧೨ ಸೋಲಿಗರೂ ಇದ್ದಾರೆ. ಹಿಂದೆಯೆ ಅಧ್ಯಯನದ ಕಾಲದಲ್ಲಿ ಮೊರಾಬ್, ಥರ್ಸ್ಟನ್, ರಂಗಾಚಾರಿ ನಂಜುಂಡಯ್ಯ ಹಾಗು ಅನಂತಕೃಷ್ಣ ಅಯ್ಯರ್ ಇವರುಗಳು ಸೋಲಿಗರ ಕುಲಗಳ ಬಗ್ಗೆ ಮಾಹಿತಿಯನ್ನು ಕೊಡುತ್ತ ಐದು ಕುಲದ ಸೋಲಿಗರು, ಬಿಳಿಗಿರಿರಂಗನಬೆಟ್ಟದ ಸುತ್ತಮುತ್ತಲ ಪ್ರದೇಶ, ಹಾಗು ಏಳು ಕುಲದ ಸೋಲಿಗರು ತಮಿಳುನಾಡಿನ ಗಡಿಭಾಗ, ಕೊಳ್ಳೇಗಾಲದ ಕಡೆಗಳಲ್ಲಿ ಇರುವುದನ್ನು ಚಾಮರಾಜನಗರ ಮತ್ತು ಮೈಸೂರಿನ ಕೆಲವು ಭಾಗಗಳಲ್ಲಿಯೂ ಸಹ ಈ ಕುಲದ ಸೋಲಿಗರು ವಾಸಿಸುವ ಬಗ್ಗೆ ಉಲ್ಲೇಖಿಸಿದ್ದಾರೆ. ಆದರೆ, ಹನ್ನೆರಡು ಕುಲದ ಸೋಲಿಗರು ಹೆಚ್. ಕೋಟೆ ಮತ್ತು ಗುಂಡ್ಲುಪೇಟೆ ಸುತ್ತಮುತ್ತಲ ಭಾಗಗಳಲ್ಲಿ ಇರುವುದನ್ನು ತಿಳಿಸಿದ್ದಾರೆ. ನಂತರದಲ್ಲಿ ಸುನಂದಮ್ಮನವರು ಮತ್ತು ಮಧು ಗುಂಡ್ಲುಪೇಟೆಯವರು ಐದು ಕುಲದವರು, ಏಳು ಕುಲದವರ ಮನೆಯಿಂದ ಹೆಣ್ಣು ತರುವುದು, ಕೊಡುವುದನ್ನು ಹಿಂದೆ ಮಾಡುತ್ತಿರಲಿಲ್ಲ. ಆದರೆ, ಈಗ ಒಳಗುಂಪಿನ ವ್ಯತ್ಯಾಸದ ಆಧಾರದ ಮೇಲೆ ಸಂಬಂಧ ಬೆಳೆಸುವುದನ್ನು ಕಾಣಬಹುದು. ಒಂದೇ ಕುಲದ ಒಳಗೆ ಕೊಟ್ಟು ತರುವುದು ಇಲ್ಲ. ಏಕೆಂದರೆ, ಅವರು ಅಣ್ಣ-ತಂಗಿಯಾಗುತ್ತಾರೆ. ಆದುದರಿಂದ ಬೇರೆ ಬೇರೆ ಕುಲದ ಒಳಗಿನಿಂದ ಹೆಣ್ಣು-ಗಂಡು ತರಬೇಕು. ಅದು ಸಂಬಂಧ ಕೂಡಿ ಬರುತ್ತದೆ ಎಂದು ತಿಳಿಸಿದ್ದಾರೆ. ಆದರೂ ಸಹ ಕೆಲವು ಸಂದರ್ಭಗಳಲ್ಲಿ ಕೆಲವು ಕಡೆ ಕಡಿಮೆ ಪ್ರಮಾಣದಲ್ಲಿ ಒಂದೇ ಕುಲದ ಒಳಗೆ ಪ್ರೇಮಿಸಿ ವಿವಾಹವಾಗಿರುವುದು ಕಂಡುಬರುತ್ತದೆ. ಅದನ್ನು ನಾವೇನು ಮಾಡುವ ಹಾಗಿಲ್ಲ. ಅದು ನಡೆದು ಹೋಗುತ್ತದೆ ಎಂದು ತಿಳಿಸುತ್ತಾರೆ.

**೩.೪. ಯಜಮಾನ, ಕೋಲುಕಾರ, ಪಟ್ಟೆಗಾರ, ಪದ ವಿವರಣೆ ಮತ್ತು ಸ್ಥಾನಮಾನಗಳು**

ಸೋಲಿಗರ ಸಾಮಾಜಿಕ ಪದ್ಧತಿಯಲ್ಲಿ ಯಜಮಾನ, ಕೋವಿಕಾರ, ಪಟ್ಟಿಕಾರ, ಗೌಡ ಇವರು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತ ಬಂದಿದ್ದಾರೆ.

**ಯಜಮಾನ:** ಸೋಲಿಗರಲ್ಲಿ ಯಜಮಾನರು ಸಮುದಾಯದಲ್ಲಿ ಮುಖ್ಯವಾಗಿರುತ್ತಾರೆ. ಜವಾಬ್ದಾರಿ ವಿಷಯಗಳನ್ನು ಇವರು ನಿಭಾಯಿಸುತ್ತಾರೆ. ಸಾಮಾನ್ಯವಾಗಿ **ಸಳಕಿರು ಕುಲ** ಅಥವಾ **ಹಾಲೇರು ಕುಲದವರನ್ನು** ಯಜಮಾನ ಸ್ಥಾನದಲ್ಲಿ ಕೂರಿಸುತ್ತಾರೆ. ಈ ವ್ಯವಸ್ಥೆಯನ್ನು ತಲೆ-ತಲೆಮಾರಿನಿಂದ ರೂಢಿಸಿಕೊಂಡು ಬಂದಿದ್ದಾರೆ. ಇವರು ಸೋಲಿಗಿಂತ ತಮ್ಮ ಪುಸುಮಾಲೆಯ ಮುದ್ರೆಯುಂಗುರಕ್ಕೆ ಹಕ್ಕುದಾರರು. ನ್ಯಾಯದಲ್ಲಿ ತೀರ್ಮಾನ ಹೇಳುವವರು. ಈ ಮೇಲಿನ ವಿವರಣೆಯು ಬಿಳಿಗಿರಿರಂಗನ ಬೆಟ್ಟದ ಸುತ್ತ-ಮುತ್ತ ಕಂಡುಬರುತ್ತದೆ. ಹೆಚ್.ಡಿ.ಕೋಟೆ, ಗುಂಡ್ಲುಪೇಟೆ, ಹುಣಸೂರು, ನಂಜನಗೂಡು, ಮೈಸೂರು, ಕೊಳ್ಳೇಗಾಲ ಸುತ್ತಮುತ್ತ ವಾಸಿಸುವ ಸೋಲಿಗರಲ್ಲಿ ಯಜಮಾನರನ್ನು ಸರ್ವಾನುಮತದಿಂದ ಆಯ್ಕೆ ಮಾಡುತ್ತಾರೆ. ಯಜಮಾನ ಸಮಸ್ಯೆಯನ್ನು ಪರಸ್ಪರ ವೀಳ್ಯ ಕೊಟ್ಟು ಎರಡೂ ಕೈಯಗಳನ್ನು ಹಿಡಿದುಕೊಂಡು ಇಬ್ಬರನ್ನು ಒಂದು ಮಾಡುತ್ತಾರೆ. ಯಜಮಾನ ನ್ಯಾಯದ ಸಂದರ್ಭದಲ್ಲಿ ತೀರ್ಪುಗಾರರಾಗಿ ಹಲವಾರು ರೀತಿಯಲ್ಲಿ ಸಹಾಯಕರಾಗಿ ಎಲ್ಲರಿಗೂ ಒಪ್ಪುವ ರೀತಿಯಲ್ಲಿ ತೀರ್ಪನ್ನು ಅತ್ಯಂತ ಜಾಗರೂಕತೆಯಿಂದ ನಿರ್ವಹಿಸುತ್ತಾನೆ. ಅವುಗಳಲ್ಲಿ ಪ್ರಮುಖವಾಗಿ ವೀಳ್ಯ ಕೊಡುವುದು, ಕಟ್ಟುಕಟ್ಟುವುದು ಅಂದರೆ, ನ್ಯಾಯ ಪಂಚಾಯಿತಿಯಲ್ಲಿ ಯಜಮಾನ ಹಾಗೂ ನ್ಯಾಯದ ಕಟ್ಟೆಯಲ್ಲಿ ಕೊಡುವುದು ಅಂದರೆ ನಿಯಮದ ಪ್ರಕಾರ ನಡೆದುಕೊಳ್ಳುವಂತೆ ಸೂಚಿಸುವುದು. ಕಂಬಳಿ ಗದ್ದುಗೆ ಕೆಲಸವನ್ನು ನ್ಯಾಯ ಪಂಚಾಯಿತಿಯಲ್ಲಿ ಯಜಮಾನರು ಮಾಡಿಸುತ್ತಾರೆ. ಅಂದರೆ ನ್ಯಾಯದ ಪ್ರಾರಂಭದಲ್ಲಿ ಶುಚಿಯಾಗಿ ನೀರು ತಂದು ಕಲಶದಲ್ಲಿ ಹಾಕಿ ಪೂಜೆ ಮಾಡಿ ಕುಲಕ್ಕೆ ವೀಳ್ಯ ಕೊಟ್ಟು ನಮಸ್ಕರಿಸುತ್ತಾರೆ.

**ಪಟ್ಟೆಗಾರ:** ಪಟೇಲನೇ ಪಟ್ಟೆಗಾರ ಇವನು ತೀರ್ಪನ್ನು ಕೊಡುವವನು. **'ತೆನೇರು ಕುಲ'**ದವ**ರಾಗಿರುತ್ತಾನೆ.** ಪಟ್ಟೆಗಾರರು ಮುಖ್ಯ ಕುಲ ಪದ್ಧತಿಯ ತೀರ್ಪುಗಾರನಾಗಿ ಹಾಗೂ ಯಜಮಾನರ ಸಹಾಯಕನಾಗಿ ಕೆಲಸ ನಿರ್ವಹಿಸುತ್ತಾನೆ. ಇವನು ಪುಸುಮಾಲೆ ಕುಲದೇವರೆಂದು ಪ್ರಸಿದ್ಧಿ ಪಡೆದಿರುತ್ತಾರೆ. ನ್ಯಾಯಕ್ಕೆ ದಿನವನ್ನು ಗೊತ್ತು ಮಾಡುವವನು. ಪೋಡು, ಪೋಡುಗಳಲ್ಲಿ ಜನರಿಗೆ ಆಶೀರ್ವಾದ ಹೇಳುತ್ತಾನೆ. ಅಲ್ಲದೆ ಒಳ್ಳೆಯ ಮಾತುಗಳನ್ನು ಆಡುವುದರ ಮೂಲಕ ಎಲ್ಲರೂ ಸರಿಯಾದ ದಾರಿಯಲ್ಲಿ ನಡೆಯುವಂತೆ ಸೂಚಿಸುತ್ತಾನೆ. ಎಲ್ಲರಿಗೂ ಅರಿವು ಮೂಡಿಸುವ ಕೆಲಸ ಮಾಡುತ್ತಾನೆ. ಹಾಗೂ ಯಜಮಾನರಿಗೆ ಸಹಾಯಕನಾಗಿ ಕೆಲಸ ಮಾಡುತ್ತಾನೆ. **ಐದು ಕುಲದ** ಸೋಲಿಗರಲ್ಲಿ ಅಂದ್ರೆ, ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲಿನಲ್ಲಿ ಸಾಮಾನ್ಯವಾಗಿ ಪಟ್ಟೆಗಾರರನ್ನು **'ತೇನೆಯರ'** ಕುಲದವರನ್ನು ಆಯ್ಕೆ ಮಾಡುತ್ತಾರೆ. ಈ ವ್ಯಕ್ತಿಯು ರಾಗಿಯ ತೆನೆಯನ್ನು ತಲೆಯ ಮೇಲೆ ಹೊತ್ತಿಕೊಂಡಿದ್ದರಿಂದ ತೆನೆಯರು ಕುಲವಾಯಿತು. ರಾಗಿಯು ಸೋಲಿಗರಿಗೆ ಬಲು ಪ್ರಿಯವಾದ ಆಹಾರವೂ ಆಗಿದೆ. ಪಟ್ಟೆಗಾರ ವ್ಯಕ್ತಿಯು ಯಜಮಾನರು ಹಾಗೂ ಕುಲದವರ ಸಮ್ಮುಖದಲ್ಲಿ ಎಲ್ಲೆಲ್ಲಿ ನ್ಯಾಯ ಪಂಚಾಯಿತಿ ಸೇರಬೇಕು, ಯಾವ ಯಾವ ದಿನಗಳಲ್ಲಿ ನ್ಯಾಯವನ್ನು ಆಡಬೇಕು ಎಂದು ಎಲ್ಲಾ ಕಡೆ ಹಿರಿಯರ, ಕುಲ-ಬಾಂಧವರ ಜೊತೆಯಲ್ಲಿ ಸಮಾಲೋಚಿಸಿ, ವಿಷಯವನ್ನು ಸಂಗ್ರಹಿಸಿ, ಅದನ್ನು ಕುಲ ಪಂಚಾಯಿತಿಯ ಯಜಮಾನನ ಮುಂದಿಟ್ಟು ಚರ್ಚಿಸಿ ನಂತರ ಅವರ ಸಮ್ಮುಖದಲ್ಲಿ ದಿನವನ್ನು ಗೊತ್ತುಮಾಡಿ, ಆ ದಿನವನ್ನು ಕೋಲುಕಾರ ಅಥವಾ ಚಲುವಾದಿಯ ಮೂಲಕ ಊರಿನ/ಪೋಡಿನ ಎಲ್ಲರಿಗೂ ತಿಳಿಸುವಂತೆ ಸೂಚಿಸುತ್ತಾರೆ.

**ಕೋಲುಕಾರ:** ಪೊಲೀಸ್ ಅಧಿಕಾರಿಯ ರೀತಿಯಲ್ಲಿ ಕೋಲುಕಾರ ಕೆಲಸ ನಿರ್ವಹಿಸುತ್ತಾನೆ. ಇವರು **ಬೆಳ್ಳರು ಕುಲಕ್ಕೆ** ಸೇರಿದವರಾಗಿರುತ್ತಾನೆ. ಶಿಸ್ತನ್ನು ಜಾರಿ ಮಾಡುವ ಅಧಿಕಾರ ಇವರ ಕೈಯಲ್ಲಿರುತ್ತದೆ. ಇದಕ್ಕೆ ಕೊಂಡಿಕೋಲನ್ನು ಹಿಡಿದಿರುತ್ತಾನೆ. ಕೋಲು ಕಾಡಿನ ಬಿದಿರು ಅಥವಾ ಕಿರು ಬಿದಿರು ಅಥವಾ ಬೆತ್ತದ ಕಡ್ಡಿಯಾಗಿರುತ್ತದೆ. ಮನೆ-ಮನೆಗೆ ಹೋಗಿ ಕುಲ ನ್ಯಾಯಕ್ಕೆ ಸಂಬಂಧಿಸಿದ ವಿಷಯಗಳನ್ನು ಜನರಿಗೆ ತಲುಪಿಸುವ ಕೆಲಸವನ್ನು ಮಾಡುತ್ತಾನೆ. ಕೋಲುಕಾರ ಪ್ರಾಯಶ್ಚಿತ ಕೆಲಸ ಮಾಡುತ್ತಾನೆ. ಅಂದರೆ ಕೋಲುಕಾರ ಮತ್ತು ದಳವಾಯಿ ಇಬ್ಬರೂ ಜೊತೆಗೂಡಿ ಸೋಲಿಗ ಸಮುದಾಯದಲ್ಲಿ ಯಾರಾದರೂ ನ್ಯಾಯದ ಮೂಲಕ ಕುಲವನ್ನು ಬಿಟ್ಟು ಹೊರಹೋದವರು, ಯಾರಿಂದಲಾದರೂ ಚಪ್ಪಲಿ ಏಟು ತಿಂದವರು ಅಥವಾ ನಿನಗೆ ಚಪ್ಪಲಿಯಲ್ಲಿ ಹೊಡೆಯುತ್ತೀನಿ ಎಂದು ಕೈಯಲ್ಲಿ ಹಿಡಿದರೂ ಸಹ ಅಂಥವರು, ಗಂಡನು ಇಲ್ಲದಿದ್ದಾಗ ಕದ್ದು ಬಸುರಿಯಾದವರು ಇನ್ನೂ ಮುಂತಾದ ಕೆಲಸವನ್ನು ಮಾಡಿದಾಗ ಅದಕ್ಕೆ ಪ್ರಾಯಶ್ಚಿತಕ್ಕೆ ಅಂತಹವರನ್ನು ಕ್ಷಮಿಸಿ ತಮ್ಮ ಕುಲಕ್ಕೆ ಸೇರಿಸಿಕೊಳ್ಳುವ ಕೆಲಸ ಕಾರ್ಯವನ್ನು ಈ ಇಬ್ಬರೂ ವ್ಯಕ್ತಿಗಳೂ ಸೇರಿ ಯಜಮಾನರ ಹಾಗೂ ಕುಲದವರ ಸಮ್ಮುಖದಲ್ಲಿ ನಡೆಸಿಕೊಡುತ್ತಾರೆ.

ಪ್ರಾಯಶ್ಚಿತಕ್ಕೆ ಮುಂಚೆ ತಪ್ಪು ಮಾಡಿರುವ ವ್ಯಕ್ತಿಗೆ ನುಣ್ಣಗೆ ತಲೆ ಕೂದಲನ್ನು ತೆಗೆಸುತ್ತಾರೆ. ಆ ವ್ಯಕ್ತಿಯು ಹಳ್ಳದಲ್ಲಿ ಮಿಂದು ಏಳು ಬಣ್ಣದ ಏಳು ತೆರೆಗಳನ್ನು ದಾಟಬೇಕು. ಆ ಸಮಯದಲ್ಲಿ ಕೆಲವು ಮಾತುಗಳನ್ನು ಅವರಿಂದ ಹೇಳಿಸುತ್ತಾರೆ. ಅದೇನೆಂದರೆ,

ಭೂಮಿ-ತಾಯಿ ಒಳ್ಳೇದು - ಅಣ್ಣ ತಮ್ಮ ಒಳ್ಳೇದು(ಒಳ್ಳೆಯದು)

ಆಕಾಶ ಒಳ್ಳೇದು - ಅಕ್ಕ ತಂಗಿ ಒಳ್ಳೇದು

ಸೂರ್ಯ-ಚಂದ್ರಾದಿ ಒಳ್ಳೇದು - ಮೇಲು ಲೋಕಕ್ಕೆ ಒಳ್ಳೇದು

ನಮ್ಮ ಕಾಡು ಒಳ್ಳೇದು - ನಮ್ಮ ಕುಲ ಒಳ್ಳೇದು

ಪಾತಾಳ ಲೋಕ ಒಳ್ಳೇದು - ಕೀಳು ಲೋಕಕ್ಕೆ ಒಳ್ಳೇದು

ನಮ್ಮ ದೇವರು ಒಳ್ಳೇದು - ಹದಿನಾಲ್ಕು ಲೋಕಕ್ಕೆ ಒಳ್ಳೇದು

ಜನ-ಜಾತಿ ಒಳ್ಳೇದು - ದೇವರ ಲೋಕಕ್ಕೆ ಒಳ್ಳೇದು

ಬಂಧು ಬಳಗ ಒಳ್ಳೇದು - ಕುಲಕ್ಕೆ ಒಳ್ಳೇದು

ಬೆಟ್ಟ-ಗುಡ್ಡ ಒಳ್ಳೇದು - ಪ್ರಾಣಿ ಪಕ್ಷಿ ಒಳ್ಳೇದು

ಗೆಡ್ಡೆ-ಗೆಣಸು ಒಳ್ಳೇದು - ಸೊಪ್ಪು ಸೊದೆ ಒಳ್ಳೇದು

ತಂದೆ-ತಾಯಿ ಒಳ್ಳೇದು - ಕೂಟಕ್ಕೆ ಒಳ್ಳೇದು

ನ್ಯಾಯದಲ್ಲಿ ಕೋಲುಕಾರರು ಹಲವಾರು ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ನ್ಯಾಯಕ್ಕೆ ಸೇರಿಸುವ ಮುಂಚೆಯೇ ಮನೆ, ಮನೆಗೆ ಹೋಗಿ ಮಾಹಿತಿಯನ್ನು ಕೊಡುತ್ತಾನೆ ಹಾಗೂ ಎಲ್ಲರೂ ನ್ಯಾಯ ಆಡಲು ಗೊತ್ತುಮಾಡಿದ ದಿನದಂದು ಸೇರಲು ಸಹಾಯಕರಾಗಿ ಕೆಲಸವನ್ನು ನಿರ್ವಹಿಸುತ್ತಾನೆ. ಸಾಮಾನ್ಯವಾಗಿ ಕೋಲುಕಾರ ಆಗುವ ವ್ಯಕ್ತಿಯು ಲವಲವಿಕೆಯಿಂದ ಚಟುವಟಿಕೆಯಿಂದ ಕೂಡಿರುವ

ವ್ಯಕ್ತಿಯೇ ಆಗಿರುತ್ತಾನೆ. ಅಲ್ಲದೆ ಎಲ್ಲಾ ಕಡೆ ಓಡಾಡಲು ಸಾಧ್ಯವಾಗುವವರನ್ನೇ ಆಯ್ಕೆ ಮಾಡಿರುತ್ತಾರೆ. ಸಮುದಾಯದಲ್ಲಿ ಪ್ರತಿಯೊಂದು ಮನೆಯವರನ್ನು ಹಾಗೂ ಅವರ ಪರಿಚಯವನ್ನು ತಿಳಿದುಕೊಂಡಿರುತ್ತಾರೆ. ನ್ಯಾಯದ ಹಲವಾರು ಪ್ರಕ್ರಿಯೆಗಳಲ್ಲಿ ಇವರು ಕೆಲಸ ನಿರ್ವಹಿಸುತ್ತಾರೆ. ಪ್ರಾಯಶ್ಚಿತ ಕೆಲಸ ಅಥವಾ ತಪ್ಪು ಕಾಣಿಕೆ ಕೆಲಸ ಮಾಡುವಾಗ ಆಯಾ ಕುಲದವರೇ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾರೆ. ತಪ್ಪು ಮಾಡಿರುವವರು ಸೇರಿ ಖರ್ಚು ವೆಚ್ಚವನ್ನು ಭರಿಸುತ್ತಾರೆ.

**ದಳವಾದಿ/ದಳವಾಯಿ:** ಇವರು **'ಹಾಲೇರು ಕುಲ'**ದವರಾಗಿರುತ್ತಾರೆ. ಕೋಲುಕಾರರಿಗೆ ಸಹಾಯಕರಾಗಿ ಕುಲ ನ್ಯಾಯಕ್ಕೆ ಸಂಬಂಧಿಸಿದ ಇತರೆ ಕೆಲಸ ಕಾರ್ಯವನ್ನು ಮಾಡುತ್ತಾರೆ. ದಳವಾಯಿಯು ಕೋಲುಕಾರರಂತೆ ಇತರೆ ಕೆಲಸ ಕಾರ್ಯವನ್ನು ನಿರ್ವಹಿಸುತ್ತಾನೆ. ಕೋಲುಕಾರ ಹಾಗೂ ಪಟ್ಟೆಗಾರರಿಗೆ ಸಹಾಯಕರಾಗಿ ಕೆಲಸ ಮಾಡುತ್ತಾ ಕುಲದ ಘನತೆ ಗೌರವಕ್ಕೆ ಪಾತ್ರರಾಗಿರುತ್ತಾರೆ. ಇವರು ಹಾಲಿನಂತ ಮನಸ್ಸಿನವರು. ಕುಲದವರ ಎಲ್ಲಾ ಪ್ರೀತಿ ವಿಶ್ವಾಸವನ್ನು ಗಳಿಸಿರುತ್ತಾರೆ. ಎಲ್ಲರ ಜೊತೆ ಒಡನಾಡವನ್ನು ಇಟ್ಟುಕೊಂಡಿದ್ದು, ಎಲ್ಲೆಲ್ಲಿ ಒಳ್ಳೆಯದು ಕೆಟ್ಟದ್ದು, ಸಭೆ ಸಮಾರಂಭ ಇತ್ಯಾದಿ ವಿಷಯಗಳನ್ನು ಕೋಲುಕಾರರಿಗೆ ತಿಳಿಸುತ್ತಾ ಸಹಾಯಕರಾಗಿ ಕೆಲಸವನ್ನು ನಿರ್ವಹಿಸುತ್ತಾರೆ.

**ಚಲವಾದಿ:** ಚಲವಾದಿಯು ಸಾಮಾನ್ಯವಾಗಿ ಯಜಮಾನರಿಗೆ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಾರೆ. ಪೋಡು, ಪೋಡುಗಳಲ್ಲಿ ಯಾವುದರೂ ಸಭೆ, ಸಮಾರಂಭ ಇದ್ದರೆ ಇಬ್ಬರೂ ಸಹ ಜೊತೆಯಾಗಿಯೇ ಹೋಗುತ್ತಾರೆ. ಯಜಮಾನರ ಹಲವಾರು ಕುಲದ ಕೆಲಸಗಳನ್ನು ಮಾಡುವುದರಲ್ಲಿ ಸಹಕರಿಸುತ್ತಾರೆ. ಅಲ್ಲದೆ ಕುಲಕ್ಕೆ ಸಂಬಂಧಿಸಿದ ಇತರೆ ವಿಷಯಗಳಲ್ಲಿಯೂ ಕೋಲುಕಾರ ಹಾಗೂ ದಳವಾಯಿಗೆ ಮಾರ್ಗದರ್ಶಕರಾಗಿ ಕೆಲಸ ನಿರ್ವಹಿಸುತ್ತಾರೆ. ನ್ಯಾಯ ಪಂಚಾಯತಿಯಲ್ಲಿ ತಮ್ಮ ಮಾತಿನ ಮೋಡಿಯ ಮೂಲಕ ಎಲ್ಲರನ್ನೂ ರಂಜಿಸುವ ಗುಣವನ್ನು ಹೊಂದಿದವರಾಗಿರುತ್ತಾರೆ. ಸೋಲಿಗರ ನ್ಯಾಯ ಪಂಚಾಯತಿಯಲ್ಲಿ ಯಜಮಾನ, ಕೋಲುಕಾರ, ಪಟ್ಟೆಗಾರ, ಚಲುವಾದಿ, ದಳವಾದಿ ಇವರು ಪ್ರಮುಖವಾದ ಪಾತ್ರವಹಿಸುತ್ತಾರೆ. ಸೋಲಿಗರ ನ್ಯಾಯ ಪಂಚಾಯತಿ ನಿಜಕ್ಕೂ ಪ್ರಶಂಶಾರ್ಹವಾದುದು. 'ಅಜ್ಞಾತ ಕಾಡುಮೇಡುಗಳಲ್ಲಿ ಇಷ್ಟು ಸೃಜನಶೀಲ, ಕ್ರಿಯಾತ್ಮಕ, ಬುದ್ಧಿವಂತಿಕೆಯ ಪದ್ಧತಿ ರೂಪುಗೊಂಡಿದೆಯೆಂದರೆ ಅದೇ ಆಶ್ಚರ್ಯ ಮತ್ತು ಹೆಮ್ಮೆ! ಇನ್ನೂ ಅಭಿಮಾನದ ಸಂಗತಿಯೆಂದರೆ ಈ ಪದ್ಧತಿ ಈಗಲೂ ಜೀವಂತವಾಗಿರುವುದು.

ಕೆಲವು ಕಡೆ ಪ್ರಾಯಶ್ಚಿತ ಕೆಲಸ ಅಥವಾ ಕುಲಕ್ಕೆ ಸೇರಿಸುವ ಕೆಲಸವನ್ನು ದೇವಸ್ಥಾನಗಳಲ್ಲಿ ಮಾಡುತ್ತಿದ್ದರು. ಅಂತಹ ದೇವಸ್ಥಾನಗಳೆಂದರೆ ಸಿದ್ಧಪ್ಪ, ಜಡೆಸ್ವಾಮಿ, ಕೇತದೇವರು, ನಡುವಿನ ಬಸಪ್ಪ, ಸೀಗನ ಮುಂಟಿ ಮಾರಮ್ಮ, ಚೀಲದ ಕುಪ್ಪ ದೇವರು, ರಂಗಪ್ಪ ಮಾದಪ್ಪ, ಏಳುಕೆರೆ ಮಾರಮ್ಮ, ದೊಡ್ಡಮ್ಮ ತಾಯಿ, ಚಿಕ್ಕಮ್ಮ ತಾಯಿ, ಹೀಗೆ ಯಾವುದಾರೂ ದೇವರ ಬಳಿ ಸೇರಿ ದೇವರನ್ನು ನೆನೆದು ಪೂಜೆ ಮಾಡಿ, ಎಲ್ಲಾ ಪ್ರಾಯಶ್ಚಿತತೆಯ ಕೆಲಸವನ್ನು ಮಾಡುತ್ತಿದ್ದರು. ಮತ್ತೊಂದು ಕಡೆ, ಕಾಡಿನ ಒಳಗೆ ಯಾರೂ ಕಾಣದ ಜಾಗದಲ್ಲಿ ಹಳ್ಳದ ಕಡೆಗಳಲ್ಲಿ ಬಂಡೆಯ ಹಾಗೂ ಬೆಟ್ಟದ ಕೆಳಗೆ ನೀರು ಇಡುವ ಸ್ಥಳಗಳಲ್ಲಿ ಮತ್ತಿಯ ಮರದ ಕೆಳಗೆ ಪ್ರಾಯಶ್ಚಿತ್ತತೆಯ ಕೆಲಸವನ್ನು ಮಾಡುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಸಾಮಾನ್ಯವಾಗಿ ಕಾಡಿನ ಒಳಗೆ ಹೊಲದ(ಜಮೀನಿನ) ಕಡೆಗಳಲ್ಲಿ ಹಾಗೂ ಊರಿನ ಪಾಳು ಮನೆಯ ಕಡೆ, ಜಗುಲಿ, ಪಡಸಾಲೆ, ಸಮುದಾಯ ಭವನ ಇನ್ನಿತರ ಸ್ಥಳಗಳಲ್ಲಿ ಕೋಲುಕಾರ

ಮತ್ತು ಚಲುವಾದಿ ಜೊತೆಗೂಡಿಕೊಂಡು ಯಜಮಾನರ, ಕುಲದವರ ಸಮ್ಮುಖದಲ್ಲಿ ಪ್ರಾಯಶ್ಚಿತತೆಯ ಕೆಲಸ ಕಾರ್ಯವನ್ನು ಊರಿನ ಮುಖಂಡರ ಸಮ್ಮುಖದಲ್ಲಿ ಮಾಡುತ್ತಾರೆ. ತೆರೆಯನ್ನು ಎಳೆಯುವಾಗ ಒಂದೊಂದಾಗಿ ತೊಪ್ಪೆ, ಸಗಣಿ, ನೀರು, ತುಳಸಿ ನೀರು, ನಾಮದ ನೀರು, ಅರಿಶಿಣ ನೀರು, ಕುಂಕುಮ, ಗಂಧ, ಮನೆಯ ನೀರು ಹೀಗೆ ಏಳು ಬಣ್ಣದ ನೀರು ಹಾಕುತ್ತಾರೆ. ತೆರೆಯನ್ನು ಹಾರಿಸಿ ಮುಗಿಸಿದ ನಂತರ ಪ್ರತಿಬಾರಿ ತೀರ್ಥ ತೆಗೆದುಕೊಂಡು 'ಕಾಟಕರ್ಮ' ಎಲ್ಲ ಕಳೆದು ಹೋಯಿತ್ತೆನ್ನುತ್ತಾ ಮೈಮೇಲೆ ದೇವರ ಪೂಜೆ ಮಾಡಿದ ತೀರ್ಥ ಹಾಕಿ ಇನ್ನೂ ಹೋಗು ಕುಲದವರ, ಯಜಮಾನರು ಹಾಗೂ ಹಿರಿಯರ ಅಡ್ಡಬಿದ್ದು, ನಿನ್ನ ಮನೇಕ(ಮನೆಗೆ) ಹೋಗು ಎಂದು ಹೇಳಿ ಕಳುಹಿಸುತ್ತಾರೆ. ನಂತರ ವೀಳ್ಯ ಕೊಡುವುದು, ಯಜಮಾನರ ಕಾಣಿಕೆ, ಕುಲದ ಕಾಣಿಕೆ ಕೊಟ್ಟು ಎಲ್ಲರೂ ಸಾಮೂಹಿಕ ಭೋಜನ ಮಾಡಿ ತಮ್ಮ ತಮ್ಮ ಪೋಡುಗಳಿಗೆ, ಕಾಲೋನಿಗಳಿಗೆ ಹೋಗುತ್ತಾರೆ. ಈ ಎಲ್ಲಾ ಕೆಲಸ ಕಾರ್ಯವನ್ನು ಕೋಲುಕಾರ ಮತ್ತು ಚಲವಾದಿ ಅತ್ಯಂತ ಜವಾಬ್ದಾರಿಯುತರಾಗಿ ನಿರ್ವಹಿಸುತ್ತಾರೆ.

ಸಮುದಾಯದಲ್ಲಿ ಒಳ್ಳೆಯ ರೀತಿಯಲ್ಲಿ ನಡೆಯಬೇಕಾದರೆ ರೀತಿ, ನೀತಿ, ನಿಯಮ, ರೂಢಿ, ಸಂಪ್ರದಾಯ ಕಟ್ಟಳೆಗಳು ಅತ್ಯಗತ್ಯ ಬೇಕಾದದ್ದು ಇದರಿಂದ ಎಲ್ಲರೂ ಸುಖವಾಗಿ ಬಾಳಲು ಸಾಧ್ಯವಾಗುತ್ತದೆ. ಅದೇ ರೀತಿಯಲ್ಲಿ ಸೋಲಿಗ ಸಮುದಾಯದಲ್ಲಿಯೂ ಸಮುದಾಯದ ಒಳಿತಿಗಾಗಿ ಕುಲ, ಕುಲಪದ್ಧತಿ, ನ್ಯಾಯ, ತೀರ್ಮಾನ, ತಪ್ಪು, ಕಾಣಿಕೆ ಇತ್ಯಾದಿ ವ್ಯವಸ್ಥೆಗಳನ್ನು ಮಾಡಿಕೊಂಡು ಬರಲಾಗಿದೆ. ಸಮಾಜ ಬದಲಾದ ಹಾಗೆ ಸಮುದಾಯವು ಬದಲಾವಣೆಯನ್ನು ನಿಧಾನಗತಿಯಲ್ಲಿ ಕಾಣುತ್ತದೆ. ಸೋಲಿಗ ಸಮುದಾಯವು ಕಾಡಿನಿಂದ ಹೊರಬಂದ ನಂತರದಲ್ಲಿ ಹೊರಗಿನ ಸಮಾಜದ ಪ್ರಭಾವಕ್ಕೆ ಒಳಗಾಗಿ ಮತ್ತು ಇತರೆ ಕಾರಣಗಳಿಂದ ಕುಲ ಮತ್ತು ಕುಲದ ಆಚರಣೆಯಲ್ಲಿ ಸಡಿಲತೆ ಕಂಡುಬರುತ್ತಿದೆ. ಸೋಲಿಗರ ಪೋಡು, ಕಾಲೋನಿ, ದೊಡ್ಡಿ, ಹಾಡಿಗಳಲ್ಲಿ ಆಧುನಿಕ ಕಾನೂನು, ಪೊಲೀಸ್ ವ್ಯವಸ್ಥೆ, ಕೋರ್ಟ್ ವ್ಯವಸ್ಥೆ ಬರತೊಡಗಿದೆ. ಈ ರೀತಿಯ ವ್ಯವಸ್ಥೆಗೆ ಸೋಲಿಗರು ತಮಗೆ ಇಷ್ಟ ಇಲ್ಲದಿದ್ದರೂ ಹೊಂದಿಕೊಳ್ಳುತ್ತಿರುವುದು ಕಂಡುಬರುತ್ತಿದೆ.

**೩.೫. ನ್ಯಾಯ ಪದ್ಧತಿ**

ಸೋಲಿಗರ ನ್ಯಾಯಪದ್ಧತಿಯು ಬಹಳ ಪ್ರಮುಖವಾದುದು. ಸೋಲಿಗರ ಸಾಮಾಜಿಕ ಜೀವನದ ವ್ಯವಸ್ಥೆಯಲ್ಲಿ ನ್ಯಾಯ ಪದ್ಧತಿಯು ಹಾಸುಹೊಕ್ಕಾಗಿದೆ. ಇದು ನಿಜಕ್ಕೂ ಪ್ರಶಂಸಾರ್ಹವಾದುದು. ಕಾಡು ಪೋಡುಗಳಲ್ಲಿ ಪ್ರಕೃತಿಯ ಒಡಲಲ್ಲಿ ಸೃಜನಶೀಲ, ಕ್ರಿಯಾತ್ಮಕ, ಬುದ್ಧಿವಂತಿಕೆಯ ಒಂದು ಪದ್ಧತಿ ರೂಪುಗೊಂಡಿದೆಯೆಂದರೆ ಅದೇ ಆಶ್ಚರ್ಯ ಮತ್ತು ಹೆಮ್ಮೆ ಎಂದೇ ಹೇಳಬೇಕು. ಸೋಲಿಗ ಸಮುದಾಯದಲ್ಲಿ ನ್ಯಾಯ ಪದ್ಧತಿ ಪುರಾತನ ಕಾಲದಿಂದಲೇ ರೂಪುಗೊಂಡಿದೆ. ಒಂದು ಪೈಸೆ ಖರ್ಚಿಲ್ಲದೆ ವಾದಿಪ್ರತಿವಾದಿಗಳಿಗೆ ನ್ಯಾಯ ಸಿಗುತ್ತದೆ. ಕೇವಲ ಕೆಲವೇ ದಿನಗಳಲ್ಲಿ ಅಥವಾ ವಾರಗಳಲ್ಲಿ ಕೆಲವೊಮ್ಮೆ ನ್ಯಾಯದ ದಿನವೇ 'ನ್ಯಾಯ' ದೊರಕುತ್ತದೆ. ನ್ಯಾಯ ಪಂಚಾಯಿತಿ ಸೇರುವ ಮುನ್ನ ಯಾವ ವಿಷಯದ ಬಗ್ಗೆ ನ್ಯಾಯ ಮಾಡಬೇಕು ಎಂದು ಕೋಲುಕಾರ ಮನೆ, ಮನೆಗೆ ಪೋಡು ಕಾಲೋನಿಗಳಿಗೆ ವಿಷಯವನ್ನು ಮುಟ್ಟಿಸುತ್ತಾನೆ. ಆ ನಂತರದಲ್ಲಿ ಯಾವ ದಿನವನ್ನು ಗೊತ್ತು ಮಾಡಿರುತ್ತಾರೋ ಅಂತಹ ದಿನ ಕಟ್ಟೆಯ ಬಳಿ ಅಥವಾ ಊರಿನ ಮುಂಭಾಗ ಜಗುಲಿ ಅಥವಾ ಮರದ ಕೆಳಗೆ ಕುಳಿತುಕೊಂಡು ನ್ಯಾಯ ಪಂಚಾಯಿತಿ ಮಾಡುತ್ತಾರೆ. ನ್ಯಾಯ ಕೇಳುವವರು

ಫಿರ್ಯಾದುದಾರರನ್ನು ಮತ್ತು ಅಪರಾಧ ಹೊರಿಸಲ್ಪಟ್ಟವರನ್ನು ಮತ್ತು ಸಾಕ್ಷಿಗಳನ್ನು ಕೋಲುಕಾರ ಹಾಜರುಪಡಿಸಬೇಕು. ಕೋಲುಕಾರ ಶಿಸ್ತಿನ ಅಧಿಕಾರಿ, ಆ ಸಮಯದಲ್ಲಿ ಯಾರೂ ಪ್ರತಿಭಟನೆ ಮಾಡುವಂತಿಲ್ಲ. ಆಲಸ್ಯ, ಅನಾದಾರ ತೋರುವಂತಿಲ್ಲ. ಹಾಗೆ ಮಾಡಿದರೆ, ಇನ್ನೊಂದು ದೊಡ್ಡ ತಪ್ಪಾಗಿ ಇನ್ನೊಂದು ನ್ಯಾಯಕ್ಕೆ ವಸ್ತುವಾಗುತ್ತದೆ ಎಂಬ ಭಯ ಸೋಲಿಗರಲ್ಲಿದೆ.

ಸೋಲಿಗರಲ್ಲಿ ಯಾವುದೇ ನ್ಯಾಯ ನಡೆಯಬೇಕಾದರೆ ಅದಕ್ಕೆ ಸಾಕ್ಷಿ ಫಿರ್ಯಾದು ಇರಬೇಕು. ಇಲ್ಲದಿದ್ದರೆ ನ್ಯಾಯ ನಡೆಸುವಂತಿಲ್ಲ. ನೊಂದವನು ಯಾವ ಕಾರಣಕ್ಕಾದರೂ ಮುಂದೆ ಅವರ ಕಡೆಯವರು  ಬಂಧು ಬಳಗ ಅವನ ಪರವಾಗಿ ಸಮಸ್ಯೆಯ ಮೇಲೆ ನ್ಯಾಯ ಕೇಳಬಹುದು. ನ್ಯಾಯ ಪಂಚಾಯಿತಿ ವಿಚಾರಣೆಯು ಸಾಮಾನ್ಯವಾಗಿ ಬೆಳಿಗ್ಗೆ, ಮಧ್ಯಾಹ್ನದ ಸಮಯ ಪ್ರಾರಂಭವಾಗಿ ಸಂಜೆಯ ಹೊತ್ತಿಗೆ ಮುಗಿಯುತ್ತದೆ. ಕೆಲವೊಂದು ಬಾರಿ ರಾತ್ರಿಯವರೆಗೂ ನಡೆಯುತ್ತದೆ. ಯಾವುದೇ ನ್ಯಾಯ ಪಂಚಾಯಿತಿ ಆ ದಿನ ಮುಗಿಯದಿದ್ದರೆ ಇನ್ನೊಂದು ದಿನವನ್ನು ಗೊತ್ತುಮಾಡುತ್ತಾರೆ. ನ್ಯಾಯ ಪಂಚಾಯಿತಿಯಲ್ಲಿ ಪುರಾತನ ಕಾಲದ ಸಮುದಾಯದ ಅನುಭವ, ಬುದ್ಧಿವಂತಿಕೆ, ಚಾಣಾಕ್ಷತನ, ಹೊರಬರುತ್ತದೆ. ಮಾಲು, ಮಚ್ಚೆ, ಗುರುತು ಸಹಿತ ಅಂದರೆ, ಸಾಕ್ಷ್ಯಾಧಾರಗಳು, ವಿಚಾರಣೆ, ಮಾತುಕತೆ, ಚರ್ಚೆ ನಡೆದು ತೀರ್ಮಾನ ಕೊಡಲಾಗುತ್ತದೆ. ಇದರಲ್ಲಿ ಸೋಲಿಗರ ಬುದ್ಧಿವಂತಿಕೆಯೊಡನೆ ಸಮುದಾಯದ ಹೃದಯವಂತಿಕೆಯು ಎದ್ದು ಕಾಣುತ್ತದೆ. ಸೋಲಿಗರು ಮುಖ್ಯವಾಗಿ ಕೆಲವೊಂದು ವಿಷಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಈ ಅಂಶವು ಹಿಂದಿನ ಕಾಲದಲ್ಲಿ ಬಲು ಕಟ್ಟುನಿಟ್ಟಾಗಿ ಶಿಸ್ತಿನಿಂದ ಸಮುದಾಯದಲ್ಲಿ ಮಹಿಳೆಯರು, ಪುರುಷರು, ಮಕ್ಕಳು ಎಲ್ಲರೂ ತಪ್ಪದೇ ಪಾಲಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ಶಿಸ್ತಿನ ಅಂಶಗಳು ಸ್ವಲ್ಪ ಸಡಿಲತೆಯನ್ನು ಕಂಡುಕೊಂಡಿವೆ ಎಂದು ಹಿರಿಯರು ತಿಳಿಸಿರುತ್ತಾರೆ. ಸೋಲಿಗರಲ್ಲಿ ಸಮುದಾಯದ ಯಜಮಾನನಿಗೆ ಕೊಡುವ ಗೌರವಾಧರಗಳು ಎಂದರೆ–

- ❖ ಗುಡಿಸಲು ಮನೆ ಮುಂಭಾಗ ಯಾವ ಸ್ಥಳದಲ್ಲೇ ಆದರೂ ಆ ಊರಿನ ಯಜಮಾನರು ಮುಖ್ಯಸ್ಥರು ಹೋಗುವಾಗ ಯಾರೂ ಕೂಡ ಕಾಲ ಮೇಲೆ ಕಾಲು ಹಾಕಿಕೊಂಡು ಹಾಗೂ ಕಾಲನ್ನು ನೀಳವಾಗಿ ಅಲ್ಲಾಡಿಸಿಕೊಂಡು ಕುಳಿತುಕೊಳ್ಳಬಾರದು.
- ❖ ಗಟ್ಟಿ ಧ್ವನಿಯಲ್ಲಿ, ಕೆಟ್ಟ ಶಬ್ದಗಳನ್ನು ಮಾತನಾಡಬಾರದು.
- ❖ ಚಪ್ಪಲಿಯನ್ನು ಹಾಕಿಕೊಂಡು ನ್ಯಾಯ ಪಂಚಾಯಿತಿ ಮಾಡುವ ಸ್ಥಳಕ್ಕೆ ಬರಬಾರದು.
- ❖ ಯಜಮಾನರಿಗೆ, ಪಂಚಾಯಿತಿಯ ಎಲ್ಲಾ ಮುಖ್ಯಸ್ಥರಿಗೆ ಗೌರವ, ಮರ್ಯಾದೆ ಕೊಡಬೇಕು.
- ❖ ಬಾಯಿ ಮಾತಿನಲ್ಲಿಯೂ ಕೂಡ ನಿನಗೆ ಚಪ್ಪಲಿಯಿಂದ ಹೊಡೆಯುತ್ತೇನೆ ಎಂದು ಹೇಳಬಾರದು.
- ❖ ವಯಸ್ಸಾದವರಿಗೆ, ಹಿರಿಯರಿಗೆ ಗೌರವ ಕೊಡಬೇಕು.

ಆದರೆ ಇಂತಹ ಕೆಲವೊಂದು ವಿಷಯಗಳಲ್ಲಿ ಕೆಲವು ಬದಲಾವಣೆಗಳೂ ಸಹ ಹೊರ ಸಮಾಜದಿಂದ ಬಂದು ಸೇರಿಕೊಳ್ಳುತ್ತಿವೆ ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ನ್ಯಾಯ ಪಂಚಾಯಿತಿಗೆ ಸೇರುವ ಕೆಲವು ವಿಷಯಗಳು**

ಪೋಡು-ಕಾಲೋನಿಯಲ್ಲಿ ಹಬ್ಬ, ಜಾತ್ರೆ, ಸಾಮೂಹಿಕ ಸಮಾರಂಭ ಮತ್ತು ಇತರೆ ಸಮಾರಂಭಗಳನ್ನು ಮಾಡುವ ಮುನ್ನ ನ್ಯಾಯ ಪಂಚಾಯಿತಿ ಸೇರುತ್ತಾರೆ.

- ಊರಿನಲ್ಲಿ ಯಾರಾದರೂ ತಪ್ಪು ಮಾಡಿದರೆ, ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.
- ಚಪ್ಪಲಿಯಿಂದ ಹೊಡೆದು ಜಗಳವಾಡಿಕೊಂಡಿದ್ದರೆ ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.
- ಗಂಡ-ಹೆಂಡತಿ ಜಗಳ ವಿಕೋಪಕ್ಕೆ ತಿರುಗಿದ್ದರೆ ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.
- ಕೌಟುಂಬಿಕ ವಿಷಯಕ್ಕೆ ಪರಿಹಾರ ಪಡೆಯಲು ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.
- ಕಳ್ಳತನವಾಗಿದ್ದರೆ ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.
- ಹುಡುಗ-ಹುಡುಗಿ ಓಡಿಹೋಗಿ ಮತ್ತೆ ಪೋಡಿಗೆ ಹಿಂದಿರುಗಿದ್ದಾಗ ಅವರ ಪರಿಹಾರಕ್ಕಾಗಿ ನ್ಯಾಯ ಪಂಚಾಯಿತಿಗೆ ಸೇರುತ್ತಾರೆ.

ಸಾಮಾನ್ಯವಾಗಿ ಹಿಂದೆ ಈ ಮೇಲೆ ತಿಳಿಸಿದಂತೆ ಹಾಗೂ ನ್ಯಾಯ ಕೇಳುವ ವಿಷಯಗಳು ಸೋಲಿಗರ ಪೋಡು, ಕಾಲೋನಿಗಳು ಕಾಡಿನ ಒಳಗೆ ಹೆಚ್ಚು ಇರುತ್ತಿದ್ದವು. ಹೊರ ಪ್ರಪಂಚದ ಸಂಪರ್ಕ ತುಂಬಾ ಕಡಿಮೆ ಇರುತ್ತಿದ್ದವು. ಆಯಾಯ ಪೋಡು-ಕಾಲೋನಿಗಳಲ್ಲಿ ನ್ಯಾಯ ಪಂಚಾಯಿತಿ ನಡೆದು ಆ ಸಮುದಾಯ ಏನೇ ತಪ್ಪುಗಳನ್ನು ಮಾಡಿದ್ದರೂ ಅದು ಹೊರಗಿನ ಜನರ ಸಂಪರ್ಕಕ್ಕೆ ಬಾರದೆ ಅಲ್ಲಿಯೇ ಬಗೆಹರಿಯುತ್ತಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವೊಂದು ಕೌಟುಂಬಿಕ ಕಲಹ, ಸಮಸ್ಯೆ ಹಾಗೂ ಜಗಳ, ಕೊಲೆ, ಕೇಸುಗಳು ಮದ್ಯಪಾನದಂತಹ ಹಲವಾರು ಸಾಮಾಜಿಕ ಸಮಸ್ಯೆಗಳೂ ಸಹ, ನ್ಯಾಯ ಪಂಚಾಯಿತಿಯಿಂದ ಹೊರ ಬಂದು ಕೋರ್ಟ್, ಕಛೇರಿ, ಪೋಲೀಸರ ಮೂಲಕ ಬಗೆಹರಿಯುವ ಹಂತಕ್ಕೆ ಬಂದುಬಿಟ್ಟಿದೆ ಸೋಲಿಗರಲ್ಲೇ ಬಗೆಹರಿಯುತ್ತಿದ್ದ ನ್ಯಾಯ ಇತ್ತೀಚೆಗೆ ಹೊರ ಸಮಾಜಕ್ಕೂ ಬರುವುದರ ಮೂಲಕ ನ್ಯಾಯ ಪಂಚಾಯಿತಿಯಲ್ಲಿ ಸ್ವಲ್ಪ ಸಡಿಲಿಕೆ ಉಂಟಾಗಿದೆ ಎಂಬುದನ್ನು ಇದರಿಂದ ತಿಳಿಯಬಹುದಾಗಿದೆ. ನ್ಯಾಯ ಪಂಚಾಯಿತಿಯಲ್ಲಿ ನ್ಯಾಯ ತೀರ್ಮಾನವಾದ ಮೇಲೆ ಸೋಲಿಗರಲ್ಲಿ ಪ್ರಮುಖವಾದ ಅಂಶಗಳನ್ನು ನೋಡುವುದು ಮುಖ್ಯವಾಗಿರುತ್ತದೆ.

ಸೋಲಿಗರಲ್ಲಿ ಪುರಾತನ ಕಾಲದಲ್ಲಿ ಅತೀ ಕ್ರೂರವಾದ ಶಿಕ್ಷೆಗಳಿದ್ದವೆಂದು ಹಿರಿಯರು ಹೇಳುತ್ತಾರೆ. ನಡುವಿಗೆ(ಸೊಂಟಕ್ಕೆ) ನಾರು ಕಟ್ಟಿ ನೇತು ಹಾಕಿ ಏಟು, ಮೈಗೆ ಜೇನು ಬಳಿದು ಇರುವೆ ಗೂಡಿನ ಮೇಲೆ ಕುಳ್ಳಿರಿಸುವ ಶಿಕ್ಷೆ ನೀಡುತ್ತಿದ್ದರೆಂದು ನೆನಪಿಸಿಕೊಳ್ಳುತ್ತಾರೆ. ಹಾಗೆಯೇ ಸತ್ಯ ಮಾಡಲು ಕಾಯಿಸಿದ ಹಾರೆಯನ್ನು ಕೈಲಿ ಹಿಡಿಸುವುದು ಇದ್ದಿತೆಂದು ಹೇಳುತ್ತಾರೆ. ಇದನ್ನು ತಿಳಿದಾಗ ಸೋಲಿಗರು ತಪ್ಪು ಮಾಡಿದಾಗ, ನ್ಯಾಯ ಪಂಚಾಯತಿಯ ಮೂಲಕ ಶಿಕ್ಷೆಯನ್ನು ಈ ರೀತಿಯಲ್ಲಿ ನೀಡುತ್ತಿದ್ದರು ಎಂದು ತಿಳಿಯುತ್ತದೆ. ಯಾರೇ ತಪ್ಪು ಮಾಡಿದರೂ ಅವರನ್ನು ಒಂದು ಮರಕ್ಕೆ ರಾತ್ರಿ ಇಡೀ ಕಟ್ಟಿ ಹಾಕಿ ಮೈಮೇಲಿನ ಬಟ್ಟೆಯನ್ನು ತೆಗೆದು ಹಾಕಿ ಅವರ ಮೇಲೆ ಜೇನು ತುಪ್ಪವನ್ನು ಸುರಿದು ಎರಡು ಕೈ, ಎರಡು ಕಾಲನ್ನು ಬಿಗಿಯಾಗಿ ಮರಕ್ಕೆ ಕಟ್ಟಿ ಬಿಡುತ್ತಿದ್ದರು. ದಿನವೆಲ್ಲ ಅವರು ಹಾಗೆಯೇ ಇದ್ದು ಬೆಳಿಗ್ಗೆ ಆದ ಮೇಲೆ ತಪ್ಪೊಪ್ಪಿಕೊಂಡು ಕುಲಕ್ಕೆ ತಪ್ಪು ಕಾಣಿಕೆಯನ್ನು ಕೊಟ್ಟು ಹೋಗುತ್ತಿದ್ದರು. ಆದರೆ

ಇತ್ತೀಚೆಗೆ ಈ ರೀತಿಯ ಶಿಕ್ಷೆಗಳನ್ನು ಮಾಡುವುದಿಲ್ಲ. ಪ್ರಸ್ತುತ ಹಣವನ್ನು ತಪ್ಪಿನ ಕಾಣಿಕೆಯ ರೂಪದಲ್ಲಿ ತೆಗೆದುಕೊಳ್ಳುತ್ತಾರೆ ಹಾಗು ಸಮುದಾಯದಿಂದ ಹೊರ ಹಾಕುವುದನ್ನು ಮಾಡುತ್ತಾರೆ.

**ಜಾತಿಯಿಂದ ಹೊರ ಹಾಕುವುದು:** ಬೇರೆ ಜಾತಿಯವರನ್ನು ಮದುವೆಯಾಗಿದ್ದರೆ, ಕದ್ದು ಬಸುರಿಯಾಗಿದ್ದರೆ, ಚಪ್ಪಲಿ ಏಟು ತಿಂದಿದ್ದರೆ, ಮನೆಯ ಒಳಗಡೆ ಚಪ್ಪಲಿ ತೆಗೆದುಕೊಂಡು ಹೋಗಿದ್ದರೆ, ಇನ್ನು ಕೆಲವು ವಿಷಯಗಳಿಗೆ ಹಿಂದೆ ಕಟ್ಟುನಿಟ್ಟಾಗಿ ಜಾತಿಯಿಂದ ಹೊರ ಹಾಕುವುದೇ ಒಂದು ದೊಡ್ಡ ಶಿಕ್ಷೆ. ಈ ಶಿಕ್ಷೆಯನ್ನು ಘೋರವಾಗಿ ಆಚರಣೆ ಮಾಡುತ್ತಿದ್ದರು. ಇವರಿಗೆ 'ಕೈಲಿ ಕಕ್ಕೆ ಸೊಪ್ಪು ಕೊಟ್ಟು ದನದ ಮೂಳೆ ಸರ ಹಾಕಿ ಇವರು ಜನಕ್ಕಿಲ್ಲ ಜಾತಿಗಿಲ್ಲ, ಕುಲಕ್ಕಿಲ್ಲ, ಕೂಟಕ್ಕಿಲ್ಲ, ಇವರ ಹತ್ತಿರ ಬೆಂಕಿ, ಬಿಸಿನೀರು ಎತ್ತಬೇಡಿ ಎಂದು ಕಟ್ಟಪ್ಪಣೆ ಮಾಡುತ್ತಿದ್ದರಂತೆ' ಎಂದು ಹಿರಿಯ ಸೋಲಿಗರು ತಿಳಿಸಿರುತ್ತಾರೆ. ಆದರೆ ಇತ್ತೀಚೆಗೆ ಈ ರೀತಿಯ ಕಟ್ಟಪ್ಪಣೆ ಸ್ವಲ್ಪ ಕಡಿಮೆಯಾಗಿದೆ. ಹಿಂದೆ ಇದ್ದ ಸಂಕುಚಿತತೆ ಸ್ವಲ್ಪ ಕಡಿಮೆಯಾಗಿ ತಮ್ಮಲ್ಲಿ ಸ್ವೀಕಾರ ಮಾಡುವ ಮನೋಭಾವ ಬಂದುಬಿಟ್ಟಿದೆ. ಕಾರಣ ಸೋಲಿಗರ ಮಕ್ಕಳು ಹೊರ ಜನರ ಸಂಪರ್ಕ, ಒಡನಾಟ, ಶಿಕ್ಷಣ ವಿವಿಧ ಕ್ಷೇತ್ರಗಳಲ್ಲಿ ಭಾಗವಹಿಸುವಿಕೆಯಿಂದ ಈ ರೀತಿಯ ಉದ್ಧಾರ ಭಾವನೆಗಳು ಬರತೊಡಗಿದೆ. ಸೋಲಿಗರ ಬದುಕಿನ ಹಿನ್ನೆಲೆಯಲ್ಲಿ ನ್ಯಾಯ ಪದ್ಧತಿಯು ರೂಪುಗೊಂಡಿರುವಂಥದಾಗಿದ್ದು, ಅದರ ಮೇಲೆ ಪ್ರಕೃತಿಯ ಗಾಢವಾದ ಪ್ರಭಾವವಿದೆ. ಇದರಿಂದಾಗಿಯೇ ಸೋಲಿಗರಲ್ಲಿ ಪ್ರಕೃತಿಯ ಆರಾಧನೆ ಹೆಚ್ಚಾಗಿದೆ. ಇಂದಿಗೂ ಅವರು ಗಿಡ, ಮರ, ಬಳ್ಳಿ ಹಾಗೂ ಕೆಲವು ಪ್ರಾಣಿಗಳನ್ನು ತಮ್ಮ ಕುಲದ ಚಿಹ್ನೆಯಾಗಿ ಪೂಜಿಸುತ್ತಾರೆ. ದೇವರುಗಳ ರೂಪದಲ್ಲಿ ಆರಾಧಿಸುತ್ತಿದ್ದಾರೆ. ಸೋಲಿಗರ ಸಾಂಸ್ಕೃತಿಕ ವ್ಯವಸ್ಥೆಯೊಳಗೆ ಕುಲದ ಪಾತ್ರ ತುಂಬಾ ಪ್ರಮುಖವಾದದ್ದು. ಇಲ್ಲಿನ ಕುಲಗಳು ಸೋಲಿಗರಲ್ಲಿ ಬಾಂಧವ್ಯವನ್ನು ಬೆಸೆಯುವುದಲ್ಲದೆ, ಸಂಸ್ಕೃತಿಯ ಕಾರ್ಯ ಚಟುವಟಿಕೆಗಳಿಗೆ ಬುನಾದಿಯಾಗಿ ನಿಲ್ಲುತ್ತವೆ. ಯಜಮಾನ ನ್ಯಾಯದ ಸಂದರ್ಭದಲ್ಲಿ ತೀರ್ಮಗಾರರಾಗಿ ಹಲವಾರು ರೀತಿಯಲ್ಲಿ ಸಹಾಯಕರಾಗಿ ಎಲ್ಲರಿಗೂ ಒಪ್ಪುವ ರೀತಿಯಲ್ಲಿ ತೀರ್ಪನ್ನು ಅತ್ಯಂತ ಜಾಗರೂಕತೆಯಿಂದ ನಿರ್ವಹಿಸುತ್ತಾನೆ. ಅವುಗಳಲ್ಲಿ ಪ್ರಮುಖವಾಗಿ ವೀಳ್ಯ ಕೊಡುವುದು, ಕಟ್ಟುಕಟ್ಟುವುದು ಅಂದರೆ, ನ್ಯಾಯ ಪಂಚಾಯಿತಿಯಲ್ಲಿ ಯಜಮಾನ ಹಾಗೂ ನ್ಯಾಯದ ಕಟ್ಟೆಯಲ್ಲಿ ಕೂಡುವುದು ಅಂದರೆ, ನಿಯಮದ ಪ್ರಕಾರ ನಡೆದುಕೊಳ್ಳುವಂತೆ ಸೂಚಿಸುವುದು. ಕಂಬಳಿ ಗದ್ದುಗೆ ಕೆಲಸವನ್ನು ನ್ಯಾಯ ಪಂಚಾಯಿತಿಯಲ್ಲಿ ಯಜಮಾನರು ಮಾಡಿಸುತ್ತಾರೆ. ಅಂದರೆ ನ್ಯಾಯದ ಪ್ರಾರಂಭದಲ್ಲಿ ಶುಚಿಯಾಗಿ ನೀರು ತಂದು ಕಲಶದಲ್ಲಿ ಹಾಕಿ ಪೂಜೆ ಮಾಡಿ ಕುಲಕ್ಕೆ ವೀಳ್ಯ ಕೊಟ್ಟು ನಮಸ್ಕರಿಸುತ್ತಾರೆ.

ಸೋಲಿಗ ಸಮುದಾಯದವರು ಆಧುನಿಕ ನ್ಯಾಯಾಲಯಗಳಿಗೆ ಹೆಚ್ಚು ಹೋಗುವುದಿಲ್ಲ. ಅವರು ತಮ್ಮ ಕುಲ, ಕುಲದ ಯಜಮಾನ, ವಂಶಸ್ಥರು, ಗುಂಪಿನ, ಪೋಡಿನ, ಕಾಲೋನಿಯ ಮುಖ್ಯಸ್ಥರು ನೀಡಿದ ಪರಿಹಾರದಿಂದಲೇ ತೃಪ್ತರಾಗುತ್ತಾರೆ. ಈಗಲೂ ಸಹ ಬಹುತೇಕ ಸೋಲಿಗ ಸಮುದಾಯದವರಿಗೆ ಆಧುನಿಕ ಕಾನೂನಿನ ವ್ಯವಸ್ಥೆ ತಿಳಿಯದು. ಒಂದುವೇಳೆ ತಿಳಿದಿದ್ದರೂ ಸಹ, ಮೊದಲು ನಮ್ಮ ನ್ಯಾಯಸ್ಥರು ಹಾಗೂ ಕುಲಸ್ಥರನ್ನೂ ಕೇಳಿ ಆನಂತರ ನಾವು ಮುಂದುವರಿಯುತ್ತೇವೆ ಎಂಬ ಭಾವನೆ ಇದೆ ಎಂದರೆ ತಪ್ಪಾಗಲಾರದು. ಸೋಲಿಗರ ಸಮುದಾಯದಲ್ಲಿ ಅವರದೇ ಆದ ಸಾಮಾಜಿಕ, ಸಾಂಸ್ಕೃತಿಕ, ಆಚಾರ, ವಿಚಾರ, ನಂಬಿಕೆ ಸಂಪ್ರದಾಯಗಳು ಇವೆ. ಇವುಗಳೇ ಅವರ ಚಹರೆ ಗುರುತುಗಳಾಗಿ ಕಂಡುಬರುತ್ತವೆ. ಕೆಲವು ಸಲ ಇವುಗಳು ಅಭಿವೃದ್ಧಿಗೆ ಮಾರಕವಾಗುವುದಕ್ಕೆ ಕಾರಣವಾದರೆ,

ಮತ್ತೊಂದು ಕಡೆ ಅಭಿವೃದ್ಧಿಗೂ ಸಹಾಯಕವಾಗುತ್ತದೆ. ಉದಾಹರಣೆಗೆ ಸೋಲಿಗರಲ್ಲಿ ಸಮಪಾಲು ಹಂಚಿ ತಿನ್ನುವ ಪದ್ಧತಿ, ರೊಟ್ಟಿ ಹಬ್ಬ ಆಚರಣೆ, ಗಂಡ ಬಿಟ್ಟ ಮಗಳು ತಾಯಿಯ ಮನೆಯಲ್ಲಿ ವಾಸ ಮಾಡಬಹುದು; ಆಕೆಗೆ ಯಾವುದೇ ಬಲವಂತವಾಗಿ ಗಂಡನ ಮನೆಗೆ ನೀನು ಹೋಗು ಎಂದು ಹೇಳುವುದಿಲ್ಲ. ಈ ಎಲ್ಲಾ ಪರಿಣಾಮಕಾರಿಯಾದ ಅಂಶಗಳನ್ನು ಸೋಲಿಗ ಸಮುದಾಯದಲ್ಲಿ ಕಾಣುತ್ತೇವೆ.

ಸೋಲಿಗರಲ್ಲಿ ಯಜಮಾನರು ಸಮುದಾಯದಲ್ಲಿ ಮುಖ್ಯವಾಗಿರುತ್ತಾರೆ. ಎಂತಹ ಜವಾಬ್ದಾರಿ ವಿಷಯಗಳನ್ನು ಇವರು ನಿಭಾಯಿಸುತ್ತಾರೆ. ಸಾಮಾನ್ಯವಾಗಿ ಸಳಕರು ಕುಲ ಅಥವಾ ಹಾಲುರು ಕುಲದವರನ್ನು ಯಜಮಾನ ಸ್ಥಾನದಲ್ಲಿ ಕೂರಿಸುತ್ತಾರೆ. ಈ ವ್ಯವಸ್ಥೆಯನ್ನು ತಲೆ-ತಲೆಮಾರಿನಿಂದ ರೂಢಿಸಿಕೊಂಡು ಬಂದಿದ್ದಾರೆ. ಇವರು ಸೋಲಗಿತ್ತಿ ತಮ್ಮ ಪುಸುಮಾಲೆಯ ಮುದ್ರೆಯುಂಗುರಕ್ಕೆ ಹಕ್ಕುದಾರರು. ನ್ಯಾಯದಲ್ಲಿ ತೀರ್ಮಾನ ಹೇಳುವವರು. ಸೋಲಿಗರಲ್ಲಿ ಯಜಮಾನರನ್ನು ಸರ್ವಾನುಮತ ದಿಂದ ಆಯ್ಕೆ ಮಾಡುತ್ತಾರೆ.

ಯಜಮಾನ ಸೋಲಿಗಿತ್ತಮ್ಮನ ಮೊಹರು ಬೊಮ್ಮೆಗೌಡನ ಮಗಳಾದ ಪುಸುಮಾಲೆಯ ಬಂಗಾರದ ಮೊಹರೆಂದು ಪ್ರಸಿದ್ಧಿ. ಬಿಳಿಗಿರಿರಂಗ ಸ್ವಾಮಿಯನ್ನು ಸೋಲಿಗರ ಪುಸುಮಾಲೆ ಮದುವೆಯಾದ್ದರಿಂದ ರಂಗನು ಸೋಲಿಗರಿಗೆ ಭಾವನಾದ. ಸೋಲಿಗರಿಗೆ ತಮ್ಮವನೇ ಆಗಿ ಒಲಿದು ಬಂದ ದೈವ. ಈ ಮುದ್ರೆಯುಂಗುರವು ಯಜಮಾನನ ಬಳಿ ಇರಬೇಕು. ಸಳಕರು ಕುಲದ ಹಿರಿಯ ಉತ್ತಮ ಗುಣವನ್ನು ಮತ್ತು ಎಲ್ಲರಿಂದಲೂ ಒಳ್ಳೆಯವರೆಂದಿನಿಸಿರುವ ಕೆಲವು ಹೆಸರುಗಳನ್ನು ಬರೆದು ಚೀಟಿಯಲ್ಲಿ ಬಿಳಿಗಿರಿರಂಗಪ್ಪನ ಪಾದದಲ್ಲಿ ಹಾಕುತ್ತಾರೆ. ಈ ಕಾರ್ಯವು ತೆಪ್ಪೋತ್ಸವ ಸಮಯದಲ್ಲಿ ಬಿಳಿಗಿರಿರಂಗಸ್ವಾಮಿ ದೇವಸ್ಥಾನದಲ್ಲಿ ಅರ್ಚಕರ ಸಹಾಯದಿಂದ ನಡೆಯುತ್ತದೆ. ಅವರ ಕೈಯಲ್ಲಿ ಯಾರ ಹೆಸರು ಬರುತ್ತದೆಯೋ ಅವರನ್ನು ಕೆಲವು ವರ್ಷ ಅಂದರೆ, ಸುಮಾರು ೫ ವರ್ಷಗಳ ಕಾಲ **'ದೊಡ್ಡ ಯಜಮಾನರನ್ನಾಗಿ'** ಮಾಡಿ ಅವರ ಕೈಯಲ್ಲಿ ಮುದ್ರೆಯುಂಗುರವನ್ನು ಸಮುದಾಯವು ದಯಪಾಲಿಸುತ್ತದೆ. ಇದರೊಂದಿಗೆ ಯಜಮಾನರಿಗೆ ಅದೇ ಪೆಟ್ಟಿಗೆಯಲ್ಲಿ ರಂಗಪ್ಪಸ್ವಾಮಿಯ ಉಂಗುರವನ್ನು ಕೊಡುತ್ತಾರೆ. ಅದು ಬೆಳ್ಳಿಯ ಉಂಗುರವಾಗಿರುತ್ತದೆ. ಇವರು ಸಮುದಾಯಕ್ಕೆ ಮುಖ್ಯಸ್ಥರಾಗಿರುತ್ತಾರೆ. ಯಜಮಾನರು ದೊಡ್ಡ ನ್ಯಾಯ ತೀರ್ಮಾನ ನೀಡುವಾಗ ಈ ಪೆಟ್ಟಿಗೆಯನಿಟ್ಟುಕೊಂಡು ಕಡೆಯಲ್ಲಿ ಆ ಪೆಟ್ಟಿಗೆಗೆ ನಮಸ್ಕಾರ ಸಲ್ಲಿಸುತ್ತಾರೆ. ವಿಚಾರಣೆ, ಚರ್ಚೆಗಳ ನಂತರ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ತೀರ್ಮಾನವನ್ನು ಪದಾಧಿಕಾರಿಗಳೆಲ್ಲ ಒಪ್ಪಿದ ನಂತರ ಯಜಮಾನರು ಉಚ್ಚರಿಸುತ್ತಾರೆ. ನ್ಯಾಯ ತೀರ್ಮಾನವನ್ನು ಕೊಡುತ್ತಾರೆ. ಹಿಂದಿನ ಕಾಲದಲ್ಲಿ ತಪ್ಪು ಮಾಡಿದವರಿಗೆ ವಿವಿಧ ರೀತಿಯಲ್ಲಿ ಶಿಕ್ಷೆಗಳನ್ನು ಕೊಡುತ್ತಿದ್ದರು. ಆದರೆ ಇತ್ತೀಚೆಗೆ, ಸಾಮಾನ್ಯವಾಗಿ ರೂ.೧೦೦೧/- ರಿಂದ ಹಿಡಿದು ೧೦೦/- ರೂ. ೫೦/- ರೂ. ೧೨.½ ರೂ.ಗಳಿಗೂ ಇಳಿಸಿಕೊಳ್ಳುವ ರೂಢಿ ಇದೆ. ನ್ಯಾಯ ಪಂಚಾಯತಿಯಲ್ಲಿ ಯಜಮಾನರಿಗೆ 'ವೀಳ್ಯ' ಕೊಡುತ್ತಾರೆ. ಇಬ್ಬರು ಸೋಲಿಗ ವ್ಯಕ್ತಿಗಳಲ್ಲಿ ವೈಮನಸ್ಸು ಉಂಟಾಗಿ ಅದನ್ನು ಪರಿಹರಿಸಲು ಅವರ ಕೈಯಿಂದ ಯಜಮಾನರಿಗೆ ವೀಳ್ಯ ಕೊಡಿಸುವುದರ ಮೂಲಕ, ಇದು ತಪ್ಪಾಯ್ತು ನಮ್ಮ ಕ್ಷಮಿಸಿ ನಿಮ್ಮ ಹೊಟ್ಟೆಗೆ ಹಾಕಿಕೊಂಡು ನಮ್ಮನ್ನು ಬದುಕಲು ದಾರಿ ತೋರಿಸಿ ಎಂದು ಹೇಳಿ ತಪ್ಪು ಕಾಣಿಕೆ ನೀಡುವುದರ ಮೂಲಕ ಯಜಮಾನ ಸಮಸ್ಯೆಯನ್ನು ಪರಸ್ಪರ ವೀಳ್ಯ ಕೊಟ್ಟು ಎರಡೂ ಕೈಯಗಳನ್ನು ಹಿಡಿದುಕೊಂಡು ಇಬ್ಬರನ್ನು ಒಂದು ಮಾಡುತ್ತಾರೆ.

**ಕೊನೆಟಿಪ್ಪಣಿಗಳು**


೧. Anantha krishna iyer L.K, 1935, Mysore Tribes and Castes, Mysore University Mysore, P. 593

೨. Saradindu bose, 1991, Shifting Cultivation in India, Director General Anthropological Survey of India, P. 261

೩. ಸೋಮಸುಂದರಂ ಎಚ್ ಎನ್, ೨೦೦೯, "ಸೋಲಿಗ ಸಿರಿ" ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಬಿಳಿಗಿರಿರಂಗನ ಬೆಟ್ಟ, ಪು. ೪

೪. ಸೋಮು ಹೊಸಬೀಡು ಎಚ್ ಆರ್, ೨೦೦೨, ಭಾರತೀಯ ಸಮಾಜ ಅಧ್ಯಯನ, ಪು. ೩೫

೫. ವಿಜಯಭಟ್, 'ವಿವಾಹ ಮತ್ತು ಮಹಿಳೆ' ಎಂಬ ಪುಸ್ತಕದಲ್ಲಿ ವಿವಾಹದ ಪದ್ಧತಿಗಳ ಬಗ್ಗೆ ಹಲವಾರು ಮಾಹಿತಿಯನ್ನು ತಿಳಿಸಿದ್ದಾರೆ. ಪು. ೩೨

೬ ಚಂದ್ರು ಕಾಳೇನಹಳ್ಳಿ, ೨೦೦೬, *ಸೋಲಿಗರ ಸಂಸ್ಕೃತಿ,* ಕರ್ನಾಟಕ ಜನಪದ ಅಕಾಡೆಮಿ, ಬೆಂಗಳೂರು. ಪು. ೬೯

೭ Edgar Thurston, Rangachari K,1909, *Caste and Tribes of Southern India*, Vol.4 – 6, Asian Educational Serices, New Delhi, P. 379

೮. ಮೈತ್ರಿ ಕೆ ಎಂ, ೨೦೦೨, *ಬುಡಕಟ್ಟು ಕುಲಕಸುಬುಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೨೧

## ಅಧ್ಯಾಯ ನಾಲ್ಕು

# ಸೋಲಿಗರು ಬುಡಕಟ್ಟಿನ ಆರ್ಥಿಕ ವ್ಯವಸ್ಥೆ

೪.೧. ಕೃಷಿ ವ್ಯವಸ್ಥೆ

೪.೨. ಕಿರು ಅರಣ್ಯ ಉತ್ಪಾದನೆ

೪.೩. ಜೇನು ಬೇಟೆ ಮತ್ತು ಕೂಲಿ

೪.೪. ಅರಣ್ಯ ಇಲಾಖೆಯ ಕೆಲಸಗಳು

ಅಧ್ಯಾಯ ನಾಲ್ಕು

# ಸೋಲಿಗರು ಬುಡಕಟ್ಟಿನ ಆರ್ಥಿಕ ವ್ಯವಸ್ಥೆ

ಜೀವ ಪ್ರಪಂಚದಲ್ಲಿ ಮಾನವ ಒಂದು ಅಣು ಮಾತ್ರ, ಆದರೆ ಮಾನವನ ಸಾಧನೆ ಇತರೆ ಪ್ರಾಣಿಗಳಿಗಿಂತಲೂ ಮಿಗಿಲಾದದ್ದು. ಬೇಟೆಗಾರಿಕೆ, ಆಹಾರ ಸಂಗ್ರಹಣೆ, ಪಶುಪಾಲನೆ, ಮೀನುಗಾರಿಕೆ, ಕೃಷಿ, ವಾಣಿಜ್ಯ ಇತ್ಯಾದಿ ಕಾರ್ಯಗಳನ್ನು ಹಲವಾರು ಮಜಲುಗಳಲ್ಲಿ ಕಾಣುತ್ತಾ ಆದಿಮಾನವನು ಸಾಮಾಜಿಕ ಪ್ರಾಣಿಯಾದ ಕ್ರಮವು ರೋಚಕವಾದುದು. ಕಾಡಿನಿಂದ ಸ್ಥಳಾಂತರ ಕ್ರಮವು ರೋಚಕವಾದುದ್ದು. ಕಾಡಿನಿಂದ ಸ್ಥಳಾಂತರಗೊಂಡ ಬುಡಕಟ್ಟುಗಳು ಕಾಡು, ನಾಡಾದಾಗ ಕಾಡಾಶ್ರಿತ ಬುಡಕಟ್ಟುಗಳ ಕಸುಬಿಗೆ ತೊಂದರೆ ಬಂದೊದಗಿರುವುದು ಸಹಜ. ಹೀಗಾಗಿ ಇಂದು ಕುಲಕಸುಬುಗಳಿಗಿರುವ ಅರ್ಥ ಭಿನ್ನವಾಗಿರುವುದು. ಹಲವು ನಾಜೂಕಾದ ಕಲಾತ್ಮಕವಾದ ಕೆಲಸಗಳನ್ನು ಮಾತ್ರ ಕುಲಕಸುಬಾಗಿ ಉಳಿಸಿಕೊಳ್ಳಲು ಇಂದಿಗೂ ಹಲವು ಸಮುದಾಯಗಳಿಗೆ ಸಾಧ್ಯವಾಗಿಲ್ಲ. ಅಂದು ಆದಿಮಾನವನಾಗಿದ್ದ ಸಮುದಾಯ ಬೇಟೆಗಾರನಾಗಿ ಹುಟ್ಟಿ ಬೇಟೆಗಾರನಾಗಿ ಬೆಳೆದು ಬೇಟೆಗಾರನಾಗಿಯೇ ಸಾವನ್ನಪ್ಪುವವನಾಗಿದ್ದರೆ ಇಂದು ಹಾಗಾಗುವುದು ಕಷ್ಟಸಾಧ್ಯ. ಇದು ತದನಂತರದಲ್ಲಿ ಬೇಟೆಗಾರ, ಪಶುಪಾಲಕ, ಕೃಷಿಕಾರ, ವ್ಯಾಪಾರಿ ಇತ್ಯಾದಿ ಬದಲಾವಣೆ ಕಂಡು ಬಂದಿರುತ್ತದೆ. ಹೀಗಾಗಿ ಇಂದು ಕಸುಬಿನ ಆಧಾರದ ಮೇಲೆ ಕುಲದ ಪರಿಚಯ ಸಂಕೀರ್ಣವಾಗಿರುವುದು. ಕಲಾತ್ಮಕತೆ ಕಸುಬಾಧಾರಿತ ಕುಲಗಳ ಹುಟ್ಟಿಗೆ ಕಾರಣವಾದರೆ, ಕುಲಕಸುಬುಗಳ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕತೆ ಇತ್ಯಾದಿ ಅಸಮಾನತೆಗೆ ಕಾರಣವಾಗುವುದು. ಈ ಅಸಮಾನತೆಯೇ ಸಾಮಾಜಿಕ ಸಮಸ್ಯೆಯಾಗಿದೆ. ಆದರೂ ಸಹ, ಈ ಬರವಣಿಗೆ ಯಲ್ಲಿ Might is right ಎಂಬ ಕಾಲವೊಂದಿತ್ತು. ಅಲ್ಲಿ ಅಶಕ್ತ ಜೀವಿಗಳಿಗೆ ಉಳಿಗಾಲವಿರಲಿಲ್ಲ. ನ್ಯಾಯ ಅನ್ಯಾಯಗಳ ಪರಿವೆ ಅವುಗಳಿಗೆ ಇರಲಿಲ್ಲ. ಬಲಿಷ್ಠವಾದವು ಬದುಕುತ್ತಿದ್ದವು. ಒಂದು ಇನ್ನೊಂದನ್ನು ತಿಂದು ಬದುಕುವುದು ಸಹಜವಾಗಿತ್ತು. ಅದು ಭಯಾನಕವಾದಾಗ ತಮ್ಮ ಸಂತತಿಯ ಉಳಿವಿಗಾಗಿ ನೀತಿ ನಿಯಮಗಳನ್ನು ರೂಪಿಸಿಕೊಂಡು ತಾನು ಬದುಕಿ ಇತರರನ್ನು ಬದುಕುಳಿಯುವಂತೆ ಮಾಡಿಕೊಂಡ ಪ್ರಾಣಿಗಳಲ್ಲಿ ಮಾನವ ಮೊದಲಿಗ. ಹೀಗಾಗಿ ಮಾನವ ಸಾಮಾಜಿಕ ಪ್ರಾಣಿಯಾದರೆ ಇತರೆ ಜೀವಿಗಳು ಜೀವಿಗಳಾಗಿಯೇ, ಪ್ರಾಣಿಗಳು ಪ್ರಾಣಿಗಳಾಗಿಯೇ ಉಳಿದವು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಸೋಲಿಗರು ತಾವು ತಮ್ಮ ಸಮುದಾಯದ ಉಳಿವಿಗಾಗಿ ನೀತಿ, ನಿಯಮಗಳನ್ನು ರೂಢಿಸಿಕೊಂಡು, ತಾನೂ ಬದುಕಿ ತನ್ನ ಸಮುದಾಯದ ಉಳಿವಿಗಾಗಿ ಸಹ ಜೀವನ ನಡೆಸುತ್ತಾ ಹಂಚಿ ತಿನ್ನುವ ಪದ್ಧತಿ, ಸರಳ ಜೀವನ ನಡೆಸುವುದನ್ನು ಇಂದಿಗೂ ನೋಡುತ್ತೇವೆ.

ಆರಂಭದಲ್ಲಿ ಆಹಾರ ಸಂಗ್ರಹಣೆ ಮತ್ತು ಬೇಟೆಯಾಡುತ್ತಾ ಆದಿಮಾನವರು ಎಂದು ಗುರುತಿಸುತ್ತಾ ಭೌತಿಕವಾಗಿ ಭಿನ್ನವಾಗಿದ್ದು, ಬೆಂಕಿಯ ಬಳಕೆ, ಗುಂಪು ಜೀವನ, ಧಾರ್ಮಿಕ ನಂಬಿಕೆಗಳ ಉಗಮ,

ಕುಮರಿ ಬೇಸಾಯ(ಕಳಕೊಟ್ಲು ಬೇಸಾಯ) ಪ್ರಾರಂಭವಾಯಿತು. ಸೋಲಿಗರು ಆಧುನಿಕ ಯುಗದಲ್ಲಿಯೂ ಚಾಮರಾಜನಗರ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳಲ್ಲಿ ವಾಸವಾಗಿರುವ ಬಿಳಿಗಿರಿರಂಗನ ಬೆಟ್ಟ, ಮಲೆಮಹದೇಶ್ವರ ಬೆಟ್ಟ ಹಾಗೂ ಗೋಪಾಲಸ್ವಾಮಿ ಬೆಟ್ಟದ ಕಾಡಿನ ಒಳಗೆ ಹಾಗೂ ಕಾಡಂಚಿನಲ್ಲಿ ಕಳಕೊಟ್ಲು ಬೇಸಾಯ ಅಥವಾ ಕೈ ಗುದ್ದಲಿ ಬೇಸಾಯ ಕ್ರಮವನ್ನೂ ಅನುಸರಿಸುತ್ತಿದ್ದಾರೆ. ಕಾಡು ಮತ್ತು ಕಾಡಂಚಿನ ಗುಡ್ಡಗಳಲ್ಲಿ ಆಧುನಿಕವಾದ ಯಂತ್ರಗಳನ್ನಾಗಲೀ ಅಥವಾ ಉಳುಮೆ ಮಾಡಲು ಆಗುವುದಿಲ್ಲವಾದ್ದರಿಂದ ಕೈ ಗುದ್ದಲಿಯಿಂದಲೇ ಬೇಸಾಯ ಮಾಡುತ್ತಾರೆ. ಅದರಲ್ಲೂ ಮುಖ್ಯವಾಗಿ ಇಂತಹ ಪ್ರದೇಶಗಳಲ್ಲಿ ವ್ಯವಸಾಯದಲ್ಲಿ ಮಹಿಳೆಯೇ ಪ್ರಮುಖವಾಗಿ ಭಾಗವಹಿಸುವುದನ್ನು ಈಗಲೂ ಕಾಣಬಹುದು.

"The Podu Cultivation is done mainly on hill slopes and mountain ridges in the forest after the local communites are fored. It is considered beneficial to cultivate on such places for reasons of saftley from the menace of Wild beasts, specially elephants. Small patches of land on the hill slopes are cleared off the forest growth, and cultivation is done on such lands fore a period of four years"[1] (p-36). ಸೋಲಿಗರು ಕಾಡಿನಲ್ಲಿ ತಮ್ಮ ವ್ಯವಸಾಯದ ಭೂಮಿಯನ್ನು ಹಸನುಮಾಡಿಕೊಂಡು, ತರಗೆಲೆ, ಸಣ್ಣಸಣ್ಣ ಮುಳ್ಳು ಗಿಡ, ಗಂಟಿಗಳನ್ನು ತೆಗೆದು ಹಾಕಿ ಸುಟ್ಟು ಬೂದಿ ಮಾಡಿ ಭೂಮಿಯನ್ನು ಹದ ಮಾಡಿಕೊಂಡು ಮಳೆ ಬಂದ ನಂತರ ವ್ಯವಸಾಯ ಮಾಡುತಿದ್ದರು. ತಮ್ಮ ಜಮೀನಿನ ಪಕ್ಕದಲ್ಲಿಯೇ ಪೋಡು ಕಟ್ಟಿಕೊಂಡು ವಾಸ ಮಾಡುತ್ತಿದ್ದರು.

"The Soligas houses, known as gudlu, are the temporary constructions in the forest field. They are built in order to suit their frequent Shifting from one habitat to another. The gudlu thst are found in different settlement of the Soliga do not vary in their sturtural pattern."[2]

ಒಂದು ಪೋಡು ಎಂದರೆ ಹತ್ತಾರು ಗುಡಿಸಲುಗಳ ಸಮೂಹ. ಹಿಂದೆ ಸೋಲಿಗರು ವ್ಯವಸಾಯದ ಭೂಮಿ ಹಾಗೂ ವಾಸಿಸುತ್ತಿದ್ದ ಗುಡಿಸಲುಗಳು ಒಂದೇ ಕಡೆ ಇದ್ದವು. ಕೃಷ್ಣ ಅಯ್ಯರ್ ಅವರು ತಮ್ಮ ಪುಸ್ತಕವಾದ "The Mysore Tribes and Castes"ರಲ್ಲಿ ಪೋಡು ಎಂಬ ಪದವನ್ನು ಗ್ರಾಮ ಎಂಬ ಅರ್ಥದಲ್ಲಿ ಬರೆಯುತ್ತಾರೆ. ಆದರೆ ಪೋಡಿಗೆ ಸಂಬಂಧಿಸಿದ ಹೆಚ್ಚಿನ ವಿವರಗಳನ್ನು ಮೊರಾಬ್ ಅವರು ತಮ್ಮ ಪುಸ್ತಕವಾದ The Soliga of Biligiri Rangana Hills, The Mysore Tribes and Castes ಪುಸ್ತಕದಲ್ಲಿ ವಿವರಿಸಿದ್ದಾರೆ. ಅನಂತಕೃಷ್ಣ ಅಯ್ಯರ್ ಹೇಳಿರುವ ಹಾಗೆ "There huts like tose of many of the jungle tribes are flimby one. Which consist of bamboos with both ends stuck into the ground so as to form an arch which is covered with plantain leaves the shlings, who inhabit. The jungles of the Coimbatore forests, near the Mysore Frontier, have present comparatively better huts for their residence."[3] (Anantha krishna iyer L.K :1935: 593)

Saradindu Bose 1991, Shifting Cultivation in India ,Director General Anthropological Survey of India.

"Assam, tekeongiu in Nagaland, hookuismoong in Tripura, Bagada, Taila, Koman, Dahi, and 'Podu' in Orissa, Penda, Bewar and 'Podu' in Andrapradesh."[4]

In Manipur the Kukis pay tribute to the village Chief for Cultivation who is the owner of all land in the village. Amoung some group of Naga people, hill slopes belong to the clan however, badly speaking there are three categories of land ownership patterns among Shifting Cultivation.

1. land owned by the village collectively

2. land owned by the individual families

Land owned by the chief or siem or clan, who distributes it among individuals. (Saradindu Bose 1991: 261)

'Shifiting cultivation among the Savaras of the Andra Pradesh Arunkumar Singh. A person having more permanent agricultural field may on the capabality home made of makes salb and wood. However, mostley agricultural field may a built house made of rocks slab and wood, however mostly they depend on locally availably materials for the construction of the house normalley mud and stone are used for the constretion up to the plitith afterwards mud walls are common characteristics. The roof is attached with the a kind of grass with are available near the 'Podu' field'.

'The Savaras are mainly agricultarist and they depend both on the shifting (podu) and Settled Cultivation.'[5] (278)

ಪಿ.ಕೆ. ಮಿಶ್ರ ಅವರು ಸಂಪಾದಿತ 'ದಿ ಪರ್ಟಿಕ್ಯುಲರ್ಲಿ ವಲ್ನೆರಬಲ್ ಟ್ರೈಬಲ್ ಗ್ರೂಪ್ಸ್ ಇನ್ ಇಂಡಿಯಾ' ೨೦೧೬ ಪುಸ್ತಕದಲ್ಲಿ ಸೈಮಲ್ ಕುಮಾರ್ ನಂದಾ ಬರೆದಿರುವ 'ದಿ ಬೋಂಡಾ ಆಫ್ ಒರಿಸ್ಸಾ' ಎಂಬ ತಮ್ಮ ಪ್ರಬಂಧದಲ್ಲಿ ಒಡಿಸ್ಸಾದಲ್ಲಿ ಬೋಂಡಾ ಸಮುದಾಯವು ಮಾಡುವ ಸ್ಥಳಾಂತರ ಬೇಸಾಯವನ್ನು ತಿಳಿಸಿದ್ದಾರೆ. ತಮ್ಮದೇ ಆದ ಪಾರಂಪರಿಕವಾದ ಬೆಳೆಗಳನ್ನು ಬೆಳೆಯುತ್ತಾ ಪೋಡು ಕಟ್ಟಿಕೊಂಡು ವ್ಯವಸಾಯ ಮಾಡಿ ಸುಸ್ಥಿರವಾದ ಜೀವನವನ್ನು ಸಾಗಿಸುತ್ತಾರೆ ಎಂದು ತಿಳಿಸುತ್ತ ತಮ್ಮ ಮನೆಗೆ ಅಡುಗೆಗೆ ಬೇಕಾಗುವ ತರಕಾರಿಗಳನ್ನು ಕಿಚನ್ ಗಾರ್ಡನ್‌ನಲ್ಲಿಯೇ ಬೆಳೆದು ಕೊಳ್ಳುತ್ತಿದ್ದಾರೆ ಎಂದು ತಿಳಿಸಿದ್ದಾರೆ.

ಅದನ್ನು ಓದಿದಾಗ ಸೋಲಿಗರೂ ಸಹ ಇವರ ರೀತಿಯಲ್ಲಿಯೇ ಹಿಂದೆ ಸ್ಥಳಾಂತರ ಬೇಸಾಯವನ್ನು ಮಾಡುತ್ತಾ ಅಲ್ಲಿಯೇ ತಮ್ಮ ಪೋಡುಗಳನ್ನು ಕಟ್ಟಿಕೊಂಡು ವಾಸ ಮಾಡುತ್ತಿದ್ದರು. ಹಾಗೆಯೇ ಇಂದಿಗೂ ಸೋಲಿಗರು ಪೋಡಿನಲ್ಲಿಯೇ ವಾಸಮಾಡುತ್ತ ತಮ್ಮದೇ ಆದ, ಪಾರಂಪರಿಕವಾದ ಬೆಳೆಗಳನ್ನು

ಬೆಳೆದು ಬಳಸುತ್ತ ಬದುಕು ನಡೆಸುತ್ತಿರುವುದನ್ನು ಚಾಮರಾಜನಗರ ಜಿಲ್ಲೆಯಲ್ಲಿನ ಸೋಲಿಗರಲ್ಲಿ ಕಾಣಬಹುದಾಗಿದೆ.

ಮೈತ್ರಿ ಕೆ ಎಂ, ಅವರು ತಮ್ಮ 'ಬುಡಕಟ್ಟುಗಳ ಕುಲಕಸುಬು' ಎಂಬ ಪುಸ್ತಕದಲ್ಲಿ ಸೋಲಿಗರ ಬಗ್ಗೆ ಹೀಗೆ ಹೇಳಿದ್ದಾರೆ. "ಸೋಲಿಗರು ಕೆತ್ಲು ಬೇಸಾಯವನ್ನು ಅಲ್ಲಲ್ಲಿ ಗುಂಪು ಗುಂಪು ಮನೆಗಳನ್ನು ಕಟ್ಟಿಕೊಂಡು ವ್ಯವಸಾಯ ಮಾಡುತ್ತಾರೆ"[೬] ಎಂದು ತಿಳಿಸಿದ್ದಾರೆ. ಹೀಗೆ ಹಲವು ಭಾಗಗಳಲ್ಲಿ ಪೋಡು ಕಟ್ಟಿಕೊಂಡು ಬುಡಕಟ್ಟು ಸಮುದಾಯವು ಅಲ್ಲಿಯೇ ತಮ್ಮ ವ್ಯವಸಾಯ ಮಾಡುತ್ತ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಅವುಗಳಲ್ಲಿ ಮಣಿಪುರ, ಒಡಿಸ್ಸಾ(ಬೋಂಡಾ ಬುಡಕಟ್ಟು), ನಾಗಾಲ್ಯಾಡ್ ಸಿಕ್ಕಿಮ್ ಆಂಧ್ರಪ್ರದೇಶ(ಗಡಬ ಬುಡಕಟ್ಟು), ಸವರ ಬುಡಕಟ್ಟು, ಬಿಹಾರ್ ಇನ್ನು ಮುಂತಾದ ರಾಜ್ಯಗಳಲ್ಲಿ ಪೋಡು ವ್ಯವಸ್ಥೆಯು ಇರುವುದನ್ನು ಕಾಣುತ್ತೇವೆ.

ಸೋಲಿಗ ಸಮುದಾಯವು ಕಾಡನ್ನೇ ಅವಲಂಬಿಸಿ ಆರ್ಥಿಕತೆಯನ್ನು ರೂಪಿಸಿಕೊಂಡಿದ್ದಾರೆ. ತಮ್ಮ ಕಸುಬುಗಳಾದ ಆಹಾರ ಸಂಗ್ರಹಣೆ, ಸಣ್ಣ ಪ್ರಮಾಣದ ಕೃಷಿ, ಬೇಟೆಗಾರಿಕೆ, ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆ ಮತ್ತು ಸಾಂಪ್ರದಾಯಿಕ ಜೀವನ ವಿಧಾನವನ್ನು ಹೊಂದಿದವರಾಗಿದ್ದಾರೆ. ಕುಮ್ರಿ ಬೇಸಾಯ, ಸ್ಥಳಾಂತರ ಬೇಸಾಯ, ಕೆತ್ತಲು ಬೇಸಾಯ, ಅರಣ್ಯಾಧಾರಿತ ಕೃಷಿ ಇವುಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ.

"The traditional economy of th soliga is mostly based on shifting cultivation and collection of minor forest produce. There are also other minor economic activities, like hunting, trapping, fishing and honey collecting. Trapping"[7]

ಸೋೀಲಿಗರಿಗೆ ವ್ಯವಸಾಯವೆಂದರೆ ಪ್ರಾಣ. ಅಲ್ಪ ಸ್ವಲ್ಪವಾದರೂ ವ್ಯವಸಾಯ ಮಾಡಿ ಅಲ್ಲಿ ರಾಗಿ, ಜೋಳ, ತೊಗರಿ, ಅವರೆ, ಹುರುಳಿ, ಗೆಡ್ಡನಕೀರೆ, ಸೊಪ್ಪು ಅದರಲ್ಲೂ ಸಾಸುವೆ ಸೊಪ್ಪು ಇವುಗಳನ್ನು ಬಿತ್ತಿ ವ್ಯವಸಾಯ ಮಾಡುತ್ತಾರೆ. ಈ ವ್ಯವಸಾಯವನ್ನು ಕಳಕೊಟ್ಟು ಬೇಸಾಯ ಅಥವಾ ಗುದ್ದಲಿ ಬೇಸಾಯ ಎಂದು ಕರೆಯುತ್ತಾರೆ.

**೪.೧. ಪರಿಸರಕ್ಕೆ ಹತ್ತಿರವಾದ ಸೋಲಿಗರ ವ್ಯವಸಾಯ**

ನಾಡಿನವರ ವ್ಯವಸಾಯ ಆರ್ಥಿಕತೆಯ ಮೂಲವನ್ನು ಒಳಗೊಂಡಿದೆ."[೮] ಆದರೆ ಸೋಲಿಗರಲ್ಲಿ ಹಾಗಿಲ್ಲ. ಆರ್ಥಿಕತೆ ಅವರಿಗೆ ಮುಖ್ಯವಾಗಿಲ್ಲ. ಇವರು ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಆಯ್ಕೆ ಮಾಡಿಕೊಳ್ಳುವ ಪ್ರದೇಶ ಎರಡು ಮುಖ್ಯ ಉದ್ದೇಶಗಳಿಂದ ಕೂಡಿದ್ದುದಾಗಿರಬೇಕು.

- ಕಾಡು ಪ್ರಾಣಿಗಳ ಓಡಾಟ ಕಡಿಮೆ ಇರುವ ಪ್ರದೇಶ ಅದಾಗಿರಬೇಕು.
- ವ್ಯವಸಾಯಕ್ಕೆ ಯೋಗ್ಯವಾದ ಪ್ರದೇಶ, ಅಲ್ಲಿ ಪೋಡು/ಗುಡಿಸಲು ಕಟ್ಟಿಕೊಂಡು ವಾಸಿಸಲು ಯೋಗ್ಯವಾದ ಸ್ಥಳವಾಗಿರಬೇಕು.

ಸೋಲಿಗರು ಪೋಡು ಮತ್ತು ಭೂಮಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಸೋಲಿಗರ ಗುರು–ಹಿರಿಯರು, ಯಜಮಾನರು ಮೊದಲು ಸೇರಿಕೊಂಡು ಹಳ್ಳುಶಾಸ್ತ್ರ, ಶಕುನ ಶಾಸ್ತ್ರ ನೋಡಿ ನಂತರ

ಒಳ್ಳೆಯದಾಗಿದೆ ಎಂದರೆ ಆ ಜಾಗವನ್ನು ಆಯ್ಕೆ ಮಾಡಿಕೊಳ್ಳುವರು. ಆಯ್ಕೆ ಮಾಡುವ ಸ್ಥಳವು ಕೆಲವೊಂದು ಪ್ರಮುಖ ಅಂಶಗಳಿಂದ ಕೂಡಿದೆ.

- ವ್ಯವಸಾಯ ಮಾಡಲು ಫಲವತ್ತೆಯಿಂದ ಕೂಡಿದ ಕಾನನವಾಗಿರಬೇಕು

- ನೀರು ಹತ್ತಿರದಲ್ಲಿ ದೊರೆಯುವಂತಿರಬೇಕು. ಪ್ರದೇಶವು ಯಾವುದೇ ನಿರ್ಬಂಧವಿಲ್ಲದ, ವಾಸಿಸಲು ಯೋಗ್ಯವಾಗಿರುವ ಸ್ಥಳವಾಗಿರಬೇಕು. ಆ ಸ್ಥಳವು ಸೋಲಿಗ ಸಮುದಾಯದಲ್ಲಿ ಎಲ್ಲರೂ ಮಾನಸಿಕವಾಗಿ ಒಪ್ಪಿಕೊಂಡಂತಹ ಸ್ಥಳವಾಗಿರುವುದು.

- ಅದು ಎತ್ತರವಾದ ಪ್ರದೇಶವಾಗಿರಬೇಕು.

- ನೀರು ಹತ್ತಿರದಲ್ಲಿ ದೊರೆಯುವಂತಿರಬೇಕು.

- ಕಾಡು ಪ್ರಾಣಿ, ಪಕ್ಷಿಗಳ ಓಡಾಟದಿಂದ ದೂರದಲ್ಲಿರಬೇಕು.

ಪೋಡು ಮತ್ತು ಭೂಮಿಯನ್ನು ಗೊತ್ತುಮಾಡಿದ ನಂತರ ಆ ಜಾಗದಲ್ಲಿರುವ ಹುಲ್ಲು, ಚಿಕ್ಕ ಚಿಕ್ಕ ಗಿಡಗಂಟಿಗಳನ್ನು ಹಾಗೂ ಪೊದೆಗಳನ್ನು ಕಡಿದು, ಅದಕ್ಕೆ ಬೆಂಕಿ ಹಾಕಿ ಮಧ್ಯದಲ್ಲಿರುವ ದೊಡ್ಡ ದೊಡ್ಡ ಮರಗಳನ್ನು ಕಡಿಯದೆ ವ್ಯವಸಾಯದ ಜಮೀನನ್ನು ಹಸನು ಮಾಡಿಕೊಳ್ಳುತ್ತಾರೆ. ಸೋಲಿಗರು ಕಾಡನ್ನು ನಾಶ ಮಾಡುತ್ತಿರಲಿಲ್ಲ. ವ್ಯವಸಾಯದ ಜಮೀನಿನ ಮಧ್ಯದಲ್ಲಿರುವ ದೊಡ್ಡ ದೊಡ್ಡ ಮರಗಳನ್ನು ಕಡಿಯದೇ ಹೊಲ ಕಾಯಲು, ಪ್ರಾಣಿ ಪಕ್ಷಿಗಳಿಂದ ಬೆಳೆಯನ್ನು ರಕ್ಷಿಸಲು, ಆ ಮರದ ಮೇಲೆ ಅಟ್ಟಣಿ ಅಥವಾ ಅಟ್ನಿ ಅಥವಾ ಗುಡಿಸಲು ಕಟ್ಟಿಕೊಂಡು ಬೆಳೆಯನ್ನು ಕಾಯುತ್ತಾರೆ.

ಸೋಲಿಗರು ಸ್ಥಳಾಂತರ ಬೇಸಾಯಗಾರರು(Shifting of Agricultures) ಇದನ್ನೇ ಮೊರಾಬ್ ಅವರು 'ಕೊಚ್ಚು ಮತ್ತು ಸುಡುವ ವ್ಯವಸಾಯ' 'Slash and Burn Cultivation' ಎಂದೂ ಕರೆಯುತ್ತಾರೆ. ವಿಶ್ವದಾದ್ಯಂತ ಸ್ಥಳಾಂತರ ಬೇಸಾಯ ಮಾಡುವ ಬುಡಕಟ್ಟುಗಳು ಕಂಡುಬರುತ್ತವೆ. ಭಾರತದ ನಾಗಾಲ್ಯಾಂಡ್, ತ್ರಿಪುರ, ಮಣಿಪುರ, ನೇಪಾಳ, ಮಿಜೋರಾಂ ಹಾಗೂ ಬಿಹಾರ, ಒರಿಸ್ಸಾ, ಮಧ್ಯಪ್ರದೇಶ ದಲ್ಲಿರುವ ಬಹುಪಾಲು ಬುಡಕಟ್ಟುಗಳ ಜನರೂ ಬುಡಕಟ್ಟುಗಳಲ್ಲಿ ಸ್ಥಳಾಂತರ ಬೇಸಾಯ ತುಂಬಾ ಪುರಾತನವಾದದು.

**ಸೋಲಿಗರ ಪ್ರಧಾನ ನಾಲ್ಕು ಬಗೆಯ ಕಸುಬುಗಳು**

✓ ಕಳಕೊಟ್ಟು ಬೇಸಾಯ / ಅರಣ್ಯ ಆಧಾರಿತ ಕೃಷಿ / ಸ್ಥಳಾಂತರ ಕೃಷಿ ಪದ್ಧತಿ.

✓ ಕಿರು ಅರಣ್ಯ ಉತ್ಪನ್ನ ಸಂಗ್ರಹಣೆ.

✓ ಬೇಟೆ(ಜೇನು) ಹಾಗೂ ಇತ್ತೀಚೆಗೆ ಕೂಲಿ ಹಾಗೂ ವಲಸೆ ಕೂಲಿ.

✓ ಅರಣ್ಯ ಇಲಾಖೆಯ ಕೆಲಸಗಳು.

**ಕಳಕೊಟ್ಟು ಬೇಸಾಯ/ಪಾರಂಪರಿಕ ಕೃಷಿ/ಅರಣ್ಯ ಆಧಾರಿತ ಕೃಷಿ/ಸ್ಥಳಾಂತರ ಕೃಷಿ ಪದ್ಧತಿ**

ಐತಿಹಾಸಿಕವಾಗಿ ಸೋಲಿಗರು ಜೀವನಾಧಾರಕ್ಕಾಗಿ ಅರಣ್ಯಾಧಾರಿತ ಕೃಷಿ ಪದ್ಧತಿಯಾದ ಕುಮ್ರಿ ಬೇಸಾಯ ಮಾಡುತ್ತಿದ್ದರು. ಕುಮ್ರಿ ಬೇಸಾಯ ಮಾಡುತ್ತಾ ಜಾಗದಿಂದ, ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು.

ಅಂದರೆ, ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ಇವರ ಎರಡು ಪ್ರಧಾನ ಲಕ್ಷಣಗಳೆಂದರೆ ನೇಗಿಲನ್ನು ಬಳಸದೇ ಗುದ್ದಲಿಯಿಂದ ಅಗೆದು ಬೆಳೆಯನ್ನು ಬೆಳೆಯುವುದು ಹಾಗೂ ನಿರ್ದಿಷ್ಟ ಪ್ರದೇಶದಲ್ಲಿ ಮೂರು ಸಲಕ್ಕಿಂತ ಹೆಚ್ಚಿನ ಬಾರಿಗೆ ಬೆಳೆ ತೆಗೆಯದೇ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದರು. ಇಲ್ಲಿ ನೇಗಿಲಿನ ಉಪಯೋಗವಿಲ್ಲ, ಅಂದರೆ, ಕೃಷಿ ವಿಸ್ತರಣೆಯೂ ಇಲ್ಲ. ಯಾವುದೇ ಭೂಮಿಯಲ್ಲಿ ಕಾಡು ಕಡಿದರೂ ನಂತರದಲ್ಲಿ ಮತ್ತೆ ಕಾಡು ಆವರಿಸುತ್ತದೆ. ದೊಡ್ಡ ಮರಗಳಿಗೆ ಯಾವುದೇ ತೊಂದರೆ ನೀಡುತ್ತಿರಲಿಲ್ಲ. ಇದನ್ನು ತಿಳಿದಿದ್ದ ಇವರು ಖಾಯಂ ಕೃಷಿ ಭೂಮಿಯ ಬದಲಾಗಿ ಕುಮ್ರಿ ಕೃಷಿಯನ್ನು ಅವಲಂಬಿಸಿ ಆ ಮೂಲಕ ಕಾಡಿಗೆ ಯಾವುದೇ ಅಪಾಯವೂ ಒದಗದಂತೆ ಸಮತೋಲನ ಕಾಪಾಡಿಕೊಂಡು ಬರುತ್ತಿದ್ದರು. ಹೀಗೆ ಇಡೀ ಕಾಡು ನಮ್ಮದು ಎಂಬ ಮನೋವೈಶಾಲ್ಯದಿಂದ ಬಾಳುವ ಮೂಲಕ ಕಾಡಿನ ಅಸ್ತಿತ್ವಕ್ಕೆ ಧಕ್ಕೆ ಬರದಂತೆ ಬದುಕಿದ್ದ ಇವರನ್ನು ಅತಿಕ್ರಮಣಕಾರರೆಂದು ಕಾಡು ಮತ್ತು ಭೂಮಿ ಸರ್ಕಾರದ್ದು ಎಂದು ಹೊರಹಾಕಲಾಯಿತು. ಸೋಲಿಗರ ವ್ಯವಸಾಯದಲ್ಲಿ ವ್ಯಾಪಾರ ದೃಷ್ಟಿ ಇರಲಿಲ್ಲ. ತಮ್ಮ ಅಗತ್ಯಕ್ಕೆ ಸಾಕಾಗುವಷ್ಟನ್ನು ಮಾತ್ರ ಬೆಳೆಯುತ್ತಿದ್ದರು.

ಸೋಲಿಗರ ವ್ಯವಸಾಯ ಪದ್ಧತಿ ಪರಂಪರಾಗತವಾದುದು. ಇವರ ವ್ಯವಸಾಯ ಒಂದು ಕ್ರಮಬದ್ಧತೆಗೆ ಸೀಮಿತವಾಗಿದ್ದು, ಕಾಡಿನ ಮಧ್ಯೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ವ್ಯವಸಾಯ ಎಂದರೆ ಸೋಲಿಗರಿಗೆ ಬಲು ಇಷ್ಟಪಟ್ಟು ಮಾಡುವ ಕೆಲಸ. ಭೂಮಿ ಎಂದರೆ ಸೋಲಿಗರು ಭೂಮಿತಾಯಿ ಎಂದು ಭಾವಿಸುತ್ತಾ ತಮ್ಮದೇ ಆದ ವ್ಯವಸಾಯ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿದ್ದಾರೆ.

ವ್ಯವಸಾಯಕ್ಕೆ ಸೋಲಿಗರು ಒಂದು ಜಾಗಕ್ಕೆ ಅಂಟಿಕೊಂಡು ಶಾಶ್ವತವಾಗಿ ನೆಲೆಸಲು ಅವರು ಇಚ್ಛಿಸುವುದಿಲ್ಲ. ಇವರು ತಮ್ಮ ವ್ಯವಸಾಯದ ಭೂಮಿಗೆ ಯಾವುದೇ ಗೊಬ್ಬರವನ್ನು ಬಳಸುವುದಿಲ್ಲವಾದ್ದರಿಂದ ಫಲವತ್ತತೆ ಕಡಿಮೆಯಾದ ಹಾಗೆ ಭೂಮಿ ಬಂಜೆಯಾಯಿತು ಎಂದು ಸೋಲಿಗರು ನಂಬುವರು. ಆ ನೆಲದ ಅನ್ನದ ಋಣ ತೀರಿತು ಎಂದು ನಂಬಿ ಮುಂದೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನು ಬೇರೊಂದು ಕಡೆ ಅನ್ವೇಷಣೆ ಮಾಡುವರು.

ಮಹೇಂದ್ರಕುಮಾರ್‌ರವರು ತಮ್ಮ 'ಅವನತಿಯತ್ತ ನೈಸರ್ಗಿಕ ಪುರಾತನ ಕುಮ್ರಿ ಬೇಸಾಯ ಸಂಸ್ಕೃತಿ' ಎಂಬ ಲೇಖನದಲ್ಲಿ "ಸಹಜ ಕೃಷಿಯ ಹರಿಕಾರ ಜಪಾನಿನ ಪುಕೋವೋಕೊ ಪ್ರಕ್ರಿಯೆಯನ್ನು (ಕನ್ಸೆಪ್ಟ್) ಜ್ಞಾಪಿಸುವ' ಈ ಬೇಸಾಯ ಪದ್ಧತಿ ಅನಾದಿಕಾಲದ ಉತ್ತಮ ತಂತ್ರಜ್ಞಾನವನ್ನು ಹೊಂದಿರುವಂತಹದ್ದು" ಎಂದು ತಿಳಿಸಿದ್ದಾರೆ. ಅದೇ ರೀತಿಯಲ್ಲಿ ಮೈಸೂರಿನ ಭಾಗದಲ್ಲಿ ಕುಮ್ರಿ ಬೇಸಾಯ ಪದ್ಧತಿ ಇತ್ತು ಎನ್ನುವುದನ್ನೂ ತಿಳಿಸಿದ್ದಾರೆ. ಆದರೆ ಕುಮ್ರಿ ಬೇಸಾಯದ ಮೂಲ ಬಿಳಿಗಿರಿರಂಗನ ಬೆಟ್ಟ, ಈ ಭಾಗದಲ್ಲಿ ಅನಾದಿ ಕಾಲದಿಂದಲೂ ಸೋಲಿಗರು ಮಾಡುತ್ತಾ ಬಂದಿದ್ದಾರೆ.

**ಸೋಲಿಗರ ವ್ಯವಸಾಯದ ಉಪಕರಣಗಳು**

ಸೋಲಿಗರು ತಮ್ಮ ಹೊಲದಲ್ಲಿ ಹುಲ್ಲು, ಸೊಪ್ಪು ಮತ್ತು ಮುಳ್ಳಿನ ಗಿಡ ಗಂಟಿಗಳನ್ನು ಕೀಳಲು ಕುಡಗೋಲು, ಸೌದೆ, ಮರ, ಮುಟ್ಟು, ಬಿದಿರು ತೆಗೆಯಲು ಮಚ್ಚು(ಕತ್ತಿ), ನೆಲದಲ್ಲಿ ಅಗೆದು ಗೆಣಸು

ತೆಗೆಯಲು ದಬಕ(ಹಾರೆ), ಸರಳು, ಮನೆಗೆ ಸೌದೆ ಮತ್ತು ಮರದ ಕೊಂಟು(ಬೊಡ್ಡೆ) ಸೀಳಲು ಕೊಡಲಿ ಅಥವಾ ಪಿಚ್ಚುಕೊಡಲಿ, ಹೊಲದಲ್ಲಿ ಬೇಸಾಯ ಮಾಡಲು ನೇಗಿಲು ಹೊಲವನ್ನು ಉಳುವುದಕ್ಕೆ ಕುಂಟೆ, ಹೊಲದಲ್ಲಿ ಬಿತ್ತನೆ ಮಾಡುವಾಗ ಬಾಳನ್ನು ಸಿಗುಯುವುದಕ್ಕೆ ಎತ್ತು ಮತ್ತು ಟ್ರ್ಯಾಕ್ಟರ್ ಅನ್ನು ಉಪಯೋಗಿಸಿಕೊಂಡು ಹೊಲವನ್ನು ಉಳುತ್ತಾರೆ. ಮಾಂಸ ಮತ್ತು ತರಕಾರಿ ಕತ್ತರಿಸಲು ಚಾಕು ಮತ್ತು ಸಣ್ಣ ಕತ್ತಿ, ರಾಗಿಯನ್ನು ಬೀಸಲು(ಪುಡಿ ಮಾಡಲು) ರಾಗಿಕಲ್ಲು, ರಾಗಿ, ಭತ್ತ, ನವಣೆ, ಸಾಮೆ, ಕಂಬು ಜೋಳ ಇವುಗಳನ್ನು ಕುಟ್ಟಲು ಒನಕೆ ಮತ್ತು ಕುಂದಣಿ, ನೆಲ ಕುಂದಣಿ, ರಾಗಿಯನ್ನು ಗಂಡಸರು ಉದ್ದನೆಯ ಬಡಗಿಯಲ್ಲಿ ಬಡಿದರೆ ಹೆಂಗಸರು ಕೊಡಸಿ(ಕೊಡ್ಚಿ)ಯಲ್ಲಿ ಬಡಿಯುತ್ತಾರೆ. ರಾಗಿ, ಅಕ್ಕಿ ಇತರೆ ಕಾಳು ಕಡ್ಡಿಯನ್ನು ಕೇರಲು ಒನೆಯಲು(ಸ್ವಚ್ಚ ಮಾಡಲು) 'ಮೊರ' ವನ್ನು ಉಪಯೋಗಿಸುತ್ತಾರೆ. ರಾಗಿ ಇತರೆ ಧವಸಧಾನ್ಯಗಳನ್ನು ಜಮೀನಿನಲ್ಲಿ ಒಕ್ಕಣೆ ಮಾಡಿ ತರುವಾಗ ಸ್ವಚ್ಚಮಾಡಲು 'ಕೊಂಗ'ವನ್ನು ಉಪಯೋಗಿಸುತ್ತಾರೆ. ಧವಸ ಧಾನ್ಯಗಳನ್ನು ಸಂಗ್ರಹಿಸಿಡಲು ನೆಲಗುಳಿ, ಮಡಿಕೆ, ಬಿದಿರಿನ ತೊಂಬೆ, ಕಣಜ, ಗೋಣಿಚೀಲ, ಪ್ಲಾಸ್ಟಿಕ್ ಚೀಲ, ಪ್ಲಾಸ್ಟಿಕ್ ಡ್ರಮ್ ಇನ್ನೂ ಮುಂತಾದ ಪರಿಕರಗಳನ್ನು ಉಪಯೋಗಿಸುತ್ತಾರೆ.

**ಕಳಕೊಟ್ಲು ಬೇಸಾಯ:** ಸೋಲಿಗರು ಬಹಳ ಹಿಂದಿನ ವರ್ಷಗಳಲ್ಲಿ ತಮ್ಮ ಜಮೀನಿನಲ್ಲಿ ವ್ಯವಸಾಯವನ್ನು ಮಾಡಲು ಪ್ರಕೃತಿದತ್ತವಾಗಿ ಕಾಡಿನಲ್ಲಿಯೇ ಸಿಗುವ ಕೆಲವೊಂದು ಮರದ ಹಾಗೂ ಬಿದಿರನ್ನು ವ್ಯವಸಾಯದ ಪರಿಕರಗಳನ್ನಾಗಿ ಉಪಯೋಗಿಸುತ್ತಿದ್ದರು. ಅವುಗಳಲ್ಲಿ ಮುಖ್ಯವಾಗಿ ಕಾರೆದಸಿ, ಕಪ್ಪಲಿದಸಿ, ಮಗ್ಗರೆದಸಿ, ಬೀಟೆದಸಿ, ಹೊನ್ನೆದಸಿ, ಬಿದಿರು ಇನ್ನುಳಿದ ಗಟ್ಟಿಯಾದ ಮರಗಳನ್ನು ಉಪಯೋಗಿಸಿಕೊಂಡು, ಚೂಪು ಮಾಡಿಕೊಂಡು ಜಮೀನಿನಲ್ಲಿ ಸನ್ನಿಕೆಯನ್ನಾಗಿ ಮಾಡಿಕೊಂಡು ವ್ಯವಸಾಯ ಮಾಡುತ್ತಿದ್ದರು. ನಂತರದಲ್ಲಿ ಕಾರೆದಸಿಯಿಂದ ಕಬ್ಬಿಣದ ಕಳಕೊಟ್ಟಲು ಸೋಲಿಗರ ಪೋಡುಗಳಿಗೆ ಬಂದವು.

ಸೋಲಿಗರು ವ್ಯವಸಾಯಕ್ಕೆ ತಮ್ಮ ಜಮೀನಿನ ಸುತ್ತಲಿನ ಜಾಗವನ್ನು ಮಾಡಿಕೊಳ್ಳುತ್ತಾರೆ. ಆ ನಂತರದಲ್ಲಿ ತರಗೆಲೆ, ಕೊಂಟುಗಳು ಮತ್ತು ಕಸ ಕಡ್ಡಿಗಳಿಗೆ ಬೆಂಕಿಯನ್ನಿಟ್ಟು, ಸುಟ್ಟು ಬೂದಿಯನ್ನಾಗಿ ಮಾಡುತ್ತಾರೆ. ದೊಡ್ಡ ಗುದ್ದಲಿಯನ್ನು ಜಮೀನಿನಲ್ಲಿ ಇರುವ ಕಾರೆ, ಬೆಜ್ಜ, ಸೊಂಡಿ, ಸುಂಡ್ರೆ, ಗೆಜ್ಜರಿಕೆ (ಇತ್ಯಾದಿ) ಇನ್ನುಳಿದ ಗೆಡ್ಡೆ(ಬೇರು)ಯನ್ನು ದೊಡ್ಡ ಗುದ್ದಲಿಯಿಂದ ಕೀಳುತ್ತಾರೆ. ಕಳಕೊಟ್ಲನ್ನು ಉಪಯೋಗಿಸಿಕೊಂಡು ಜಮೀನಿನಲ್ಲಿ ರಾಗಿ, ಅವರೆ, ತೊಗರಿ, ಜೋಳ ಇತ್ಯಾದಿ ಬೀಜವನ್ನು ಬಿತ್ತುತ್ತಾರೆ. ತಾವು ಸುಟ್ಟ ಜಾಗದಲ್ಲಿ ಸಾಸಿವೆ, ಕುಂಬಳಕಾಯಿ, ಹೆಡ್ಡನ ಕೀರೆ ಇವುಗಳನ್ನು ಹಾಕುತ್ತಾರೆ. ಈ ಬೆಳೆ ಬಂದ ೧೦ರಿಂದ ೧೬ ದಿನದ ನಂತರ ರಾಗಿಯನ್ನು ಚೆಲ್ಲಿಕೊಂಡು ಕಳಕೊಟ್ಲುವಿನಿಂದ ಗುದ್ದಲಿಯಲ್ಲಿ ಅಗೆದು ರಾಗಿ ಸೆಲ್ಲೂರು(ರಾಗಿಯನ್ನು ಭೂಮಿಗೆ ಚೆಲ್ಲುತ್ತ), ಕೆತ್ರೇತು ಹೋಗಾದು (ಹೋಗುವುದು), ಹೊಲ ಮುಗಿಯಾಂಟಲು ಈಗಾಲುವೆ ಮಾಡಾದು.(ಪೂರ್ತಿ ಭೂಮಿಗೆ ಬೀಜ ಚೆಲ್ಲುವವರೆವಿಗೂ) ಕಾರೆದಸಿಯಿಂದ ಪರಿಕರಗಳನ್ನಾಗಿ ಮಾಡಿಕೊಂಡು ತಮ್ಮ ಅಲ್ಪಸ್ವಲ್ಪ ಜಮೀನಿನಲ್ಲಿ ಕಳಕೊಟ್ಟಲು ಬೇಸಾಯವನ್ನು ಮಾಡುತ್ತಿದ್ದರು.

## ವ್ಯವಸಾಯ ಸಂಬಂಧ ಚಟುವಟಿಕೆಗಳು

ಸೆತ್ತೆ ಕೀಳುವುದು– ಕಳೆ ಕೀಳುವುದು, ಬಿತ್ತನೆ–ರಾಗಿ ಬಿತ್ತುವುದು, ಕಾವಲು–ಜಮೀನು ಕಾಯುವುದು, ಹಕ್ಕಲಾಯುವುದು–ಜಮೀನಿನಲ್ಲಿ ಬಿದ್ದಿರುವ ರಾಗಿ ತೆನೆಯನ್ನು ಎತ್ತುವುದು, ತಲೆ, ದೆನೆ, ತಾಳಗೂಯಲು, ರಾಗಿ ಹೊರೆ ಕಟ್ಟುವುದು, ಗುಡ್ಡೆ ಹಾಕುವುದು, ರಾಗಿ ಬಡಿಯುವುದು(ಒಕ್ಕಣೆ) ಇತ್ಯಾದಿ. ಸೋಲಿಗರು ರಾಗಿಯನ್ನು ಬೆಳೆದು ಈ ಕೆಳಕಂಡ ಪರಿಕರಗಳಲ್ಲಿ ತುಂಬಿಡುತ್ತಾರೆ ಅವುಗಳೆಂದರೆ; ತೊಂಬೆ(ಬೊಂಬು), ಮಣ್ಣಿನ ಗರಗೆ–ಡ್ರಮ್, ಮೊರ, ಪುಟ್ಟಿ, ಕೊಂಗ, ದೇಕ್ಷಿ ದೊಡ್ಡದು(ಅಗಲವಾದ ಪಾತ್ರೆ), ಗುಂಜಿಬೊರ, ಹೆಡೆಗೆ, ಮೊರ, ದೇವರ ಪೂಜೆಗೆ ತಾವು ಬೆಳೆದ ರಾಗಿಯನ್ನು ಇವುಗಳಲ್ಲಿ ಸಂಗ್ರಹಿಸುತ್ತಿದ್ದರು.

ಮಿಶ್ರ ಪಿ ಕೆ ಅವರು ಮತ್ತು ಸಾಮುಯಲ್ ಕುಮಾರ ನಂದ್ಯಾರವರು ಬರೆದಿರುವ ಸ್ಥಳಾಂತರ ಬೇಸಾಯ ಹಾಗು ಒರಿಸ್ಸಾದ ಬಾಂಡಾ ಸಮುದಾಯದ ಬುಡಕಟ್ಟುಗಳಲ್ಲಿ ಯಾವ ರೀತಿಯಾಗಿ ಸ್ಥಳಾಂತರ ಬೇಸಾಯವನ್ನು ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಜೊತೆಗೆ, ಅವರದೇ ಆದ ಪಾರಂಪರಿಕ, ಸಾಂಪ್ರದಾಯಿಕವಾದ ವಿಧಾನಗಳ ಮೂಲಕ ವ್ಯವಸಾಯವನ್ನು ಮಾಡುತ್ತಾರೆ ಎಂದು ತಿಳಿಸಿದ್ದಾರೆ. ಈ ಬುಡಕಟ್ಟು ಸಮುದಾಯವು ಪೋಡುಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಇದನ್ನು ನೋಡಿದಾಗ ಆಂಧ್ರಪ್ರದೇಶದಲ್ಲಿ ವಾಸಮಾಡುವ ಗಡಬ ಸಮುದಾಯವು ಕಾಡಿನಲ್ಲಿ ಚಿಕ್ಕ ಚಿಕ್ಕ ಪೋಡುಗಳಲ್ಲಿ ವಾಸ ಮಾಡುವುದನ್ನು ತಿಳಿಯಬಹುದಾಗಿದೆ. ಜೊತೆಗೆ ಕಾಡಿನಲ್ಲಿ ಸಿಗುವ ಕಿರು ಅರಣ್ಯ ಉತ್ಪನ್ನವನ್ನು ಸಂಗ್ರಹಿಸುವುದನ್ನು ತಿಳಿಸಿದ್ದಾರೆ. ಆ ಸಮುದಾಯದವರು ಪೋಡುಗಳನ್ನು ಕಟ್ಟಿಕೊಂಡು ಸೋಲಿಗರ ಹಾಗೇ ಮಿಶ್ರ ಬೇಸಾಯ ಕ್ರಮವನ್ನು ಮಾಡುತ್ತಿದ್ದಾರೆ. ಅದುದರಿಂದ ಸಾಮಾನ್ಯವಾಗಿ ಬುಡಕಟ್ಟುಗಳು ಇರುವ ಪ್ರದೇಶಗಳಲ್ಲಿ ಈ ರೀತಿ ಸ್ಥಳಾಂತರ ಬೇಸಾಯ ಕ್ರಮವನ್ನು ಹಿಂದಿನಿಂದಲೂ ಸಹ ಕಾಣಬಹುದಾಗಿದೆ. ಆದರೆ, ಹಾಗೆಯೇ ಇತ್ತೀಚೆಗೆ ಈ ರೀತಿಯಾದ ಕ್ರಮವು ಕಡಿಮೆಯಾಗಿರುವುದನ್ನು ಸಹ ಗಮನಿಸಬಹುದು.

ಚಾಮರಾಜನಗರ ಜಿಲ್ಲೆಯ ಹೊಸ ಪೋಡು, ಪುರಾಣಿ ಪೋಡು, ಮಂಜಿಗುಂಡಿ ಪೋಡು, ಭೂತಾಣಿ ಪೋಡು, ಮುತ್ತಗದಗದ್ದೆ, ಯರಕನಗದ್ದೆಕಾಲೋನಿ, ಕನ್ನೇರಿಕಾಲೋನಿ, ಬೂದಿಪಡಗ, ಕೆರೆದಿಂಬ, ಗೊಂಬೆಗಲ್ಲು, ಪುರಾಣಿ ಪೋಡು, ಯರಕನಗದ್ದೆ ಪೋಡು, ಸೀಗೆ ಬೆಟ್ಟ, ಮಹದೇಶ್ವರ ಬೆಟ್ಟದ ಕೆಲವು ಪ್ರದೇಶಗಳಲ್ಲಿ ಈಗಲೂ ಸೋಲಿಗರು ಈ ರೀತಿಯ ಕೊಚ್ಚು ಮತ್ತು ಸುಡುವ ಬೇಸಾಯವನ್ನು ಕಲ್ಗೊಟ್ಲು ಮತ್ತು ಗುದ್ದಲಿಯನ್ನು ಉಪಯೋಗಿಸಿ ಮಾಡುತ್ತಾರೆ. ಕಾರಣ, ಈ ಭಾಗದಲ್ಲಿ ವ್ಯವಸಾಯ ಮಾಡಲು ಎತ್ತುಗಳು ಹಾಗು ಆಧುನಿಕ ಪರಿಕರಗಳಾದ ಟ್ರ್ಯಾಕ್ಟರ್ ಬಳಸುವುದಕ್ಕೆ ಆಗುವುದಿಲ್ಲ. ಸೋಲಿಗರ ಪೋಡಿನಲ್ಲಿ ಕೃಷಿಗೆ ನೀರಾವರಿ ವ್ಯವಸ್ಥೆ ಇಲ್ಲದ ಕಾರಣ ಈ ಪ್ರದೇಶದಲ್ಲಿ ಬೆಳೆಯುವ ಬೆಳೆಯು ಮುಖ್ಯವಾಗಿ ಮಳೆಯನ್ನೇ ಅವಲಂಬಿಸಿದೆ. ಸೋಲಿಗರು ವ್ಯವಸಾಯವನ್ನು ಒಂದು ದೇವರ ಕೆಲಸ, ಭೂಮಿತಾಯಿಯ ಕೆಲಸ ಎಂದು ತಿಳಿದು ಅವರದೇ ಆದ ಕೆಲವು ನಂಬಿಕೆ ಮತ್ತು ಆಚರಣೆಗಳನ್ನು ಮಾಡುವ ಮೂಲಕ ಮಾಡುತ್ತಾರೆ. ಭೂಮಿ ಪೂಜೆ, ಧೂಳು ಪೂಜೆ, ಪೈರು ಪೂಜೆ, ಹೊಸ ರಾಗಿ ಹಬ್ಬ, ರೊಟ್ಟಿ ಹಬ್ಬ, ಕೂಳೆ ಮಾರಿ ಹಬ್ಬ ಹೀಗೆ ಹಲವಾರು ಆಚರಣೆಗಳನ್ನು ಮಾಡುವುದರ ಮೂಲಕ ತಮ್ಮ ಜಮೀನಿನಲ್ಲಿ ಬೆಳೆಯನ್ನು ಬೆಳೆಯುತ್ತಾರೆ.

ಸೋಲಿಗರು ಹಿಂದೆ ತಮ್ಮ ಜಮೀನಿನ ಹತ್ತಿರದಲ್ಲಿಯೇ ಪೋಡು ಕಟ್ಟಿಕೊಂಡು ಪಕ್ಕದಲ್ಲಿಯೇ ಗುಡಿಸಲು ಕಟ್ಟಿ ಜಮೀನಿಗೆ ಹೊಂದಿಕೊಂಡಂತೆ ಗಂಡ ಹೆಂಡತಿ ಮಕ್ಕಳು ವಾಸಿಸುತ್ತಿದ್ದರು. ಅಲ್ಲದೇ, ಇನ್ನೊಂದು ವಿಶೇಷವಾದ ಸಂಗತಿಯೆಂದರೆ ಸೋಲಿಗರು ಸಾಮಾನ್ಯವಾಗಿ ತಮ್ಮ ಜಮೀನಿನಲ್ಲಿ ವ್ಯವಸಾಯವು ಮೇ ಜೂನ್‌ನಿಂದ ಪ್ರಾರಂಭವಾದ ನಂತರದಲ್ಲಿ ಜಮೀನಿನಲ್ಲಿಯೇ ಗುಡಿಸಲು ಕಟ್ಟಿಕೊಂಡು ಇರುತ್ತಾರೆ. ಈ ರೀತಿಯಾಗಿ ಸೋಲಿಗರು ತಮ್ಮ ವ್ಯವಸಾಯದ ಜಮೀನಿನಲ್ಲಿ ಇರುವುದಕ್ಕೆ ತುಂಬಾ ಇಷ್ಟಪಡುತ್ತಾರೆ. ಹಾಗಾಗಿ ಹೆಚ್ಚು ಸಮಯವನ್ನು ತಮ್ಮ ವ್ಯವಸಾಯದ ಜಮೀನಿನಲ್ಲಿಯೇ ಗುಡಿಸಲು ಕಟ್ಟಿಕೊಂಡು ರಾತ್ರಿಯೆಲ್ಲ ಕಾವಲು ಕಾಯುತ್ತಾರೆ.

ಸೋಲಿಗರು ಮಳೆಗಳ ಬಗ್ಗೆ ಸಾಕಷ್ಟು ಜ್ಞಾನವನ್ನು ಹೊಂದಿದ್ದಾರೆ. ಯಾವ ತಿಂಗಳಿನಲ್ಲಿ ಯಾವ ಮಳೆ ಬರುತ್ತದೆ?, ಅದರ ಹೆಸರೇನು?, ಆ ಮಳೆಯ ಲಕ್ಷಣವೇನು?, ಮಳೆ ಎಂದು ಪ್ರಾರಂಭವಾಗುತ್ತದೆ, ಅದರ ಗುಣ ಲಕ್ಷಣಗಳೇನು? ಅದರ ಅವಧಿ ಎಷ್ಟು? ದಿನಗಳಲ್ಲಿ ಯಾವ ಕೃಷಿ ಚಟುವಟಿಕೆಗಳನ್ನು ಮಾಡಬಹುದು? ಎಂದು ಹಿರಿಯ ಸೋಲಿಗರು ತಮ್ಮದೇ ಆದ ಜ್ಞಾನದ ಮೂಲಕ ಹೇಳುತ್ತಾರೆ. ಇವರು ತಿಳಿದಿರುವಂತೆ ಯುಗಾದಿ ಮುಗಿದ ಮೇಲೆ ಮಳೆಯ ಚಕ್ರ ಪ್ರಾರಂಭವಾಗುತ್ತದೆ. ಮೊದಲಿಗೆ ರೇವತಿ ಮಳೆ ಗೋಚರಿಸುತ್ತದೆ. ಇದು ಮುಂಗಾರು ಮಳೆ ನಂತರ ಅಶ್ವಿನಿ, ಭರಣಿ, ಕೃತಿಕೆ, ಮೃಗಶಿರಾ, ಆರಿದ್ರಾ, ಪುಷ್ಯ, ಪುನರ್ವಸು ಹೀಗೆ ಮೇ ತಿಂಗಳಿಂದ ಹಿಡಿದು ನವಂಬರ್‌ವರೆಗಿನ ೧೫ ಕ್ಕೂ ಹೆಚ್ಚು ಬಗೆಯ ಮಳೆ ನಕ್ಷತ್ರಗಳು ಸೋಲಿಗರಿಗೆ ತಿಳಿದಿದೆ. ಪ್ರತಿ ಮಳೆಯ ಸುತ್ತ ಅದಕ್ಕೆ ಅನುಕೂಲವಾಗುವಂತೆ ತಮ್ಮ ಕೃಷಿ ಚಟುವಟಿಕೆಗಳನ್ನು ರೂಪಿಸಿಕೊಳ್ಳುತ್ತಾರೆ. ಅಂದರೆ ಯಾವ ಮಳೆ ಬಂದಾಗ ಯಾವ ಬೀಜ ಬಿತ್ತನೆ ಮಾಡಿದರೆ ಕೀಟಗಳ ಬಾಧೆ ತಪ್ಪಿಸಬಹುದು? ಯಾವ ಫಸಲನ್ನು ಚೆನ್ನಾಗಿ ಪಡೆಯಬಹುದೆಂಬ ಪಾರಂಪರಿಕ ಜ್ಞಾನ ಇರುವುದರಿಂದ ಮಳೆ ಬರುವ ಸಮಯಕ್ಕೆ ಸರಿಯಾಗಿ ಬಿತ್ತನೆಯ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ವ್ಯವಸಾಯವನ್ನು ಶುರು ಮಾಡುವುದನ್ನೂ ಸಹ ತಮ್ಮ ಪ್ರಕೃತಿ ಧಾರ್ಮಿಕ ನೆಲೆಯಲ್ಲಿಯೇ ಭಯ, ಭಕ್ತಿಯಿಂದ, ಭೂಮಿ ತಾಯಿಗೆ ನಮನ ಸಲ್ಲಿಸುವುದರ ಮೂಲಕ ಮಾಡುತ್ತಾರೆ. ಪ್ರಕೃತಿಯಲ್ಲಿರುವ ಪ್ರತಿಯೊಂದು ಜೀವ, ಜಲ ರಾಶಿಗೂ ಕೂಡ ಧೂಪ, ದೀಪ ಬೆಳಗಿಸಿ ವ್ಯವಸಾಯ ಮಾಡಲು ಪ್ರಾರಂಭಿಸುತ್ತಾರೆ.

### ಕೋಷ್ಟಕ ೪.೧: ಸೋಲಿಗರ ವ್ಯವಸಾಯ ಆಧಾರಿತ ತಿಂಗಳುಗಳು ಮತ್ತು ಪಾರಂಪರಿಕ ವ್ಯವಸಾಯ ಪದ್ಧತಿಯ ಕ್ಯಾಲೆಂಡರ್

| ಕ್ರ.ಸಂ | ಕ್ಯಾಲೆಂಡರ್ ತಿಂಗಳು/ಮಾಸ | ಸೋಲಿಗರ ಮಾಸ | ಸೋಲಿಗರ ಮಳೆ ನಕ್ಷತ್ರ | ಬೇಸಾಯ ಚಟುವಟಿಕೆ | ಹಬ್ಬ |
|---|---|---|---|---|---|
| ೧ | ಫೆಬ್ರವರಿ–ಮಾರ್ಚ್ | ಉಗಾದಿ | ರಾಶಿ, ರೇವತಿ | ಕಳೆ ಕೀಳುವುದು, ಜಡ್ಡು ಕೆತ್ತುವ ಕೆಲಸ | ರೊಟ್ಟಿ ಹಬ್ಬ |
| ೨ | ಮಾರ್ಚ್–ಏಪ್ರಿಲ್ | ದೊಡ್ಡ ಜಾತ್ರೆ | ಮೆಸುರಾ | ಮುಳ್ಳು ಪೊದೆಗಳಿಗೆ ಬೆಂಕಿ ಇಡುವುದು | -- |
| ೩ | ಏಪ್ರಿಲ್– ಮೇ | ತೆಪ್ಪ | ಆದ್ರಿ | ಜೋಳ, ಬೇಳೆಕಾಳು, ಔಡು ಮತ್ತು ಹಾಗಲ/ ಹೀರೆ/ ಕುಂಬಳ/ ಪಡವಲ ಕಾಯಿ ಬಿತ್ತನೆ | |
| ೪ | ಮೇ–ಜೂನ್ | ಆದೇರ | ದೊಡ್ಡ ಆದೇರ | ರಾಗಿ ಬಿತ್ತನೆ, ಸಾಸುವೆ, ನವಣೆ ಮತ್ತು ದಂಟಿನ ಸೊಪ್ಪು ಬಿತ್ತನೆ | ಧೂಳುಪೂಜೆ / ಭೂಮಿತಾಯಿ ಪೂಜೆ |
| ೫ | ಜೂನ್–ಜುಲೈ | ಕಕ್ಕಾಟ | ಕಕ್ಕಾಟ | ಕಳೆ ಕೀಳುವುದು | ಪೈರುಪೂಜೆ |
| ೬ | ಜುಲೈ–ಆಗಸ್ಟ್ | ಶ್ರಾವಣ | ಆಶ್ಲೇಷ ಹುಬ್ಬೆ | ಜೋಳದ ಕೊಯ್ಲು | ಜೋಳ ನೈವೇದ್ಯ |
| ೭ | ಆಗಸ್ಟ್– ಸೆಪ್ಟಂಬರ್ | ಶ್ರಾವಣ | ಹುಬ್ಬೆ | ಜೋಳ ಮತ್ತು ತೊಗರಿ ಬಿಡಿಸುವುದು | |
| ೮ | ಸೆಪ್ಟಂಬರ್–ಅಕ್ಟೋಬರ್ | ಮಾರ್ಣಮಿ | ಹುಬ್ಬೆ | ಕಳೆ ಕೀಳುವುದು | |
| ೯ | ಅಕ್ಟೋಬರ್–ನವೆಂಬರ್ | ದೀವಳಿಗೆ | ಚಿತ್ತ | ರಾಗಿ ಕೊಯ್ಲು | ಹೊಸರಾಗಿ ಹಬ್ಬ |
| ೧೦ | ನವೆಂಬರ್–ಡಿಸೆಂಬರ್ | ಕಿರು ದೀವಳಿಗೆ | ಸತ್ ಆನೆಗಂಪಲು | ಉದ್ದು, ತೊಗರಿ, ಹೆಸರು ಕೊಯ್ಲು | |
| ೧೧ | ಡಿಸೆಂಬರ್–ಜನವರಿ | ಸಂಕ್ರಾಂತಿ | ಹಸ್ತ | ಔಡಲ(ಹರಳು) ಮತ್ತು ಗೆಡ್ಡೆ ಗೆಣಸು ಕೊಯ್ಲು | ಭೂದೇವಿಗೆ ಗೆಣಸಿನ ಪೂಜೆ |
| ೧೨ | ಜನವರಿ–ಫೆಬ್ರವರಿ | ಶಿವೋಗ | – | | ರೊಟ್ಟಿ ಹಬ್ಬಕ್ಕೆ ರಾಗಿ, ಬೇಳೆಕಾಳು ಸಂಗ್ರಹ |

**ಸೌಜನ್ಯ:** ಡಾ ಜಡೇಗೌಡ ಎಂ, ಹೊಸಪೋಡು, ಬಿಳಿಗಿರಿರಂಗನ ಬೆಟ್ಟ, ಯಳಂದೂರು ತಾ., ಚಾಮರಾಜನಗರ ಜಿಲ್ಲೆ.

ಯುಗಾದಿ ಮುಗಿದ ಮೇಲೆ ಸೋಲಿಗರಿಗೆ ಮಳೆಯ ಚಕ್ರ ಆರಂಭವಾಗುತ್ತದೆ. ಮೊದಲು ರೇವತಿ ಮಳೆ– ಮುಂಗಾರು ಮಳೆ, ಯಾವಾಗ ಮಳೆ ಬರುತ್ತದೆ, ಯಾವಾಗ ಬಿತ್ತನೆ ಮಾಡಬೇಕು, ಮೊದಲು ಯಾವ ಬೀಜವನ್ನು ಹೇಗೆ ಬಿತ್ತಬೇಕು ಎನ್ನುವ ಎಲ್ಲಾ ಮಾಹಿತಿಯನ್ನು ತಿಳಿದುಕೊಂಡಿರುತ್ತಾರೆ. 'ಸೋಲಿಗರಲ್ಲಿ ಸಾಮಾನ್ಯವಾಗಿ ಗಂಡಸರು ಗುದ್ದಲಿಯಿಂದ ಅಥವಾ ಇತ್ತೀಚೆಗೆ ಕೆಲವು ಕಡೆ ಎತ್ತುಗಳ ಮೂಲಕ ಉಳುವಾಗ ಸಾಲಾಗಿ ತರಕಾರಿ, ಮಧ್ಯದಲ್ಲಿ ರಾಗಿ, ಜೋಳ, ನವಣೆ, ಸಜ್ಜೆ, ಹೆಡ್ಡನ ಕೀರೆ,

ಸಾಸಿವೆ ಹೀಗೆ ಎಲ್ಲವನ್ನು ಯಾವ ಅಂತರದಲ್ಲಿ, ಎಷ್ಟು ಪ್ರಮಾಣದಲ್ಲಿ ಬಿತ್ತಬೇಕು. ಮಧ್ಯದಲ್ಲಿ, ಯಾವ ಸಾಲುಗಳಲ್ಲಿ, ಯಾವ ಬೀಜವನ್ನು ಹಾಕಬೇಕು ಎಂಬುದನ್ನು ತಿಳಿದು ವ್ಯವಸಾಯ ಮಾಡುತ್ತಾರೆ.

ಸೋಲಿಗರ ವ್ಯವಸಾಯದಲ್ಲಿ ಎರಡು ರೀತಿಯ ಬೇಸಾಯದ ಕ್ರಮಗಳನ್ನು ಕಾಣಬಹುದು.

❖ ಮಿಶ್ರ ಬೇಸಾಯ(ಮಿಕ್ಸ್‌ಡ್ ಕ್ರಾಪ್)

❖ ಬಹುಪದರದ ಬೆಳೆಗಳ ಬೇಸಾಯ(ಮಲ್ಟಿ ಲೇಯರ್ ಅಗ್ರಿಕಲ್ಚರ್) ಪದ್ಧತಿ.

**ಮಿಶ್ರ ಬೇಸಾಯ (ಮಿಕ್ಸೆಡ್ ಕ್ರಾಫ್):** ಮಿಶ್ರ ಬೆಳೆಗಳನ್ನು ಬೆಳೆಯುವ ಈ ಬೇಸಾಯದ ವ್ಯವಸ್ಥೆಯಲ್ಲಿ ಅನೇಕ ತರಹದ ಏಕದಳ ಮತ್ತು ದ್ವಿದಳ, ಎಣ್ಣೆಕಾಳು ಇತ್ಯಾದಿ ಬೆಳೆಯುವ ಬೆಳೆಗಳನ್ನು ಗುದ್ದಲಿ, ಕಳಕೊಟ್ಲು, ಮರದ ದಸಿ, ಕಾರೆ ದಸಿ, ಇತ್ಯಾದಿ ಪರಿಕರಗಳಿಂದ ಭೂಮಿಯನ್ನು ಅಗೆದು ಬೀಜವನ್ನು ಬಿತ್ತುತ್ತಾರೆ. ಹಾಗೆಯೇ ಚಿಕ್ಕದಾದ ಬೀಜಗಳಾದ ರಾಗಿ, ನವಣೆ, ಸಾಸಿವೆ, ಹೆಡ್ಡನ ಕೀರೆ ಬೀಜಗಳನ್ನು ಮಿಶ್ರಮಾಡಿ ಬೆರೆಸಿ ಹೊಲವನ್ನು ಹದಮಾಡಿ ಅದರ ಮೇಲೆ ಬಿತ್ತುತ್ತಾರೆ. ಈ ಬೇಸಾಯ ಕ್ರಮದಲ್ಲಿ ವೈವಿಧ್ಯಮಯವಾದ ಬೆಳೆಗಳ ತಳಿಯನ್ನು ಸೋಲಿಗರು ಬೆಳೆಯುತ್ತಾರೆ. ಹಾಗೆಯೇ ಈ ಬೇಸಾಯದ ಕ್ರಮವು ಏಕದಳ ಮತ್ತು ದ್ವಿದಳ ಮಿಶ್ರಣದಲ್ಲಿ ಅಥವಾ ಸಂಯೋಗದಲ್ಲಿ ಬೆಳೆಯುವುದರಿಂದ ಈ ಕೆಳಗಿನ ಅನುಕೂಲಗಳನ್ನು ಪಡೆಯಬಹುದು.

೧. ಮಣ್ಣಿನ ಫಲವತ್ತತೆ ಹೆಚ್ಚಾಗುತ್ತದೆ

೨. ಎಲ್ಲಾ ಬೆಳೆಗಳಿಗೂ ಸಹ ನೀರಿನ ಉಪಯೋಗ ಸಮರ್ಪಕವಾಗಿ ಆಗುತ್ತದೆ.

೩. ಕಡಿಮೆ ನೀರಿನಲ್ಲಿ ಹೆಚ್ಚು ಬೆಳೆಗಳನ್ನು ಬೆಳೆಯಬಹುದು.

೪. ಒಂದೇ ಸಮಯದಲ್ಲಿ ಹಲವಾರು ಬೆಳೆಗಳನ್ನು ಬೆಳೆಯಬಹುದು.

**ಬಹುಪದರ ಬೇಸಾಯ ಪದ್ಧತಿ:** ಈ ಪದ್ಧತಿಯಲ್ಲಿ ಬಹು ವಾರ್ಷಿಕ ಬೆಳೆಗಳಾದ ಬೀನ್ಸ್, ಕಾಚುಳ್ಳಿ ಕಾಯಿ, ಗೆಡ್ಡೆ-ಗೆಣಸು, ಪಪ್ಪಾಯಿ, ತೋಟಂಬು ಗೆಣಸು, ಸೇಬಿನ ಗಡ್ಡೆ(ಮರಸೇಬು ಗಡ್ಡೆ), ಮರಗೆಣಸು, ಬೆಲ್ಲರೆಗೆನಸು, ತೋಟಂಬುಗೆಣಸು, ಸೌತೆ, ಕುಂಬಳ, ಸೋರೆಕಾಯಿ, ಹೀರೆಕಾಯಿ, ಪಡವಳಕಾಯಿ. ಕಿತ್ತಳೆ, ಬಾಳೆ, ಸೀಬೆ, ಮಾವಿನ ಮರ, ಹಲಸಿನ ಮರ, ನೇರಳೆ, ಬೇಲದಮರ ಮುಂತಾದ ತರಕಾರಿಗಳು, ಹಣ್ಣಿನ ಮರಗಳು, ಮೆಣಸಿನ ಹಂಬು ಹೀಗೆ ವೈವಿದ್ಯಮಯ ಬೆಳೆಗಳನ್ನು ಬೆಳೆಯುತ್ತಾರೆ. ಸೋಲಿಗರು ಬೆಳೆಯುವ ಈ ರೀತಿಯ ವ್ಯವಸಾಯ ಜೀವ ವೈವಿದ್ಯತೆಯನ್ನು ಹೊಂದಿದೆ. ಸೋಲಿಗರ ಈ ವ್ಯವಸಾಯ ಕ್ರಮದಲ್ಲಿ ವಿವಿಧ ಜಾತಿಯ ಬೆಳೆಗಳು, ಬೇರುಗಳು ವಿವಿಧ ಹಂತದದಲ್ಲಿ ಬೆಳೆಗಳಿಗೆ ಬೇಕಾದ ಆಹಾರ ಮತ್ತು ನೀರನ್ನು ಶೇಖರಣೆ ಮಾಡುತ್ತಾರೆ ಮತ್ತು ಈ ಬೆಳೆಗಳು ಬೆಳೆಯುವುದಕ್ಕೆ ಯಾವುದೇ ತರಹದ ಪೈಪೋಟಿ ಇರುವುದಿಲ್ಲ.

ಸೋಲಿಗರ ಆಹಾರ ಸಂಗ್ರಹಣೆಯೂ ಅವರ ಆರ್ಥಿಕ ಜೀವನದ ಒಂದು ಪ್ರಮುಖ ಮಜಲಾಗಿದೆ. ಸೋಲಿಗರ ಕೆತ್ಲು ಬೇಸಾಯ, ಕಳಕೊಟ್ಲು ಬೇಸಾಯದ ಜೊತೆಗೆ ಆಹಾರಕ್ಕಾಗಿ ಕಾಡನ್ನೇ ಅವಲಂಬಿಸಿರುತ್ತಾರೆ. ಜೀವಿಗಳ ಮೂಲಭೂತ ಅವಶ್ಯಕತೆಗಳ ಪೈಕಿ ಆಹಾರವೂ ಒಂದಾಗಿದೆ. ಪ್ರಕೃತಿಯ ಎಲ್ಲಾ ಜೀವರಾಶಿಗಳು ಹಸಿವನ್ನು ನೀಗಿಸಲು ಆಹಾರ ಸೇವನೆ ಮಾಡಲೇಬೇಕು, ಆಗ ಮಾತ್ರ ಅವುಗಳು ಜೀವಂತ

ಉಳಿಯಲು ಬೇಕಾದ ಶಕ್ತಿಯನ್ನು ಪಡೆಯಲು ಸಾಧ್ಯ. ಅಂದರೆ ಪ್ರತಿಯೊಂದು ಜೀವಿಗಳೂ ಸಹ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಆಹಾರವನ್ನು ಹುಡುಕಿ ಅದನ್ನು ಸಂಗ್ರಹಿಸುವುದು ಅಥವಾ ದೈಹಿಕ ಶಕ್ತಿಯ ಜೊತೆಗೆ ತನ್ನ ಬುದ್ಧಿಶಕ್ತಿಯನ್ನೂ, ಜ್ಞಾಪಕ ಶಕ್ತಿಯನ್ನು, ಆಲೋಚನಾ ಶಕ್ತಿಯನ್ನು ಪಡೆಯುತ್ತದೆ. ಜಾನಪದ ಶೈಲಿಯಲ್ಲಿ ತಮ್ಮದೇ ಆದ ರೀತಿ–ನೀತಿಗಳಲ್ಲಿ, ವಿಧಾನಗಳ ಮೂಲಕ ಪ್ರಕೃತಿದತ್ತವಾಗಿ ಕಾಡಿನ ಮಧ್ಯೆ ಜೀವನ ಸಾಗಿಸುತ್ತಿರುವ ಸಮುದಾಯವೆಂದರೆ ಸೋಲಿಗರ ಸಮುದಾಯ.

ಭೂಮಿಯ ಮೇಲ್ಪದರಗಳಲ್ಲಿ ಹಣ್ಣು, ಗೆಡ್ಡೆ–ಗೆಣಸು, ರಾಗಿ, ಜೋಳ, ಕೀರೆ, ಸೌತೆ ಇತ್ಯಾದಿ. ಬೆಳೆಗಳನ್ನು ಬೆಳೆಯುವುದರಿಂದ ಒಳ್ಳೆಯ ಬೆಳೆ ಬರುತ್ತದೆ. ೨–೩ ಬೆಳೆಗಳನ್ನು ಒಂದೇ ಕಡೆ ಬೆಳೆಯುವುದರಿಂದ ಮಣ್ಣಿನ ಫಲವತ್ತತೆ ಹೆಚ್ಚಾಗಿರುತ್ತದೆ. ಇದರಿಂದ ಹೊಲದಲ್ಲಿ ಅನೇಕ ಜೀವ ವೈವಿಧ್ಯತೆಯನ್ನು ಕಾಪಾಡಬಹುದು ಎನ್ನವುದು ಸೋಲಿಗರ ನಂಬಿಕೆ. ಯರಕನಗದ್ದೆ ಪೋಡು, ಸೋಲಿಗ ಸಮುದಾಯ ಯಜಮಾನರಾದ ಶ್ರೀಯುತ ಅಚ್ಚುತಗೌಡರು, "ನಾವು ಪರಿಸರಕ್ಕೆ ಏನೂ ತೊಂದರೆಯಾಗದಂತೆ ಪರಿಸರವನ್ನು ನಾಶ ಮಾಡದೆ ಕಡಿಮೆ ಖರ್ಚಿನಲ್ಲಿ ಫಲವತ್ತಾದ ಬೆಳೆಗಳನ್ನು ನಮ್ಮ ಜೀವನಾಧಾರಕ್ಕೆ ಬೇಕಾದ ಪದಾರ್ಥಗಳನ್ನು ಬೆಳೆದುಕೊಳ್ಳುತ್ತಿದ್ದೆವು" ಎಂದು ಹೇಳುತ್ತಾರೆ.

ಸೋಲಿಗರು ಬೆಳೆಯುವ ಪದ್ಧತಿಯಲ್ಲಿ ಅನೇಕ ಜೀವ ವೈವಿದ್ಯತೆಯ ಕೃಷಿ ಪದ್ಧತಿಯ ಬೆಳೆಯನ್ನು ಬೆಳೆಯುತ್ತಾರೆ. ಅವುಗಳಲ್ಲಿ ರಾಗಿ, ಜೋಳ, ಕುಂಬಳ, ಹೆದ್ದನಕೀರೆ, ದಂಡುಕೀರೆ, ಅವರೆ ಸೌತೆ, ಗೆಣಸು, ಚಪ್ಪರದವರೆ ಮುಂತಾದ ಮುಖ್ಯವಾದ ಬೆಳೆಗಳನ್ನು ಬೆಳೆಯುತ್ತಾರೆ. ಸೋಲಿಗರು ತಮ್ಮ ಜಮೀನಿನಲ್ಲಿ ಬೆಳೆಯುವ ಮುಖ್ಯವಾದ ಬೆಳೆ ಎಂದರೆ 'ರಾಗಿಬೆಳೆ'. ರಾಗಿಯು ಸೋಲಿಗರಲ್ಲಿ ಬಹಳ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆಯಲ್ಲದೇ ಧಾರ್ಮಿಕ ವ್ಯವಸ್ಥೆಯೊಳಗೆ ಸೇರಿ ಪೂಜ್ಯನೀಯ ಮಹತ್ವವನ್ನು ಪಡೆದಿದೆ. ಆದ ಕಾರಣ ಸೋಲಿಗರು ತಾವು ಬೆಳೆದ ರಾಗಿಯ ಫಸಲಿನಲ್ಲಿ ಮೊದಲು ಮೀಸಲು(ಯಾರೂ ಉಪಯೋಗಿಸದೆ) ರಾಗಿಯನ್ನು ದೇವರಿಗೆ ಹೊಸರಾಗಿ ಹಬ್ಬಕ್ಕಾಗಿ ರೊಟ್ಟಿ ಮಾಡಿ ನೈವೆದ್ಯವನ್ನು, ಅರ್ಪಿಸುತ್ತಾರೆ.

ಸೋಲಿಗರಿಗೆ ಭೂಮಿಯ ಫಲವತ್ತತೆಯನ್ನೂ ಕಾಪಾಡುವುದರಲ್ಲಿ ಅವರದೇ ಆದ ಅಪಾರವಾದ ಜ್ಞಾನವಿದೆ. ಯಾವುದೇ ಕಾರಣಕ್ಕೂ ರಾಸಾಯನಿಕ ಗೊಬ್ಬರವನ್ನು ಉಪಯೋಗಿಸುವುದಿಲ್ಲ. ನೈಸರ್ಗಿಕ ಕೃಷಿಯನ್ನೇ ಮಾಡುತ್ತಿದ್ದರು. ಸ್ಥಳಾಂತರ ವ್ಯವಸಾಯ ಮಾಡುತ್ತಿದ್ದರು. ಇದರಿಂದ, ಮಣ್ಣಿನ ಫಲವತ್ತತೆ ಭೌತಿಕ ರಾಸಾಯನಿಕ, ಜೈವಿಕ ಗುಣಗಳು ಹಾಳಾಗದೆ ಹಾಗೆಯೇ ಉಳಿದುಕೊಳ್ಳುತ್ತದೆ. ಸೋಲಿಗರು ಬಿತ್ತುವ ಬೀಜವನ್ನು ಕಲಕೊಟ್ಟು, ಗುದ್ದಲಿ, ಹಾರೆಕೋಲಿನಿಂದ(ಕಡ್ಡಿ) ಅಗೆದು ಬಿತ್ತುತ್ತಿದ್ದರು. ಈ ರೀತಿಯಾಗಿ ಸೋಲಿಗರು ಏಕಕಾಲದಲ್ಲಿ ಒಂದೇ ಸ್ಥಳದಲ್ಲಿ ವಿವಿಧ ಬೆಳೆಗಳನ್ನು ಬೆಳೆಯುವುದನ್ನು ನೋಡಿದಾಗ ಅಚ್ಚರಿ ಮೂಡುತ್ತದೆ.

**ಸುಸ್ಥಿರ ಬಳಕೆ:** ಸುಸ್ಥಿರ ಬಳಕೆ ಎಂದರೆ ಯಾವುದೇ ಕೊಯ್ಲು ಮಾಡುವಾಗಲೂ ಫಸಲು ಮುಂದಿನ ಸುಗ್ಗಿಯಲ್ಲಿಯೂ ಸಿಗುವಂತೆ ಕೊಯ್ಲು ಮಾಡಬೇಕು. ಮುಂದಿನ ಸುಗ್ಗಿಗೆ ಅಷ್ಟೇ ಅಲ್ಲದೇ ಮುಂದಿನ ಪೀಳಿಗೆಗೂ ಸಿಗುವಂತಿರಬೇಕು. ಅಂದರೆ ಅದರ ಇಳುವರಿ ದೀರ್ಘ ಕಾಲದವರೆಗೆ ಆದಷ್ಟು ಸ್ಥಿರವಾಗಿ ಇರಬೇಕು. ಇದೇ ಸುಸ್ಥಿರ ಬೇಸಾಯ ಪದ್ಧತಿ. ಇದನ್ನೇ ವಿಜ್ಞಾನಿಗಳು ಸಂದರ್ಭಕ್ಕನುಗುಣವಾಗಿ

ಬೇರೆ ಬೇರೆ ರೀತಿಯಲ್ಲಿ ಹೇಳುತ್ತಾರೆ. ಅಂದರೆ "ದೀರ್ಘ ಕಾಲದ ನಂತರ ಜೀವವೈವಿಧ್ಯ ಪೀಳಿಗೆಗಳ ಅಗತ್ಯ ಮತ್ತು ಆಶೋತ್ತರಗಳಿಗೆ ಧಕ್ಕೆ ಬಾರದಂತೆ ಜೀವಲೋಕವನ್ನು ಕಾಳಜಿಯಿಂದ ಬಳಸುವುದೇ ಸುಸ್ಥಿರ ಬೇಸಾಯ ಎಂದು ಒಂದು ವ್ಯಾಖ್ಯೆಯಲ್ಲಿ ಹೇಳಲಾಗಿದೆ. ಒಂದು ಫಸಲನ್ನು ಬಳಸುವಾಗ ಅಕ್ಕಪಕ್ಕದ ಫಸಲಿಗೂ ಧಕ್ಕೆ ಆಗಬಾರದು. ಇಡೀ ಜೀವಲೋಕವೇ ಆದಷ್ಟು ಸಮೃದ್ಧವಾಗಿ ಉಳಿದಿರಬೇಕು. ಇದರಲ್ಲಿ ಸೋಲಿಗರು ತಮ್ಮ ಜೀವನಾಧಾರಕ್ಕೆ ಎಷ್ಟು ಬೇಕು ಅಷ್ಟು ಮಾತ್ರ ಬೆಳೆದುಕೊಂಡು ಜೀವನ ಮಾಡುತ್ತಿದ್ದರು. ಆದರೆ ವಾಣಿಜ್ಯ ಬೆಳೆಯನ್ನೇನು ಬೆಳೆಯುತ್ತಿರಲಿಲ್ಲ.

**ಸೋಲಿಗರಲ್ಲಿ ೯ ವಿಧವಾದ ರಾಗಿಯ ತಳಿಗಳಿವೆ ಅವುಗಳೆಂದರೆ**

೧. ಬಿಳಿ ಬುಂಡುಗನ ರಾಗಿ

೨. ಮಜ್ಜಿಗೆ ರಾಗಿ

೩. ಹಾಲು ಮುದ್ದಿಗನ ರಾಗಿ

೪. ಮುದ್ದುಗನ ರಾಗಿ

೫. ಪಲಗನ ರಾಗಿ

೬. ಮಳೆರಾಗಿ

೭. ಕರಿಕಡ್ಡಿರಾಗಿ

೮. ಹಾಲು ರಾಗಿ

೯. ಕರಿಬುಂಡುಗ ರಾಗಿ

ಇವುಗಳಲ್ಲಿ ಯಾವುದಾದರೂ ರಾಗಿಯ ತಳಿಗಳನ್ನೂ ಉಪಯೋಗಿಸುತ್ತಾರೆ. ಆಹಾರಗಳಲ್ಲೆಲ್ಲ ಸೋಲಿಗರಿಗೆ ರಾಗಿಯು ಬಲುಪ್ರಿಯವಾದ ಆಹಾರವಾಗಿದೆ. ಮಗುವಿನಿಂದ ಹಿಡಿದು, ಬಾಣಂತಿ–ಮಕ್ಕಳು, ಗಂಡಸರು, ಮಹಿಳೆಯರು ಎಲ್ಲರೂ ಸಹ ರಾಗಿಯ ಹಿಟ್ಟು, ಅಂಬಲಿ, ಗಂಜಿಯನ್ನು ಕಾಡುಸೀಗೆಯ ಸೊಪ್ಪಿನ ಜೊತೆಗೆ ಹೆಚ್ಚಾಗಿ ಉಪಯೋಗಿಸುತ್ತಾರೆ. ಸೋಲಿಗ ಸಮುದಾಯವು ತಮ್ಮ ಅಸ್ತಿತ್ವಕ್ಕಾಗಿ ರಾಗಿಯ ಸಂಗ್ರಹಣೆ ಅಥವಾ ಅದರ ಬೆಳೆ, ಕೊಯಿಲು, ಸಂಗ್ರಹ, ನಾಟಿ, ತಲೆ, ತಲಾಂತರಗಳಿಂದ ಮುಂದುವರಿಸಿಕೊಂಡು ಬಂದಿರುವ ಸೋಲಿಗ ಸಮುದಾಯದಲ್ಲೇ ಹೆಣೆದಿರುವ ಹಾಡುಗಳು, ರಾಗಿಯ ಬೆಳೆ ಮತ್ತು ಸೋಲಿಗರು ಇವುಗಳ ನಡುವೆ ಇರುವ ಸಂಬಂಧವನ್ನು ತಿಳಿಸುತ್ತದೆ.

**ರಾಗಿಯ ಪದ**

ಗೀಕು ಮಕ್ಕನಾ ರಾಗಿಯ ರಾ
ಬೀಸೋದು ನಮ್ಮ ರಾಗಿಯ ರಾ
ವಣಿಯಾದು ನಮ್ಮ ರಾಗಿಯಾ
॥ಗೀಕು॥
ಲೇಲಾ..... ಲ.. ಲ.. ಲ.. ಲಲ್ಲಾ ಲಾ. ಲಾ. ಲಾ. ಲಲ್ಲಾ
ಲ್ಲಲ್ಲಲಾ.... ಲಾಲಾಲಾ... ಲಲ್ಲಾ ಲಾಲಾಲಾ ॥

ಬಿತ್ತಾದು ನಮ್ಮ ರಾಗಿಯರಾ
ಕೆತ್ತಾದು ನಮ್ಮ ರಾಗಿಯರಾ
ಕೀಳಾದು ನಮ್ಮ ರಾಗಿಯರಾ
॥ಗೀಕು॥
॥ಲೀಲಾ॥

ಬಡಿಯದು ನಮ್ಮ ರಾಗಿಯರಾ
ಕೇರಾದು ನಮ್ಮ ರಾಗಿಯರಾ
ತೂರಾದು ನಮ್ಮ ರಾಗಿಯರಾ
॥ಗೀಕು॥
॥ಲೀಲಾ॥

ಬೆಂಡ ಬೆಜ್ಜಿನ ರಾಗಿಯರಾ
ಹೊಂಗೆ ಮರದ ರಾಗಿಯರಾ
ಮತ್ತಿ ಮರದ ರಾಗಿಯರಾ
॥ಗೀಕು॥
॥ಲೀಲಾ॥

ಹುಣಸೆ ಮರದ ರಾಗಿಯರಾ
ದಡಸಿಲು ಮರದ ರಾಗಿಯರಾ
ತೇಗಮರದ ರಾಗಿಯರಾ
॥ಗೀಕು॥
॥ಲೀಲಾ॥

ಹೊನ್ನೆ ಮರದ ರಾಗಿಯರಾ
ಬೀಟೆ ಮರದ ರಾಗಿಯರಾ
ಕಕ್ಕೆ ಮರದ ರಾಗಿಯರಾ
॥ಗೀಕು॥
॥ಲೀಲಾ ಲಲ್ಲಲ್ಲಾ॥

ಬೆಜ್ಜಲು ಮರದ ರಾಗಿಯರ
ತಾರೆ ಮರದ ರಾಗಿಯರ
ಹುಣಸೆ ಮರದ ರಾಗಿಯರಾ
॥ಗೀಕು॥

**ಸಾರಾಂಶ:** ರಾಗಿಯನ್ನು ಸೋಲಿಗರು ತಮ್ಮದೇ ಆದ ಶೈಲಿಯಲ್ಲಿ ಹಾಡಿ ಸಂತೋಷದಿಂದ ಸಂಭ್ರಮಿಸುತ್ತ, ಪ್ರಕೃತಿಯನ್ನು ಆರಾಧಿಸುತ್ತಾ ನೃತ್ಯ ಮಾಡುತ್ತಾರೆ. ಕಾಡಿನ ಮರದ ಹೆಸರನ್ನು ರಾಗಿಯ

ಜೊತೆಗೆ ಸೇರಿಸಿಕೊಂಡು ಹೇಳುವುದರ ಮೂಲಕ ಎಲ್ಲರೂ ಕುಣಿಯುತ್ತಾರೆ. ಇದರ ಮೂಲಕ ಕಾಡಿನಲ್ಲಿರುವ ಪ್ರಾಣಿ, ಪಕ್ಷಿ, ಮರ, ಗಿಡ ಮುಂತಾದ ಸಕಲ ಜೀವರಾಶಿಗಳನ್ನು ನೆನೆಯುವುದರ ಮೂಲಕ ಮುಂದಿನ ಪೀಳಿಗೆಯವರಿಗೆ ಕಲಿಸುವುದರ ಮೂಲಕ ಉಳಿಸಿ ಬೆಳೆಸುವಂತೆ ಮಾಡುತ್ತಾರೆ. ಅದುವೇ ಈ ಗೀಕುಮಕ್ಕನ ರಾಗಿಯರ ಜಾನಪದ ಶೈಲಿಯ ಹಾಡು. ಗೀಕು ಮಕ್ಕನ ರಾಗಿಯರ ಜಾನಪದ ಹಾಡಿನಲ್ಲಿ ಸೋಲಿಗರು ತಮ್ಮ ನೆಚ್ಚಿನ ಆಹಾರವಾದ ರಾಗಿಯನ್ನು ಯಾವ ರೀತಿ ಬೆಳೆಯುತ್ತಿದ್ದರು, ಆ ವಿಧಾನಗಳ ಮೂಲಕ ಕಾಡಿನ ಮಧ್ಯೆ ಅಲ್ಲಲ್ಲಿ ತರಗಲೆ, ಕಡ್ಡಿ, ಮುಳ್ಳುಗಳನ್ನು ಕಿತ್ತು ಗುಡಿಸಿ, ಗುಡ್ಡೆಮಾಡಿ, ಅದಕ್ಕೆ ಬೆಂಕಿಯಿಟ್ಟು, ಅದರ ಬೂದಿಯನ್ನು ಸುಟ್ಟು, ಅದರ ಗೊಬ್ಬರವನ್ನು ಹೊಲಕ್ಕೆ ಉಪಯೋಗಿಸಿ, ಕಳಕೊಟ್ಲು ಮೂಲಕ ನಾಲ್ಕು ಸಾಲು ಬರುವ ಹಾಗೆ ಮಿಶ್ರ ಬೇಸಾಯ ಅಂದರೆ ರಾಗಿ, ಅವರೆ, ಸಾಸಿವೆ, ಜೋಳ ಈ ರೀತಿಯಾಗಿ ಸಾಲುಗಳಲ್ಲಿ ಬಿತ್ತಿ ಅಲ್ಲಲ್ಲಿ ಗುಂಪು ಗುಂಪಾಗಿ ರಾಗಿಯನ್ನು ಬೆಳೆಯುತ್ತಿದ್ದರು. ಬೆಳೆದ ರಾಗಿಯನ್ನು ಮನೆಗೆ ಸಂಗ್ರಹಿಸಿ ತಂದು ಅದನ್ನು ಹೇಗೆ ಉಪಯೋಗಿಸುವುದು ಎಂಬುದು ಈ ಗೀಕುಮಕ್ಕನ ರಾಗಿ ಎಂಬ ಜಾನಪದ ಹಾಡಿನ ಮೂಲಕ ವ್ಯಕ್ತಪಡಿಸುತ್ತಾರೆ.

ಸೋಲಿಗರ ರಾಗಿಯು ಹೊನ್ನೆ ಮರದ ರಾಗಿ ಹೇಗಿದೆ ಅಂದರೆ, ಹೊನ್ನೆ ಮರವು ಮರಗಳಲ್ಲಿ ಗಟ್ಟಿ ಮರ, ಈ ಮರವು ಕಾಡಿನಲ್ಲಿ ಹುಲುಸಾಗಿ ಬೆಳೆಯುತ್ತದೆ. ಇದು ಶ್ರೀಮಂತ ಮರ ಹಾಗೆಯೇ ರಾಗಿಯು ಹುಲುಸಿನ ರಾಗಿ ಎಂದು ಹೇಳುತ್ತಾರೆ. ಸೋಲಿಗರು ವಿಶೇಷವಾಗಿ 'ಹಾಲು' ರಾಗಿಯನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಅದರಲ್ಲೂ ಬಾಣಂತಿಯರಿಗೆ ಹೆಚ್ಚಾಗಿ ಕೊಡುತ್ತಾರೆ. ಕಾರಣ ಈ ರಾಗಿಯಲ್ಲಿ ಹಾಲಿನ ಅಂಶ ಹೆಚ್ಚಾಗಿರುತ್ತದೆ. ಸೋಲಿಗರು ಹಾಲು ರಾಗಿಯನ್ನು ಬಾಣಂತಿಯರಿಗೆ ಹೆಚ್ಚಿನ ಪ್ರಮಾಣದಲ್ಲಿ ನೀಡುತ್ತಾರೆ. ಇದು ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವುದಲ್ಲದೇ ಮಗು ಸದೃಢವಾಗಿ ಬೆಳೆಯಲು ಬೇಕಾಗುವಂತಹ ಎಲ್ಲಾ ಪೌಷ್ಟಿಕಾಂಶವೂ ಸಹ ಈ ಹಾಲು ರಾಗಿಯಲ್ಲಿ ಇದೆ. ಆದುದರಿಂದ ಸೋಲಿಗ ಸಮುದಾಯದಲ್ಲಿ ಹಾಲು ರಾಗಿಯನ್ನು ಹೆಚ್ಚಾಗಿ ಬಾಣಂತಿಯರಿಗೆ 'ಮಂಡಸೀಗೆ ರಸ'ದ ಜೊತೆಯಲ್ಲಿ ಹಾಲು ರಾಗಿಯ ಹಿಟ್ಟನ್ನು ಮಾಡಿ ಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೃಷಿತಜ್ಞರು ಸಂಶೋಧನೆ ಮಾಡಿ, ವೈಜ್ಞಾನಿಕ ವಿಧಾನಗಳ ಮೂಲಕ ರಾಗಿ ತಳಿ, ಬಿತ್ತನೆ, ಬೀಜ, ವ್ಯವಸಾಯ, ಅದಕ್ಕೆ ಬಳಸುವ ಗೊಬ್ಬರ ಇವುಗಳೆಲ್ಲವನ್ನು ತಿಳಿಸುತ್ತಾರೆ. ಆದರೆ ಸೋಲಿಗರು ಅದೆಷ್ಟೋ ವರ್ಷಗಳ ಹಿಂದಿನಿಂದಲೇ ಈ ಪಾರಂರಿಕವಾದ ಜ್ಞಾನವನ್ನು ಪರಿಸರದೊಟ್ಟಿಗೆ ಕಳಕೊಟ್ಲು ವ್ಯವಸಾಯ ಮಾಡುತ್ತ ಉಳಿಸಿಕೊಂಡು ಬಂದಿದ್ದಾರೆ. ಇತ್ತೀಚಿನ ರಾಗಿಯ ಬೇಸಾಯದ ವ್ಯವಸ್ಥೆಯು ಸೋಲಿಗರಲ್ಲಿ ಹಿಂದಿನಿಂದಲೇ ಇತ್ತು ಎಂಬುದು ತಿಳಿದುಬರುತ್ತದೆ.

ಅದೇ ರೀತಿಯಲ್ಲಿ ಗೀಕು ಮಕ್ಕನ ರಾಗಿಯು ಕಾಡಿನಲ್ಲಿರುವ ಪ್ರತಿಯೊಂದು ಮರಗಳ ಹೆಸರನ್ನು ನೆನೆಯುವುದರ ಮೂಲಕ ಅವುಗಳೇ ನಮ್ಮ ದೇವರು, ನಮ್ಮ ಉಸಿರು ಎಂದು ನಂಬಿ ಪೂಜಿಸಿ ಹಾಡಿ ಕುಣಿಯತ್ತಾರೆ. ಒಟ್ಟಾರೆಯಾಗಿ, ಜನಪದ ಕಾವ್ಯವು ಆಯಾ ಪರಿಸರದೊಟ್ಟಿಗೆ ಅವಿನಾಭಾವ ಸಂಬಂಧವನ್ನೂ ಕಾಯ್ದುಕೊಂಡಿರುತ್ತದೆ. ಅದೇ ರೀತಿಯಲ್ಲಿ ಸೋಲಿಗರಲ್ಲಿ ರಾಗಿಯು ಪ್ರಮುಖ ಆಹಾರವಾಗಿ ಅತ್ಯಂತ ಅವಿನಾಭಾವ ಸಂಬಂಧದಿಂದ ಕೂಡಿದೆ. ಅಂದರೆ ಸೋಲಿಗರು ಪರಿಸರವನ್ನು ಜೀವಂತಗೊಳಿಸಿ ಬೇರೆ, ಬೇರೆ ಪಾತ್ರಗಳನ್ನಾಗಿ ಮಾಡಿ ಜನಪದ ಸೃಷ್ಟಿಯನ್ನು ಸಂಭ್ರಮಿಸುತ್ತಾ

"ಗೀಕೂ ಮಕ್ಕನಾ ರಾಗಿಯರ" ಎಂದು ಕುಣಿದು ಕುಪ್ಪಳಿಸಿ ರಾಗಿಗೂ–ಸೋಲಿಗರಿಗೂ ಇರುವ ಅವಿನಾಭಾವ ಸಂಬಂಧವನ್ನು ಈ ಕವನದಲ್ಲಿ ಕಾಣಬಹುದಾಗಿದೆ.

ಸೋಲಿಗರು ಕಾಡಿನಲ್ಲಿ ಸಂಗ್ರಹಿಸುವ ಕಿರು ಉತ್ಪನ್ನಗಳ ಬಗ್ಗೆ ತಮ್ಮ ಸೋಲಿಗರ ಸಂಸ್ಕೃತಿಯಲ್ಲಿ ತಿಳಿಸಿದ್ದಾರೆ. ಆದುದರಿಂದ, ಸೋಲಿಗರು ಪ್ರಕೃತಿ ಪ್ರಿಯರು ಅವರ ಜಾನಪದ ಜಗತ್ತು ಹೆಚ್ಚಾಗಿ ಪ್ರಕೃತಿಯ ಒಂದೊಂದು ಕಥೆಯನ್ನು ತಿಳಿಸುತ್ತಾ ಮುಂದೆ ಸಾಗುತ್ತದೆ. ಕಾನನಗಳಲ್ಲಿರುವ ಪ್ರಕೃತಿಯ ಕುಟುಂಬಗಳ ಬಗ್ಗೆ ಜಾನಪದ ಶೈಲಿಯಲ್ಲಿ ಹೆಣೆದುಕೊಂಡಿರುತ್ತದೆ.

"Their principal food is the Ragi, which they grow supplemented by wild forest produce they speak a patois, allied to old cnarese or Hale Kannada"[9] ರಂಗಚಾರಿ ಮತ್ತು ಥರ್ಷ್ಟರ್ನ ಅವರು ಸೋಲಿಗರ ಜೀವನ ಮತ್ತು ವ್ಯವಸಾಯದ ಜೀವನ ಕ್ರಂಗಳ ಬಗ್ಗೆ ಮಾಯಿತಿಯನ್ನು ತಿಳಿಸಿದ್ದಾರೆ.

### ಸೋಲಿಗರು ಬೆಳೆಯುವ ವಿವಿಧ ಮಿಶ್ರ ತಳಿ ಬೆಳೆಗಳು

ಸೋಲಿಗರು ತಮ್ಮ ವ್ಯವಸಾಯದ ಭೂಮಿಯಲ್ಲಿ ರಾಗಿಯ ಜೊತೆಗೆ ಇತರ ಮಿಶ್ರ ಬೆಳೆಯ ತಳಿಗಳನ್ನು ಬೆಳೆಯುತ್ತಾರೆ ಅವುಗಳಲ್ಲಿ ಮುಖ್ಯವಾದ ಬೆಳೆಗಳೆಂದರೆ, ಜೋಳ. ಜೋಳದಲ್ಲಿ ಹಲವಾರು ವಿಧಗಳಿವೆ. ಹಲವಾರು ವಿಧವಾದ ಜೋಳದ ತಳಿಯನ್ನು ಸೋಲಿಗರು ತಮ್ಮ ಜಮೀನಿನಲ್ಲಿ ಬೆಳೆಯುತ್ತಾರೆ. ಅವುಗಳೆಂದರೆ, ಬಿಳಿಜೋಳ, ಕೊರೆ ಜೋಳ, ದೊಡ್ಡ ಜೋಳ, ಸಣ್ಣ ಜೋಳ ಮತ್ತು ಮುಸುಕಿನ ಜೋಳ(ಇದು ಮೂರು ತಿಂಗಳ ಬೆಳೆ). ಈ ರೀತಿಯಾದ ಜೋಳದ ತಳಿಯನ್ನು ಸೋಲಿಗರು ಬೆಳೆದು ತಮ್ಮ ಆಹಾರವಾಗಿ ಉಪಯೋಗಿಸುತ್ತಾರೆ.

**ಸಾಸಿವೆ:** ಸಣ್ಣ ಸಾಸಿವೆ, ಮಳೆ ಸಾಸಿವೆ ಮತ್ತು ದೊಡ್ಡ ಸಾಸಿವೆ.

**ನವಣೆ:** ಕಂಬು,

**ಕುಂಬಳ:** ಕುಂಬಳದಲ್ಲಿ ಹಲವಾರು ರೀತಿಯ ಕುಂಬಳದ ತಳಿಯನ್ನು ಸೋಲಿಗರು ಬೆಳೆಯುತ್ತಾರೆ. ಅವುಗಳೆಂದರೆ, ಘಟ್ ಕುಂಬಳ, ಸಿಹಿ ಕುಂಬಳ, ಬಾಲ ಕುಂಬಳ, ಚಿಟ್ಟೆ ಕುಂಬಳ, ಗುಂಡು ಕುಂಬಳ ಮತ್ತು ಮಡಕೆ ಕುಂಬಳ ಇತ್ಯಾದಿ.

**ಲಿಂಬೆ:** ನಿಂಬೆ, ಕಿತ್ತಳೆ, ಚಕೋತ, ಗಜನಿಂಬೆ, ಇರಳೆಕಾಯಿ(ನಿಂಬೆ), ಲಿಂಬೆ ಜಾತಿಗೆ ಭಾರತವೇ ತವರೂರು. ಸಾಮಾನ್ಯವಾಗಿ ಹೆಚ್ಚು ಲಿಂಬೆ ತಳಿಗಳು ಬಿಳಿಗಿರಿರಂಗನ ಬೆಟ್ಟ ಹಾಗೂ ಮಹದೇಶ್ವರ ಬೆಟ್ಟದ ಸುತ್ತಮುತ್ತ ಬೆಳೆಯುತ್ತಾರೆ.

**ಗೆಣಸು:** ಗಾಸು ಬೆಳ್ಳಗೆಣಸು(ಸಿಹಿಗೆಣಸು), ಮರಗೆಣಸು(ಮೂಳಾ ಗೆಣಸು), ತೊಟ್ಟಂಬು, ತೆವಟ್ಟಿಕೆ ಗೆಣಸು, ಹಕ್ಕಿಗೆ ಗಾಸು ಇತ್ಯಾದಿ. ಗಾಸು(ಕೊಲೋಕೆಪಿಯಾ) ಗೆಣಸು ನವರಕಾಲುಗೆ ಗೆಣಸು, ಮುಳ್ಳುಗೆಣಸು ಇನ್ನೂ ಹಲವಾರು ಗೆಣಸುಗಳಿವೆ. ಸಾಮಾನ್ಯವಾಗಿ ಎಲ್ಲಾ ಜಾತಿಯ ಗಾಸುಗಳನ್ನು(ಗೆಣಸು) ಸೋಲಿಗರು ಸಂಕ್ರಾಂತಿ ಮತ್ತು ದೀಪಾವಳಿಯ ಸಮಯದಲ್ಲಿ ಅಂದರೆ ಸೆಪ್ಟೆಂಬರ್, ಅಕ್ಟೋಬರ್, ನವೆಂಬರ್, ಡಿಸೆಂಬರ್ ತಿಂಗಳುಗಳ ಸಮಯದಲ್ಲಿ ಬೆಳೆದ ಗಾಸುಗಳನ್ನು ಕಿತ್ತು ಆಹಾರವಾಗಿ

ಉಪಯೋಗಿಸುತ್ತಾರೆ. ಸೋಲಿಗರು ಕೆಲವೊಂದು ಗಾಸುಗಳನ್ನು ಕಿತ್ತು ಹಸಿಯಾಗಿಯೇ ಉಪಯೋಗಿಸುತ್ತಾರೆ. ಅವುಗಳೆಂದರೆ ಬೆಲ್ಲರೆ ಗಾಸು, ಮರಗಾಸು ಇತ್ಯಾದಿ ಮತ್ತೆ ಕೆಲವು ಗಾಸುಗಳು ಕಿಚ್ಚಿನ(ಬೆಂಕಿಯ) ಗುಂಡಿಯಲ್ಲಿ ಸುಟ್ಟು ಅದರ ಮೇಲಿನ ವಾಪಳೆಯನ್ನು(ಸಿಪ್ಪೆಯನ್ನು) ತೆಗೆದು ಆ ನಂತರ ಉಪಯೋಗಿಸುತ್ತಾರೆ. ಉದಾಹರಣೆಗೆ ಮುಳ್ಳುಗಾಸು, ಬೆಲ್ಲರೆ ಗಾಸು, ನವರಕಾಲು ಗಾಸು ಇತ್ಯಾದಿ ಮತ್ತೆ ಕೆಲವು ಗಾಸುಗಳನ್ನು ನೀರಿನಲ್ಲಿ ಬೇಯಿಸಿಕೊಂಡು ಉಪಯೋಗಿಸುತ್ತಾರೆ. ಅವುಗಳೆಂದರೆ ತೋಟಂಬು ಗಾಸು, ಮರದ ಗಾಸು, ತೇವಟಿಕ್ಕೆ ಗಾಸು, ಬೆಳ್ಳರೆ ಗಾಸು ಇತ್ಯಾದಿ. ಸೋಲಿಗರು ಕಾಡಿನಲ್ಲಿ ಬೆಳೆಯುವ ಗಾಸುಗಳೆಂದರೆ ತುಂಬಾ ಇಷ್ಟಪಡುತ್ತಾರೆ. ಜೊತೆಗೆ ಇದರಲ್ಲಿ ಹೆಚ್ಚು ಪೌಷ್ಟಿಕಾಂಶ ಇದ್ದು ಸೋಲಿಗರಿಗೆ ಬಲು ಪ್ರಿಯವಾಗಿದೆ. ಸೋಲಿಗರು ಗಾಸನ್ನು ಸಾಮಾನ್ಯವಾಗಿ ಕಾಡಿನ ಜೇನಿನ ಜೊತೆಯಲ್ಲಿ ಸೇರಿಸಿಕೊಂಡು ಆಹಾರವಾಗಿ ಉಪಯೋಗಿಸುತ್ತಾರೆ. ಮಕ್ಕಳಿಗೆ, ಮಹಿಳೆಯರಿಗೆ ಜೇನು ಮತ್ತು ಗಾಸು ಆಹಾರವು ಹೆಚ್ಚು ಸತ್ವಭರಿತವಾದ, ಪೌಷ್ಟಿಕವಾದ ಆಹಾರವಾಗಿದೆ. ಜೊತೆಗೆ ಬಹುಮುಖ್ಯವಾಗಿ ಕಾಡಿನ ಗೆಳಸುಗಳಲ್ಲಿ ಸೋಲಿಗರಿಗೆ ರೋಗನಿರೋಧಕ ಶಕ್ತಿಯು ಹೆಚ್ಚಾಗಿರುತ್ತದೆ. ಗೆಣಸು ಮತ್ತು ಜೇನನ್ನು ಸೋಲಿಗರು ಆಹಾರವಾಗಿ ಉಪಯೋಗಿಸುವುದರಿಂದ ಸಕ್ಕರೆ ಖಾಯಿಲೆ, ರಕ್ತದೊತ್ತಡ ಖಾಯಿಲೆಯನ್ನು ನಿವಾರಿಸುವ ಗುಣವನ್ನು ಹೊಂದಿದೆ ಎಂದು ಅಧ್ಯಯನ ಕಂಡುಕೊಂಡಿದೆ. ಆದರೆ ಸೋಲಿಗರು ಇತ್ತೀಚೆಗೆ ಈ ರೀತಿಯ ಕಾಡಿನ ಗೆಳಸನ್ನು, ಜೇನನ್ನು ಉಪಯೋಗಿಸುವುದು ಕಡಿಮೆಯಾಗಿದೆ. ಇದಕ್ಕೆ ಕಾರಣವೆಂದರೆ ಆಹಾರ ಪದ್ಧತಿಯಲ್ಲಿನ ಬದಲಾವಣೆ. ಕಾಡಿಗೆ ಹೋಗಿ ಗೆಣಸನ್ನು ತರುವವರ ಸಂಖ್ಯೆಯೂ ಸಹ ಕಡಿಮೆಯಾಗಿದೆ. ಯುವ ಪೀಳಿಗೆಯವರು ಗೆಣಸಿನ ಆಹಾರ ಪದ್ಧತಿಯನ್ನು ಮರೆಯುತ್ತಿದ್ದಾರೆ. ಕಾಡಿಗೆ ಹೋಗಿ ಗೆಣಸನ್ನು ತರಲು ಅರಣ್ಯ ಇಲಾಖೆಯವರ ಭಯದ ವಾತಾವರಣ ಇನ್ನೂ ಮುಂತಾದ ಕಾರಣಗಳಿಂದ ಸೋಲಿಗರಲ್ಲಿ ನಾಡವರಿಗೆ ಬರುವಂತಹ ಖಾಯಿಲೆಗಳೂ ಸಹ ಇತ್ತೀಚಿನ ದಿನಗಳಲ್ಲಿ ಬರತೊಡಗಿದೆ.

**ಸೊಪ್ಪು:** ಸೋಲಿಗರಿಗೆ ಕುಂಬಳಕಾಯಿ ಮತ್ತು ಕುಂಬಳ ಎಲೆ, ಸೊಪ್ಪು ಬಲು ಇಷ್ಟವಾದುದು. ಗಣಿಕೆ ಸೊಪ್ಪು, ಎಡ್ಡವಕೀರೆ ಸೊಪ್ಪು, ಒನಗೋನೆ ಸೊಪ್ಪು, ಗಂಧದ ಸೊಪ್ಪು, ತುಂಬೆ ಸೊಪ್ಪು, ಮುಳ್ಳಕೀರೆ ಸೊಪ್ಪು, ಅಣ್ಣೆ ಸೊಪ್ಪು, ಸೀಗೆ ಸೊಪ್ಪು, ಕರಳ ರೊಟ್ಟಿಗೆ ಸೊಪ್ಪು, ಮಗ್ಗೆ ಸೊಪ್ಪು, ಚಗಟೆ ಸೊಪ್ಪು, ಬಾಯಿಬಸಳೆ ಸೊಪ್ಪು, ಅಲಸಂದೆ ಸೊಪ್ಪು, ಮೆಣಸಿನಕಾಯಿ ಸೊಪ್ಪು(ಕುಡಿ), ಗಂಡು ಒನಗೊನೆ ಸೊಪ್ಪು, ಬಳ್ಳೆ ಸೊಪ್ಪು, ಕರಳುಕೊಟ್ಟಲ ಸೊಪ್ಪು, ಕಾಡುಸೀಗೆ ಸೊಪ್ಪು, ಜವನೇ ಸೊಪ್ಪು, ಗುರ್ಜಾ ಸೊಪ್ಪು, ಗಣಕೆ ಸೊಪ್ಪು, ಸಬ್ಬಸೀಗೆ ಸೊಪ್ಪು, ಬೋನಗಾರ ಸೊಪ್ಪು, ದಂಟು ಸೊಪ್ಪು, ಚಗಟೆ ಸೊಪ್ಪು, ಒಂದೆಲಗ ಸೊಪ್ಪು, ಸಾಸಿವೆ ಸೊಪ್ಪು ಹೀಗೆ ಹಲವು ವಿಧವಾದ ಸೊಪ್ಪುಗಳನ್ನು ಸೋಲಿಗರು ತಮ್ಮ ಹೊಲದಲ್ಲಿಯೇ ಬೆಳೆದು ಉಪಯೋಗಿಸಿದರೆ ಮತ್ತೆ ಕೆಲವು ಸೊಪ್ಪುಗಳನ್ನು ಕಾಡಿನಿಂದ ತಂದು ಉಪಯೋಗಿಸುತ್ತಾರೆ. ಸೋಲಿಗರು ಸಾಸವಿ ಸೊಪ್ಪನ್ನು ತಮ್ಮ ಹೊಲದಲ್ಲಿ ಬೆಳೆದು ಅದರ ಎಲೆಗಳನ್ನು ಕಿತ್ತು ಅಗತ್ಯವಿರುವಷ್ಟು ಉಪಯೋಗಿಸಿ ಉಳಿದನ್ನು ಆಹಾರವಾಗಿ ಉಪಯೋಗಿಸಿದರೆ, ಆ ಸಾಸವಿ ಬೆಳೆಯಿಂದ, ಸಾಸವಿ ಕಾಳುಗಳನ್ನು ಬಡಿದು ಒಕ್ಕಣೆಮಾಡಿ ಕೆಲವು ಸಲ ಮಾರಾಟ ಮಾಡುತ್ತಾರೆ. ಹೀಗೆ ಸುಮಾರು ೧೦೧ ಜಾತಿಯ ಸೊಪ್ಪುಗಳನ್ನು ಸೋಲಿಗರು ತಾವು ತಿಂದರೆ ಒಳ್ಳೆಯ ಆರೋಗ್ಯವು ದೊರೆತು 'ನಾಮುವೇ ಸಂದಾಗಿರಾಕು' ಎಂದು ಹೇಳುತ್ತಾರೆ.

**ಅವರೆ:** ಬಿಳಿ ಅವರೆ, ಕರಿ ಅವರೆ, ಸೋನೆ ಅವರೆ, ಮಳೆ ಅವರೆ, ನೆಣ್ಣುಗ ಅವರೆ, ಚಿಟ್ಟೆ ಅವರೆ, ನೆಲ ಅವರೆ, ಚಪ್ಪರದ ಅವರೆ, ಹಂಬು ಅವರೆ, ಮುದ್ದೆನೆಲ್ಲ ಅವರೆ, ದೊಡ್ಡ ಅವರೆ, ನಾಡ ಅವರೆ ಹೀಗೆ ಅನೇಕ ರೀತಿಯ ಅವರೆಗಳನ್ನು ಸೋಲಿಗರು ಬೆಳೆಯುತ್ತಾರೆ.

**ತೊಗರಿ:** ಮಳೆ ತೊಗರಿ, ನಾಡ ತೊಗರಿ.

**ಎಡ್ಡನ ಕೀರೆ:** ದೊಂಬೆಡ್ಡ, ಮಾಲೆ ಎಡ್ಡ, ಹರವೆ ಹೊಲದಲ್ಲಿ ಅಲ್ಲಲ್ಲಿ ಮಧ್ಯದಲ್ಲಿ ಹಾಕಿ ಬೆಳೆಯುತ್ತಾರೆ. ಅಲ್ಲದೇ ಮನೆಯ ಅಕ್ಕಪಕ್ಕ, ಮುಂದೆ, ಹಿಂದೆ ಎಡ್ಡನ ಕೀರೆಯನ್ನು ಬೆಳೆಯುತ್ತಾರೆ. ಇದು ಸೋಲಿಗರಿಗೆ ಬಲು ಇಷ್ಟವಾದ ಆಹಾರ. ಸೋಲಿಗರು ಎಡ್ಡನ ಕೀರೆಯನ್ನು ಕೊಯ್ದು ಒಣಗಿಸಿ ಅದನ್ನು ಗಂಟು ಕಟ್ಟಿ ಸೂರಿನಡಿ, ಗುಳ್ಳಿನ ಅಕ್ಕಪಕ್ಕ ಹಾಗೆಯೇ ಇಡುತ್ತಿದ್ದರು. ಯಾವಾಗ ಜೇನು ಕಾಡಿನಲ್ಲಿ ಬರುತ್ತದೆಯೋ ಅಂದರೆ, "ಜೂನ್ ತಿಂಗಳಿನಿಂದ ಹಿಡಿದು ನವೆಂಬರ್, ಡಿಸೆಂಬರ್‌ವರೆಗೂ ಎಡ್ಡೆನ ಕೀರೆಯನ್ನು ಉದುರಿಸಿಕೊಂಡು ಹುರಿದು ಪುಡಿಯನ್ನಾಗಿ ಮಾಡಿಕೊಂಡು ಜೇನುತುಪ್ಪದ ಜೊತೆಗೆ ಬೆರೆಸಿ ತಿನ್ನುತ್ತೇವೆ. ಅದರಲ್ಲೂ ಇದನ್ನು ಮಕ್ಕಳಿಗೆ ಕೊಟ್ಟುಮಲೆ(ಕೊಟ್ಟರೆ) ತುಂಬಾ ಒಳ್ಳೆಯದು. ತುಂಬಾ ಶಕ್ತಿ ಇರುತ್ತೈತೆ. ನಮ್ಮ ಸೋಲಿಗರ ಜನಕ್ಕೆ ಇದುವೆ ಶಕುತಿ." ಎಂದು ಹೇಳುತ್ತಾರೆ.

**ಬಾಳೆ:** ಕಾಡು ಬಾಳೆಯು ಸೋಲಿಗರಿಗೆ ಬಲು ಪ್ರಿಯ. ಸೋಲಿಗರು ಹಲವಾರು ಜಾತಿಯ ಬಾಳೆಯ ತಳಿಗಳನ್ನು ಬೆಳೆಯುತ್ತಾರೆ. ಸೋಲಿಗರು ತಮ್ಮ ಜಮೀನು ಹಾಗು ಗುಡಿಸಲಿನ ಸುತ್ತಮುತ್ತಲು ಈ ಬಾಳೆಯನ್ನು ಬೆಳೆಯುತ್ತಾರೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ನೇಂದ್ರಬಾಳೆ, ದುರ್ಗಾಬಾಳೆ, ರಸಬಾಳೆ, ಪಚ್ಚಬಾಳೆ, ಶಕಲಾಟಿಬಾಳೆ, ಪುಟ್ಟ ಬಾಳೆ, ಒಡುರಾಬಾಳೆ, ಮದರಂಗಬಾಳೆ, ಕಟ್ಬಾಳೆ, ಚಂದ್ರಬಾಳೆ(ಕೆಂಪು), ಬೂದಿಬಾಳೆ, ಏಲಕ್ಕಿ ಬಾಳೆ ಮತ್ತು ಗುಜ್ಜಬಾಳೆ ಹಾಗೂ ಕಾಡುಬಾಳೆ(ಆನೆಗಳಿಗೆ ಬಹಳ ಪ್ರೀತಿ). ಹೀಗೆ ಹಲವಾರು ತಳಿಯ ಬಾಳೆಗಳನ್ನು ಬೆಳೆಯುತ್ತಾರೆ.

**ಹರಳು:** ದೊಡ್ಡ ಹರಳು, ಸಣ್ಣ ಹರಳು, ಚಿಟ್ ಹರಳು ಹೀಗೆ ವಿವಿಧ ಹರಳುಗಳಲ್ಲಿ ಚಿಟ್ ಹರಳು ಔಷಧೀಯ ಗುಣಗಳನ್ನು ಹೊಂದಿರುತ್ತದೆ. ಹಿಂದೆ ಈ ರೀತಿಯ ಹರಳುಗಳನ್ನು ಸೋಲಿಗರು ತಮ್ಮ ಹೊಲದಲ್ಲಿ ಬೆಳೆದು ಅದನ್ನು ಸಂಗ್ರಹಿಸಿ ಅದರಿಂದ, ತಮ್ಮ ಮನೆಗಳಿಗೆ ಬೇಕಾಗುವ ಕೈ ಎಣ್ಣೆ (ಹರಳೆಣ್ಣೆ)ಯನ್ನು ತಾವೇ ತಯಾರು ಮಾಡಿಕೊಳ್ಳುತ್ತಿದ್ದರು. ಯಾವುದೇ ವೈಜ್ಞಾನಿಕ ರಾಸಾಯನಿಕ ಯಂತ್ರವನ್ನು ಉಪಯೋಗಿಸದೇ ತಮ್ಮ ಮನೆಯಲ್ಲಿಯೇ ನೈಸರ್ಗಿಕವಾಗಿ ತಯಾರಿಸಿ ತಾವು ತಲೆಯ ಕೂದಲಿಗೆ, ಮೈಗೆ, ಮಕ್ಕಳಿಗೆ, ಬಾಣಂತಿಗೆ ಉಪಯೋಗಿಸುತ್ತಾರೆ.

ಮುಖ್ಯವಾಗಿ ಸೋಲಿಗರು ಆಧುನಿಕ ಕ್ರಿಮಿಕೀಟಗಳ, ರಾಸಾಯನಿಕವನ್ನು ಉಪಯೋಗಿಸದೇ ಉತ್ಕೃಷ್ಟವಾದ ಪೌಷ್ಟಿಕ ಆಹಾರವೆಂದರೆ 'ಎಡ್ಡನಕೀರೆ ಮತ್ತು ಜೇನು' ಎಂದು ತಿಳಿಯುತ್ತದೆ. ಈ ರೀತಿಯ ಆಹಾರವು ಹೆಚ್ಚು ಪೌಷ್ಟಿಕಾಂಶವು ಮಾತ್ರವಲ್ಲದೆ ಅನೇಕ ಔಷಧೀಯ ಗುಣಗಳಿಂದ ಕೂಡಿದ್ದು, ಸೋಲಿಗರ ಆರೋಗ್ಯದ ಮೇಲೆ ಉತ್ತಮ ಪರಿಣಾಮ ಬೀರುತ್ತದೆ. ಇದನ್ನು ಉಪಯೋಗಿಸುವವರ ಪ್ರಮಾಣವೂ ಕಡಿಮೆಯಾದಂತಾಗುತ್ತಿದೆ. ಇಂಥ ಪಾರಂಪರಿಕ ಆಹಾರವನ್ನು ಉಳಿಸಿ, ಬೆಳೆಸುವಂತಾಗಬೇಕು. ಇಂತಹ ಪೌಷ್ಟಿಕ ಆಹಾರ ಉಪಯೋಗಿಸುವ ಬಗ್ಗೆ ಮಾಹಿತಿಯನ್ನು ಕೊಡುವುದು ಪ್ರಮುಖ ಅಂಶವಾಗಿದೆ. ಇಂತಹ ಒಳ್ಳೆಯ ಆಹಾರವನ್ನು ಸೇವಿಸುವುದರಿಂದ ಸೋಲಿಗರ ಮಹಿಳೆಯರಲ್ಲಿ, ಮಕ್ಕಳಲ್ಲಿ, ಅಪೌಷ್ಟಿಕತೆಯನ್ನು ಹೋಗಲಾಡಿಸುವುದರ ಜೊತೆಗೆ ಉತ್ತಮ ಆರೋಗ್ಯವೂ ಸೃಷ್ಟಿಯಾಗುತ್ತದೆ.

ಪ್ರಪಂಚದ ಯಾವುದೇ ಒಂದು ಬುಡಕಟ್ಟಿನ ಜನರ ಆರ್ಥಿಕ ಜೀವನ ಅವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಮೇಲೆ ಪ್ರತ್ಯೇಕವಾಗಿ ಅಥವಾ ಪರೋಕ್ಷವಾಗಿ ಕೃಷಿಯು ಪ್ರಭಾವ ಬೀರುತ್ತದೆ. ಆ ಸಮುದಾಯದ ಆರ್ಥಿಕ ಜೀವನದ ಜೊತೊಗೆ ಕೃಷಿಯನ್ನು ಅಭ್ಯಸಿಸಬೇಕಾಗುತ್ತದೆ. **ಹರ್ಸ್‌ಕೊವಿಟ್ ಅವರು ಹೇಳುವಂತೆ, "There** is no society without methods of production, distribution, consumption and some from exchange. There is no group without some expression of value, even though may not be formulated in terms of some commonly accepted monetary symbol."[10] ಮುಂದುವರಿದ ಸಮಾಜದ ಜೀವನ ಮಟ್ಟವು ತಾಂತ್ರಿಕತೆ, ಕೈಗಾರಿಕೆ ಹಾಗೂ ಬೃಹತ್ ಯಂತ್ರೋಪಕರಣಗಳನ್ನು ಯಥೇಚ್ಛವಾಗಿ ಬಳಸಿಕೊಂಡು ವ್ಯವಸಾಯ ಮಾಡುವುದು ಕಂಡು ಬರುತ್ತದೆ. ಆದರೆ ಬುಡಕಟ್ಟುಗಳ ಅವಶ್ಯಕತೆಗಳು ಸೀಮಿತವಾಗಿರುವುದರಿಂದ ಅವರ ಆರ್ಥಿಕತೆ, ವ್ಯವಸಾಯ ಅವರ ಜೀವನ ಎಲ್ಲವೂ ಅವರ ಅವಶ್ಯಕತೆ ಮತ್ತು ಅವುಗಳ ಪೂರೈಕೆಯನ್ನು ಅವಲಂಬಿಸಿದಂತೆ ರೂಪಿತಗೊಂಡಿರುತ್ತದೆ.

**ಭೂಮಿ ಪೂಜೆ**

ಭೂಮಿ ಪೂಜೆ, ಫಸಲಿನ ಪೂಜೆ ಮಾಡುವವರೆಗೆ ಹೊಲದಲ್ಲಿ ಯಾರೂ ಪಾದರಕ್ಷೆಯನ್ನು ಹಾಕಿಕೊಂಡು ಹೋಗುವಂತಿಲ್ಲ. ಭೂಮಿದೇವರು ಬೆಳೆಯನ್ನು ಸಂರಕ್ಷಣೆ ಮಾಡುತ್ತಿರುತ್ತಾರೆ ಎಂಬ ಬಲವಾದ ನಂಬಿಕೆ ಸೋಲಿಗರಲ್ಲಿದೆ. ಸಾಂಪ್ರದಾಯಿಕ ಕೊಯ್ಲು ಉತ್ಸವ ನಡೆಯುವವರೆಗೂ ಯಾರೂ ಬೆಳೆಗೆ ಕೈ ಹಾಕುವ ಹಾಗೆ ಇರಲಿಲ್ಲ. ಈಗಲೂ ಸಹ ಇಂತಹ ಪದ್ಧತಿ ರೂಢಿಯಲ್ಲಿದೆ. ಚಿಕ್ಕ ಮಕ್ಕಳಿಗೂ ಸಹ ಈ ತೆರನಾದ ಸಾಂಪ್ರದಾಯಿಕ ವ್ಯವಸ್ಥೆಯ ಬಗ್ಗೆ ಅರಿವಿರುತ್ತದೆ. ಆದುದರಿಂದ ಒಂದು ಹೀಚುಕಾಯಿಯನ್ನು(ಚಿಕ್ಕ ಎಸಳು) ಕೊಯ್ಯಲು ಹೋಗುವುದಿಲ್ಲ. ಕಳ್ಳತನ ನಡೆಯುವುದಿಲ್ಲ. ತಮ್ಮ ಹೊಲದಲ್ಲಿ ಬೆಳೆದ ಫಸಲಿನ ಮೊದಲು ಕೊಯ್ಲನ್ನು ದೇವರಿಗೆ ತೆಗೆದಿಡುತ್ತಾರೆ. ನಂತರ ಕೆಲವು ಫಸಲನ್ನೂ ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ, ಭೂಮಿ ಪೂಜೆ ಹೀಗೆ ಹಲವು ಹಬ್ಬ ಮಾಡಲು ಕೆಲವು ಫಸಲನ್ನು ತೆಗೆದಿಡುತ್ತಾರೆ. ಇನ್ನುಳಿದವನ್ನು ಕುಟುಂಬದ ಬಳಕೆಗೆ ಮನೆಗೆ ತರುತ್ತಾರೆ. ಅದರಲ್ಲೂ ಅಕ್ಕಪಕ್ಕದ ಮನೆಗೆ, ಕೇಳಿದವರಿಗೆ ಸ್ವಲ್ಪ ಹಂಚಿ ಕೊಡುತ್ತಾರೆ.

ಮಳೆ, ಬೆಳೆ ಚೆನ್ನಾಗಿ ಆಗಿದ್ದರಿಂದ ಅದಕ್ಕೆಲ್ಲ ಕಾರಣವಾದ ದೇವತೆಗಳಿಗೆ ಪ್ರೀತ್ಯರ್ಥವಾಗಿ ಸೋಲಿಗರು 'ಹೊಸರಾಗಿಹಬ್ಬ' 'ಸಂಕ್ರಾಂತಿ ಹಬ್ಬ' 'ರೊಟ್ಟಿಹಬ್ಬ'ಗಳನ್ನು ಆಚರಿಸುವ ಪದ್ಧತಿ ಇಂದಿಗೂ ಆಚರಣೆಯಲ್ಲಿದೆ. ಮುಂಗಾರಿನ ಫಸಲು ಕೊಯ್ಲು ಮುಗಿದ ಮೇಲೆ ಚಳಿಗಾಲ ಬಂದಾಗ ಹೊಸರಾಗಿ ಹಬ್ಬವನ್ನು ಆಚರಿಸಲಾಗುತ್ತದೆ. ಅಂದು ಬಂಧು-ಬಾಂಧವರ ಮನೆಗಳಿಗೆ ಭೇಟಿ ಕೊಟ್ಟು ಇಡೀ ರಾತ್ರಿ ಹಾಡು, ಕಥೆ, ಕುಣಿತಗಳಲ್ಲಿ ಜಾಗರಣೆಯಾಗುತ್ತದೆ. ಪ್ರಸಿದ್ಧ "ಗೋರುಕಾನಾ' ಹಾಡು ಹಬ್ಬದಲ್ಲೇ ಸಂಗೀತ ಸಂಜೆಯ ಅವಿಭಾಜ್ಯ ಅಂಗವಾಗಿರುತ್ತದೆ. ರೊಟ್ಟಿ ಹಬ್ಬ ಈ ಹಬ್ಬದಲ್ಲಿ ಸಾಂಪ್ರದಾಯಿಕ ಅಡುಗೆಯ ಸಂಪ್ರದಾಯವಿರುತ್ತದೆ. ರಾಗಿರೊಟ್ಟಿ, ತಾಜಾ ಕಾಯಿಪಲ್ಯ, ಕುಂಬಳಕಾಯಿ ಗೊಜ್ಜು, ಹಲಸಿನ ಪಲ್ಯ, ಅನ್ನ ಸಾಂಬಾರ್ ಮತ್ತು ಪಾಯಸದ ಅಡುಗೆ ಮಾಡಿ ಉಣಬಡಿಸುತ್ತಾರೆ. ಸಂಕ್ರಾಂತಿ ಹಬ್ಬದಲ್ಲಿ ಬಗೆ ಬಗೆಯ ಗೆಡ್ಡೆ-ಗೆಣಸು ಅದರಲ್ಲೂ ತೋಟದ ಗೆಣಸು ವಿಶೇಷತೆ. ಹಲವಾರು ರೀತಿಯ ಗೆಣಸುಗಳನ್ನು ತಂದು ಸುಟ್ಟು ಕೆಲವೊಂದನ್ನು ಬೇಯಿಸಿ, ವಿಶೇಷ ಅಡುಗೆ ಮಾಡಿ ದೇವರಿಗೆ ಅರ್ಪಿಸಿ

ಎಲ್ಲರೂ ಊಟ ಮಾಡಿ ಸಂಭ್ರಮಿಸುತ್ತಾರೆ. ಸೋಲಿಗರು ಮಳೆಯನ್ನೇ ನಂಬಿ ವ್ಯವಸಾಯ ಮಾಡುತ್ತಾರೆ. ಬೇಸಾಯಕ್ಕೆ ನೀರಿನ ವ್ಯವಸ್ಥೆ ಇಲ್ಲ. ಆದ್ದರಿಂದ ಮಳೆ ಋತುಗಳು(ಮಾನ್ಸೂನ್) ತುಂಬಾ ಮುಖ್ಯ ಎನಿಸುತ್ತದೆ. ಸೋಲಿಗರಲ್ಲಿ ಫಸಲು ಬಂದಾಗ ಅದರ ಸರತಿಯು ಕ್ರಮವಾಗಿಯೇ ನಡೆಯುತ್ತದೆ. ಬೆಳೆ ಬಂದಾಗ ಈ ಮುಂದಿನ ಕ್ರಮದಂತೆಯೇ ಫಸಲಿನ ಕೋಯಿಲಿನ(ವ್ಯವಸಾಯ) ಕೆಲಸ ನಡೆಯುತ್ತದೆ. ಸಾಸಿವೆ, ಜೋಳ, ಸಜ್ಜೆ, ರಾಗಿ ಮತ್ತು ನವಣೆ, ಎಡ್ಡನ ಕೀರೆ, ತೊಗರಿ, ಅವರೆ, ಬಿಳಿ ಅವರೆಯನ್ನು ಬೆಳೆಯುತ್ತಾರೆ.

ಇಲ್ಲಿ ಮುಖ್ಯವಾಗಿ ಸೋಲಿಗರು ತಮಗೆ ಇರುವ ಅಲ್ಪಸ್ವಲ್ಪ ಭೂಮಿಯಲ್ಲಿ ತಮ್ಮದೇ ಆದ ಪಾರಂಪರಿಕಜ್ಞಾನ ಹಾಗೂ ಇತ್ತೀಚಿನ ಕೆಲವು ಕೃಷಿಯ ವ್ಯವಸ್ಥೆಗಳನ್ನು ಉಪಯೋಗಿಸಿಕೊಂಡು ಬೇಸಾಯ ಮಾಡುತ್ತಾರೆ. ಆದರೂ ಬೇಸಾಯದ ಭೂಮಿಯ ಒಟ್ಟು ವಿಸ್ತೀರ್ಣ ಸೋಲಿಗರಿಗೆ ಎಷ್ಟಿದೆ, ನೆಲದ ಪೋಷಕಾಂಶ ಎಷ್ಟಿದೆ, ವನ್ಯಪ್ರಾಣಿಗಳ ದಾಳಿ, ಹಾವಳಿ ಎಷ್ಟಿದೆ, ಬೆಳೆಯ ವೈವಿಧ್ಯ ಇತ್ಯಾದಿಗಳ ಇತ್ತೀಚೆಗೆ ಸೋಲಿಗರರಲ್ಲಿ ಸ್ಪಷ್ಟವಾದ ಮಾಹಿತಿ ಇಲ್ಲ. ಅದೇ ರೀತಿ ಸರಕಾರದಿಂದ ಸಂಗ್ರಹಣಾ ಕಾರ್ಯ ನಡೆದಿಲ್ಲ. ಇದು ಬಹಳ ಮುಖ್ಯವಾಗಿ ಆಗಬೇಕಾಗಿದೆ. ಏಕೆಂದರೆ ಕಾಡಿನಿಂದ ಸ್ಥಳಾಂತರ ಬೇಸಾಯದಿಂದ ಒಂದೇ ಕಡೆ ನೆಲೆಸಿ ಬೇಸಾಯ ಪದ್ಧತಿಯನ್ನು ಸೋಲಿಗರಿಗೆ ಪರಿಚಯ ಮಾಡುವಾಗ ಅವರಿಗೆ ಈ ಮೇಲಿನ ಭೂಮಿಗೆ ಸಂಬಂಧಿಸಿದ ಎಲ್ಲಾ ಮಾಹಿತಿಗಳ ಅರಿವನ್ನು ಕೊಡಿಸುವುದು ಬಹಳ ಮುಖ್ಯವಾಗಿರುತ್ತದೆ.

**ಉಪಯುಕ್ತತೆ**

ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ F.A.O. ಈ ರೀತಿ ಹೇಳುತ್ತದೆ. "ಈ ರೀತಿಯ ಸ್ಥಳಾಂತರ ಬೇಸಾಯ ಪದ್ಧತಿಯು ಬಹಳ ಉಪಯುಕ್ತತೆಯಿಂದ ಕೂಡಿರುತ್ತದೆ. ಅದೇನೆಂದರೆ Rotations of Farming ಹೊಲವನ್ನು ರೈತನು ಬದಲಾವಣೆ ಮಾಡಿ ವ್ಯವಸಾಯ ಮಾಡುವುದರಿಂದ ಮಣ್ಣಿನ ಫಲವತ್ತತೆ ಹೆಚ್ಚಾಗುತ್ತದೆ. ಜೊತೆಗೆ ಪರಿಸರದ ಸಂರಕ್ಷಣೆಯೂ ಸಹ ಆಗುತ್ತದೆ." ಸೋಲಿಗರಿಗೆ ಈ ರೀತಿಯಾದ ಜ್ಞಾನ ಬಹಳ ಹಿಂದಿನಿಂದಲೂ ಇದೆ. ಅದೇ ರೀತಿಯಲ್ಲಿ ವ್ಯವಸಾಯ ಮಾಡಿಕೊಂಡು ಬರುತ್ತಿದ್ದಾರೆ.

- ಸುಸ್ಥಿರವಾದ ಬದುಕನ್ನು ಬದುಕಲು ಈ ರೀತಿಯ ಬೇಸಾಯ ಕ್ರಮವು ಸಾಧ್ಯವಾಗುತ್ತದೆ.
- ವೈವಿಧ್ಯತೆಯ ಬೆಳೆಯನ್ನು ಏಕಕಾಲದಲ್ಲಿ ಬೆಳೆಯುವುದರಿಂದ ಜೀವನಾಧಾರಕ್ಕೆ ಉಪಯುಕ್ತವಾಗುತ್ತದೆ.
- ಸರಳ, ಸುಂದರ ಜೀವನ ಸಾಗಿಸಲು ಸಹಾಯಕವಾಗುತ್ತದೆ.
- ಪ್ರಾಣಿ, ಪಕ್ಷಿಗಳ ಸಂಕುಲವನ್ನು ಉಳಿಸಿ, ಬೆಳೆಸಬಹುದು.
- ಕಾಡನ್ನು ಸಂರಕ್ಷಣೆ ಮಾಡಲು ಸಹಾಯಕ.
- ಫಸಲಿನಲ್ಲಿ ಒಂದೆರಡು ಬೆಳೆ ವಿಫಲವಾದರೂ ಇನ್ನುಳಿದವು ಅವನ ನೆರವಿಗೆ ಬರುತ್ತದೆ.
- ಬರಗಾಲದ ಅಭಾವ ತಟ್ಟುವುದಿಲ್ಲ.
- ಹಲ-ಕೆಲವು ತಳಿಗಳು ಪರಸ್ಪರ ಮಿಲನವಾಗಿ ಹೊಸ ಸಂಕರ ತಳಿಗಳು ಸೃಷ್ಟಿಯಾಗುತ್ತದೆ.

- ಮಣ್ಣಿಗೆ ಯಾವುದೇ ರೀತಿಯ ರಾಸಾಯನಿಕ ಬಳಸದೇ ಇರುವುದರಿಂದ ಭೂಮಿಯ ಫಲವತ್ತತೆಯನ್ನು ಕಾಪಾಡಲು, ಉಳಿಸಲು ಸಹಾಯಕವಾಗುತ್ತದೆ.
- ಬೇಸಾಯಗಾರನಿಗೆ ಆಹಾರವೊಂದೇ ಮುಖ್ಯ ಅಲ್ಲ. ಮೇವು, ನಾರು, ಔಷಧ, ಸೌದೆ, ಹಬ್ಬದ ಸಾಮಗ್ರಿ ಎಲ್ಲವೂ ಬೇಕಾಗುತ್ತದೆ.
- ಕಡಿಮೆ ಖರ್ಚಿನಲ್ಲಿ ಒಳ್ಳೆಯ ಉತ್ತಮ ಗುಣಮಟ್ಟದ ಬೆಳೆಯನ್ನು ಬೆಳೆಯಬಹುದು. ಈಗಿನ ವಾತಾವರಣಕ್ಕೆ ಹೊಂದುವಂತೆ ಸದೃಢವಾಗಿ ಬೆಳೆಯುವ ಶಕ್ತಿಯನ್ನೂ ಪಡೆದ ತಳಿಗಳೂ ರೂಪುಗೊಳ್ಳುತ್ತವೆ.
- ಆರ್ಗ್ಯಾನಿಕ್ ಬೆಳೆಯನ್ನು ಬೆಳೆದುಕೊಳ್ಳಬಹುದು.
- ಮಾನವರಲ್ಲಿ ಪ್ರತಿಯೊಬ್ಬರು ಸರಳವಾದ ಜೀವನ ನಡೆಸಲು ಸಹಕಾರಿ. ಹಂಚಿ ತಿನ್ನುವ ಪದ್ಧತಿಯನ್ನು ಮತ್ತು ಸುಸ್ಥಿರವಾದ ಬದುಕನ್ನು ಬದುಕಲು ಸಹಕಾರಿಯಾಗುತ್ತದೆ.

ಈ ರೀತಿಯ ಬೇಸಾಯದಿಂದ ಹಲವಾರು ಉಪಯೋಗಗಳನ್ನು ಸೋಲಿಗರನ್ನು ಕೇಳಿದಾಗ, ಸೋಲಿಗರು ಅನಾದಿ ಕಾಲದಿಂದಲೂ ಸ್ಥಳಾಂತರ ಬೇಸಾಯದ ಮೂಲಕ ತಮ್ಮ ಬದುಕನ್ನು ಕಟ್ಟಿಕೊಂಡು ಕಾಡನ್ನು ಬೆಳೆಸುತ್ತಾ ಜೊತೆಗೆ ಬಂದವರು. ಈ ಪದ್ಧತಿಯಿಂದ ಪರಿಸರ ನಾಶ ಎಂಬುದು ಸತ್ಯಕ್ಕೆ ದೂರವಾದ ಮಾತು. ಸೋಲಿಗರು ಎಲ್ಲೆಲ್ಲಿ ಅದರಲ್ಲೂ ಇಡೀ ಪ್ರಪಂಚದಲ್ಲಿ ಭಾರತದಾದ್ಯಂತ ಬುಡಕಟ್ಟುಗಳು ಎಲ್ಲೆಲ್ಲಿ ವಾಸಿಸುತ್ತವೆಯೋ ಅಲ್ಲೆಲ್ಲಾ ಕಾಡಿನ ರಕ್ಷಣೆ ಈಗಲೂ ಇದೆ. ಕಾಡು ಉಳಿದುಕೊಂಡಿದೆ ಎಂದ ಮೇಲೆ ಈ ಬೇಸಾಯದಿಂದಲೇ ಕಾಡಿನ ನಾಶ ಎಂಬುದು ಒಪ್ಪುವ ಮಾತಲ್ಲ. ಸೋಲಿಗರ ಈ ಸ್ಥಳಾಂತರ ಬೇಸಾಯದಿಂದ ಸುಸ್ಥಿರ ಜೀವನ ನಡೆಸಬಹುದು. ರಾಸಾಯನಿಕ ಗೊಬ್ಬರ ಮಣ್ಣಿಗೆ ಬೀಳದೆ ಭೂಮಿ ಹಾಳಾಗುವುದನ್ನು ತಡೆಗಟ್ಟಬಹುದು.

ಸೋಲಿಗರು ಕಾಡಿನಲ್ಲಿ ವಾಸ ಮಾಡುತ್ತಿದ್ದರೆ, ಅವರಿಂದ ಪರಿಸರ ಕಾಡು ಹಾಳಾಗುತ್ತದೆ ಎಂದು ಸರಕಾರ ತಿಳಿದು ಅವರನ್ನು ಕಾಡಿನಿಂದ ನಾಡಿಗೆ ಸ್ಥಳಾಂತರ ಮಾಡದಿರುವುದು ಒಳ್ಳೆಯದು. ಸೋಲಿಗರು ಪ್ರಕೃತಿಯ ಮಕ್ಕಳು; ಅವರನ್ನು ಪ್ರಕೃತಿಯ ನೆರಳಿನಲ್ಲಿ ಬಾಳಲು ಬಿಡುವುದು ಸರಕಾರ ಹಾಗೂ ಎಲ್ಲರ ಹೊಣೆಯಾಗಿರುತ್ತದೆ. ಕೃಷಿಯಲ್ಲಿ ಅನೇಕ ಜೀವ ವೈವಿಧ್ಯತೆಯನ್ನು ಕಾಪಾಡುತ್ತಿದ್ದರು. ಆಗ್ರೋ ಬಯೋ ಡೈವರ್ಸಿಟಿಯನ್ನು ಕಾಣಬಹುದು. ಆಹಾರ ಬೆಳೆ, ಹಣ್ಣಿನ ಬೆಳೆ ಗೆಡ್ಡೆ–ಗೆಣಸುಗಳ ಬೆಳೆ. ಇದರಲ್ಲಿ ಆಹಾರದಲ್ಲಿ ಸುಸ್ಥಿರತೆಯನ್ನು ಕಾಪಾಡುತ್ತಿದ್ದರು. ಹೊಲದಲ್ಲಿ ಕಡ್ಡಿಗಳಿಂದಲೇ ಬೀಜವನ್ನು ಬಿತ್ತುವುದು. ತಮ್ಮ ಜೀವನ ಆಧಾರಕ್ಕೆ ಏನು ಬೇಕು ಅದನ್ನು ಬೆಳೆಯುತ್ತಿದ್ದರು. ಅಲ್ಲದೇ ವಾಣಿಜ್ಯವಾಗಿ ಅವರು ವ್ಯವಸಾಯ ಮಾಡುತ್ತಿರಲಿಲ್ಲ. ಬೆಳೆದ ಬೆಳೆಗಳನ್ನು ಮೊದಲ ದೇವರಿಗೆ ಅರ್ಪಿಸುತ್ತಿದ್ದರು. ಇದಕ್ಕೆ ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ ಮಾಡಿ ದೇವರಿಗೆ ಅರ್ಪಿಸಿ ತದನಂತರ ಅದನ್ನು ಸೋಲಿಗರು ಉಪಯೋಗಿಸುತ್ತಾರೆ. ಗಿರಿಜನ ಸಂಸ್ಕೃತಿ, ಅವರ ವ್ಯವಸಾಯ ಪದ್ಧತಿಯು ಒಂದಕ್ಕೊಂದು ಪೂರಕವಾಗಿದೆ. ಹೀಗಾಗಿ ಕೃಷಿಯಲ್ಲಿ ಪೂರಕವಾಗಿರುವುದರಿಂದ ಇಂತಹ ಸಂಸ್ಕೃತಿಯು ಇಂದು ಮಹತ್ವ ಪಡೆದಿದೆ. ಪರಿಸರಕ್ಕೆ ಪೂರಕವಾಗಿರುವುದರಿಂದ ಪರಿಸರ ಸಂರಕ್ಷಣೆ ಮಾಡುವುದು ಬಹಳ ಪ್ರಮುಖವಾಗಿದೆ.

ಎಲ್ಲೆಲ್ಲಿ ಸೋಲಿಗರಿದ್ದಾರೆಯೋ ಅಲ್ಲಿ ಕಾಡುಗಳಿವೆ. ಪರಿಸರ ಸಾಮರಸ್ಯ, ಹಂಚಿ ತಿನ್ನುವ ಮನೋಭಾವನೆ, ಸರಳ ಜೀವನ, ಇವರಿಗೆ ಅತಿಯಾದ ದುರಾಸೆ ಇಲ್ಲ; ಕಡಿಮೆ ಖರ್ಚಿನಲ್ಲಿ ಜೀವನ ಮಡುತ್ತಿದ್ದರು. ಕಾಡಿನ ಸುತ್ತಮುತ್ತಲಿನಲ್ಲಿ ಸೋಲಿಗರು ಕುಮ್ರಿ ಬೇಸಾಯ ಮಾಡುತ್ತಿದ್ದು, ಕಾಡಂಚಿನ ಕೆಲವು ಕಡೆ ವಾಸವಾಗಿದ್ದಾರೆ. ಆದರೆ ಇತ್ತೀಚೆಗೆ ಬೇಸಾಯ ಪದ್ಧತಿಯಲ್ಲಿ ಮಾತ್ರ ವ್ಯತ್ಯಾಸಗಳಿವೆ. ಸೋಲಿಗರಿಗೆ ವ್ಯವಸಾಯ ಒಂದು ಪವಿತ್ರವಾದ ಕೆಲಸ, ವ್ಯವಸಾಯವನ್ನು ಬಹಳ ನಿಷ್ಠೆ ಪ್ರೀತಿಯಿಂದ, ಶ್ರಮವಹಿಸಿ ಫಸಲನ್ನು ಬೆಳೆಯುತ್ತಾರೆ.

**ಪ್ರಸ್ತುತದ ದಿನಗಳಲ್ಲಿ ಸೋಲಿಗರ ಬೇಸಾಯ**

ಕಾಡಿನ ಮಧ್ಯದಲ್ಲಿ ವಾಸ ಮಾಡುತ್ತಿದ್ದ ಸೋಲಿಗರನ್ನು ಒಂದೆಡೆ ತಂದು ಸೇರಿಸಿ ಅವರಿಗೆ ಸ್ಥಳಾಂತರ ಬೇಸಾಯವನ್ನು ಮಾಡಲು ಸರ್ಕಾರಕ್ಕೆ ಕಷ್ಟದ ಕೆಲಸವಾಗಿದೆ. ಸಧ್ಯದ ಪರಿಸ್ಥಿತಿಯಲ್ಲಿ ಸೋಲಿಗರು ಹಿಂದೆ ಬೆಳೆಯುತ್ತಿದ್ದ ಎಲ್ಲಾ ಫಸಲನ್ನು ಈಗಲೂ ಸಹ ಬೆಳೆಯುತ್ತಾರೆ. ಆದರೆ ಈಗ ಹೊಸ ಪೋಡು, ಯರಕನಗದ್ದೆ ಪೋಡು, ಬಂಗ್ಲೆಪೋಡು ಹೀಗೆ ಹಲವರು ಪೋಡುಗಳಲ್ಲಿ ತಮಗೆ ಗೊತ್ತುಮಾಡಿದ ೧ ಎಕರೆ, ೩ ಎಕರೆ ಜಮೀನಿನಲ್ಲಿ ಬೆಳೆಯನ್ನು ಬೆಳೆಯುತ್ತಾರೆ. ಇತ್ತೀಚೆಗೆ ಸೋಲಿಗರಿಗೆ ಹೊಸ ಬೆಳೆಯ ಪರಿಚಯವಾಗಿದೆ. ಸಾಸುವೆ, ಮೆಣಸು, ಸೋಲಿಗರು ೧೯೮೮ ರವರೆಗೂ ಕಾಫಿಯನ್ನು ಬೆಳೆಯುತ್ತಿರಲಿಲ್ಲ. ಇಂದು ಅನೇಕ ಪೋಡುಗಳಲ್ಲಿ ಕಾಫಿಯ ಪರಿಚಯವಾಗಿದೆ. ಜೊತೆಗೆ ಏಲಕ್ಕಿ, ಮೆಣಸು ಸಹ ಬೆಳೆಯುತ್ತಾರೆ. ಆದರೆ ಸೋಲಿಗರಲ್ಲಿನ ಬೇಸಾಯ ಕ್ರಮ ಮಾತ್ರ ಹಾಗೆಯೇ ಇದೆ. ಆದರೆ ಬೇಸಾಯ ಪದ್ಧತಿಯಲ್ಲಿ ಮಾತ್ರ ಹಲವಾರು ಬದಲಾವಣೆಗಳನ್ನು ಕಾಣುತ್ತೇವೆ.

ಆಧುನಿಕತೆ ವಿಜ್ಞಾನ, ತಂತ್ರಜ್ಞಾನಗಳು ಕಸುಬುಗಳನ್ನು ಕಸಿದುಕೊಂಡಿವೆ. ಸಂಸ್ಕೃತೀಕರಣ, ಪಾಶ್ಚಾತ್ಯೀಕರಣ, ತಾಂತ್ರೀಕರಣಗಳ ಪ್ರಭಾವದಿಂದ ಮಾನವ ತನ್ನ ದೇಸಿ ಕಸುಬುಗಳನ್ನು ತೊರೆದು ಅತಂತ್ರನಾಗಿ ತನಗೆ ತೋರಿದ ಕೆಲಸಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದಾನೆ. ಅದರಲ್ಲೂ ಮುಖ್ಯವಾಗಿ ಕರ್ನಾಟಕ ಬುಡಕಟ್ಟುಗಳಲ್ಲಿ ಹಲವಾರು ತಮ್ಮದೇ ಆದ, ಕಸುಬುಗಳನ್ನು ಇನ್ನೂ ಉಳಿಸಿಕೊಂಡು, ಬೆಳೆಸಿಕೊಂಡು ಬರುತ್ತಿರುವುದನ್ನು ಕಾಣಬಹುದು. ೧೯೮೦ರ ಈಚೆಗೆ ಸೋಲಿಗರು ಬೆಳೆಯುವ ಬೆಳೆ ಮತ್ತು ಬೇಸಾಯದಲ್ಲಿ ಹಲವಾರು ವಿಧಾನ ಮತ್ತು ಹೊಸ ಬೆಳೆಗಳನ್ನು, ಕಾಣಬಹುದಾಗಿದೆ. ಸೋಲಿಗರ ಜಮೀನಿನಲ್ಲಿ ಹೊಸ ಹೊಸ ತಳಿಯ ವಾಣಿಜ್ಯ ಬೆಳೆಗಳು ಸೇರಿಕೊಂಡಿವೆ.

**ಕಾಫಿಯ ಪರಿಚಯ:** ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲ್ಲಿನ ಹೊಸ ಪೋಡು, ಪುರಾಣಿ ಪೋಡು, ಮಾರಿಗುಡಿ ಪೋಡು, ಯರಕನಗದ್ದೆ ಪೋಡು, ಗೊಂಬೆಗಲ್ಲು ಪೋಡು, ಸೀಗೆಬೆಟ್ಟ, ಬೇಡಗುಳಿ, ಮುತ್ತುಗದ ಗದ್ದೆ, ಕೆರೆದಿಂಬ ಇನ್ನೂ ಹಲವು ಬೆಟ್ಟದ ಸುತ್ತಮುತ್ತ ಕಾಫಿಯ ಪರಿಚಯ ಆಗಿದೆ. ಈ ಕಾಫಿಯ ಪರಿಚಯ ಆಗುವುದಕ್ಕೆ ಮುಂಚೆ ಸೋಲಿಗರು ಬಿಳಿಗಿರಿರಂಗನ ಬೆಟ್ಟದ ದಟ್ಟ ಅರಣ್ಯದ ಮಧ್ಯದಲ್ಲಿರುವ ವನ್ಯಧಾಮದಲ್ಲಿ ಹೊನ್ನಮೇಟಿ ಹಾಗೂ ಬೇಡಗುಳಿ ಮತ್ತು ಬಿಳುಗಲಿ ಎಂಬ ದೊಡ್ಡ ಕಾಫಿ ಎಸ್ಟೇಟ್‌ಗಳಿವೆ. ಹಿಂದೆ ಸೋಲಿಗರು ಈ ಎಸ್ಟೇಟ್‌ಗಳಲ್ಲಿಯೇ ಸಾಲು ಸಮೂಹ ಮನೆಗಳಲ್ಲಿ ಅವರ ಕೂಲಿ ಆಳುಗಳಾಗಿ ದುಡಿದವರು ಎಷ್ಟೋ ಜನ ಇದ್ದಾರೆ. ಆದರೆ ೧೯೮೦ರ ನಂತರದಲ್ಲಿ ತಮ್ಮ ತುಂಡು ಭೂಮಿಗಳಲ್ಲಿ ಹಾಗೂ ಮನೆಯ ಮುಂದೆ ಹಾಗೂ ಮನೆಯ ಹಿಂಭಾಗಗಳಲ್ಲಿ

ಕಾಫಿ ಗಿಡಗಳನ್ನು ಬೆಳೆಸತೊಡಗಿದರು. ಆನಂತರ ಕಾಫಿಯ ಬೇಸಾಯವನ್ನು ಸೋಲಿಗರೂ ಸಹ ಕಲಿತುಕೊಂಡು ಹಿಂದೆ ಕಾಫಿಯ ಬೀಜವನ್ನು ನೆನಸಿ ಕಲ್ಲಿನಲ್ಲಿ ಅರೆದು, ಅರೆದು ಕಾಫಿಯ ಸಿಪ್ಪೆಯನ್ನು ತೆಗೆದು ಒಣಗಿಸಿ ಮಾರಾಟ ಮಾಡುತ್ತಿದ್ದರು. ಸುಮಾರು ೧೯೮೦ರಿಂದ ೨೦೦೦ದವರೆಗೂ ಕಾಫಿ ಬೀಜದ ಸಂಸ್ಕರಣಾ ಕೆಲಸವನ್ನು ಕೈಯಿಂದಲೇ ಮಾಡುತ್ತಿದ್ದರು. ಉದಾಹರಣೆಗೆ ಹೊಸ ಪೋಡಿನ ಅಂಗಡಿ ಸಿದ್ಧೇಗೌಡರು ಹೆಚ್ಚಾಗಿ ಕಾಫಿಯನ್ನು ಬೆಳೆಯ ತೊಡಗುತ್ತಿದ್ದು, ಅವರ ಮನೆ ಮತ್ತು ಅಂಗಡಿಯ ಮುಂಭಾಗ ಸುಮಾರು ೬–೮ ಜನ ಮಹಿಳೆಯರು ಕುಳಿತು ಕಲ್ಲಿನಿಂದ ಉಜ್ಜಿ, ಉಜ್ಜಿ ಸಿಪ್ಪೆ ಮತ್ತು ಬೀಜವನ್ನು ತೆಗೆದು ಒಣಗಿಸುತ್ತಿದ್ದರು.

ತದನಂತರದಲ್ಲಿ ಸುಮಾರು ೨೦೦೬ರಿಂದ ೨೦೧೪–೧೫ರಲ್ಲಿ ನೋಡಿದಾಗ ಸರಕಾರದ ವತಿಯಿಂದ ಪರಿಶಿಷ್ಟ ಪಂಗಡದ ಇಲಾಖಾ ವತಿಯಿಂದ ಸೋಲಿಗರಿಗೆ ಕಾಫಿಯ ಬೀಜವನ್ನು ಬಿಡಿಸುವ, ಸ್ವಚ್ಛ ಮಾಡುವ ಆಧುನಿಕ ಯಂತ್ರವನ್ನು ಕೊಟ್ಟಿರುವುದು ಕಂಡುಬಂದಿದೆ. ಸೋಲಿಗರು ಈ ರೀತಿಯ ಯಂತ್ರದ ಸಹಾಯದಿಂದ ಕಾಫಿಯ ಉತ್ಪಾದನೆ ಮಾಡಿ ಮಾರಾಟ ಮಾಡುತ್ತಾರೆ.

"ಕಾಫಿಯ ಜೊತೆಗೆ ಮೆಣಸು, ಏಲಕ್ಕಿಯಂತಹ ಬೆಳೆಯನ್ನು ಬೆಳೆಯುತ್ತಾರೆ. ಬೆಟ್ಟದಲ್ಲಿ ವಾತಾಪಿಯ ಗಣೇಶ್ ಟಿ.ಆರ್. ಎಂಬುವರು ಸಾವಯುವ ಕಾಫಿ ಎಸ್ಟೇಟ್ ರೂಪಿಸಿದ್ದಾರೆ. ಅಲ್ಲಿ ಅವರು 'ಸಿವೆಟ್ ಕಾಫಿ'ಯನ್ನು ಉತ್ಪಾದಿಸುತ್ತಾರೆ. ಅದಕ್ಕೆ ಇಂಡೋನೇಷಿಯಾದವರು 'ಲುವಾಕ್ ಕಾಫಿ' ಎನ್ನುತ್ತಾರೆ. ಕಾಡುಬೆಕ್ಕನ್ನು ಹೋಲುವ 'ಸಿವೆಟ್' ಹೆಸರಿನ ಪ್ರಾಣಿಗಳು ಕಾಫಿ ಹಣ್ಣನ್ನು ತಿಂದು ಹೊರಕ್ಕೆ ಹಾಕುತ್ತವೆ. ಕೆಳಕ್ಕೆ ಹಾಗೆ ಬಿದ್ದ ಬೀಜವನ್ನು ಆಯ್ದು ತಂದು ಸಂಸ್ಕರಣೆ ಮಾಡಿ ಮಾರುಕಟ್ಟೆಗೆ ಬಿಡುಗಡೆ ಮಾಡುತ್ತಾರೆ. ಅದು ವಿಶಿಷ್ಟ ಪರಿಮಳದ ಕಾಫಿಯಾಗಿದ್ದು, ಜಗತ್ತಿನಾದ್ಯಂತ ಅದಕ್ಕೆ ವಿಶೇಷ ಬೇಡಿಕೆ ಇದೆ".

ಗುಂಡ್ಲುಪೇಟೆ ಮೈಸೂರಿನ ಹಲವು ತಾಲೂಕಿನ ಕಡೆಗಳಲ್ಲಿ ಸೋಲಿಗರ ವ್ಯವಸಾಯದ ಜೊತೆಗೆ ಹೊಸ ಬೇಸಾಯವನ್ನು ರೂಢಿಸಿಕೊಂಡು ಬಂದಿದ್ದಾರೆ. ಹತ್ತಿ ಬೆಳೆ, ಕಡ್ಲೆಕಾಯಿ ಜೊತೆಗೆ ಚೆಂಡು ಹೂ, ಶುಂಠಿ ಇತ್ಯಾದಿ, ಚೆಂಡು ಹೂ ಬೆಳೆಯು ಗುಂಡ್ಲುಪೇಟೆಯ ಸುತ್ತಮುತ್ತಲ ಹಳ್ಳಿಗಳಲ್ಲಿ ಪಸರಿಸಿದ್ದು, ಸೋಲಿಗರೂ ಸಹ ಈ ಚೆಂಡು ಹೂವನ್ನು ಬೆಳೆಯಲು ಪ್ರಾರಂಭಿಸಿದ್ದಾರೆ. ಸುಮಾರು ೨೦೦೫ರಿಂದೀಚೆಗೆ ಬೆಳೆಯು ಚೆನ್ನಾಗಿ ಬಂದಿದೆ. ಕಾರಣ, ಇದು ೩ ತಿಂಗಳ ಬೆಳೆ, ಬಹುಬೇಗ ಬರುತ್ತದೆ. ಕಾಡುಪ್ರಾಣಿಗಳು ಬೆಳೆಯನ್ನು ತಿನ್ನುವುದಿಲ್ಲ. ಬೆಳೆಯ ಮೊದಲಲ್ಲಿ ಹಂದಿಗಳನ್ನು ಹೊಲಕ್ಕೆ ಬಾರದಿರುವ ಹಾಗೆ ನೋಡಿಕೊಂಡರೆ ನಂತರ ಯಾವುದೇ ಹಾನಿಯೂ ಇರುವುದಿಲ್ಲ. ಬೀಜ, ಗೊಬ್ಬರ ಎಲ್ಲವನ್ನೂ ಹೂವಿನ ಕಂಪೆನಿಯವರೇ ಕೊಡುತ್ತಾರೆ. ಕಂಪೆನಿ ಮತ್ತು ಸೋಲಿಗರ ಮಧ್ಯದಲ್ಲಿ ಒಬ್ಬ ದಲ್ಲಾಳಿ ನಾಡವರು ಇರುತ್ತಾರೆ. ಅವರ ಮುಖಾಂತರವೇ ಎಲ್ಲಾ ವ್ಯವಹಾರವೂ ನಡೆಯುತ್ತದೆ. ೧೫ ದಿನ, ತಿಂಗಳಿಗೆ ಒಮ್ಮೆ ಹಣವೂ ಸಿಗುತ್ತದೆ. ಖರ್ಚು ಕಳೆದು ಉಳಿದ ಹಣವನ್ನು ಸಾಲಕ್ಕೆ ಕೊಟ್ಟು ತಮ್ಮ ದಿನನಿತ್ಯದ ಖರ್ಚು ವೆಚ್ಚಗಳಿಗೆ ಸೋಲಿಗರು ಬಳಸುತ್ತಾರೆ. ಹೆಚ್ಚಾಗಿ ಉಳಿತಾಯ ಏನನ್ನು ಮಾಡುವುದಿಲ್ಲ. "ಚೆಂಡು ಹೂವಿನ ಖರ್ಚು ಉಳಿದ ನಂತರ ಅದಕ್ಕೆ ಸಮ ಆಗುತ್ತದೆ. ನಮಗೆ ಏನೂ ಉಳಿಯುವುದಿಲ್ಲ" ಎಂದು ಯಜಮಾನರಾದ ಮದ್ದೂರು ಕಾಲೋನಿ, ಗುಂಡ್ಲುಪೇಟೆ ತಾಲ್ಲೂಕು ಕೃಷ್ಣಯ್ಯನವರು ಹೇಳುತ್ತಾರೆ.

**ನೆಲ್ಲಿಕಾಯಿ ನೇರಿ ಮೇಲೆ ಹಾಡು**

ನೆಲ್ಲಿಕಾಯಿ ನೇರಿ ಮೇಲೆ
ಲೇಲಂಗಡಿ ಲೇಲ

ದಿರ್‍ರಿರಂಗನ ತೂಗಿ ಪೋನ
ಲೇಲಂಗಡಿ ಲೇಲ

ಭತ್ತನಾಡ ಸೀಮೆಕೋಗಿ
ಲೇಲಂಗಡಿ ಲೇಲ

ಭತ್ತ ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ರಾಗಿ ನಾಡ ಸೀಮೆಕೋಗಿ
ಲೇಲಂಗಡಿ ಲೇಲ

ರಾಗಿ ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ಅವರೇ ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ಅವರೆ ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ಸೀಗೆ ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ನೆಲ್ಲಿ ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ನೆಲ್ಲಿಕಾಯಿ ತಿಂದು ಪೋನ
ಲೇಲಂಗಡಿ ಲೇಲ

ನವಣೆ ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ನವಣೆ ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ಹಲಸು ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ಹಲಸು ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ತೊಗರಿ ನಾಡ ಸೀಮೆ ಕೋಗಿ
ಲೇಲಂಗಡಿ ಲೇಲ

ತೊಗರಿ ಕೂಲಿ ತಿಂದು ಪೋನ
ಲೇಲಂಗಡಿ ಲೇಲ

ಈ ಮೇಲಿನ ರೀತಿಯಲ್ಲಿ ಹೆಣೆದುಕೊಂಡಿರುವ ಸಾಲುಗಳು ಸೋಲಿಗರ ಅಲೆಮಾರಿ ಬದುಕನ್ನು ಪ್ರತಿನಿಧಿಸುತ್ತದೆ. ಸೋಲಿಗರು ಕಾಡಿನಲ್ಲಿಯೇ ಅಲೆಮಾರಿ ಜೀವನ ಮಾಡುವ ಮೂಲಕ ಒಂದೊಂದು ಸ್ಥಳಕ್ಕೆ, ಒಂದೊಂದು ರೀತಿಯ ಫಸಲನ್ನು ಬೆಳೆಯುವುದೇ ಇಲ್ಲಿ ಸೀಮೆಯ ಕಲ್ಪನೆಯನ್ನೂ ತಿಳಿಸುತ್ತದೆ. ತೊಗರಿ, ಅವರೆ, ರಾಗಿ, ನವಣೆ, ಹಲಸು. ಭತ್ತ ಹೀಗೆ ಹಲವಾರು ಬೆಳೆಗಳನ್ನು ಅನೇಕ ಸ್ಥಳಗಳಲ್ಲಿ ಬೆಳೆಯುತ್ತಾ ಜೀವನ ಮಾಡುತ್ತಿದ್ದರು ಎಂಬುದನ್ನು ಲೇಲಂಗಡಿ ಲೇಲ ಎಂಬ ಹಾಡಿನಲ್ಲಿ ತಿಳಿಯಬಹುದು.

ಪ್ರಸ್ತುತ ಕೆಲವು ಸೋಲಿಗರು ವ್ಯವಸಾಯ ಮಾಡುವುದನ್ನು ಕಡಿಮೆ ಮಾಡುತ್ತಿದ್ದಾರೆ. ತಮ್ಮ ಜಮೀನಿನಲ್ಲಿ ಇತ್ತೀಚೆಗೆ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರಾರಂಭ ಮಾಡಿದ್ದಾರೆ. ಕುಟುಂಬ ಬೆಳೆದಂತೆ ಅನುಗುಣವಾಗಿ ಜಮೀನು ಇಲ್ಲ. ಬಹು ಮಂದಿ ಸೋಲಿಗರಿಗೆ ವ್ಯವಸಾಯ ಮಾಡಲು ಭೂಮಿ ಇಲ್ಲದೇ ಬೇರೆಯವರ ಹೊಲದಲ್ಲಿ ಕೂಲಿಯನ್ನು ಅರಸುತ್ತಾ ಹೋಗುತ್ತಾರೆ. ಜೊತೆಗೆ ಕಿರು ಅರಣ್ಯ ಉತ್ಪನ್ನ ಸಂಗ್ರಹ ಮಾಡಿ ಜೀವನ ಸಾಗಿಸುತ್ತಾರೆ. ತಮ್ಮ ಅಲ್ಪಸ್ವಲ್ಪ ಜಮೀನನ್ನು ಕೇರಳದ, ಕೊಡಗಿನ ಅಥವಾ ಭೂ-ಮಾಲೀಕರಿಗೆ ಒಂದು ವರ್ಷ, ಎರಡು ವರ್ಷ, ಮೂರು ವರ್ಷ ಹೀಗೆ ಗುತ್ತಿಗೆಗೆ ಕೊಟ್ಟು ಅವರಿಂದ ಹಣ ಪಡೆಯುತ್ತಾರೆ. ಅವರದೇ ಹೊಲದಲ್ಲಿ ಬೆಳಿಗ್ಗೆ ೭:೦೦ ಗಂಟೆಯಿಂದ ಸಂಜೆ ೬:೦೦ ಗಂಟೆಯವರೆಗೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಈ ರೀತಿಯ ವ್ಯವಸ್ಥೆಯು ಗುಂಡ್ಲುಪೇಟೆ, ಹೆಚ್.ಡಿ.ಕೋಟೆ, ಹುಣಸೂರು, ಚಾಮರಾಜನಗರ ಇತ್ಯಾದಿಗಳಲ್ಲಿ ನಡೆಯುತ್ತಿದೆ. ಅವರ ಜಮೀನಿನಲ್ಲಿ ವಾಣಿಜ್ಯ ಬೆಳೆಗಳಾದ ಶುಂಠಿ, ಅರಿಶಿಣ ಬೆಳೆದು ಅದಕ್ಕೆ ವಿಪರೀತವಾದ ಔಷಧಿ ಸಿಂಪಡಣೆಯಿಂದ ಒಂದು ಕಡೆ ಮಣ್ಣಿನ ಫಲವತ್ತತೆಯು ಹಾಳಾಗುತ್ತಿದೆ. ಕೂಲಿ ಆಳುಗಳಿಗೆ ಯಾವುದೇ ರೀತಿಯ ಭದ್ರತೆಯನ್ನು ಮಾಡಿಕೊಳ್ಳದೇ ಔಷಧಿಯನ್ನು ಇವರ ಕೈಯಿಂದಲೇ ನೇರವಾಗಿ ಸಿಂಪಡಣೆ ಮಾಡುವುದರಿಂದ ಸೋಲಿಗರಿಗೆ ಕೆಲವು ಚರ್ಮ ಸಂಬಂಧಿ ಕಾಯಿಲೆ, ಆಸ್ತಮಾ, ಕೆಮ್ಮು, ಶ್ವಾಸಕೋಶದ ಖಾಯಿಲೆಗಳು ಬರತೊಡಗಿವೆ. ಸೋಲಿಗರಲ್ಲಿ ಮುಖ್ಯವಾಗಿ ಗಮನಿಸಲೇಬೇಕಾದ ಅಂಶವೆಂದರೆ, ತಾವು ವರ್ಷಾನುಗಟ್ಟಲೆಯಿಂದ ಉಳುಮೆ ಮಾಡಿಕೊಂಡು ಬಂದಿರುವ ಭೂಮಿ ನಮ್ಮದೇ. ಅದಕ್ಕೆ ಯಾರಿಂದ ಋಜುವಾತು, ಆರ್.ಟಿ.ಸಿ. ದಾಖಲಾತಿ ಪಡೆಯಬೇಕು ಎನ್ನುವ ಗೋಜಿಗೆ ಅವರು ಹೋಗುವುದಿಲ್ಲ. ನಮಗೆ ಯಾರೂ ಮೋಸ ಮಾಡುವುದಿಲ್ಲ ಎಂಬ ನಂಬಿಕೆಯಿಂದ ಬದುಕುತ್ತಾರೆ. ಒಂದುವೇಳೆ ಸೋಲಿಗರ ಹೊಲದ ಪಕ್ಕದಲ್ಲಿ ಬೇರೆಯವರು ಇತ್ತೀಚೆಗೆ ಒತ್ತುವರಿ ಮಾಡಿಕೊಂಡು ಹೋಗಿ, ಒಳಗೊಳಗೆ ಭೂ-ಕಂದಾಯ ಇಲಾಖೆಯಿಂದ ತಮ್ಮ ವ್ಯವಸಾಯ ದಾಖಲಾತಿ ಪಡೆದುಕೊಂಡಿದ್ದಾರೆ. ಆದರೂ ಅಂತಹ ವಿಷಯವೂ ಸಹ ಸೋಲಿಗರಿಗೆ ಗೊತ್ತೇ ಆಗಿರುವುದಿಲ್ಲ.

## ೪.೨. ಕಿರು ಅರಣ್ಯ ಉತ್ಪಾದನಾ ಸಂಗ್ರಹಣಾ ಕಸುಬು

ನಿಸರ್ಗದಿಂದ ಸಿಗುವ ಸಂಪತ್ತನ್ನು ಸೋಲಿಗರು ಅವರದೇ ಆದ ಪಾರಂಪರಿಕ ಜ್ಞಾನವನ್ನು ಉಪಯೋಗಿಸಿಕೊಂಡು ಸಂಗ್ರಹಣೆ ಮಾಡಿ ತಮ್ಮ ಜೀವನ ಸಾಗಿಸುತ್ತಾ ಬಂದಿದ್ದಾರೆ. ಸೌದೆ ಮತ್ತು ಮರಮುಟ್ಟು ಬಿಟ್ಟು ಉಳಿದೆಲ್ಲ ಕಿರು ಅರಣ್ಯ ಉತ್ಪನ್ನಗಳನ್ನು ಆಹಾರಕ್ಕೆ, ಮೇವಿಗೆ, ಔಷಧ ಮೂಲಿಕೆ ಮತ್ತು ಪರಿಮಳ ದ್ರವ್ಯಗಳಿಗೆ, ಏಣಿ, ಮನೆ ಕಟ್ಟುವ ಸಾಮಗ್ರಿಗಳಿಗೆ ಬಳಸಲಾಗುತ್ತದೆ. ಇವುಗಳನ್ನೆಲ್ಲ ಅರಣ್ಯದಲ್ಲಿ ಅಥವಾ ಅರಣ್ಯದ ಅಂಚಿನಲ್ಲಿ ವಾಸಿಸುವವರ ಉಪಜೀವನಕ್ಕಾಗಿ ಮತ್ತು ಹಣ ಗಳಿಕೆಗೆ ಅನುಕೂಲ ಒದಗಿಸುತ್ತದೆ. "ಭಾರತದಲ್ಲಿ ಅರಣ್ಯ ಪ್ರದೇಶದಲ್ಲಿ ವಾಸಿಸುವ ೫೦ ಕೋಟಿಗೂ ಹೆಚ್ಚು ಜನರಿಗೆ ಇಂತಹ ಕಿರು ಅರಣ್ಯ ಉತ್ಪನ್ನಗಳೇ ಜೀವನಾಧಾರವಾಗಿದೆ".(ನಾಗೇಶ್ ಹೆಗಡೆ: ೨೦೧೨:೧೩೨)

ಭಾರತದಲ್ಲಿ ಬಹುತೇಕ ಎಲ್ಲಾ ಕಿರುಅರಣ್ಯ ಉತ್ಪನ್ನಗಳನ್ನು ರಾಷ್ಟ್ರೀಕರಣ ಮಾಡಲಾಗಿದೆ. ಅಂದರೆ ಅವುಗಳೆಲ್ಲಾ ಸರಕಾರದ ಸ್ವತ್ತುಗಳೇ ಆಗಿದೆ. ಅವುಗಳನ್ನು ಸಂಗ್ರಹಿಸಿದ ಸೋಲಿಗರು ಅಥವಾ ಬುಡಕಟ್ಟುಗಳು ಸರಕಾರಕ್ಕೆ ಮಾರಬೇಕಾಗುತ್ತದೆ. ರಾಷ್ಟ್ರೀಕರಣಕ್ಕೆ ಮೊದಲು ಅರಣ್ಯ ಗುತ್ತಿಗೆದಾರರಿಗೆ ಇಂತಹ ಕಿರು ಅರಣ್ಯ ಉತ್ಪನ್ನಗಳನ್ನು ಮಾರುತ್ತಿದ್ದರು. ಅವರುಗಳಲ್ಲಿ ಕೇರಳದವರು, ಮುಸ್ಲಿಮರು ಹೆಚ್ಚಾಗಿ ಗುತ್ತಿಗೆಯನ್ನು ಪಡೆದು ಬುಡಕಟ್ಟು ಸಮುದಾಯದವರಿಂದ ಅತೀ ಹೆಚ್ಚು ಕಿರು ಅರಣ್ಯ ಉತ್ಪನ್ನ ಸಂಗ್ರಹಿಸಿ ಮಾರಾಟಕ್ಕೆ ಬೇರೆ ಬೇರೆ ಕಡೆ ತೆಗೆದುಕೊಂಡು ಹೋಗುತ್ತಿದ್ದರು. ಆದರೆ ಸುಮಾರು ೩೦ ವರ್ಷಗಳ ಹಿಂದೆ ಆದಿವಾಸಿಗಳು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳ ಮಾರಾಟಕ್ಕೆ ಆದಿವಾಸಿಗಳು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳ ಮಾರಾಟಕ್ಕೆ **'ಲ್ಯಾಂಪ್ಸ್'** ಹೆಸರಿನ ಒಂದು ಸಹಕಾರಿ ಸಂಸ್ಥೆಯನ್ನು ಸ್ಥಾಪಿಸಿತು. ಲ್ಯಾಂಪ್ಸ್ ಎಂದರೆ ಲಾರ್ಜ್‌ಸ್ಕೇಲ್ ಆದಿವಾಸಿ ಮಲ್ಟಿಪರ್ಪಸ್ ಸೊಸೈಟಿ ಎಂದು ಅರ್ಥ. ಸೋಲಿಗರ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಂಘ, ಬಿ.ಆರ್.ಟಿ. ಅಭಯಾರಣ್ಯ ಕ್ಷೇತ್ರದಲ್ಲಿ ಈ ಸೊಸೈಟಿಯ ಮೂರು ಶಾಖೆಗಳಿದ್ದು, ಅಲ್ಲಿ ಆ ಬುಡಕಟ್ಟು ಜನರು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲಾಗುತ್ತಿದೆ. ಅಲ್ಲದೇ, ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದಲ್ಲಿ ಸೋಲಿಗರು ಕಿರು ಅರಣ್ಯ ಉತ್ಪನ್ನವನ್ನು ಮಾರಾಟ ಮಾಡಬಹುದು. ಹಾಗೆಯೇ ಅರಣ್ಯ ಉತ್ಪನ್ನ ಸಂಸ್ಕರಿಸುವ ಘಟಕ ಸ್ಥಾಪನೆಯಾಗಿದೆ. ಇಲ್ಲಿ ಮುಖ್ಯವಾಗಿ ನೆಲ್ಲಿಕಾಯಿಯ ಉಪ್ಪಿನ ಕಾಯಿ, ಸೀಗೆಪುಡಿ, ಸೋಗದೆಬೇರು, ಜೇನು ಇತ್ಯಾದಿ ವಸ್ತುಗಳನ್ನು ಸಂಸ್ಕರಣೆ ಮಾಡುವ ಕೆಲಸ ನಡೆಯುತ್ತಿದೆ. ಇದರಿಂದ ಕಿರು ಅರಣ್ಯ ಉತ್ಪಾದನೆ ಮೂಲಕ ಆ ಸ್ಥಳೀಯ ಸೋಲಿಗರಿಗೆ ಕೆಲಸವೂ ದೊರೆತಂತಾಗಿದೆ. ಸೋಲಿಗರು ಕಾಡುತ್ಪನ್ನಗಳ ಸಂಗ್ರಹಣೆಯ ಮೇಲೆ ಅವಲಂಬಿತರಾಗಿದ್ದಾರೆ. ಇಂದಿಗೂ ಪ್ರಾಣಿ, ಮೀನು, ಜೇನು ಬೇಟೆ ಮತ್ತು ಆಹಾರ ಸಂಗ್ರಹಣೆ ಇವರಲ್ಲಿ ಚಾಲ್ತಿಯಲ್ಲಿರುವುದರಿಂದ ಕಾಡಿನ ಕಿರು ಉತ್ಪನ್ನ ಸಂಗ್ರಹಿಸಿ ಮಾರಾಟ ಮಾಡಿ ಜೀವನ ಸಾಗಿಸುತ್ತಾರೆ. ೨೦೧೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಸೋಲಿಗ ಬುಡಕಟ್ಟಿನವರ ಜನಸಂಖ್ಯೆ ೩೩.೮೯೧(ಪುರುಷರು ೧೬.೮೬೦ ಮತ್ತು ಸ್ತ್ರೀಯರು ೧೯೭೫೫ ಲಿಂಗಾನುಪಾತ ೧೦೦೬)

ಸಿ. ಮಾದೇಗೌಡ ತಮ್ಮ ಪ್ರಬಂಧದಲ್ಲಿ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ಎದುರಿಸುತ್ತಿರುವ ಸಮಸ್ಯೆಗಳು ಹಾಗು ಅವರ ಜೀವನದ ಬಗ್ಗೆ ತಿಳಿಸುತ್ತ, ಸೋಲಿಗರ ಕಿರುಅರಣ್ಯ ಉತ್ಪಾದನೆ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ ಹಿಂದಿನ ಮುಖ್ಯಮಂತ್ರಿಗಳಾದ ಎಸ್.ಎಮ್. ಕೃಷ್ಣರವರು ಬಿಳಿಗಿರಿರಂಗನ

ಬೆಟ್ಟಕ್ಕೆ ಭೇಟಿ ನೀಡಿದಾಗ ಸೋಲಿಗರ ಸಮಸ್ಯೆ ಹಾಗೂ ಅವರ ಕಾಡಿನ ಕಿರು ಅರಣ್ಯ ಉತ್ಪಾಧನೆಯ ಬಗ್ಗೆ ತಿಳಿಸುತ್ತಾ ಸೋಲಿಗರು ಕಿರುಅರಣ್ಯ ಉತ್ಪಾದನೆಯನ್ನು ತಮ್ಮ ಜೀವನ ನಡೆಸಲು ಮುಖ್ಯವಾದ ಕಸುಬಾಗಿ ಮಾಡುವ ಸ್ಥಿತಿಯನ್ನು ತಿಳಿಸುತ್ತ ಅರಣ್ಯ ಉತ್ಪಾದನೆಗೆ ಹೆಚ್ಚು ಒತ್ತು ಕೊಟ್ಟು ಅವಕಾಶ ಮಾಡಿಕೊಡುವಂತೆ ಮನವರಿಕೆ ಮಾಡುವುದರ ಮೂಲಕ ಮುಖ್ಯಮಂತ್ರಿಯವರು ಸೋಲಿಗರಿಗೆ ಅವಕಾಶಕೊಡಲಾಗುವುದೆಂದು ಆಶ್ವಾಸನೆ ಕೊಟ್ಟರು. ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ. ಸೋಲಿಗರು ಪ್ರಸ್ತುತವೂ ಕಾಡಿನ ಕಿರು ಅರಣ್ಯ ಉತ್ಪಾದನೆಯನ್ನು ಮಾಡುತ್ತಿದ್ದಾರೆ.

**ಸೋಲಿಗರು ಸಂಗ್ರಹಿಸುವ ಕಿರು ಅರಣ್ಯ ಉತ್ಪನ್ನಗಳು**

ಜೇನು ಸಂಗ್ರಹಣೆ, ಗಿಡಮೂಲಿಕೆಗಳ ಸಂಗ್ರಹ, ಪೊರಕೆ, ಅಳಲೆಕಾಯಿ, ನೆಲ್ಲಿಕಾಯಿ, ಮೇಣ, ಕಕ್ಕೆ ಚಕ್ಕೆ, ತೇಗಿನ ಬೀಜ ಧೂಪ, ಜಾಲದ ಧೂಪ, ಕಲ್ಲು ಧೂಪ, ಮರಾಠಿ ಮೊಗ್ಗು, ಪಾಸೆ(ಕಲ್ಲು ಹೂ) ಸೊಗದೆ ಬೇರು, ಮಾಗಳಿ ಬೇರು, ಸುಂಡೆ ಬೇರು, ಹಾಲದ ಬೇರು, ಕಾಡು ಮಾವಿನ ಕಾಯಿ, ಕಾಡು ಹಲಸಿನ ಕಾಯಿ, ಕಾಡು ಸೀಗೆ ಕಾಯಿ, ಕಾಡು ಬೋನಗಾರ ಕಾಯಿ, ಕಾಡು ಹುಣಸೆ ಹಣ್ಣು, ಕಾಡು ಅಂಟುವಾಳ ಕಾಯಿ, ಕಾಡು ಬೇಲದ ಹಣ್ಣು, ಕಾಡು ಹತ್ತಿ ಹಣ್ಣು, ಕಾಡು ನೇರಳೆ ಹಣ್ಣು, ಬಿದಿರು ಕಳಲೆ, ಕಾಡು ಬಿಲ್ವಪತ್ರೆ ಕಾಯಿ, ಕಾರೇ ಕಾಯಿ– ಹೀಗೆ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವ ಸಾಂಪ್ರದಾಯಿಕ ಜೀವನ ವಿಧಾನವನ್ನು ಸೋಲಿಗರು ಹೊಂದಿದವರಾಗಿದ್ದರು. ಪಾಸೆ, ಅಂಟು, ಸೀಗೆ, ಅಳಲೆ, ಪೊರಕೆ, ಹುಲ್ಲು, ಮಾಗಳಿಬೇರು ಬುರುಗ, ತೇಗದ, ಹೊಂಗೆ, ಮೇಣ, ಆಲದ, ಸುಂಡೇ, ಮಾವಿನಕಾಯಿ, ಸೋಗದೆ ಹಾಗೂ ಇನ್ನೂ ಕೆಲವು ಕಿರು ಅರಣ್ಯ ಉತ್ಪನ್ನಗಳನ್ನು ಈ ಪಟ್ಟಿಯಲ್ಲಿ ಸೇರಿಸಲಾಗಿದೆ. ಉದಾಹರಣೆಗೆ ಮೇಣ, ಬೂರುಗದ ಹೂವು, ತೇಗದ ಬೀಜ, ಆಲದ ಬೇರು, ಹೊಂಗೆ ಬೀಜ, ಮಾಗಳಿ ಬೀಜ, ಸುಂಡೇಬೇರು, ಮಾವಿನಕಾಯಿ ಈ ಕಿರು ಅರಣ್ಯ ಉತ್ಪನ್ನವನ್ನು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ವಾಸವಾಗಿರುವ ಸೋಲಿಗರು ಹಾಗೂ ಬುಡಕಟ್ಟು ಸಮುದಾಯಗಳು ಅವುಗಳ ಜೊತೆಗೆ ಇಂತಹ ಉತ್ಪನ್ನಗಳನ್ನು ಸಂಗ್ರಹಿಸಿ ತಂದು ಮಾರಾಟ ಮಾಡುತ್ತಾರೆ. ಇವುಗಳ ಸಂಗ್ರಹಣೆಯಲ್ಲಿ ಮಹಿಳೆಯರು ಪ್ರಮುಖವಾಗಿ ಭಾಗವಹಿಸುತ್ತಾರೆ. ಸೋಲಿಗರು ಸಂಗ್ರಹಿಸುತ್ತಿದ್ದ ಕಿರು ಅರಣ್ಯ ಉತ್ಪಾದನೆಯನ್ನು ಸರಕಾರವು ೨೦೦೪ರಲ್ಲಿ ವನ್ಯಜೀವಿ ಕಾಯ್ದೆಯಡಿಯಲ್ಲಿ ನಿಷೇಧಿಸಿತು. ವನ್ಯಜೀವಿ ಸಂರಕ್ಷಣಾ ತಿದ್ದುಪಡಿ ಕಾಯ್ದೆ ಮಾಡಲಾಗಿದ್ದು ಅದು ೨೦೦೩ ಏಪ್ರಿಲ್ ೧೨ರಿಂದ ಜಾರಿಗೆ ಬಂದಿದೆ. ಈ ತಿದ್ದುಪಡಿ ಪ್ರಕಾರ ಯಾವುದೇ ಅಭಯಾರಣ್ಯದಲ್ಲೂ ಹಣ ಗಳಿಕೆಯ ಉದ್ದೇಶಕ್ಕೆಂದು ಕಿರುಅರಣ್ಯ ಉತ್ಪನ್ನಗಳನ್ನು ಸಂಗ್ರಹ ಮಾಡುವಂತಿಲ್ಲ. ಹೀಗಾಗಿ ಸೋಲಿಗರಿಗೆ ಈ ಕಾಯ್ದೆಯು ತುಂಬಾ ಕಷ್ಟಕರವಾಗಿದೆ. ಅರಣ್ಯವನ್ನು ಅವಲಂಬಿಸಿ ಅರಣ್ಯ ರಕ್ಷಣೆ ಮಾಡುತ್ತಾ, ಅದರ ಉಪಯೋಗ ಪಡೆಯುತ್ತಿದೆ. ಸೋಲಿಗರಿಗೆ ಈ ನಿಷೇಧದಿಂದ ಅವರ ಬದುಕು ಇನ್ನಷ್ಟು ಕಷ್ಟದಾಯಕವಾಗುತ್ತದೆ.

"Their main occupation is to collect Minor Forest Produce myrbotlams, vembadam bark (ventilago madraspatana) "on the Nilagiri Hills. Honey –combs are collected by Jenu Kurubas and Soligas. They supply honey of varies according to the nature of the seson."[11] (Rangachari K, Edgar Thurston: 1909: 383, 384)

**ಜೇನು:** ದಟ್ಟವಾದ ಕಾನನಗಳಲ್ಲಿ, ಬೆಟ್ಟಗುಡ್ಡಗಳಲ್ಲಿ, ಎತ್ತರವಾದ ಪ್ರದೇಶಗಳಲ್ಲಿ, ಮರದ ಪೊಟರೆಗಳಲ್ಲಿ, ಕಲ್ಲು ಬಂಡೆಗಳಲ್ಲಿ, ಜೇನು ತನ್ನ ಗೂಡನ್ನು ಕಟ್ಟುತ್ತದೆ. ಸೋಲಿಗರು ತಮ್ಮ ಉತ್ಕೃಷ್ಟ ಆಹಾರವಾದ ಜೇನುತುಪ್ಪ ಮತ್ತು ಮೇಣ ಹಾಗೂ ತಮ್ಮ ಸಮುದಾಯದವರ ಆರೋಗ್ಯಕ್ಕೆ ಔಷಧಿಯಾಗಿಯೂ ಜೇನುನೊಣ ಹಾಗೂ ಜೇನುತುಪ್ಪವನ್ನು ಬಳಸುತ್ತಿದ್ದಾರೆ. ಜೇನು ಸೋಲಿಗರಿಗೆ ಬಲು ಪ್ರಿಯವಾದ ಅಹಾರವಾಗಿದೆ. ಅದರಲ್ಲಿಯೂ ಜೇನು ಮತ್ತು ಗೆಣಸು ಹಾಗೂ ಹೆಡ್ಡೆಯ(ಕೀರೆ) ಸೊಪ್ಪಿನ ಪುಡಿಯಂತೂ ಈ ಸಮುದಾಯದ ಜನರಿಗೆ ಬಲು ಇಷ್ಟ. ಇವುಗಳು ಒಂದಕ್ಕೊಂದು ಸವಿಯಲು ಪೂರಕವಾದ ಆಹಾರವಾಗಿರುತ್ತದೆ. ಹಾಗೂ ಅತೀ ಹೆಚ್ಚು ಪೌಷ್ಠಿಕಾಂಶದಿಂದಲೂ ಕೂಡಿರುತ್ತದೆ. ಜೇನನ್ನು ತೆಗೆಯುವುದರಲ್ಲಿ ಸೋಲಿಗ ಸಮುದಾಯದ ಜನರು ಬಹಳ ಪ್ರವೀಣರು. ಅವರು ಸಮುದಾಯದ ಒಟ್ಟೊಟ್ಟಿಗೆ ಈ ವಿದ್ಯೆಯನ್ನು ಕಲಿತು ಪ್ರಕೃತಿದತ್ತವಾಗಿಯೇ ವಾಸ್ತವವಾದ ಅನೇಕ ತರಬೇತಿ ಕಲಿಕೆ ನಡೆದು ಪ್ರತಿಯೊಬ್ಬರೂ ಜೇನು ಸಂಗ್ರಹದಲ್ಲಿ ತೊಡಗುತ್ತಾರೆ. ಸಾಮಾನ್ಯವಾಗಿ ಜೇನು ಸಂಗ್ರಹ ಮಾಡುವುದರಲ್ಲಿ ಜೇನನ್ನು ಕೊಯ್ಯುವುದರಲ್ಲಿ ಪುರುಷರೇ ಹೆಚ್ಚು. ಮಹಿಳೆಯರು ಹೆಚ್ಚು ಕಂಡುಬರುವುದಿಲ್ಲ. ಕೊಯ್ದು ಸಂಗ್ರಹ ಮಾಡಿ, ತಂದು ಜೇನನ್ನು ಬಳಸುವುದು, ಸಂಗ್ರಹಿಸಿಡುವುದು ಕೆಲಸವನ್ನು ಹೆಚ್ಚಾಗಿ ಸೋಲಿಗ ಮಹಿಳೆಯರು ಮಾಡುತ್ತಾರೆ. ಹೆಜ್ಜೇನು ಹೆಚ್ಚುಕಾಲ ಒಂದೇ ಸ್ಥಳಗಳಲ್ಲಿ ಇರುವುದಿಲ್ಲ. ಆದುದರಿಂದ ಇವುಗಳನ್ನು ಸಾಕುವ ಪ್ರವೃತ್ತಿಯು ಇನ್ನೂ ಸಹ ನಡೆದಿಲ್ಲ. ಆದರೆ ಈ ಹೆಜ್ಜೇನನ್ನು ಸಂಗ್ರಹ ಮಾಡುವುದಲ್ಲಿ ಸೋಲಿಗರು ತಮ್ಮದೇ ಆದ ಜ್ಞಾನವನ್ನು ಹೊಂದಿದ್ದಾರೆ. ಈ ಜೇನು ಬೇಟೆಯು ಸೋಲಿಗರ ಒಂದು ಮೂಲ ವೃತ್ತಿ ಎಂಬುದಕ್ಕೆ ಸೋಲಿಗ ಸಮುದಾಯಕ್ಕೆ ಸಂಬಂಧಿಸಿದಂತೆ ಅವರದೇ ಆದ ಅನೇಕ ಕಥೆಗಳನ್ನು ನೋಡಬಹುದಾಗಿದೆ.

ನೀಲಯ್ಯ ಮತ್ತು ಸಂಕಮ್ಮನ ಕಥೆಯಲ್ಲಿ ಕಾಡಿನಲ್ಲಿ ವಾಸವಾಗಿದ್ದ ಸಂಕಮ್ಮ ಮತ್ತು ನೀಲಯ್ಯ ಇರುವಾಗ ಅವರ ತಂದೆಯಾದ ಬೊಮ್ಮೇಗೌಡ ಹಾಗೂ ಸೋಲಿಗ ಸಮುದಾಯದವರು ಇವನಲ್ಲಿ ಬಂದು ಆರು ತಿಂಗಳು ಜೇನು ಬೇಟೆಗೆಂದು ಒಪ್ಪಿ, ಸಂಕಮ್ಮ ಒಬ್ಬಳನ್ನೇ ಬಿಟ್ಟು ಹೋಗುವ ದೃಶ್ಯವನ್ನು ನೋಡಬಹುದಾಗಿದೆ. ಸೋಲಿಗರು ದೊಡ್ಡ-ದೊಡ್ಡ ಕಾನನ ಹಾಗೂ ಬಂಡೆ, ಕೋರೆಗಳಿಗೆ ಹೋಗಿ ಹೆಜ್ಜೇನು ಬೇಟೆ ಮಾಡುತ್ತಿದ್ದರು. ಜೇನು ಬೇಟೆಯಲ್ಲಿ ಅಪಾರವಾದ ಜ್ಞಾನವನ್ನು ಹಿಂದಿನ ಕಾಲದಿಂದಲೂ ಉಳಿಸಿಕೊಂಡು ಬಂದಿದ್ದಾರೆ. ಬಿಳಿಗಿರಿರಂಗನ ಬೆಟ್ಟದ ವಿ.ಜಿ.ಕೆ.ಕೆ.ಯಲ್ಲಿ ಇದರ ಸಂಸ್ಕರಣ ಘಟಕವನ್ನು ಸ್ಥಾಪಿಸಿ ಅನೇಕ ಸೋಲಿಗ ಸಮುದಾಯದ ಪುರುಷರು, ಯುವಕರು, ಮಹಿಳೆಯರು, ಕೆಲಸ ಮಾಡುತ್ತಿದ್ದಾರೆ. ಚಾಮರಾಜನಗರ, ಗುಂಡ್ಲುಪೇಟೆ, ಯಳಂದೂರು, ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಹೆಜ್ಜೇನನ್ನು ಕೊಯ್ದು ಟಿನ್ನಿನಲ್ಲಿ ಸಂಗ್ರಹಿಸಿ, ಕೇರಳ ರಾಜ್ಯಕ್ಕೆ, ಲ್ಯಾಂಪ್ಸ್ ಹಾಗೂ ಮುಂತಾದ ಕಡೆ ವ್ಯಾಪಾರ ಮಾಡಿ, ತಾವೂ ಆಹಾರವಾಗಿ ಉಪಯೋಗಿಸುವುದು ಇಂದಿಗೂ ಕಂಡುಬಂದಿದೆ. ಸೋಲಿಗರು ಹಿಂದೆ ಜೇನುಮೇಣವನ್ನು ಹೆಚ್ಚಾಗಿ ಕಿತ್ತು ಮಾರಾಟ ಮಾಡುವುದು ಮಾಡುತ್ತಿರಲಿಲ್ಲ. ಜೇನನ್ನು ಮಾತ್ರ ಹಿಂಡಿಕೊಂಡು ಮೇಣವನ್ನು ಅಲ್ಲಿಯೇ ಬಿಟ್ಟು ಬರುತ್ತಿದ್ದರು. ಹಾಗೂ ಈ ಮೇಣವನ್ನು ಕೆಲವೊಮ್ಮೆ ಸಮುದಾಯದಲ್ಲಿ ಆರೋಗ್ಯಕ್ಕೆ ಚಿಕಿತ್ಸೆಗಾಗಿಯೂ ಮಾತ್ರ ಉಪಯೋಗಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಮೇಣವನ್ನೂ ಸಹ ತಂದು ಮಾರಾಟ ಮಾಡುತ್ತಿದ್ದಾರೆ.

**ಜೇನು ನೊಣಗಳ ಪ್ರಭೇದಗಳು**

ಭಾರತದ ಕಾನನಗಳಲ್ಲಿ ಒಟ್ಟು ೫ ಜಾತಿಯ ಜೇನುನೊಣಗಳ ಪ್ರಭೇದಗಳಿವೆ. ಅವುಗಳಲ್ಲಿ ನಾಲ್ಕು ಭಾರತದ ಮೂಲವಾಗಿದ್ದು, ಒಂದು ಮಾತ್ರ ವಿದೇಶದ್ದು.

**ಹೆಜ್ಜೇನು(Epis darcet–ಎಪಿಸ್ ಡಾರ್ಸೇಟ್):** ಜೇನುನೊಣಗಳಲೆಲ್ಲ ಗಾತ್ರದಲ್ಲಿ ಹೆಜ್ಜೇನು ಅತ್ಯಂತ ದೊಡ್ಡದು. ಸಾಮಾನ್ಯವಾಗಿ ಭಾರತ, ಪಾಕಿಸ್ತಾನ, ಶ್ರೀಲಂಕಾ, ಮಲೇಷಿಯಾ, ಚೀನಾ, ಫಿಲಿಫೈನ್ಸ್ ಮತ್ತು ಇಂಡೋನೇಷಿಯಾಗಳಲ್ಲಿ ಹೆಚ್ಚಾಗಿ ವ್ಯಾಪಿಸಿದ್ದು, ಸಮುದ್ರ ಮಟ್ಟದಿಂದ ೧೦೦೦ರಿಂದ ೧೭೦೦ ಮೀಟರ್ ಎತ್ತರದ ಪ್ರದೇಶಗಳಲ್ಲಿ ಕಂಡುಬರುತ್ತದೆ. ಅದರಲ್ಲೂ ಚಾಮರಾಜನಗರ, ಮೈಸೂರು, ಕೊಡಗು ಜಿಲ್ಲೆಗಳ ಕಾನನಗಳಲ್ಲಿ ಹೆಜ್ಜೇನು ಹೆಚ್ಚಾಗಿ ಇರುವುದು ಕಂಡುಬಂದಿದೆ. ಬೇಸಿಗೆ ಕಾಲದಲ್ಲಿ ಆಹಾರದ ಲಭ್ಯತೆಯನ್ನು ಅನುಸರಿಸಿ ಗರಿಷ್ಠ ಉಷ್ಣತೆಯಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಇವು ಬಹಳ ದೂರದವರೆಗೆ ಸಮುದ್ರ ಮಟ್ಟದಿಂದ ೨೧೦೦ ಎತ್ತರದವರೆಗಿನ ಪ್ರದೇಶಗಳಿಗೆ ವಲಸೆ ಹೋಗುವಾಗ ಅಲ್ಲಲ್ಲಿ ಒಂದು ಅಥವಾ ಎರಡು ಮೂರು ದಿನಗಳವರೆಗೆ ತಂಗುವುದು ಇದರ ಸ್ವಭಾವ. ಹೆಜ್ಜೇನುಗಳು ಜೇನುಗೂಡನ್ನು ಎತ್ತರವಾದ ಮರಗಳು, ಕೊಂಬೆಗಳು, ದೊಡ್ಡ–ದೊಡ್ಡ ಕಟ್ಟಡಗಳು, ಕಾನನದ ದೊಡ್ಡ–ದೊಡ್ಡ ಬಂಡೆಗಳು, ಕೊರೆಗಳು, ನೀರಿನ ಸಂಗ್ರಹಕಗಳು ಇತ್ಯಾದಿ ಸ್ಥಳಗಳು ಆಯ್ಕೆ ಮಾಡಿಕೊಂಡು ಅಲ್ಲಿ ಜೇನುಗೂಡನ್ನು ಕಟ್ಟುತ್ತದೆ. ಅದರಲ್ಲೂ ಆಲದ ಮರ, ಬಸರೀಮರ, ಹತ್ತಿಮರ, ತಾರೇಮರ ಹೀಗೆ ದೊಡ್ಡ–ದೊಡ್ಡ ಮರಗಳ ಕೊಂಬೆಗಳಲ್ಲಿ ಜೇನುಗೂಡನ್ನು ಯಾರಿಗೂ ಸುಲಭವಾಗಿ ಕೀಳಲು ಆಗದ ಎತ್ತರವಾದ ಸ್ಥಳಗಳಲ್ಲಿ ಕಟ್ಟುತ್ತದೆ.

ಜೇನಿನ ಗೂಡುಗಳು ಒಂದೇ ಎರೆಯನ್ನು ಹೊಂದಿದ್ದು, ಮುಕ್ತವಾಗಿ ಹೊರಗೆ ಕಾಣುವಂತೆ ಇರುತ್ತದೆ. ಜೇನುಗೂಡಿಗೆ ನೇರವಾಗಿ ಸೂರ್ಯನ ತೀಕ್ಷ್ಣವಾದ ಬಿಸಿಲು ಅಥವಾ ಮಳೆಯಿಂದ ರಕ್ಷಣೆ ಹೊಂದಲು ಎರೆಗಳು(ಹಳಿಗಳು) ಆಧಾರದ ಕೆಳಭಾಗಕ್ಕೆ ಅಂಟಿಕೊಂಡಿರುತ್ತದೆ. ಎರಿಗಳ ಆಕಾರ ಹೆಚ್ಚು ಕಡಿಮೆ ಅರ್ಧ ವೃತ್ತಾಕಾರದಲ್ಲಿರುತ್ತದೆ. ೪–೬ ಅಡಿ ವ್ಯಾಸವನ್ನು ಹೊಂದಿರುತ್ತವೆ. ಈ ಜೇನು ಕುಟುಂಬದಲ್ಲಿ ಜೇನು ನೊಣಗಳ ಸಂಖ್ಯೆಯೂ ಸಹ ಹೆಚ್ಚಾಗಿರುತ್ತದೆ. ಹೆಜ್ಜೇನು ಅತ್ಯಂತ ಕೋಪ ಹಾಗೂ ಸಿಟ್ಟಿನ ಸ್ವಭಾವದವುಗಳಾಗಿರುತ್ತವೆ. ತಮಗೆ ಯಾವುದೇ ತೊಂದರೆ ಉಂಟಾದಾಗ ಶತ್ರುಗಳನ್ನು ಬಹಳ ದೂರದವರೆಗೂ ಅಟ್ಟಿಸಿಕೊಂಡು ಹೋಗಿ ಜೇನುಮುಳ್ಳಿನಿಂದ ಚುಚ್ಚುವ ಸ್ವಭಾವವನ್ನು ಹೊಂದಿರುತ್ತವೆ. ಬಹಳ ಸಿಟ್ಟಿನ ಸ್ವಭಾವದ ಇವುಗಳು ಮೇಲೆ ಎದ್ದರೆ ಜೋರಾದ ಶಬ್ದವನ್ನು ಮಾಡುತ್ತಾ ಶತ್ರುಗಳಿಗೆ ತೊಂದರೆ ಮಾಡುತ್ತವೆ.

ನಮ್ಮ ದೇಶದ ಕಾಡುಗಳಲ್ಲಿ ಸಿಗುವ ಹೆಜ್ಜೇನು ಗೂಡುಗಳಲ್ಲಿ ಜೇನು ಬೇಟೆಗಾರರು ಸಂಗ್ರಹಿಸುವ ಜೇನುತುಪ್ಪ ಸುಮಾರು(ಪ್ರತಿ ಗೂಡಿನಿಂದ ವರ್ಷಕ್ಕೆ ಸುಮಾರು ೧ ಟಿನ್ ಅಂದರೆ ೨೫ರಿಂದ ೩೦ ಕಿ.ಗ್ರಾಂ. ತುಪ್ಪ ಸಿಗುತ್ತದೆ.) ಮತ್ತು ಇದರ ಮೇಣವನ್ನೂ ಸಹ ಸಂಗ್ರಹಿಸುತ್ತಾರೆ. ಇದರಿಂದ ಒಟ್ಟು ವಾರ್ಷಿಕ ಉತ್ಪಾದನೆಯ ಶೇ. ೬೦–೭೦ರಷ್ಟಿರುವುದು ಗಮನಾರ್ಹವಾದುದು.

**ಹೆಜ್ಜೇನನ್ನು ಕೀಳುವ ವಿಧಾನ:** ಸೋಲಿಗ ಸಮುದಾಯದವರು ತಮ್ಮದೇ ಆದ ಕೆಲವು ದೇಸಿ ಪದ್ಧತಿಗಳನ್ನು ಉಪಯೋಗಿಸಿಕೊಂಡು ಆದಷ್ಟು ಹೆಜ್ಜೇನನ್ನು ರಾತ್ರಿಯ ವೇಳೆಯಲ್ಲಿ ಹೆಚ್ಚು ಕೊಯ್ಯುವುದು

ಕಂಡು ಬರುತ್ತದೆ. ರಾತ್ರಿಯ ವೇಳೆಯಲ್ಲಿ ಎತ್ತರವಾದ ಜಾಗಕ್ಕೆ ಬಂಡೆಗೆ ಮರಕ್ಕೆ ಹುನುಗೂನೆ ಹಂಬು, ತಡಸಲು ಹಂಬು ಹೀಗೆ ಕಾಡಿನ ಹಂಬುಗಳನ್ನು ಎತ್ತರವಾದ ಮರಕ್ಕೆ ಕಟ್ಟಿಕೊಂಡು ಆ ಹಂಬಿನ ಸಹಾಯದಿಂದ ಜೇನು ಕೊಯ್ಯುತ್ತಿದ್ದರು. ಆ ಹಂಬನ್ನು ಹಿಡಿದು ಎತ್ತರವಾದ ಸ್ಥಳಕ್ಕೆ ಹೋಗಿ 'ಸೂಟೆ'ಯನ್ನು ಕಟ್ಟಿಕೊಂಡು, ಆ ಸೂಟೆಯ ಸಹಾಯದಿಂದ ಹೆಜ್ಜೇನಿನ ಗೂಡಿಗೆ ಹೊಗೆಯನ್ನು ಕೊಟ್ಟು ಹುಳವನ್ನು ನಿಧಾನವಾಗಿ ಅಲ್ಲಿಂದ ಓಡಿಸಿ, ಅದರಲ್ಲೂ 'ರಾಣಿ ಜೇನು' ಹೊರಗಡೆ ಹೋದ ನಂತರ ಜೇನನ್ನು ಅಳಿದು ತರುತ್ತಾರೆ.

**'ಸೂಟೆ':** ಇದು ಒಂದು ಕಾಡಿನ ಹಸಿ ಕಡ್ಡಿಯಿಂದ ಮಾಡಿದ 'ಹಿಡಿಯ ಕಡ್ಡಿ'. ಇದನ್ನು ಹಸಿಯಾದ ಹುಲ್ಲು, ಎಲೆ, ಸೊಪ್ಪು ಹಾಗೂ ಮಧ್ಯದಲ್ಲಿ ಹಸಿ ಹಾಗೂ ಒಣ ಎಲೆಗಳನ್ನು ಸೇರಿಸಿ ಕಾಡಿನ ನಾರಿನ ಹಂಬಿನಿಂದ ಸುಮಾರು ೧ ರಿಂದ ೨ ೧/೨ ಮೀಟರ್‌ನಷ್ಟು ಭದ್ರವಾಗಿ ಕಟ್ಟಿದ ಒಂದು ಕಡ್ಡಿ. ಇದನ್ನು ಸೂಟೆ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಹೆಜ್ಜೇನನ್ನು ಕೊಯ್ಯಲು ಈ ಸೂಟೆಯನ್ನು ಉಪಯೋಗಿಸುತ್ತಾರೆ. ಇದರಿಂದ ಹೆಜ್ಜೇನಿಗೆ ಮತ್ತು ಬಂದಾಗೇ ಹಾಗೆ ಹೊರಗಡೆ ಗೂಡನ್ನು ಬಿಟ್ಟು ಹೋಗುತ್ತದೆ. ಈ ಸೂಟೆಯನ್ನು ಸೋಲಿಗ ಸಮುದಾಯದ ಜನರೂ ನೋಡಿ ಮಾಡುತ್ತಾ ಒಟ್ಟೊಟ್ಟಿಗೆ ಜೇನು ಕೊಯ್ಯುತ್ತಾ ಕಲಿಯುತ್ತಾರೆ.

ಸಾಮಾನ್ಯವಾಗಿ ಅರಣ್ಯವಾಸಿ ಸಮುದಾಯಗಳಾದ ಸೋಲಿಗ, ಜೇನುಕುರುಬ, ಬೆಟ್ಟಕುರುಬರು (ಕಾಡುಕುರುಬ) ಜೇನನ್ನು ಕೊಯ್ಯುವಾಗ ನೇರವಾಗಿ ತೆಗೆಯುವುದಿಲ್ಲ. ತಮ್ಮದೇ ಆದ ಕೆಲವೊಂದು ಜ್ಞಾನ ಅಥವಾ ಪದ್ಧತಿಯ ಮೂಲಕ ಜೇನು ಬೇಟೆ ಮಾಡುತ್ತಾರೆ. ಸೋಲಿಗ ಸಮುದಾಯದವರೂ ಸಹ ತಮ್ಮದೇ ಆದ ವಿಧಾನಗಳ ಮೂಲಕ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ತಮ್ಮ ಸಾಂಪ್ರದಾಯಿಕ ಆಚರಣೆಗಳನ್ನೇ ಅನುಸರಿಸುತ್ತಾರೆ. ಅವುಗಳಲ್ಲೂ ಮುಖ್ಯವಾಗಿ ಹೆಜ್ಜೇನು ಬೇಟೆಯಲ್ಲಿಯೂ ಬಹಳ ಪ್ರಮುಖವಾಗಿ ನಿಯಮವನ್ನು ಪಾಲಿಸುತ್ತಾರೆ ಹಾಗೂ ಅಷ್ಟೇ ಸುಲಭವಾಗಿ ಜೇನನ್ನು ಅಳಿಯುತ್ತಾರೆ.

**ವಿಧಾನಗಳು**

**ವದೆಯನ್ನು ಕಟ್ಟುವ ವಿಧಾನ (ಸೂಟೆ):** ದೇವರಿಗೆ, ಅಯ್ಯನಿಗೆ, ಆದಿ ಅಯ್ಯನಿಗೆ ಮಾತಾಡುವುದು ಅಂದರೆ, ಜೇನನ್ನು ಕೀಳುವ ಮುನ್ನ, ಹಿರಿಯ ಅಯ್ಯನಿಗೆ, ಸತ್ತವರಿಗೆ, ದೇವರಿಗೆ ಮಾತಾಕಿ ಅದರಲ್ಲೂ ಮಾದಪ್ಪ, ರಂಗಪ್ಪ, ಕಾರಯ್ಯ, ಬಿಲ್ಲಯ್ಯ, ಪುಸುಮಾಲೆ ಹೀಗೆ ಎಲ್ಲರನ್ನೂ ಕರೆದು ಅವರಿಗೆ ಮಾತಾಕಿ 'ನೀವೇ ನಮ್ಮನ್ನು ಕಾಪಾಡಬೇಕು' ಎಂದು ಹೇಳಿ ಜೇನು ಕೊಯ್ಯಲು ಪ್ರಾರಂಭಿಸುತ್ತಾರೆ.

**ಬಿದಿರು ಬೊಂಬಿನ ಮೂಲಕ:** ಬಿದಿರು ಬೊಂಬಿನ ಮುಂದಿನ ಭಾಗವನ್ನು ಚೆನ್ನಾಗಿ ಚಚ್ಚಿ, ನಾರಿನ ರೀತಿ ಮಾಡಿಕೊಂಡು ಅದನ್ನು ಬೆಂಕಿಯ ಹೊಗೆ ಮಾಡಿಕೊಂಡು ಜೇನಿನ ಗೂಡಿಗೆ ಹಿಡಿದು ಹುಳುಗಳನ್ನು ಓಡಿಸುವುದು.

**ಜೇನು ಹಾಡು:** ಜೇನನ್ನು ಕೊಯ್ಯುವ ಮುನ್ನ ಜೇನಿನಗೂಡಿಗೆ ನಮಸ್ಕರಿಸಿ, ಆನಂತರ ಹಾಡನ್ನು ಹಾಡುತ್ತಾ ಜೇನು ಅಳಿಯುವ ವೇಳೆಯಲ್ಲಿ, ಹಾಡು ಹಾಡುತ್ತಾ, ತೆಗೆಯುವಾಗ ಜೇನುಗಳಿಗೆ ಮತ್ತು(ನಶೆ) ಬಂದು ಸುಮ್ಮನೆ ಬೇರೆ ಕಡೆ ಹೊರಟು ಹೋಗುತ್ತವೆ ಎಂದು ಸೋಲಿಗ ಸಮುದಾಯದವರು ಹೇಳುತ್ತಾರೆ.

ಜೇನೇ. . . . . ನಾ ನಿನ್ನ
ಜೇನೇ . . . . ಕಾಡಿನ ಮಕ್ಕಾವು
ಬಂದಾವೆ ಹೇ ಹೂವಾ ಜೇನೆ.

**ಸಾಮಿಗೆ ನಾರು ಕರಿಕಡ್ಡಿನಾರು:** ಇವುಗಳನ್ನು ದೊಡ್ಡ-ದೊಡ್ಡ ಮರಕ್ಕೆ ಕಟ್ಟಿ ಇದಕ್ಕೆ 'ಮಾಲು' ಎಂದು ಕರೆಯುತ್ತಾರೆ. ಇದನ್ನು ಹಗ್ಗದ ರೂಪದಲ್ಲಿ ಮಾಡಿಕೊಂಡು ಒಬ್ಬರೂ ಮಾತ್ರ ಈ ಹಗ್ಗದ ಸಹಾಯದಿಂದ ಮರ, ಬಂಡೆ, ಎತ್ತರದ ಜಾಗಗಳಿಗೆ ಹೋಗಿ ಜೇನನ್ನು ಕೊಯ್ದು ಜೇನನ್ನು ತೇಗದ ಎಲೆ ಅಥವಾ ಪಾತ್ರೆ, ಟಿನ್ನು ಇವುಗಳ ಮೂಲಕ ಹಗ್ಗದ ಸಹಾಯದಿಂದ ಕೆಳಗೆ ಬಿಡುತ್ತಾರೆ. ಈ ರೀತಿಯಾಗಿ ಸೋಲಿಗರು ಅನಾದಿ ಕಾಲದಿಂದಲೂ ಜೇನು ಬೇಟೆಗೆ ಹೋಗಿ, ಜೇನನ್ನು ಸಂಗ್ರಹಿಸಿಕೊಂಡು ಬರುತ್ತಿದ್ದರು. ಈಗಲೂ ಸಹ ಈ ವೃತ್ತಿಯನ್ನು ಮಾಡುತ್ತಿದ್ದಾರೆ. ತಂದ ಜೇನನ್ನು ಹೆಡ್ಡನ ಕೀರೆಯ ಪುಡಿ ಹಾಗೂ ಕಾಡು ಗೆಣಸನ್ನು ತಂದು ಸುಟ್ಟಿ ಈ ಜೇನಿನ ಜೊತೆ ಸೇರಿಸಿ ತಿನ್ನುತ್ತಿದ್ದರು. ಈ ಆಹಾರ ಸೋಲಿಗ ಸಮುದಾಯದ ವಿಶೇಷ ಆಹಾರಗಳಲ್ಲಿ ಒಂದಾಗಿದೆ.

ರಾತ್ರಿಯ ವೇಳೆಯಲ್ಲಿ ದೇಸಿ ಪದ್ಧತಿಯನ್ನು ಉಪಯೋಗಿಸಿ ಹೆಜ್ಜೇನನ್ನು ಕೊಯ್ಯುತ್ತಾರೆ. ಜೇನುತುಪ್ಪದ ಭಾಗವನ್ನು ಕೈಯಿಂದ ಹಿಂಡಿ ಜೇನುತುಪ್ಪವನ್ನು ತೆಗೆಯುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಹೆಜ್ಜೇನು ಗೂಡುಗಳು ಒಂದೇ ಸ್ಥಳದಲ್ಲಿ. ಅಕ್ಕ-ಪಕ್ಕದಲ್ಲಿಯೇ ಇರುವುದು ಈ ಪ್ರಭೇದದ ಜೇನುನೊಣಗಳ ವಿಶೇಷ. ಇದೇ ಸ್ವಭಾವ ಉಳಿದ ಪ್ರಭೇದಗಳಲ್ಲಿ ಕಂಡುಬರುವುದಿಲ್ಲ. ಹೇರಳವಾಗಿ ಆಹಾರ ದೊರೆಯುವ ಋತುಗಳಲ್ಲಿ ದೊಡ್ಡದಾದ ಒಂದೇ ಆಲದ ಮರದಲ್ಲಿ ಸುಮಾರು ೨೫೨ ಕುಟುಂಬಗಳು ವಾಸವಾಗಿರುವ ನಿದರ್ಶನಗಳಿವೆ. ಬೆಳದಿಂಗಳ ರಾತ್ರಿಯಲ್ಲಿಯೂ ಸಹ ಆಹಾರ ಸಂಗ್ರಹಣೆಯಲ್ಲಿ ತೊಡಗುವುದು ಈ ಹೆಜ್ಜೇನಿನ ಇನ್ನೊಂದು ವಿಶೇಷ ಗುಣವಾಗಿದೆ. ಗೂಡಿನಿಂದ ೫.೦ ಕಿ.ಮೀ. ಅಂತರದವರೆಗಿನ ಸ್ಥಳಗಳಿಂದ ಹೆಚ್ಚು ಸಂಖ್ಯೆಯಲ್ಲಿ ಸಮಯದವರೆಗೆ ಆಹಾರ ಸಂಗ್ರಹಿಸುವ, ಪರಾಗಸ್ಪರ್ಶಗಳಾಗಿ ಮಹತ್ತರ ಪಾತ್ರವನ್ನು ವಹಿಸುತ್ತವೆ.

**ತುಡುವೆ ಜೇನು (ಎಪಿಸ್ ಸೆರಾನ):** ಇದನ್ನು ಏಷಿಯಾ ರಾಷ್ಟ್ರಗಳ ಜೇನುನೊಣ ಎಂದೂ ಕರೆಯಲಾಗುತ್ತದೆ. ಇದು ಭಾರತ, ಪಾಕಿಸ್ತಾನ, ಶ್ರೀಲಂಕಾ, ಮಲೇಶಿಯಾ, ಇಂಡೋಚೈನಾ, ಫಿಲಿಫೈನ್ಸ್, ಚೈನಾ, ರಷ್ಯಾ, ಜಪಾನ್ ಮತ್ತು ಇಂಡೋನೇಷಿಯಾಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಭಾರತದಲ್ಲಿ ಎಲ್ಲಾ ಕಡೆ ಹೆಚ್ಚಾಗಿ ವ್ಯಾಪ್ತಿಯಾಗಿದ್ದು, ಹಿಂದುಕುಷ್ ಮತ್ತು ಹಿಮಾಲಯ ಪರ್ವತಶ್ರೇಣಿಯ ಸಮುದ್ರ ಮಟ್ಟದಿಂದ ೨೦೦೦-೩೦೦೦ ಮೀಟರ್ ಎತ್ತರ ಪ್ರದೇಶಗಳಲ್ಲಿಯೂ ಸಹ ಇದನ್ನು ಕಾಣಬಹುದು. ಈ ತುಡುವೆ ಜೇನುಗಳಲ್ಲಿ ಹಲವಾರು ಬಗೆಗಳು. ಉಪವಿಧಗಳಿವೆ. ಅವುಗಳೆಂದರೆ ಬಿಳಿ ತುಡುವೆ ಜೇನು ಕರಿತುಡುವೆ ಜೇನು.

ಇವುಗಳಲ್ಲಿ ಎರಡೂ ರೀತಿಯ ಉಪಜೇನುನೊಣಗಳನ್ನು ಕಾಣುತ್ತೇವೆ. ಪರ್ವತ ಪ್ರದೇಶದ ಮತ್ತು ಮೈದಾನದ ಪ್ರದೇಶದ ಜೇನುನೊಣಗಳು. ಮೈದಾನ ಪ್ರದೇಶದ ಕೆಲಸಗಾರ ನೊಣಗಳು ಪರ್ವತ ಪದ್ರೇಶದ ನೊಣಗಳಿಗಿಂತ ಗಾತ್ರದಲ್ಲಿ ಚಿಕ್ಕದಾಗಿರುತ್ತವೆ. ಇದರ ಗೂಡುಗಳನ್ನು ಪರಿಸರದಲ್ಲಿ ಸಾಮಾನ್ಯವಾಗಿ ಕತ್ತಲಿರುವ ಪ್ರದೇಶಗಳಾದ ಹುತ್ತದ ಕೋಟೆ, ಮರದ ಪೊಟರೆ, ಬೊಡರೆ ಬಿಲಗಳು,

ಕಲ್ಲುಬಂಡೆಗಳ ಸಂದುಗೊಂದು ಇತ್ಯಾದಿ ಸ್ಥಳಗಳಲ್ಲಿ ಜೇನನ್ನು ಕಟ್ಟಿರುತ್ತದೆ. ಈ ಜೇನಿನ ಕೆಲಸಗಾರ ನೊಣಗಳು ಆಹಾರ ಸಂಗ್ರಹಣೆಗೋಸ್ಕರ ತಮ್ಮ ವಾಸಸ್ಥಳದಿಂದ ಸುಮಾರು ೦.೯-೧.೧೦ ಕಿ.ಮೀ.ವರೆಗೆ ಸಂಚರಿಸುತ್ತವೆ. ಈ ತುಡುಬೆ ಜೇನಿನ ಭಾಗವನ್ನು ಸೋಲಿಗ ಸಮುದಾಯದವರು **ಹಳಿ, ಗುಂಡು, ಮುಚ್ಚಳ** ಎಂದು ೩ ವಿಧದಲ್ಲಿ ಕರೆಯುತ್ತಾರೆ. ಹುಳುಗಳು ಇರುವ ಭಾಗವನ್ನು **'ಹಳಿ'** ಎಂದು ಕರೆಯುತ್ತಾರೆ. ಜೇನುತುಪ್ಪ ಇರುವ ಭಾಗವನ್ನು **'ಗುಂಡು'** ಎಂದು ಕರೆಯುತ್ತಾರೆ. ಅವುಗಳೆರಡರ ಮಧ್ಯದ ಭಾಗದಲ್ಲಿ ಮುಚ್ಚಳ ಇರುತ್ತದೆ. ಇದು ಗಾರೆಯ ರೀತಿ ಇರುತ್ತದೆ. **'ಹಳಿಯ'** ಒಂದು ಭಾಗವೂ ಇದಾಗಿರುತ್ತದೆ.

ತುಡುವೆ ಜೇನಿನ **ಬರಿಗಳು** ಅಂದರೆ, ಜೇನು ಕಟ್ಟುವ(ಹಳಿಗಳು) ಜೇನುಗೂಡು. ಇವುಗಳು ಅರ್ಧ ವೃತ್ತಾಕಾರದಲ್ಲಿದ್ದು, ಒಂದಕ್ಕಿಂತ ಹೆಚ್ಚು ಬರಿಗಳು ಒಂದರ ಪಕ್ಕದಲ್ಲಿ ಒಂದರಂತೆ ಸಮಾನಾಂತರವಾಗಿ ಕಟ್ಟಲ್ಪಟ್ಟಿರುತ್ತದೆ. ತುಡುವೆ ಜೇನು ಶಾಂತ ಸ್ವಭಾವ ಜೇನು ಎಂದು ಹೆಸರು ಪಡೆದಿದೆ. ಈ ಜೇನು ಕಚ್ಚುವುದಿಲ್ಲ. ಇವುಗಳಲ್ಲಿ ವಿಷವೂ ಇರುವುದಿಲ್ಲ. ಒಂದು ವರ್ಷಕ್ಕೆ ೧೦ರಿಂದ ೨೫ ಕೆ.ಜಿ. ಜೇನುತುಪ್ಪವನ್ನು ಕೊಡುತ್ತದೆ. ಈ ಜೇನು ಸಹ ಅನಾದಿ ಕಾಲದಿಂದಲೂ ಬಳಕೆಯಲ್ಲಿದೆ. ಸೋಲಿಗ ಸಮುದಾಯದ ಜನರು ಈ ತುಡುವೆ ಜೇನನ್ನು ಅಳಿದು ಆಹಾರ, ಚಿಕಿತ್ಸೆ ಹಾಗೂ ಮಾರಾಟಕ್ಕೂ ಸಹ ಬಳಸುವುದು ಈಗಲೂ ಮುಂದುವರಿದಿದೆ.

**ಕಿರು ಜೇನು/ಕೋಲು ಜೇನು (ಎಪಿಸ್ ಫ್ಲೋರಿಯ):** ಕಿರುಜೇನನ್ನು ಚಿಟ್ಟೆಜೇನು, ಕಡ್ಡಿಜೇನು ಇನ್ನೂ ಮುಂತಾದ ಸ್ಥಳೀಯ ಹೆಸರುಗಳಿಂದಲೂ ಸಹ ಕರೆಯುತ್ತಾರೆ. ಈ ಕಿರುಜೇನು ಒಂದೇ ಒಂದು ಎರಿಯನ್ನು (ಹಳಿ) ಹೊಂದಿರುವ ಗೂಡನ್ನು ಕಟ್ಟುತ್ತದೆ. ಮುಖ್ಯವಾಗಿ ಈ ಪ್ರಭೇದವು ಭಾರತ, ಪಾಕಿಸ್ತಾನ, ಶ್ರೀಲಂಕಾ, ಮಲೇಶಿಯಾ, ಇಂಡೋಚೈನಾ, ಥಾಯ್‌ಲ್ಯಾಂಡ್ ಮತ್ತು ಇಂಡೋನೇಷಿಯಾಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಬೇಸಿಗೆ ಕಾಲದಲ್ಲಿ ಇರಾನ್ ದೇಶದ ಕೆಲವೆಡೆ ಸಮುದ್ರ ಮಟ್ಟದಿಂದ ೯೦೦ ಮೀಟರ್ ಹಾಗೂ ಜರ್ಮನ್, ಭಾರತ ಹಾಗೂ ಥಾಯ್‌ಲ್ಯಾಂಡ್ ದೇಶಗಳಲ್ಲಿ ೧೯೦೦ ಮೀಟರ್ ಎತ್ತರದವರೆಗೂ ಈ ಪ್ರಭೇದದ ಜೇನಿನ ಗೂಡುಗಳಿರುವುದು ಕಂಡುಬಂದಿದೆ.

ಕೋಲು ಜೇನು ಹೆಸರೇ ಹೇಳುವ ಹಾಗೆ ಸಣ್ಣ-ಸಣ್ಣ ಕಡ್ಡಿಗಳಲ್ಲಿ, ಕೋಲುಗಳಲ್ಲಿ, ರೆಂಬೆಗಳಲ್ಲಿ ಜೇನಿನಗೂಡನ್ನು ಕಟ್ಟಿಕೊಂಡಿರುತ್ತದೆ. ಇವುಗಳು ಅತೀ ಚಿಕ್ಕ ಎರಿ ಅಥವಾ ಗೂಡನ್ನು ಕಟ್ಟುತ್ತದೆ. ಸೋಲಿಗರು ಹೇಳುವ ಪ್ರಕಾರ ಜೇನುತುಪ್ಪಗಳಲ್ಲಿಯೇ ಕೋಲು ಜೇನು ತುಂಬಾ ಬಲು ಶ್ರೇಷ್ಠವಾದುದು ಹಾಗೂ ಬಲು ರುಚಿಕರವಾದುದು. ಈ ಕಿರುಜೇನು ಹಲವಾರು ಉಪಯುಕ್ತ ಔಷಧಿಯ ಗುಣಗಳನ್ನು ಹೊಂದಿರುತ್ತದೆ. ಚಿಕ್ಕವರಿಂದ ದೊಡ್ಡವರೆಲ್ಲರಿಗೂ ಸಹ ಈ ಜೇನು ಔಷಧಕ್ಕಾಗಿ ಉಪಯುಕ್ತವಾದುದು ಎಂದು ಸೋಲಿಗರು ಹೇಳುತ್ತಾರೆ. ಕಾಡಿನಲ್ಲಿ ಸಿಗುವ ಅತ್ಯಂತ ಸಿಹಿಯಾದ ಜೇನೆಂದರೆ ಕಿರುಜೇನು. ಮರ-ಗಿಡಗಳು ಚಿಗುರಿ ಹೂ ಬಿಡಲು ಪ್ರಾರಂಭಿಸುವ ಆ ಸಮಯದಲ್ಲಿ ಕಿರುಜೇನು ಗೂಡು ಕಟ್ಟಲು ಪ್ರಾರಂಭಿಸುತ್ತದೆ. ರೋಜಾಕಡ್ಡಿ, ಕಳ್ಳಿಬೇಲಿಗಳಲ್ಲಿ ಬಿದಿರಿನ ರೆಂಬೆ, ಕಡ್ಡಿಗಳಲ್ಲಿ, ಬೆಜ್ಜಲು ಕಡ್ಡಿಗಳಲ್ಲಿ ಗುತ್ತಿಯ ಒಳಗಿನ ಚಿಕ್ಕ-ಚಿಕ್ಕ ರೆಂಬೆ ಕಡ್ಡಿಗಳಲ್ಲಿ ಕೋಲು ಜೇನು ತನ್ನ ಗೂಡನ್ನು ಕಟ್ಟುತ್ತದೆ.

ಕಿರುಜೇನಿಗೆ ಇರುವ ಇನ್ನೊಂದು ಹೆಸರೆಂದರೆ ಅಟ್‌ಪುಟಕ್ಲ್ ಜೇನು. ಸಾಮಾನ್ಯವಾಗಿ ಗುಂಡ್ಲುಪೇಟೆ ತಾಲ್ಲೂಕಿನ ಸೋಲಿಗರು ಸಮುದಾಯದವರು ಹೆಚ್ಚಾಗಿ ಈ ಹೆಸರಿನಿಂದ ಕರೆಯುತ್ತಾರೆ. ಚಳಿಗಾಲದಲ್ಲಿ ಇವು ತಮ್ಮ ಗೂಡಿನ ಸ್ಥಳವನ್ನು ನೆರಳಿನ ಸ್ಥಳದಿಂದ ನೆರಳಿಲ್ಲದ ಅಥವಾ ಪಾರ್ಶ್ವ ನೆರಳಿರುವ ಸ್ಥಳಕ್ಕೆ ಬದಲಾಯಿಸಿಕೊಳ್ಳುತ್ತವೆ. ಗಾತ್ರದಲ್ಲಿ ಇವು ತುಡುವೆ ಜೇನಿಗಿಂತಲೂ ಸಹ ಚಿಕ್ಕದಾಗಿರುತ್ತದೆ. (ಚಿಕ್ಕದು) ಕೋಲುಜೇನು ಕಡ್ಡಿ ಹಾಗೂ ಚಿಕ್ಕ ಚಿಕ್ಕ ಮರದ ಕೊಂಬೆಯನ್ನು ಒಳಗೊಂಡ ಎರಿಯನ್ನು ರಚಿಸುತ್ತದೆ. ಕೊಂಬೆಯನ್ನು ಒಳಗೊಂಡ ಗೂಡಿನ ಮೇಲ್ಭಾಗ ಹೆಚ್ಚು ದಪ್ಪಗಿರುತ್ತದೆ. ಕೆಳಭಾಗಕ್ಕೆ ಬಂದಾಗಲೆಲ್ಲಾ ಗೂಡು ತೆಳುವಾಗುತ್ತಾ ಕಡ್ಡಿಯ ಮೇಲ್ಭಾಗದ ಕಣಗಳಲ್ಲಿಯೇ ಜೇನುತುಪ್ಪದ ಸಂಗ್ರಹ ಮಾಡುತ್ತದೆ. ಅಲ್ಲದೆ ಅಗಲವಾದ ಈ ಭಾಗವು ಹೊರಗಿನಿಂದ ಮಧು ಮತ್ತು ಪರಾಗವನ್ನು ಹೊತ್ತು ತಂದ ಕೆಲಸಗಾರ ನೊಣಗಳು ಇಳಿಯುವುದಕ್ಕೆ ಹಾಗೂ ಸಂವಹನ ನೃತ್ಯ ಮಾಡುವುದಕ್ಕೆ ಸಹಕಾರಿಯಾಗಿರುತ್ತದೆ. ಕಿರುಜೇನು ಅಥವಾ ಕೋಲುಜೇನು ಕಟ್ಟಿರುವ ಪೊದೆ ಅಥವಾ ಬೇಲಿ, ಕಡ್ಡಿಯ ಹೊರಗೆ ಒಂದೆರಡು ಜೇನುನೊಣಗಳು ಹಾರಾಡುತ್ತಿರುತ್ತವೆ. ಗುಂಡನೆಯ ಆಕಾರದಲ್ಲಿ ಕಡ್ಡಿಯ ಸುತ್ತಲೂ ಎರಿಗೆ ಆಧಾರದ ಕೊಂಬೆಯನ್ನು ಅಥವಾ ಬೇರಾವುದೇ ವಸ್ತುವನ್ನು ಒಳಗೊಂಡು ಎರಿಯ ರಚನೆಯನ್ನು ಉಳಿದ ಪ್ರಭೇದದ ಯಾವ ಜೇನುಗಳೂ ಮಾಡುವುದಿಲ್ಲ.

**ಕಿರುಜೇನಿನಲ್ಲಿ ಜೇನು** ಹುಳದ ಹಳಿಯು ಇರುವುದಿಲ್ಲ. ಜೇನುಗೂಡಿನ ಕೆಳಭಾಗದಲ್ಲಿ ಖಾಲಿಯಾಗಿದ್ದು, ಮೇಲ್ಭಾಗದಲ್ಲಿ ಒಳಗೆ ಜೇನುತುಪ್ಪ ಇರುತ್ತದೆ. ಕಿರುಜೇನನ್ನು ಆ ಕಟ್ಟಿದ ಕಡ್ಡಿಯನ್ನೇ ಕಿತ್ತು ಅದರಿಂದ ಪ್ರತ್ಯೇಕಿಸಿ ಹಾಗೆಯೇ ಕೈಯಿಂದ ತೇಗದ ಎಲೆ, ಮುತ್ತುಗದ ಎಲೆಗೆ ಕೈಯಿಂದ ಹಿಂಡಿ ತುಪ್ಪವನ್ನು ಪಡೆಯುತ್ತಾರೆ. ಸೋಲಿಗರು ಈ ಜೇನನ್ನು ಕೀಳುವಾಗ ಕಿತ್ತು ಅಲ್ಲಿಯೇ ತಾಜಾವಾಗಿ ತಿನ್ನುತ್ತಾರೆ. ಕೆಲವೊಂದು ಬಾರಿ ಮನೆಗೆ ತರುವಾಗ ತೇಗದ ಜೊನ್ನೆಗೆ ಹಾಕಿಕೊಂಡು ಅದನ್ನು ಕಟ್ಟಿ ತರುತ್ತಾರೆ. ಹೆಚ್ಚಾಗಿ ಈ ಕಿರು ಜೇನನ್ನು ಮಾರಾಟ ಮಾಡುವುದಿಲ್ಲ. ಔಷಧವಾಗಿ ಬಳಸುತ್ತಾರೆ.

**ಕೋಲು ಜೇನು** ಒಂದೇ ಸ್ಥಳದಲ್ಲಿ ಹೆಚ್ಚು ಸಮಯದವರೆಗೆ ನೆಲೆಸುವುದು ತುಂಬಾ ವಿರಳ. ಒಂದು ಕಡೆಯಿಂದ ಬೇರೊಂದು ಕಡೆಗೆ ಗೂಡನ್ನು ಬಿಟ್ಟು ಹೋಗುತ್ತವೆ. ಹಾಗೆ ಹೋಗುವಾಗ ಹಳೆಯ ಕಟ್ಟಿದ ಗೂಡಿನಿಂದ ಉಳಿದಿರುವ ಮಕರಂದ, ಪರಾಗ ಹಾಗೂ ಮೇಣವನ್ನು ಸಂಗ್ರಹಿಸಿಕೊಂಡು ಬರುವ ವಿಶಿಷ್ಟ ಗುಣವನ್ನು ಈ ಕಿರುಜೇನು ಹೊಂದಿರುತ್ತವೆ.

ಒಂದು ಕಿರುಜೇನು ಗೂಡು ಸುಮಾರು ೧ ಕಿಲೋಗ್ರಾಂಗಳಷ್ಟು ಮಾತ್ರ ಜೇನುತುಪ್ಪವನ್ನು ಕೊಡುತ್ತದೆ. ತಮ್ಮ ಗೂಡಿನಿಂದ ೦.೫ ಕಿ.ಮೀ ದೂರದವರೆಗಿನ ಪ್ರದೇಶದಲ್ಲಿ ಆಹಾರ ಸಂಗ್ರಹಿಸುವ ಇವು ಉಷ್ಣವಲಯ ಮತ್ತು ಒಣ ತಗ್ಗು ಪ್ರದೇಶ ಇತ್ಯಾದಿ ಹವಾಮಾನಗಳಿಗೆ ಒಗ್ಗಿಕೊಳ್ಳುವುದರಿಂದ ಹಾಗೂ ವಲಸೆ ಹೋದರೂ, ಅತೀ ಸಮೀಪದ ಸ್ಥಳದಲ್ಲಿಯೇ ನೆಲೆಸುವುದರಿಂದ ಆಯಾ ಪ್ರದೇಶದ ಬೆಳೆಗಳ ಹಾಗೂ ಕಾಡಿನ ಹೂವುಗಳ ಪರಾಗಸ್ಪರ್ಶವನ್ನು ಅತ್ಯಂತ ಹೆಚ್ಚಾಗಿ ಪಡೆದು ತನ್ನ ಜೇನುಗೂಡನ್ನು ನಿರ್ಮಿಸುತ್ತದೆ. ಈ ಕಿರುಜೇನು ನೋಡಲು ಮೇಲ್ಭಾಗ ಹಳದಿ ಮಿಶ್ರಿತ ಗೋಲ್ಡನ್ ಬಣ್ಣದಿಂದ ಕೂಡಿರುತ್ತದೆ. ತಿನ್ನಲು ಬಹಳ ರುಚಿ ಹಾಗೂ ವೈಜ್ಞಾನಿಕವಾಗಿ ಈ ಜೇನು ಉಳಿದ ನಾಲ್ಕು ಬಗೆಯ ಜೇನುಗಳಿಗಿಂತ ಭಿನ್ನವಾದ ಪ್ರವರ್ಗಕ್ಕೆ ಸೇರಿದ್ದಾಗಿದೆ. ಬಹಳ ಉಪಯುಕ್ತವಾಗಿದೆ. ಇದರ ಜೇನುಗೂಡು ಎರಿ ಜೇನು ಹಳಿ– ರಚನೆಯ ಕ್ರಮವು ಆಕಾರವು ಉಳಿದವುಗಳಿಗಿಂತ ಭಿನ್ನವಾಗಿದ್ದು, ನೊಣಗಳಲ್ಲಿ

ಚುಚ್ಚುವ ಮುಳ್ಳು ಬೆಳವಣಿಗೆ ಹೊಂದಿರುವುದಿಲ್ಲ. ಹಾಗಾಗಿ ತಮ್ಮ ಬಾಯಿಂದಲೇ ಸ್ವಲ್ಪಮಟ್ಟಿಗೆ ಕಚ್ಚುವುದರ ಮೂಲಕ ಕಿವಿ, ಮೂಗು, ಕಣ್ಣು, ತಲೆಕೂದಲಿನಲ್ಲಿ ನುಗ್ಗುವ ಮೂಲಕ ಅವು ತಮ್ಮ ಮತ್ತು ಅವುಗಳ ಜೇನುಗೂಡಿನ ರಕ್ಷಣೆಯನ್ನು ಪಡೆಯಲು ಹೋರಾಡುತ್ತವೆ.

**ನುಸುರೆ ಜೇನಿನ (ಮೇಸರೆ ಜೇನು): ಗೂಡಿನ ವಿಧಾನ**

ಸೋಲಿಗ ಸಮುದಾಯದವರು ಹೇಳುವ ಪ್ರಕಾರ ಮೇಸರೇ ಜೇನಿನಲ್ಲಿ ೩ ಸಾಲುಗಳಿರುತ್ತವೆ. ಅವುಗಳೆಂದರೆ,

- ತುಪ್ಪದ ಸಾಲು
- ಹಳಿ (ಗುಂಗುರು ರೀತಿ ಇರುತ್ತದೆ) ಇದರಲ್ಲಿ ಚಿಕ್ಕ-ಚಿಕ್ಕ ಮರಿಹುಳಗಳನ್ನು ಹೊಂದಿರುತ್ತದೆ.
- ಹಿಟ್ಟು-ಹಿಟ್ಟು ಮೇಣದ ರೀತಿ ಇದ್ದು, ಹಳದಿ ಮಿಶ್ರಬಣ್ಣದಿಂದ ಕೂಡಿದ್ದು, ಸ್ವಲ್ಪ ಹುಳಿ ಮಿಶ್ರಣವನ್ನು ಹೊಂದಿರುತ್ತದೆ.

ಈ ನುಸುರೆ ಜೇನು ಆಫ್ರಿಕಾ, ದಕ್ಷಿಣ ಅಮೇರಿಕಾ, ಏಷಿಯಾ, ಆಸ್ಟ್ರೇಲಿಯಾ, ನ್ಯೂಗಿನಿಯ ಮತ್ತು ಸೋಲೋಮನ್ ದ್ವೀಪಗಳ ಪ್ರದೇಶಗಳಲ್ಲಿ ಮತ್ತು ಭಾರತದ ಉಷ್ಣವಲಯದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಇವುಗಳು ತಮ್ಮ ಜೇನುಗೂಡನ್ನು ಇಕ್ಕಟ್ಟಿನ ಸ್ಥಳಗಳಾದ ಮರದ ಸಂದು, ಬೊಡರೆಗಳಲ್ಲಿ, ಕಲ್ಲಿನ ಸಂದುಗಳಲ್ಲಿ, ಗೋಡೆಯ ಬಿರುಕು ಬಿಟ್ಟ ಒಳಭಾಗಗಳಲ್ಲಿ, ಹಳೆಯ ಮನೆಯ ಕಲ್ಲಿನ ಸಂದುಗಳಲ್ಲಿ, ಪೊಟರೆಗಳಲ್ಲಿ ತಮ್ಮ ಜೇನುಗೂಡನ್ನು ಕಟ್ಟುತ್ತದೆ. ಎರಿಗಳ ರಚನೆಗೆ ಮೇಣ ಮತ್ತು ಕಪ್ಪು ಮಣ್ಣಿನ ಎರೆ ಮಣ್ಣಿನ ಮಿಶ್ರಣದಿಂದ ತರುವ ಕಪ್ಪಾದ ಅಂಟು ಪದಾರ್ಥ(ಸೆರಾಮನ್) ವನ್ನು ಬಳಸುತ್ತವೆ. ಕಣಗಳ ರಚನೆ, ಕಡಲೆಕಾಳು ಹಾಗೂ ಸಣ್ಣ ಜೋಳದ ಅಥವಾ ಕಂಬಿನ ಕಾಳಿನ ಗಾತ್ರದಷ್ಟಿದ್ದು, ಇವುಗಳ ಮೂಲಕ ಸಣ್ಣ ಜಾಗವನ್ನು ಮಾಡಿಕೊಂಡು ಆ ಜಾಗದ ಮೂಲಕ ಪರಾಗ ಹಾಗೂ ಜೇನು ಸಂಗ್ರಹಣೆ ನಡೆಯುತ್ತದೆ. ಜೋಳದ ಕಾಳಿನ ಗಾತ್ರದ ಕಣಗಳಲ್ಲಿ ಮೊಟ್ಟೆ ಮತ್ತು ಮರಿಗಳು ಇರುತ್ತವೆ. ಮೇಸರೇ ಜೇನು ಎಲ್ಲಿ ಇರುತ್ತದೆ ಎಂದು ಹುಡುಕಿದಾಗ ಜೇನು ಗೂಡು ಕಟ್ಟಿರುವ ಹೊರಗೆ ಸಣ್ಣದಾದ ಜಾಗ, ರಂಧ್ರದ ರೀತಿ ದಾರಿಯನ್ನು ಮಾಡಿಕೊಂಡಿದ್ದು, ಆ ಜಾಗದಲ್ಲಿ ಸಣ್ಣ, ಸಣ್ಣ ಮೇಸರೇ ಜೇನು ಹುಳುಗಳು ಹಾರಾಡುತ್ತಿರುತ್ತವೆ. ಇದನ್ನು ನೋಡಿ ಗಮನಿಸಿ ನುಸುರೆ ಜೇನನ್ನು ಪತ್ತೆ ಹಚ್ಚಬಹುದು.

ಈ ನುಸುರೆ ಜೇನುತುಪ್ಪದ ಸಂಗ್ರಹಣೆಯು ಅತ್ಯಂತ ಕಡಿಮೆ. ಇದು ಒಂದು ವರ್ಷದಲ್ಲಿ ಪ್ರತೀ ಕುಟುಂಬದ ಜೇನುಗೂಡಿನಿಂದ ಸುಮಾರು ೫೦ರಿಂದ ೧೦೦ ಗ್ರಾಂ.ಗಳಷ್ಟು ಜೇನುತುಪ್ಪವನ್ನು ಪಡೆಯಬಹುದೆಂದು ಅಂದಾಜು ಮಾಡಲಾಗಿದೆ. ಈ ಜೇನು ಅನೇಕ ಆಯುರ್ವೇದ ಔಷಧದ ಗುಣ ಹೊಂದಿರುವುದರಿಂದ ಔಷಧಕ್ಕಾಗಿ ಹೆಚ್ಚಾಗಿ ಬಳಸುತ್ತಾರೆ. ತಮ್ಮ ಗೂಡಿನಿಂದ ೦.೩-೦.೪ ಕಿ.ಮೀ ಸುತ್ತಳತೆಯಿಂದ ಪಡೆಯಬಹುದಾದ ಜೇನುತುಪ್ಪ ಪ್ರಮಾಣ ಕಡಿಮೆ ಇದ್ದರೂ ಸಹ ಇವು ಬೆಳೆಗಳ ಪರಾಗಸ್ಪರ್ಶ ಕ್ರಿಯೆಯಲ್ಲಿ ಉಳಿದ ನೊಣಗಳಂತೆಯೇ ಮಹತ್ತರ ಪಾತ್ರವಹಿಸುತ್ತವೆ. ಈ ಜೇನು ನುಸುರೆಯಿಂದ ಸೋಲಿಗ ಸಮುದಾಯದವರು ತಮ್ಮ ದಿನನಿತ್ಯದಲ್ಲಿ ಅನೇಕ ಖಾಯಿಲೆ ಹಾಗೂ ಸುಟ್ಟ, ಬೆಂದ ಗಾಯಗಳಿಗೆ ತಮ್ಮದೇ ಆದ ಪಾರಂಪರಿಕ ಜ್ಞಾನದ ಮೂಲಕ ಔಷಧಿಯಾಗಿ ಅನಾದಿಕಾಲದಿಂದಲೂ ಬಳಸಿಕೊಂಡು ಬರುತ್ತಿದ್ದಾರೆ.

- Fan (V): Make air move around
- Evaporate: Turn from liquid into vapour
- Honey comb: A block of wax full of six-sided holes in which bees stove honey.
- Hexagonal: Having six sides.
- Wax: Smooth substance made by bees to seal the honey filled cells.

Fan(V): ಜೇನು ನೊಣವು ತನ್ನ ರೆಕ್ಕೆಯಿಂದ ಜೇನುಗೂಡಿನ ಸುತ್ತ ಬೀಸಿ ತುಂಬುತ್ತದೆ.

Evaporate: ಜೇನುಗಳು ಬೀಸುವ ಗಾಳಿಯಿಂದ ಜೇನು ತಂಪು ಗಟ್ಟಿಯಾಗುತ್ತದೆ. ತೇವಾಂಶದಿಂದ ಗಾಳಿಯ ಮೂಲಕ ಗಟ್ಟಿಯಾಗುತ್ತದೆ.

Honey comb: ಇದು ಜೇನು ಮೇಣದಿಂದ ಮಾಡಲಾಗಿರುತ್ತದೆ. ಆರು ಕಡೆಗಳಿಂದಲೂ ತುಂಬಿರುತ್ತದೆ. ಇಲ್ಲಿ ಜೇನು ನೊಣಗಳು ತುಪ್ಪವನ್ನು ತುಂಬುತ್ತದೆ.

Hexagonal : ೬ ಕೋಣೆಗಳಿಂದ ಕೂಡಿರುವ ಗೂಡು.

Wax: ತುಂಬಾ ಮೃದುವಾಗಿ ಜೇನು ನೊಣಗಳು ತಯಾರಿಸುತ್ತದೆ.

ರಾಣಿ ಜೇನು ಮಾತ್ರ ಮೊಟ್ಟೆ ಇಟ್ಟು ಸಂತಾನ ವೃದ್ಧಿಸುತ್ತದೆ. ಆದರೆ ಉಳಿದ ಜೇನುನೊಣಗಳು ಅತೀ ಬೇಗನೇ ಸಾಯುತ್ತವೆ. ಜೇನುನೊಣಗಳ ಸಮುದಾಯದಲ್ಲಿ ಪ್ರಕೃತಿದತ್ತವಾದ ಸಾಂಸಾರಿಕ ಜೀವನವನ್ನೇ ನೋಡಬಹುದು. ಜಗತ್ತಿನಲ್ಲಿ ಮನುಷ್ಯನಿಂದ ಹೆಣ್ಣಿನ ಶೋಷಣೆ ದಿನನಿತ್ಯ ನಡೆಯುತ್ತಿದೆ. ಇತ್ತೀಚಿನ ದಿನಗಳಲ್ಲಿ ಶೋಷಣೆಯು ಹೆಚ್ಚುತ್ತಿರುವುದು ಕಂಡುಬರುತ್ತಿದೆ. ಆದರೆ, ಈ ವಿಷಯದಲ್ಲಿ ನಾವು ಜೇನುನೊಣಗಳ ಕುಟುಂಬದಿಂದ ಕಲಿಯಬೇಕಾಗಿದೆ.

ಜೇನು ಕುಟುಂಬದಲ್ಲಿ ರಾಣಿ ಜೇನು, ಗಂಡು ಜೇನು ಹಾಗೂ ಕೆಲಸಗಾರ ಜೇನು ಇರುತ್ತದೆ. ರಾಣಿ ಜೇನಿಗೆ ಯಾವುದೇ ರೀತಿಯ ಕೆಲಸವನ್ನು ಕೊಡುವುದಿಲ್ಲ. ಒಂದು ಜೇನು ಕುಟುಂಬದಲ್ಲಿ ಕೇವಲ ಒಂದು ಮಾತ್ರ ಇರುತ್ತದೆ. ಇದಕ್ಕೆ ಕೇವಲ ಮೊಟ್ಟೆಯಿಟ್ಟು ಮರಿಗಳನ್ನು ಮಾತ್ರ ಮಾಡುವ ಕೆಲಸ. ಆದರೆ ಗಂಡು ಜೇನು ಹಾಗೂ ಕೆಲಸಗಾರ ಜೇನುಗಳು ಗೂಡು, ಎರಿ, ತುಪ್ಪ ಸಂಗ್ರಹ ಮುಂತಾದ ಕೆಲಸವನ್ನು ಮಾಡಿ ಕೇವಲ ೧ ತಿಂಗಳ ಒಳಗೆ ಸತ್ತುಹೋಗುತ್ತವೆ. ಆದರೆ ರಾಣಿ ಜೇನು ಮಾತ್ರ ೪-೫ ತಿಂಗಳು ಕಾಲ ಬದುಕುತ್ತದೆ.

ಜೇನುತುಪ್ಪವನ್ನು ಉಪಯೋಗಿಸಿದರೆ ನಮಗೆ ಪೌಷ್ಟಿಕಾಂಶ, ಕಬ್ಬಿಣಾಂಶ, ಕ್ಯಾಲ್ಸಿಯಂ ದೊರೆಯುತ್ತದೆ. ಕೆಮ್ಮು ಮತ್ತು ಶೀತ, ನೆಗಡಿಗೂ ಸಹ ಉಪಯುಕ್ತವಾಗುತ್ತದೆ.

ಒಟ್ಟಿನಲ್ಲಿ ದಕ್ಷಿಣ ಕರ್ನಾಟಕದ ಚಾಮರಾಜನಗರ ಜಿಲ್ಲೆಯಲ್ಲಿ ವಾಸಿಸುತ್ತಿರುವ ಸೋಲಿಗ ಸಮುದಾಯವು ಅರಣ್ಯವಾಸಿಗಳಾಗಿದೆ. ಈಗಲೂ ಸಹ ಬೆಟ್ಟ, ಗುಡ್ಡ, ಕಾನನ, ಮರದ ಪೊಟರೆ(ಬೊಡರೆ) ಕಲ್ಲಿನ ಸಂದು, ಹುತ್ತ ಮುಂತಾದ ಕಡೆ ಜೇನನ್ನು ಕೊಯ್ದು ತಮ್ಮ ಆಹಾರವಾಗಿ ಹಾಗೂ ಜೀವನೋಪಾಯಕ್ಕಾಗಿ ಲ್ಯಾಂಪ್ಸ್ ಸೊಸೈಟಿಗಳಿಗೆ ತಂದು ಮಾರಾಟ ಮಾಡಿಕೊಂಡು ತಮ್ಮ ದಿನನಿತ್ಯದ ಖರ್ಚುವೆಚ್ಚಗಳನ್ನು ಭರಿಸಿ ಜೀವನ ಮಾಡುತ್ತಿದ್ದಾರೆ.

ಪ್ರಕೃತಿಯ ಮಡಿಲಲ್ಲಿ ಬೆಳೆದ ಎಲ್ಲಾ ಪ್ರಾಣಿಗಳೂ ಸಹ ಸಮಬಾಳ್ವೆಯಿಂದ ಪ್ರಕೃತಿಯ ನಡತೆಗೆ ತಕ್ಕಂತೆ ಬದುಕಿಕೊಂಡು ಸಮುದಾಯಕ್ಕೆ ಪೂರಕವಾದ ಚಟುವಟಿಕೆ ಕೈಗೊಂಡು ಜೀವಿಸುತ್ತಾ ಬಂದವುಗಳು. ಆದರೆ ಮಾನವನು ಮಾತ್ರ ಇವುಗಳನ್ನು ಮೀರಿ ಬಹಳ ದೂರ ಹೋಗಿರುವುದನ್ನು ಕಾಣುತ್ತೇವೆ. ತನ್ನ ಸ್ವಾರ್ಥಕ್ಕಾಗಿ ಪರರಿಗಾಗಿ ಹಿಂಸೆಯನ್ನು ಮಾಡುತ್ತಾ ಬದುಕುತ್ತಿದ್ದಾನೆ. ಇಲ್ಲಿ ನಿಸರ್ಗದೊಟ್ಟಿಗೆ ಬದುಕುತ್ತಿರುವ ಜೇನುನೊಣಗಳನ್ನು ನೋಡಿದಾಗ ಪ್ರತಿಯೊಬ್ಬರೂ ಎಲ್ಲರಿಗೂ ಬದುಕುವ ಗುಣವನ್ನು ಬೆಳೆಸಿಕೊಂಡಿರುವುದು ಕಂಡುಬರುತ್ತದೆ. ಹೇಗೆ ರಾಣಿ ಜೇನು ಇಡೀ ಜೇನು ಕುಟುಂಬವನ್ನು ಸಾಕುತ್ತದೆಯೋ ಹಾಗೆಯೇ ಗಂಡು ಜೇನು ತಾನೂ ಅತೀ ಬೇಗನೇ ಸಾಯುತ್ತೇನೆ ಎಂದು ಗೊತ್ತಿದ್ದರೂ ಸಹ ತನ್ನ ಕೆಲಸದಲ್ಲಿ ಮಗ್ನವಾಗಿರುತ್ತದೆ. ಕೆಲಸಗಾರ ಜೇನುನೊಣಗಳು ಇಡೀ ಜೇನು ಕುಟುಂಬಕ್ಕೆ ಆಹಾರ ಹಾಗೂ ಎಲ್ಲಾ ಕೆಲಸವನ್ನು ನಿರ್ವಹಿಸುತ್ತವೆ. ಎಲ್ಲ ನೊಣಗಳು ಒಂದಾಗಿ ತಮ್ಮ-ತಮ್ಮ ಕೆಲಸವನ್ನು ನಿರ್ವಹಿಸುತ್ತಾ ಯಾರೂ ಸಹ ಮೇಲು-ಕೀಳು ಎನ್ನದೆ ಬಾಳುತ್ತಿರುವುದನ್ನು ನೋಡಿದಾಗ ಪ್ರಕೃತಿಯ ಶಕ್ತಿಯ ಮಾತೆಯನ್ನು ಬಹಳ ನಮ್ರತೆಯಿಂದ ಕಾಪಾಡಿಕೊಂಡು ಪೂಜಿಸಿಕೊಂಡು 'ಜೇನಿನ ಗೂಡು ನಾವೆಲ್ಲ ಬೇರೆಯಾದರೆ ಜೇನಿಲ್ಲ' ಎನ್ನುವ ಹಾಗೆ ಇರುವುದನ್ನು ನೋಡಬಹುದು.

ಪ್ರಸ್ತುತದಲ್ಲಿಯೂ ಸಹ ಸೋಲಿಗರು ಜೇನು ಬೇಟೆಯನ್ನು ಮಾಡುತ್ತಾರೆ. ಚಾಮರಾಜನಗರ, ಮೈಸೂರು ಭಾಗಗಳಲ್ಲಿ, ಬಿಳಿಗಿರಿರಂಗನ ಬೆಟ್ಟ, ಕೊಳ್ಳೇಗಾಲ, ಯಳಂದೂರು, ಗುಂಡ್ಲುಪೇಟೆ, ಹೆಚ್.ಡಿ.ಕೋಟೆ, ಹುಣಸೂರು, ಪಿರಿಯಾಪಟ್ಟಣ ಮುಂತಾದ ಕಡೆಗಳಲ್ಲಿ ಕಾಡಿನೊಳಗೆ ಬಂಡೆಗಳಲ್ಲಿ, ಮರಗಳಲ್ಲಿ, ಇತರೆ ಭಾಗಗಳಲ್ಲಿ ಕಟ್ಟಿರುವ ಜೇನುಗಳನ್ನು ಬೇಟೆ ಮಾಡಿ ತಂದು ಅದನ್ನು ಕೆಲವರು 'ಲ್ಯಾಂಪ್ಸ್' ಸಹಕಾರಿ ಸಂಘಗಳ ಮೂಲಕ ಮಾರಾಟ ಮಾಡುತ್ತಾರೆ. ಕೆಲವರು ಕೇರಳ, ತಮಿಳುನಾಡು ಮತ್ತು ಇತರೆ ಭಾಗಗಳಲ್ಲಿ ಮಾರಾಟ ಮಾಡಿ ತಮ್ಮ ಜೀವನ ಸಾಗಿಸುತ್ತಾರೆ. ಕೆಲವೊಂದು ಜೇನು ಅಂದರೆ ಕಿರುಜೇನು, ಕೋಲುಜೇನು, ನುಸರೇ ಜೇನು ಇತ್ಯಾದಿ ಜೇನನ್ನು ಆಹಾರವಾಗಿ, ಔಷಧಿಯಾಗಿ ಉಪಯೋಗಿಸುತ್ತಾರೆ. ಈಗಲೂ ಜೇನು ಬೇಟೆಯನ್ನು ಮಾಡುತ್ತಾರೆ. ಈ ಬೇಟೆಯು ಪಾರಂಪರಿಕ ಜ್ಞಾನವಾಗಿ ರೂಪುಗೊಂಡಿದೆ. ಸೋಲಿಗರ ಜೇನು ಬೇಟೆಯ ಪಾರಂಪರಿಕ ಜ್ಞಾನವನ್ನು ಉಳಿಸಿ ಬೆಳೆಸುವುದು ಅತ್ಯಗತ್ಯ. ಜೇನು ಬೇಟೆಯನ್ನು ಯುವ ಪೀಳಿಗೆಗಳಿಗೆ ಕಲಿಸುವಂತೆ ಮಾಡುವುದು, ಸಂಬಂಧಪಟ್ಟ ಇಲಾಖಾ ವತಿಯಿಂದ ಆಯಾ ವಲಯಗಳಲ್ಲಿ ಜೇನು ಸಂಸ್ಕರಣಾ ಘಟಕ ಸ್ಥಾಪಿಸಿ ಕೊಡುವುದು, ಮಹಿಳೆಯರಿಗೆ ತರಬೇತಿ ಕೊಡುವುದರ ಮೂಲಕ ಸ್ವ-ಸಹಾಯ ಮಹಿಳಾ ಗುಂಪುಗಳಿಗೆ ಆರ್ಥಿಕ ನೆರವು ಕೊಡುವುದು, ಮಾರಾಟವನ್ನು ಸಹ ಈ ಮಹಿಳಾ ಸಂಘಟನೆಗಳ ಮೂಲಕವೇ ನಡೆಸುವಂತೆ ಮಾಡುವುದು, ಜೇನಿನಲ್ಲಿರುವ ಔಷಧಿಯ ಗುಣಗಳನ್ನು ನುರಿತ ಸೋಲಿಗ ಹಿರಿಯ ವ್ಯಕ್ತಿಗಳಿಂದ ಸಂಗ್ರಹಿಸುವುದು ಹಾಗೂ ಪುಸ್ತಕ ರೂಪದಲ್ಲಿ ದಾಖಲಿಸುವುದನ್ನು ಮಾಡಬೇಕಾಗಿದೆ.

**ನೆಲ್ಲಿಕಾಯಿ ಸಂಗ್ರಹ**

ಬಿಳಿಗಿರಿರಂಗನ ದೇವಾಲದ ಅಭಯಾರಣ್ಯದ ಬಹುಮುಖ್ಯ ಕಿರುಉತ್ಪನ್ನವೆಂದರೆ ನೆಲ್ಲಿಕಾಯಿ. ಈ ನೆಲ್ಲಿಕಾಯಿ ಸಂಗ್ರಹಕ್ಕಾಗಿಯೇ ಶೇ. ೬೦ರಷ್ಟು ಸೋಲಿಗರು ದುಡಿಯುತ್ತಾರೆ. ಫೆಬ್ರವರಿ ಮತ್ತು ಮಾರ್ಚ್ ತಿಂಗಳಲ್ಲಿ ಎಲೆ ಉದುರಿ ಹೂ ಅರಳುತ್ತವೆ. ಕಾಯಿಗಳನ್ನು ನವಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ಕೊಯ್ಲು ಮಾಡಲಾಗುವುದು. ಸೋಲಿಗರು ಸಂಗ್ರಹಿಸಿದ ನೆಲ್ಲಿಕಾಯಿಗೆ ಕೆ.ಜಿ.ಗೆ ರೂ.೩.೫೦/

– ರಂತೆ ಲ್ಯಾಂಪ್ಸ್ ಸೊಸೈಟಿಯವರು ಖರೀದಿಸಿ ಅದನ್ನು ಮಾರುಕಟ್ಟೆಯಲ್ಲಿ ರೂ.೫.೫೦/- ರಿಂದ ರೂ೬.೦೦/-ಗಳಿಗೆ ಮಾರುತ್ತಾರೆ.

ಸಹಕಾರ ಸಂಘದವರು ೩ರಿಂದ ೪ ಹಾಡಿಗಳಿಗೆ ಒಬ್ಬ ಮಧ್ಯವರ್ತಿಯನ್ನು ಆಯ್ಕೆ ಮಾಡಿ ಈ ಮಧ್ಯವರ್ತಿಗಳಿಗೆ ರೂ. ೫.೫೦ ರಂತೆ ಕೆ.ಜಿ. ನೆಲ್ಲಿಕಾಯಿಗೆ ೦.೫೦ ಪೈಸೆ ದಲ್ಲಾಳಿ ಹಣವನ್ನು ಪಾವತಿಸುತ್ತಾರೆ ಹಾಗೂ ಕಳೆದ ೧೦ ವರ್ಷಗಳಲ್ಲಿ ಬಿಳಿಗಿರಿರಂಗನ ದೇವಾಲಯದ ಅಭಯಾರಣ್ಯದಲ್ಲಿ ಒಟ್ಟು ಎಷ್ಟು ಟನ್ ನೆಲ್ಲಿಕಾಯಿಯನ್ನು ಸಂಗ್ರಹ ಮಾಡಲಾಗಿದೆ ಎಂಬುದರ ಮಾಹಿತಿಯನ್ನು ಕೆಳಗೆ ನೀಡಿರುವ ಕೋಷ್ಟಕದಿಂದ ತಿಳಿಯಬಹುದು.

**ಕೋಷ್ಟಕ ೪.೩.೧ ನೆಲ್ಲಿಕಾಯಿ ಸಂಗ್ರಹ (ಟನ್‌ಗಳಲ್ಲಿ)**

| ವರ್ಷ | ೧೯೯೩ | ೧೯೯೪ | ೧೯೯೫ | ೧೯೯೬ | ೧೯೯೭ | ೧೯೯೮ | ೧೯೯೯ | ೨೦೦೦ | ೨೦೦೧ | ೨೦೦೨ | ೨೦೦೩ | ೨೦೦೪ |
|---|---|---|---|---|---|---|---|---|---|---|---|---|
| ಇಳುವರಿ ಟನ್‌ಗಳಲ್ಲಿ | ೧೩ | ೨೫ | ೧೮ | ೨೪ | ೪೪ | ೫೯ | ೧೭ | ೨೯ | ೩೫ | ೫೧ | ೫೦ | ೪೯ |

ಸೌಜನ್ಯ: ಲ್ಯಾಂಪ್ಸ್ ಸೊಸೈಟಿ, ಚಾಮರಾಜನಗರ

**ಪಾಚಿ**

ಪಾಚಿ ಇದು ಅರಣ್ಯದಲ್ಲಿ ಸಿಗುವ ಒಂದು ವಸ್ತು. ದೊಡ್ಡ ದೊಡ್ಡ ಮರಗಳ ಸುತ್ತಲೂ ನೀರಿನ ತೇವಾಂಶವಿರುವ ಕಡೆಗಳಲ್ಲಿ ಪಾಚಿಯು ಹೆಚ್ಚಾಗಿ ಸಿಗುತ್ತದೆ. ಅರಣ್ಯದ ಜೀವಗೋಲದಲ್ಲಿ ಪಾಚಿಯು ಪ್ರಮುಖ ಪಾತ್ರವಹಿಸುತ್ತದೆ. ಈ ಪಾಚಿ ಇದ್ದೆಡೆ ನೀರಿನ ಅಂಶ ಇದ್ದೆ ಇರುತ್ತದೆ. ಇವುಗಳನ್ನು ಆಧರಿಸಿ ಅನೇಕ ಬಗೆಯ ಸೂಕ್ಷ್ಮ ಜೀವಿಗಳು ಜೀವಿಸುತ್ತವೆ. ವಾಯುಮಾಲಿನ್ಯ ಜಾಸ್ತಿ ಇದ್ದಲ್ಲಿ ಇವು ಹೆಚ್ಚು ಬದುಕಲಾರವು. ಇವು ಮಾಲಿನ್ಯದ ಸೂಚಕಗಳೆನ್ನಬಹುದು. ಮಳೆಗಾಲದ ಅಬ್ಬರ ಕಡಿಮೆಯಾದ ನಂತರ ಅಂದರೆ ಸಪ್ಟೆಂಬರ್ ಮಾಹೆಯಲ್ಲಿ ಇದರ ಕೊಯ್ಲು ಪ್ರಾರಂಭವಾಗುತ್ತದೆ. ಮಳೆ ಬೀಳುತ್ತಿದ್ದರೆ, ಮರಗಳು ತುಂಬಾ ಜಾರುವುದರಿಂದ ಕೊಯ್ಲು ಈ ಸಮಯದಲ್ಲಿ ಅಸಾಧ್ಯ. ಹಾಗೆಯೇ ದೊಡ್ಡ ದೊಡ್ಡ ಮರಗಳಲ್ಲಿ ಇದನ್ನು ಶೇಖರಿಸಲು ಕಚ್ಚು ಹಾಕಿ ಮೆಟ್ಟಿಲಿನಂತೆ ಮಾಡಿ ಇದನ್ನು ಸಂಗ್ರಹಿಸುತ್ತಾರೆ. ಒಬ್ಬ ಸೋಲಿಗ ದಿನವೊಂದಕ್ಕೆ ೫ ಕೆ.ಜಿ.ಯಿಂದ ೬ ಕೆ.ಜಿ.ವರೆಗೆ ಸಂಗ್ರಹಿಸಿ ಕೆ.ಜಿಯೊಂದಕ್ಕೆ ೬೦ ರೂ ನಂತೆ ಲ್ಯಾಂಪ್ಸ್ ಸೊಸೈಟಿಗೆ ಮಾರುತ್ತಾರೆ. ಪಾಚಿಯನ್ನು ಸೊಸೈಟಿಯ ಮೂಲಕ ಬಣ್ಣ ಮತ್ತು ವಾರ್ನಿಶ್ ತಯಾರಿಕಾ ಉದ್ದಿಮೆಗಳಿಗೆ ಸರಬರಾಜು ಮಾಡಲಾಗುತ್ತದೆ ಹಾಗೂ ಲ್ಯಾಂಪ್ಸ್‌ನವರು ಉದ್ದಿಮೆದಾರರಿಗೆ ೭೦/-ರೂ.ನಿಂದ ೮೦/-ರೂ. ಕೆ.ಜಿ.ಗೆ ಮಾರುತ್ತಾರೆ.

**ಅಂಟುವಾಳ ಕಾಯಿ**

ಸಾಬೂನಿನಂತೆ ನೊರೆ ಬರುವ ನೈಸರ್ಗಿಕ ಹಣ್ಣು ಅಂಟುವಾಳಕಾಯಿ, ಹೆಚ್ಚಿನ ತೇವಾಂಶ ಇರುವ ಪ್ರದೇಶಗಳಲ್ಲಿ ಹಳ್ಳಗಳ ಅಂಚಿನಲ್ಲಿ, ಶೋಲಾ ಕಣಿವೆಗಳಲ್ಲಿ ಹಾಗೂ ಸದಾ ಹಸಿರಿನಿಂದ ಕೂಡಿದ ಗಿಡಮರಗಳ ಮಧ್ಯ ಅಂಟುವಾಳಕಾಯಿ ಮರಗಳು ತಾವಾಗಿಯೇ ಬೆಳೆಯುತ್ತವೆ. ಇದರ ಕಾಯಿಯನ್ನು ಬಟ್ಟೆ ತೊಳೆಯಲು, ತಲೆಕೂದಲು ತೊಳೆಯಲು, ನೀರು ಮಿಯ್ಯಲು(ಸ್ನಾನ), ಒಡವೆಗಳಿಗೆ ಹೊಳಪು ನೀಡಲು ಉಪಯೋಗಿಸುತ್ತಾರೆ. ಪ್ರತಿವರ್ಷ ಫೆಬ್ರವರಿ, ಮಾರ್ಚ್ ತಿಂಗಳಲ್ಲಿ ಇದರ

ಕಾಯಿಗಳನ್ನು ಸಂಗ್ರಹ ಮಾಡಲಾಗುತ್ತದೆ. ಅಂಟುವಾಳ ಕಾಯಿಗಳನ್ನು ಸಂಗ್ರಹಿಸಿದ ಆದಿವಾಸಿಗಳಿಗೆ ಲ್ಯಾಂಪ್ಸ್ ಸೊಸೈಟಿಯವರು ೨೦೦೩ರಲ್ಲಿ ಪ್ರತಿ ಕೆ.ಜಿಗೆ ರೂ. ೪.೯೦ರಂತೆ ದರವನ್ನು ನಿಗದಿಗೊಳಿಸಿದ್ದಾರೆ. ಅದನ್ನು ನಗರ ಪ್ರದೇಶಗಳಲ್ಲಿ ರೂ.೭.೮೦ರಂತೆ ಮಾರಾಟ ಮಾಡುತ್ತಾರೆ. ಲ್ಯಾಂಪ್ಸ್ ಸೊಸೈಟಿಯು ಒಟ್ಟು ಆದಾಯದಲ್ಲಿ ಅತೀ ಸ್ವಲ್ಪ ಭಾಗ ಅಂದರೆ(ಶೇ.೦.೩೯ರಷ್ಟು) ಅಂಟುವಾಳಕಾಯಿಯಿಂದ ಲಾಭ ಗಳಿಸುತ್ತದೆ. ಹಾಗೂ ಹಿಂದಿನ ಹತ್ತು ವರ್ಷದ ಅಂಟುವಾಳ ಕಾಯಿಯ ಮಾಹಿತಿ. (ಅಂಟುವಾಳ ಕಾಯಿಯ ಸಂಗ್ರಹ ೧೯೯೩ರಿಂದ ೨೦೦೪ರವರೆಗೆ.)

**ಕೋಷ್ಟಕ ೪.೩.೨. ಅಂಟುವಾಳ ಕಾಯಿ (ಟನ್‌ಗಳಲ್ಲಿ)**

| ವರ್ಷ | ೧೯೯೩ | ೧೯೯೪ | ೧೯೯೫ | ೧೯೯೬ | ೧೯೯೭ | ೧೯೯೮ | ೧೯೯೯ | ೨೦೦೦ | ೨೦೦೧ | ೨೦೦೨ | ೨೦೦೩ | ೨೦೦೪ |
|---|---|---|---|---|---|---|---|---|---|---|---|---|
| ಇಳುವರಿ ಟನ್‌ಗಳಲ್ಲಿ | ೬೬೪೨ | ೩೩೦೦ | ೫೮೯೨ | ೨೭೩೯ | ೬೩೫೯ | ೩೧೧೯ | ೪೬೩೯ | ೫೮೩೧ | ೪೬೧೯ | ೩೮೭೬ | ೩೨೦೮ | ೩೧೧೦ |

ಸೌಜನ್ಯ: ಲ್ಯಾಂಪ್ಸ್ ಸೊಸೈಟಿ, ಚಾಮರಾಜನಗರ

**ಸೀಗೆಕಾಯಿ**

ದೊಡ್ಡ ಮರಗಳನ್ನೋ ಅಥವಾ ಪೊದೆಗಳನ್ನು ಆಶ್ರಯಿಸಿ ಬೆಳೆಯುವ ಈ ಸೀಗೆಕಾಯಿಗಳನ್ನು ಸಂಗ್ರಹಿಸಿ ಒಣಗಿಸಿ ಬೀಜವನ್ನು ಕುಟ್ಟಿ ಪುಡಿ ಮಾಡಿ ತಲೆ ಸ್ನಾನಕ್ಕೆ, ಪಾತ್ರೆ ಹಾಗೂ ಬಟ್ಟೆ ತೊಳೆಯಲು ಇದನ್ನು ಯಥೇಚ್ಚವಾಗಿ ಬಳಸುತ್ತಾರೆ. ಸೀಗೆಕಾಯಿಯನ್ನು ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ಸಂಗ್ರಹ ಮಾಡಲಾಗುತ್ತದೆ ಹಾಗೂ ಕಳೆದ ಹತ್ತು ವರ್ಷಗಳಲ್ಲಿ ಲ್ಯಾಂಪ್ಸ್ ಸೊಸೈಟಿಯಲ್ಲಿ ಸಂಗ್ರಹವಾದ ಸೀಗೆಕಾಯಿ ವಿವರ

**ಕೋಷ್ಟಕ ೪.೩.೩. ಸೀಗೆಕಾಯಿ (ಟನ್‌ಗಳಲ್ಲಿ)**

| ವರ್ಷ | ೧೯೯೩ | ೧೯೯೪ | ೧೯೯೫ | ೧೯೯೬ | ೧೯೯೭ | ೧೯೯೮ | ೧೯೯೯ | ೨೦೦೦ | ೨೦೦೧ | ೨೦೦೨ | ೨೦೦೩ | ೨೦೦೪ |
|---|---|---|---|---|---|---|---|---|---|---|---|---|
| ಇಳುವರಿ ಟನ್‌ಗಳಲ್ಲಿ | ೬೬೩ | ೧೫೦ | ೧೫೨೧ | ೧೧೮ | ೧೨೩೩ | ೫೪೯ | ೧೦೩೧೫ | ೨೦೪೮ | ೨೨೬೫ | ೧೬೯೦ | ೧೮೫೪ | ೧೯೦೦ |

ಸೌಜನ್ಯ: ಲ್ಯಾಂಪ್ಸ್ ಸೊಸೈಟಿ, ಚಾಮರಾಜನಗರ

ಸೋಲಿಗರು ಯಾವುದೇ ಫಸಲಿನ ಕೊಯ್ಲು ಮಾಡುವಾಗಲೂ ಅಂತಹ ಫಸಲು ಮುಂದಿನ ಸುಗ್ಗಿಯಲ್ಲಿ ಕೊಯ್ಲು ಮಾಡುವಂತೆ ಇವರು ಆಶಿಸುವುದುಂಟು. ಇದು ಮುಂದಿನ ಪೀಳಿಗೆಗೂ ಸಿಗುವಂತಿರಬೇಕು. ಒಂದನ್ನು ಬಳಸಿದರೆ ಇನ್ನೊಂದರ ಮೇಲೆ ಹೇಗೆ ಅದು ಪರಿಣಾಮ ಬೀರುತ್ತದೆ ಎಂಬುದನ್ನು ಸರಳವಾಗಿ ನಿರ್ಧರಿಸಲು ಸಾಧ್ಯವಿಲ್ಲ. ಕಿರು ಅರಣ್ಯ ಉತ್ಪಾದನೆಯನ್ನು ಶೇಖರಿಸುವ ಕೆಲಸದಿಂದ ಅರಣ್ಯದ ಮೇಲೆ ಯಾವ ಪರಿಣಾಮ ಉಂಟಾಗುತ್ತದೆ ಎಂದು ದಾಖಲಿಸುವ ವ್ಯವಸ್ಥೆಯನ್ನು ಸೋಲಿಗರ ನೆರವಿನಿಂದ ಪ್ರತಿ ಲ್ಯಾಂಪ್ಸ್ ಸೊಸೈಟಿಗಳಲ್ಲಿ ಮಾಡಲಾಗಿದೆ.

ಪ್ರತೀ ವರ್ಷವು ಕೊಯ್ಲಿಗೆ ಮುನ್ನ ಸೋಲಿಗರು ಕೇವಲ ಕಣ್ಣಳತೆಯಲ್ಲಿಯೇ ಎಲ್ಲವನ್ನು ಸಮೀಕ್ಷೆ ನಡೆಸುತ್ತಾರೆ. ಸಾಮಾನ್ಯವಾಗಿ ಅದರ ಅಂದಾಜು ಸರಿಯಾಗಿಯೇ ಇರುತ್ತದೆ. ಕೊಯ್ಲು ಮುಗಿದ ಬಳಿಕ

ಮತ್ತೊಮ್ಮೆ ಸಭೆ ಸೇರಿ ಒಟ್ಟಾರೆ ಉತ್ಪಾದನೆಯ ಬಗ್ಗೆ ವಿಮರ್ಶೆ ಮಾಡುತ್ತಾರೆ. ಈ ವಿಧಾನದಿಂದಾಗಿಯೇ ಹಿಂದಿನ ಹತ್ತು ವರ್ಷಗಳ ಕಿರುಅರಣ್ಯ ಸಂಪತ್ತುಗಳ ಉತ್ಪಾದನೆ ಮತ್ತು ಕೊಯ್ಲಿನ ವಿವರಗಳು ದಾಖಲಿಸಲ್ಪಟ್ಟಿದ್ದು, ಈ ಅಭಯಾರಣ್ಯದ ಹಲವು ಭಾಗಗಳಲ್ಲಿ ಕೆಲವು ವರ್ಷಗಳ ಇಳುವರಿಯಲ್ಲಿ ಸಾಕಷ್ಟು ಏರಿಳಿತಗಳು ದಾಖಲಾಗಿವೆ.

ಸೋಲಿಗರು ಅರಣ್ಯದಲ್ಲಿ ದೊರಕುವ ಕೆಲವು ಕಿರುಅರಣ್ಯ ಉತ್ಪನ್ನಗಳನ್ನು ತಮ್ಮ ಬಳಕೆಗೆ ಕಟ್ಟಿಗೆ ಮತ್ತು ಮರಮುಟ್ಟುಗಳನ್ನು ಬಿಟ್ಟು ಉಳಿದವುಗಳೆಲ್ಲವುಗಳನ್ನು ಕಿರುಅರಣ್ಯ ಉತ್ಪನ್ನವೆಂದು ಹಾಗೂ ಪ್ರಾಣಿಗಳ ಮೇವಿಗೆ, ಔಷಧ, ಪರಿಮಳ ದ್ರವ್ಯಗಳಿಗೆ ಮನೆ ಕಟ್ಟುವ ಸಾಮಗ್ರಿಗಳಿಗೆ ಉಪಯೋಗಿಸುತ್ತಾರೆ. ಅನೇಕ ಶತಮಾನಗಳ ಹಿಂದೆ ಸೋಲಿಗರು ಹಿಂದಿನ ಕಾಲದ ಇತರೆ ಆದಿವಾಸಿ ಜನಾಂಗಗಳಂತೆಯೇ ಬೇಟೆ, ಅರಣ್ಯ ಉತ್ಪನ್ನಗಳ ಸಂಗ್ರಹಣೆ ಮತ್ತು ಕೃಷಿ ಮಾಡುತ್ತಾ ಜೀವನ ನಡೆಸುತ್ತಿದ್ದರು. ಇವರ ಎಲ್ಲಾ ಅಗತ್ಯಗಳ ಪೂರೈಕೆಗೆ ಅರಣ್ಯದಿಂದ ಹಾಗೂ ಅಭಯಾರಣ್ಯದಲ್ಲಿ ತೆರವು ಮಾಡಿಕೊಂಡಿದ್ದ ಕೃಷಿ ಭೂಮಿಯಿಂದ ಪೂರೈಕೆಯಾಗುತ್ತಿದ್ದವು. ೧೯೭೪ರಲ್ಲಿ ಬಿಳಿಗಿರಿರಂಗನ ದೇವಾಲಯದ ಅಭಯಾರಣ್ಯ ಅಸ್ತಿತ್ವಕ್ಕೆ ಬಂದ ನಂತರ ಸೋಲಿಗರ ವಲಸೆ, ಜೀವನ ಶೈಲಿ ಮತ್ತು ಸ್ಥಳಾಂತರ ಬೇಸಾಯದ ವಿಧಾನ ಅಂತ್ಯಗೊಂಡಿದ್ದು, ಒಂದೆಡೆ ನೆಲೆಸುವಂತೆ ಹಾಗೂ ಒಂದೇ ಜಮೀನಿನಲ್ಲಿ ಪ್ರತಿ ವರ್ಷವು ಬೇಸಾಯ ಮಾಡುವಂತೆ ಅವರ ಮನವೊಲಿಸಿ ಅವರಿಗೆ ಸರ್ಕಾರದ ವತಿಯಿಂದ ಪಟ್ಟಾ ಜಮೀನುಗಳನ್ನು ನೀಡಲಾಗಿದೆ.

೨೦೦೪ನೇ ಇಸವಿ ಆರಂಭದಲ್ಲಿ ಅರಣ್ಯ ಇಲಾಖೆ ಹಠಾತ್ತಾಗಿ ಅಭಯಾರಣ್ಯದಲ್ಲಿ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹವನ್ನು ನಿಷೇಧಿಸಿತು. ಕಾರಣವೇನೆಂದರೆ, ವನ್ಯ ಜೀವಿ ಸಂರಕ್ಷಣಾ ಕಾಯ್ದೆಗೆ ತಿದ್ದುಪಡಿ ಮಾಡಲಾಗಿದ್ದು, ಅದು ೨೦೦೩ರ ಏಪ್ರಿಲ್ ೧ರಿಂದ ಜಾರಿಗೆ ಬಂದಿತು. ಸದರಿ ತಿದ್ದುಪಡಿಯ ಪ್ರಕಾರ ಅಭಯಾರಣ್ಯದಲ್ಲಿ ಹಣ ಗಳಿಕೆಯ ಉದ್ದೇಶಕ್ಕೆಂದು ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹ ಮಾಡುವಂತಿಲ್ಲ.

ಸೋಲಿಗರು ತಮ್ಮ ಜೀವನ ಸಾಗಿಸಲು ಕಿರು ಅರಣ್ಯ ಸಂಗ್ರಹವನ್ನು ಮಾಡುತ್ತಾರೆ. ಹಾಗು ತಮ್ಮ ಅಲ್ಪ ಆದಾಯಕ್ಕೆ ತುಸು ಹೆಚ್ಚಿನ ಹಣವನ್ನು ಜಮೆ ಮಾಡುವ ಉದ್ದೇಶದಿಂದ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆಯಲ್ಲಿ ತೊಡಗುತ್ತಾರೆ. ಇಲ್ಲಿನ ಸೋಲಿಗರು ಆಗಿನ ಕಾಲದ ಇತರೆ ಆದಿವಾಸಿ ಜನಾಂಗದವರಂತೆಯೇ ಬೇಟೆ, ಸಂಗ್ರಹಣೆ, ಇತರೆ ಕೃಷಿ ಚಟುವಟಿಕೆಗಳಲ್ಲಿ ಬಂದ ಆದಾಯದಲ್ಲಿ ತಮ್ಮ ಜೀವನ ನಿರ್ವಹಣೆ ಮಾಡುತ್ತಾರೆ. ಸೋಲಿಗರು ಹೀಗೆ ಜೀವನ ನಿರ್ವಹಿಸುತ್ತಿದ್ದರೂ ಪ್ರತಿಯೊಂದು ಪದಾರ್ಥಗಳ ಬೆಲೆ ಏರಿಕೆಯಾಗಿರುವುದು ದುಃಖದ ಸಂಗತಿಯೇ ಸರಿ.

೧೯೭೪ರಲ್ಲಿ ಬಿಳಿಗಿರಿರಂಗನ ಬೆಟ್ಟದ ದೇವಾಲಯದ ವನ್ಯಧಾಮವು ಅಸ್ತಿತ್ವಕ್ಕೆ ಬಂದ ನಂತರ ಇವರ ಅಲೆಮಾರಿ ಜೀವನಕ್ಕೂ ಸಂಚಕಾರ ಬಂದಿದೆ. ಸೋಲಿಗರು ಕಾಡಿನಿಂದ ಬರುವ ಕಿರು ಉತ್ಪನ್ನಗಳನ್ನೇ ಸಂಗ್ರಹಿಸಿ ಜೀವನ ನಿರ್ವಹಿಸುತ್ತಿದ್ದರು. ಹಾಗೆಯೇ ಮಳೆಯನ್ನು ಆಧರಿಸಿ ಬೆಳೆಯುವ ಬೆಳೆಯನ್ನು ಮಾತ್ರವೇ ಬೆಳೆಯುವುದರಿಂದ ಬೆರಳೆಣಿಕೆಯಷ್ಟು ಸೋಲಿಗರಲ್ಲಿ ಮಾತ್ರವೇ ಆದಾಯ ಕಾಣಬಹುದಾಗಿದ್ದು ಉಳಿದ ಸೋಲಿಗರು ತಮ್ಮ ಜೀವನದ ನಿರ್ವಹಣೆಗೆ ಕೂಲಿಯನ್ನು ಅವಲಂಬಿಸಿರುತ್ತಾರೆ.

ಇದಕ್ಕಾಗಿ ಸರ್ಕಾರವು ಎಷ್ಟೇ ಸವಲತ್ತುಗಳನ್ನು ನೀಡಿದರೂ ಸಹ ಕಳೆದ ಅನೇಕ ಶತಮಾನಗಳಿಂದ ತಮ್ಮ ಸುತ್ತಮುತ್ತಲಿನ ಅರಣ್ಯವೇ ಜೀವನದ ಒಂದು ಭಾಗವೆಂದು ಅವರು ಭಾವಿಸುತ್ತಾ ಬಂದಿದ್ದಾರೆ. ಅರಣ್ಯವನ್ನು ಅವಲಂಬಿಸಿ ಅರಣ್ಯ ರಕ್ಷಣೆ ಮಾಡುತ್ತಾ ಅದರ ಫಲ ತಿನ್ನುತ್ತಾ ಬಂದಿದ್ದಾರೆ.

ಕಿರುಅರಣ್ಯ ಉತ್ಪನ್ನಗಳನ್ನು ಎಷ್ಟೇ ಸಂಗ್ರಹಿಸಿದರೂ ಲ್ಯಾಂಪ್ಸ್ ಸೊಸೈಟಿಗಳಿಗೆ ಮಾರುವ ಪರಿಪಾಠವಿತ್ತು. ಈ ಮಾರಾಟದಿಂದ ಮಧ್ಯವರ್ತಿಗಳಿಗೆ ದಲ್ಲಾಳಿ ಹಣ ಗಳಿಕೆಯಾಗುತ್ತಿತ್ತು ಹಾಗೂ ಲ್ಯಾಂಪ್ಸ್ ಸೊಸೈಟಿಯವರು ಇವರಿಂದ ಕಡಿಮೆ ಬೆಲೆಗೆ ಖರೀದಿಸಿದರೂ, ಇದನ್ನು ಹೆಚ್ಚಿನ ಬೆಲೆಗಳಿಗೆ ಮಾರಾಟ ಮಾಡಿ ಬಂದ ಲಾಭದಲ್ಲಿ ಗಿರಿಜನ ಹಾಡಿಗಳಿಗೆ ನೀರಿನ ಸಂಪರ್ಕ ಕಲ್ಪಿಸುವುದು, ಕಡುಬಡತನದಲ್ಲಿರುವ ಸೋಲಿಗರಿಗೆ ಪಾತ್ರೆಗಳನ್ನು ಇನ್ನಿತರ ಮೂಲಭೂತ ಸೌಕರ್ಯದ ಸಾಮಗ್ರಿಗಳನ್ನು ವಿತರಣೆ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಇದು ಸಂಪೂರ್ಣವಾಗಿ ನಿಂತಂತಾಗಿದೆ. ಇವರು ತಮ್ಮ ಜೀವನ ನಿರ್ವಹಣೆಗೆ ಪ್ರತಿಯೊಂದಕ್ಕೂ ಸರ್ಕಾರದಿಂದ ಒದಗಿಸುವ ಸೌಲಭ್ಯಗಳನ್ನು ಅವಲಂಬಿಸಲು ಸಾಧ್ಯವಿಲ್ಲ, ಕೃಷಿ ಚಟುವಟಿಕೆಗಳಲ್ಲಿ ಆದಾಯವಿಲ್ಲವೆಂಬಂತಾಗಿದೆ. ಈಗಿನ ನಿಷೇಧವನ್ನು ರದ್ದು ಮಾಡದಿದ್ದರೆ ಅವರ ಬದುಕು ಇನ್ನಷ್ಟು ಕಷ್ಟದಾಯಕವಾಗಿರುತ್ತದೆ. ಸೋಲಿಗರು ಬದಲಾದ ಪರಿಸರಕ್ಕೆ ಹೊರ ಜಗತ್ತಿನ ಪ್ರಭಾವಕ್ಕೆ ಹೊಂದಿಕೊಂಡು ಕಷ್ಟದಿಂದ ಬದುಕುತ್ತಿದ್ದಾರೆ.

ಕಳೆದ ೨೦ರಿಂದ ೩೦ ವರ್ಷಕ್ಕೆ ಹೋಲಿಸಿದರೆ ಸೋಲಿಗರ ಜೀವನ ಕ್ರಮ, ಆಹಾರ ಪದ್ಧತಿ, ಆರ್ಥಿಕ ಸ್ಥಿತಿಗತಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿಯೂ ಸ್ವಲ್ಪ ಪ್ರಮಾಣದಲ್ಲಿ ಮೇಲೆ ಬಂದಿದ್ದಾರೆ. ಆಹಾರ ಪದ್ಧತಿಯಲ್ಲಿ ಬಹಳಷ್ಟು ಬದಲಾವಣೆಯನ್ನೂ ಕಂಡುಕೊಂಡಿದ್ದಾರೆ. ಇದಕ್ಕೆ ಬಹುಮುಖ್ಯ ಕಾರಣ ನೆರೆಹೊರೆಯ ಜನಾಂಗದೊಂದಿಗೆ ಬೆರೆತು ಅವರಂತೆಯೇ ಆಹಾರ ಪದ್ಧತಿಯಲ್ಲಿ ಬಹುಮಟ್ಟಿನ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ಕೇವಲ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಅದನ್ನು ತಮ್ಮ ಉಪಯೋಗಕ್ಕೆ ಮಾತ್ರ ಉಪಯೋಗಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಅವುಗಳನ್ನು ಲ್ಯಾಂಪ್ಸ್ ಸೊಸೈಟಿ ಮತ್ತು ಕೆಲವು ಜನಾಂಗದೊಡನೆ ವಸ್ತುಗಳಿಗೆ ಬದಲಾಗಿ ಈ ಉತ್ಪನ್ನಗಳನ್ನು ವಿನಿಮಯ ಮಾಡಿಕೊಂಡು ಬದುಕಲಾರಂಭಿಸಿದ್ದಾರೆ. ಉಡುಗೆ, ತೊಡುಗೆಯಲ್ಲಿಯೂ ಸಹ ತುಂಬಾ ಬದಲಾವಣೆಯನ್ನು ಕಾಣಬಹುದಾಗಿದೆ. ಬೇಸಾಯ ಕ್ರಮದಲ್ಲಿ ಹಳೆಯ ಫಸಲುಗಳನ್ನು ಸಾಂಪ್ರದಾಯಿಕ ಪದ್ಧತಿಯಲ್ಲಿ ಬೆಳೆಯುತ್ತಿದ್ದರೂ ಇಂದು ಬದಲಾಗಿದೆ. ಮಕ್ಕಳು ಶಾಲಾ-ಕಾಲೇಜುಗಳಲ್ಲಿ ಓದಲಾರಂಭಿಸಿದ್ದಾರೆ. ಆದರೂ ಇವರು ಸುತ್ತಮುತ್ತ ಇರುವ ಬೇರೆ ಬೇರೆ ಸಮುದಾಯದವರೊಂದಿಗೆ ಸರಿ ಸಮಾನವಾಗಿ ಪೈಪೋಟಿ ಮಾಡಲಾಗದಷ್ಟು ಬೆಳೆದಿಲ್ಲ. ಇದಕ್ಕೆ ಮುಖ್ಯ ಕಾರಣ 'ಬದಲಾಗದ ಇವರ ಕೆಲವು ಸಂಪ್ರದಾಯ ಮತ್ತು ಅವರ ಜೀವನ ಕ್ರಮ' ಹಾಗು ಗುಣಾತ್ಮಕ ಶಿಕ್ಷಣ ಇಲ್ಲದಿರುವುದು.

**ಸೋಲಿಗರ ಇತರೆ ಕಸುಬು**

ಸೋಲಿಗರು ತಮ್ಮ ಸಮುದಾಯದಲ್ಲಿ ಬೇಸಾಯ ಕಿರು ಅರಣ್ಯ ಉತ್ಪಾದನಾ ಸಂಗ್ರಹಣೆ ಜೊತೆಗೆ ಇತ್ತೀಚೆಗೆ ವರ್ಷದ ೬ ತಿಂಗಳುಗಳಲ್ಲಿ ಕೇರಳ, ಕೊಡಗು, ತಮಿಳುನಾಡು ಕೂಲಿ ಆಳುಗಳಾಗಿ ಕುಟುಂಬ ಸಮೇತ ಹೊರಡುತ್ತಾರೆ. ಗುಂಡ್ಲುಪೇಟೆ, ಯಳಂದೂರು, ಕೊಳ್ಳೇಗಾಲ, ಚಾಮರಾಜನಗರ, ಹೆಚ್.ಡಿ.ಕೋಟೆ, ಹುಣಸೂರು, ಪಿರಿಯಾಪಟ್ಟಣ ಹಾಗೂ ಇತರೇ ಜಿಲ್ಲೆ ಮತ್ತು ತಾಲ್ಲೂಕುಗಳಿಂದಲೂ ತಮ್ಮ ಬೇಸಾಯ ಕೆಲಸ ಮುಗಿದ ನಂತರ ಮಾರ್ಚ್‌ನಿಂದ ಏಪ್ರಿಲ್, ಮೇ, ಜೂನ್ ತನಕವೂ

ಹೊರಗೆ ಕಾಫಿ ಬಿಡಿಸಲು, ಮೆಣಸಿನ ಕೆಲಸ, ಅಡಿಕೆ ಕೆಲಸ, ಕೆತ್ತಲು ಕೆಲಸ, ಕಟಾವು ಕೆಲಸ ಹಾಗೂ ಅಗೆಯುವುದು, ಗೊಬ್ಬರ ಹಾಕುವುದು ಈ ರೀತಿಯ ಕೆಲಸಗಳಿಗೆ ಕೇರಳ ಹಾಗೂ ಕೊಡಗು, ತಮಿಳುನಾಡು ಕಡೆಗೆ ಕೆಲಸ ಅರಸಿ ಹೋಗುತ್ತಾರೆ. ಸೋಲಿಗರು ಸ್ಥಳೀಯವಾಗಿ ತಮ್ಮ ಪಕ್ಕದ ಊರಿನ ನಾಡವರ ಜಮೀನುಗಳಲ್ಲಿ, ಕಾಫಿ ತೋಟಗಳಲ್ಲಿ, ನಾಡವರ ಹೊಲ ಗದ್ದೆಗಳಲ್ಲಿ ಇತ್ತೀಚೆಗೆ ಬೆಳಿಗ್ಗೆ ೭ ರಿಂದ ಸಾಯಂಕಾಲ ೫-೬ ತನಕ ಚೆಂಡು ಹೂವಿನ ಕೆಲಸ, ತೋಟದ ಕೆಲಸ, ನಾಟಿ ಕೆಲಸ, ಈರುಳ್ಳಿ ಕೆಲಸಗಳಿಗೂ ಹೋಗುತ್ತಾರೆ. ಜಮೀನಿಲ್ಲದೇ ಇರುವ ಸೋಲಿಗರು ತಮ್ಮ ಜೀವನ ನಿರ್ವಹಣೆಗೆಂದು ದೂರದಲ್ಲಿರುವ ಎಸ್ಟೇಟುಗಳಲ್ಲಿ ಅಥವಾ ಬೇರೆ ಜಿಲ್ಲೆಗಳಲ್ಲಿ, ಪಕ್ಕದ ರಾಜ್ಯವಾದ ಕೇರಳಕ್ಕೆ ಕೂಲಿಗಾಗಿ ತೆರಳುತ್ತಾರೆ. ಇವರು ಟೀ ಎಲೆ ಬಿಡಿಸಲು, ಕಾಫಿ ಹಣ್ಣುಗಳನ್ನು ಬಿಡಿಸಲು, ಗಾರೆಕೆಲಸಗಳಿಗಾಗಿ ದೂರದ ಊರುಗಳನ್ನು ಅವಲಂಬಿಸಿದ್ದಾರೆ.

ಸೋಲಿಗರ ಭೂಮಿಯು ದಾಖಲಾತಿ ಇಲ್ಲದೆ ಬರೀ ಒತ್ತುವರಿ ಬೆಳೆದು ವ್ಯವಸಾಯ ಮಾಡುವುದರಲ್ಲಿಯೇ ಜೀವನ ಸಾಗಿಸಿ ಬಿಟ್ಟಿರುತ್ತಾರೆ. ಇತ್ತೀಚೆಗೆ ಕಾಲಕಾಲಕ್ಕೆ ಮಾರ್ಚ್‌ನಿಂದ ಜೂನ್‌ವರೆಗೆ ಕೇರಳ, ತಮಿಳುನಾಡು, ಒರಿಸ್ಸಾ, ಆಂಧ್ರ, ಕೊಡಗು ಇತ್ತ ಕಡೆಗಳಿಗೆ ಗಂಡ ಹೆಂಡತಿ ಮಕ್ಕಳನ್ನು ಕರೆದುಕೊಂಡು ಕೂಲಿ ಅರಸಿ ಗುಳೆ ಹೊರಟು ಹೋಗುತ್ತಾರೆ. ಇದು ಒಂದು ರೀತಿಯಲ್ಲಿ ನಾಲ್ಕರಿಂದ ಆರು ತಿಂಗಳ ಪ್ರವಾಸದ ರೀತಿಯಲ್ಲಿಯೇ ಇರುತ್ತದೆ. ಅಲ್ಲಿ ಎಲ್ಲರೂ ಲೈನ್‌ಮನೆಗಳಲ್ಲಿ ಇದ್ದುಕೊಂಡು ಕೂಲಿ ಕೆಲಸ ಮಾಡುತ್ತಾ ಮತ್ತೆ ವಾಪಾಸ್ ತಮ್ಮ ಊರುಗಳಿಗೆ ಯುಗಾದಿ ಹಬ್ಬದ ಸಮಯಕ್ಕೆ ಬರುತ್ತಾರೆ. ಸೋಲಿಗರು ಎಷ್ಟೇ ಸಂಪಾದನೆ ಮಾಡಿದರೂ ಒಂದು ವಾರದಿಂದ ಒಂದು ತಿಂಗಳಲ್ಲಿ ಎಲ್ಲರೂ ಸಮನಾಗಿ ಖರ್ಚು ಮಾಡುತ್ತಾರೆ. ಇತ್ತೀಚೆಗೆ ಮದ್ಯಪಾನ ವ್ಯಸನಿಗಳು ಹೆಚ್ಚಾಗಿ ಕೂಡಿಡುವ ಪ್ರಮೇಯವೇ ಇವರಲ್ಲಿ ಬರುವುದಿಲ್ಲ. ಹಣವಿದ್ದರೆ ಅದನ್ನು ಬ್ಯಾಂಕಿಗೆ ಹೋಗಿ ಉಳಿತಾಯ ಮಾಡಬೇಕು ಎನ್ನುವ ಭಾವನೆ ಇವರಲ್ಲಿ ಇಲ್ಲವೇ ಇಲ್ಲ. ಇದ್ದರೆ ಅಲ್ಪಸ್ವಲ್ಪ ಎಂದು ಹೇಳಬಹುದು. ಎಷ್ಟೋ ಮಂದಿ ಸೋಲಿಗರು ಇನ್ನೂ ಬ್ಯಾಂಕ್ ಖಾತೆಯನ್ನೇ ತೆರೆದಿಲ್ಲ. ಹಾಗೆಂದರೆ ಏನು? ಎನ್ನುವ ಪರಿಸ್ಥಿತಿಯಲ್ಲಿದ್ದಾರೆ. ಬ್ಯಾಂಕ್ ಖಾತೆಯಿಂದಾಗಿ ಸೋಲಿಗರಿಗೆ ಸರಕಾರದಿಂದ ಸಿಗುವ ಅದೆಷ್ಟೋ ಅನುಕೂಲಗಳು ದೊರಕುತ್ತಿಲ್ಲ. ಮಹಿಳಾ ಸ್ವ-ಸಹಾಯ ಸಂಘ, ಸ್ತ್ರೀ-ಶಕ್ತಿ ಸಂಘ ಸೋಲಿಗರಲ್ಲಿ ತುಂಬಾ ಕಡಿಮೆ. ಮೊದಲಿಗೆ ಪ್ರಾರಂಭವಾದರೂ ಸಹ ಅವುಗಳು ಕೊನೆಯವರೆಗೆ ಉಳಿಯುವುದಿಲ್ಲ. ಅವುಗಳನ್ನು ನಡೆಸಿಕೊಂಡು ಹೋಗುವ ಚಾಣಾಕ್ಷತನ ಸೋಲಿಗರಲ್ಲಿ ತುಂಬಾ ಕಡಿಮೆ. ಇದ್ದರೂ, ತುಂಬಾ ಅಪರೂಪ ಹಾಗೂ ಅವುಗಳಿಂದ ಸಾಲ ಸೌಲಭ್ಯ ಪಡೆಯುವುದು ತುಂಬಾ ಕಡಿಮೆ.

**ಕೋಷ್ಟಕ ೪.೩.೪. ಸೋಲಿಗರಲ್ಲಿ ವಿವಿಧ ಉದ್ಯೋಗಗಳಲ್ಲಿ ನಿರತರಾದವರು**

| ಕ್ರಸಂ | ವಿವಿಧ ಉದ್ಯೋಗಗಳಲ್ಲಿ ನಿರತರಾದವರು | ಸಂಖ್ಯೆ | ಶೇಕಡವಾರು |
|---|---|---|---|
| ೧ | ಕೂಲಿ ಕಾರ್ಮಿಕರು | ೮೪೪ | ೪೮.೭೮ |
| ೨ | ಮಕ್ಕಳು ಮತ್ತು ಗೃಹಿಣಿಯರು | ೪೯೭ | ೨೮.೭೨ |
| ೩ | ಕಾಡಿನ ಉತ್ಪನ್ನಗಳನ್ನು ಸಂಗ್ರಹ ಮಾಡುವವರು | ೧೪೮ | ೮.೫೫ |
| ೪ | ವ್ಯವಸಾಯಗಾರರು | ೧೯೨ | ೧೧.೦೯ |
| ೫ | ವಾಚರ್‌ಗಳು | ೧೨ | ೦.೬೯ |
| ೬ | ಅಡುಗೆಯವರು | ೬ | ೦.೩೪ |
| ೭ | ನರ್ಸ್‌ಗಳು | ೩ | ೦.೧ |
| ೮ | ಜೀಪ್ ಚಾಲಕರು | ೩ | ೦.೧ |
| ೯ | ಟೀಚರ್‌ಗಳು | ೬ | ೦.೩೪ |
| ೧೦ | ಟೈಲರ್‌ಗಳು | ೨ | ೦.೧೧ |
| ೧೧ | ಜಂಗಲ್ ಲಾಡ್ಜ್ ಸಹಾಯಕರುಗಳು | ೩ | ೦.೧ |
| ೧೨ | ವಾಟರ್‌ಮನ್ | ೨ | ೦.೧೧ |
| ೧೩ | ಅಡುಗೆ ಸಹಾಯಕರು | ೨ | ೦.೧೧ |
| ೧೪ | ಲಾರಿ ಚಾಲಕರು | ೨ | ೦.೧೧ |
| ೧೫ | ಇತರೆ | ೮ | ೦.೪೮ |
| | ಒಟ್ಟು | ೧೭೩೦ | ೧೦೦ |

ಕ್ಷೇತ್ರಕಾರ್ಯ ಮಾಹಿತಿ

### ೪.೪. ಸೋಲಿಗರು ಅರಣ್ಯ ಇಲಾಖೆಯಲ್ಲಿ ಮಾಡುವ ಕಸುಬು ಅಥವಾ ಕೆಲಸ

ಕರ್ನಾಟಕ ಅರಣ್ಯ ಇಲಾಖೆಯ ವತಿಯಿಂದ ಕೆಲವೊಂದು ಕಾಡಿನ ಕೆಲಸವನ್ನು ತಿಂಗಳುಗಳಲ್ಲಿ ಮಾತ್ರ ಮಾಡುತ್ತಾರೆ. ಅವುಗಳಲ್ಲಿ ಮುಖ್ಯವಾದುದು ಈ ಕೆಳಗಿನಂತಿದೆ.

- APC camp (Anti Poching Camp)
- ಡ್ರೈವರ್ ಕೆಲಸ
- ಸಫಾರಿ ಕೆಲಸ-ಪ್ರವಾಸಿಗರನ್ನು ಕಾಡು ವೀಕ್ಷಣೆ ಮಾಡಲು ಕರೆದುಕೊಂಡು ಹೋಗುವುದು.
- NREG ಕೆಲಸಗಳು
- ರಸ್ತೆ ಕೆಲಸ, ಕಾಡಿನ ಕಾಲುದಾರಿ ರಸ್ತೆಗಳು(ಗೇಮ್ ರೋಡ್ ದುರಸ್ಥಿ), ಲಾಂಟಾನ ತೆಗೆಯುವುದು.

➢ ಬೆಂಕಿ ಆರಿಸುವ ಕೆಲಸ(ಫಾರೆಸ್ಟ್ ಫೈರ್ ಆರಿಸುವ ಕೆಲಸ)

➢ ಕಾಡಿನಲ್ಲಿ ಅಲ್ಲಲ್ಲಿ ಗುಂಡಿಗೆ ಹಾಕಿ ಉಪ್ಪು ಹಾಕುವ ಕೆಲಸ

➢ ಕಾಡು ಕಾಯುವ ಕೆಲಸ(ರೌಂಡ್ಸ್ ಸುತ್ತುವುದು, ಗಸ್ತು ತಿರುಗುವ ಕೆಲಸ).

ಹೀಗೆ ಕಾಡಿನ ರಕ್ಷಣೆಯ ಕೆಲಸವನ್ನು ಸೋಲಿಗರು ಮಾಡುತ್ತಾರೆ. ಇವರಲ್ಲದೇ ಬಂಡೀಪುರ, ನಾಗರಹೊಳೆ, ಹೆಚ್.ಡಿ.ಕೋಟೆ, ಚಾಮರಾಜನಗರ, ಕೊಡಗು, ಮೈಸೂರು ಇತರೆ ಕಡೆಗಳಲ್ಲೂ ಕಾಡುಕುರುಬರು(ಬೆಟ್ಟ ಕುರುಬರು), ಜೇನು ಕುರುಬರು, ಯರವರು ಕೂಡ ಮಾಡುತ್ತಾರೆ. ಆರ್.ಎಫ್.ಓ. ಪರಮೇಶ್ವರ್ ಅವರು ಹೇಳುವ ಪ್ರಕಾರ ಬಂಡೀಪುರದ ಸೋಲಿಗರಿಗೆ ಪ್ರಸ್ತುತ ದಿನಗಳಲ್ಲಿ ಭೂಮಿಯ ಸಮಸ್ಯೆ ಇದೆ. ಹಿಂದೆ ಇದ್ದ ಕುಟುಂಬಗಳಿಗೆ ಈಗ ಹೆಚ್ಚಾಗತೊಡಗಿದೆ. ಕುಟುಂಬಗಳಿಗೆ ತಕ್ಕಹಾಗೆ ಅವರಿಗೆ ವ್ಯವಸಾಯದ ಭೂಮಿ ಸಿಗುತ್ತಿಲ್ಲ. ಈಗಾಗಲೇ ಅಲ್ಪಸ್ವಲ್ಪ ಇರುವ ಭೂಮಿಯು ಸಹ ಅವರ ಯಾವುದೇ ಹೆಸರು, ಪಹಣಿ, ಪಟ್ಟೆ, ಆರ್.ಟಿ.ಸಿ. ಯಾವುದೇ ದಾಖಲಾತಿ ಸಹ ಇರುವುದಿಲ್ಲ.

ಎ.ಪಿ.ಸಿ. ಕ್ಯಾಂಪ್‌ನ ಸಿಬ್ಬಂದಿಯವರ ಜೊತೆ ಮಾತನಾಡಿದಾಗ ಸುಮಾರು ೫ ವರ್ಷದಿಂದ ೧೭ ವರ್ಷದವರೆಗೆ ದುಡಿದರೂ ಅರೆಕಾಲಿಕ ನೌಕರರಾಗಿಯೇ ಮುಂದುವರಿಸಿದ್ದಾರೆ. ಖಾಯಂ ನೌಕರಿ ಇನ್ನೂ ದೊರಕಿಲ್ಲ. ಎಂದು ಮಹೇಂದ್ರ ಅವರು ಹೇಳುತ್ತಾರೆ. ಬಂಡೀಪುರದಲ್ಲಿ ಅರಣ್ಯ ಇಲಾಖೆಯಲ್ಲಿ ಅರೆಕಾಲಿಕ ನೌಕರಿಯನ್ನು ಮಾಡುತ್ತಿದ್ದಾರೆ. ಕೆಲವೊಂದು ಸಲ ಸೋಲಿಗ ಸಮುದಾಯ ದವರನ್ನು ಅರ್ಧದಲ್ಲಿಯೇ ತೆಗೆದುಹಾಕುತ್ತಾರೆ. ಮೂರು ತಿಂಗಳು, ನಾಲ್ಕು ತಿಂಗಳಿಗೊಮ್ಮೆ ಸಂಬಳ ಪಡೆಯುತ್ತಾರೆ. ಈ ಎಲ್ಲಾ ಮಾಹಿತಿಗಳು ಸಿಬ್ಬಂದಿಯವರನ್ನು ಮಾತನಾಡಿಸಿದಾಗ ಹೊರಬಂದವು.

ಬಂಡೀಪುರ ಅರಣ್ಯಾಧಿಕಾರಿಗಳಾದ ಪರಮೇಶ್ವರ್ ಅವರು "ಚೆಮ್ಮನಹಳ್ಳಿ, ಮೂಳೆಹೊಳೆ, ಬಂಡೀಪುರ ಈ ಕಡೆಗಳಲ್ಲಿ ನಾವು ಬುಡಕಟ್ಟು ನಿವಾಸಿಗಳನ್ನೇ ಕಾಡಿನ ಕೆಲಸಕ್ಕೆ ಸೇರಿಸಿಕೊಂಡಿರುತ್ತೇವೆ" ಎಂದಿದ್ದಾರೆ. ಸೋಲಿಗ ಸಮುದಾಯದವರನ್ನು ನಾವು ಅವರಿರುವ ಎ.ಪಿ.ಸಿ (ಆ್ಯಂಟಿ ಪೋಚಿಂಗ್ ಕ್ಯಾಂಪ್) ಕ್ಯಾಂಪ್‌ನ ಸ್ಥಳವಾದ ಮಲ್ಲಳ್ಳ ಕ್ಯಾಂಪ್‌ಗೆ ಪ್ರಯಾಣ ಬೆಳೆಸಿದೆವು. ಮಲ್ಲಳ್ಳ ಕ್ಯಾಂಪ್, ಬಂಡೀಪುರದಿಂದ ಹಿಡಿದು, ಕೆಕ್ಕೇನಹಳ್ಳ ಫಾರೆಸ್ಟ್ ಚೆಕ್‌ಪೋಸ್ಟ್‌ನಿಂದ ಸುಮಾರು ೫ ಕಿ.ಮೀ ದೂರದ ಕಾಡಿನ ಮಧ್ಯಭಾಗದಲ್ಲಿದೆ. ಅಲ್ಲಿ ಮಾಧು, ಜಯಪ್ಪ, ಬಂಟ, ಮಹೇಶ್, ಮಹೇಂದ್ರ ಮುಂತಾದವರು ಅಲ್ಲಿದ್ದರು. ಸೋಲಿಗರು, ಕಾಡುಕುರುಬರು ಎ.ಪಿ.ಸಿ ಕ್ಯಾಂಪ್‌ನಲ್ಲಿ ಕಾಡನ್ನು ಕಾಯುತ್ತಿದ್ದರು. ಇವರಿಗೆ ಕಾಡಿನ ರಕ್ಷಣೆಯ ಬಗ್ಗೆ ಅಪಾರವಾದ ಪಾರಂಪರಿಕ ಜ್ಞಾನವಿದೆ. ಹುಲಿ, ಆನೆ, ಕರಡಿ, ಚಿರತೆ ಇತ್ಯಾದಿ ಕಾಡುಪ್ರಾಣಿಗಳಿಂದ ತಮ್ಮ ರಕ್ಷಣೆಯನ್ನು ಯಾವ ರೀತಿ ಹೇಗೆ ಮಾಡಿಕೊಳ್ಳಬೇಕು ಎಂಬುದರ ಬಗ್ಗೆ ಅರಿವಿದೆ. ಮಹೇಂದ್ರ ಹೇಳುವ ಪ್ರಕಾರ "ಆನೆ ದೂರದಲ್ಲೇ ಬಂದರೆ, ಅದರ ವಾಸನೆಯು ನಮಗೆ ಗೊತ್ತಾಗುತ್ತದೆ, ಶಬ್ದ ಬರುತ್ತದೆ, ಆನೆ ಇರುವ ಕಡೆ ಪಕ್ಷಿಗಳ ಕೂಗನ್ನು ನಾವು ಗಮನಿಸುತ್ತೇವೆ. ಅಲ್ಲದೇ, ಆನೆಯು ನಮ್ಮ ಮುಂದೆ ಬಂದು ಅದು ನಮಗೆ ದಾರಿ ಕೊಡದಿದ್ದಾಗ ನಾವು ಪಕ್ಕದ ದಾರಿಯಿಂದ ಸರಿದು ಹಾದುಹೋಗುತ್ತೇವೆ" ಎಂದು ಹೇಳುತ್ತಾರೆ. ಹೀಗೆ ಕಾಡಿನ ಪ್ರಾಣಿಗಳ ರಕ್ಷಣೆಯ ಜೊತೆ ತಮ್ಮ ರಕ್ಷಣೆಯ ಬಗ್ಗೆಯೂ ಚೆನ್ನಾಗಿ ತಿಳಿದಿರುತ್ತಾರೆ. ಕಾಡಿನಲ್ಲಿ ತಮ್ಮ ಕಸುಬನ್ನು ಆರಂಭಿಸಿದ ಸೋಲಿಗರು ಹಲವಾರು ರೀತಿಯ ಕಸುಬುಗಳನ್ನು ಮಾಡುತ್ತಾ ಬಂದಿದ್ದಾರೆ.

ಅರಣ್ಯ ಇಲಾಖೆಯವರು ಕಾಡಿನಲ್ಲಿ ಮಳೆಗಾಲದಲ್ಲಿ ಹೊಸ ಗಿಡಗಳನ್ನು ನೆಡಿಸಲು, ಗೇಮ್ ರೋಡುಗಳನ್ನು ಶುಚಿಗೊಳಿಸಲು, ರಸ್ತೆ ಇಕ್ಕೆಲಗಳಲ್ಲಿ ಬೆಳೆದಿರುವ ಗಿಡಗಳನ್ನು ಕತ್ತರಿಸಲು, ಕಾಡ್ಗಿಚ್ಚುಗಳನ್ನು ನಂದಿಸಲು, ಒಬ್ಬ ಮಧ್ಯವರ್ತಿಯನ್ನು ನೇಮಕ ಮಾಡುತ್ತಾರೆ. ಈ ಮಧ್ಯವರ್ತಿಯಿಂದ ದಿನವೊಂದಕ್ಕೆ ಹೆಂಗಸರಿಗೆ ರೂ. ೧೮೦, ಗಂಡಸರಿಗೆ ೨೬೦ ರೂ.ಗಳಂತೆ ದಿನಗೂಲಿ ಹಣ ನೀಡಿ ಕೆಲಸವನ್ನು ಮಾಡಿಸುತ್ತಾರೆ. ಕಾಡಿನ ರಸ್ತೆ ಮಾಡುವುದು, ಲೈನ್ ಕೊಚ್ಚುವ ಕೆಲಸ, ಮಣ್ಣು ಹಾಕುವ ಕೆಲಸ, ಆ್ಯಂಟಿ ಪೋಚಿಂಗ್ ಕ್ಯಾಂಪ್ ಅಂದರೆ ಕಾಡನ್ನು ಕಾಯುವ, ರಕ್ಷಣೆ ಮಾಡುವ ಕೆಲಸ, ಕಾಡಿನ ಕಾಲು ದಾರಿಗಳಿಗೆ ಮಣ್ಣು ಹಾಕುವ ಕೆಲಸ ಇತ್ಯಾದಿ ಕೆಲಸಗಳಿಗೂ ಸೋಲಿಗರು ಹೋಗುತ್ತಾರೆ.

ಅರಣ್ಯ ಇಲಾಖೆಯಲ್ಲಿ ಮಾಡುವ ಕೆಲಸಗಳನ್ನು ಇಲಾಖೆಯವರು ನೇರವಾಗಿ ಸೋಲಿಗ ಬುಡಕಟ್ಟು ಸಮುದಾಯದವರಿಗೆ ಹಣ ಕೊಟ್ಟು ಮಾಡಿಸುವುದಿಲ್ಲ. ಬದಲಾಗಿ ಆ ಒಂದು ಕೆಲಸದ ಟೆಂಡರ್ ಅನ್ನು ಅರಣ್ಯ ಇಲಾಖೆಯ ಟೆಂಡರ್ ಲೈಸೆನ್ಸ್ ಹೊಂದಿರುವ ವ್ಯಕ್ತಿಯ ಹತ್ತಿರ ಕೊಟ್ಟು ಅವನ ಮೂಲಕ ಹಾಡಿ, ಪೋಡು, ಕಾಲೋನಿಗಳಿಂದ ಜನರನ್ನು ಕರೆದುಕೊಂಡು ಬಂದು ಕೆಲಸವನ್ನು ಮಾಡಿಸುತ್ತಾರೆ. ಪ್ರತೀ ದಿನದ ಊಟವನ್ನು ಸಮುದಾಯದವರೇ ತೆಗೆದುಕೊಂಡು ಹೋಗುತ್ತಾರೆ. ವಾರದಲ್ಲಿ ಒಂದು ದಿನ ಸಮುದಾಯದವರಿಗೆ ಕೂಲಿಯ ಹಣವನ್ನು ಕೊಡುತ್ತಾರೆ. 'ಹಿಂದೆ ಕಾಡಿನ ಕೆಲಸ ಮಾಡುವಾಗ ನಮಗೆ ಬೇಕಾಗುವ ಆಹಾರ ಪದಾರ್ಥಗಳಾದ ರಾಗಿಹಿಟ್ಟು, ಅಕ್ಕಿ, ಬೇಳೆ ಕಾಳು, ಬೆಲ್ಲ ಇನ್ನಿತರೆ ಸಾಮಾನು ಜೊತೆಗೆ ನಮಗೆ ಅರಣ್ಯ ಇಲಾಖೆಯಿಂದ ಖಾಕಿ ಬಟ್ಟೆಯನ್ನು, ಶೂಷ್ ಇತ್ಯಾದಿ ವಸ್ತುಗಳನ್ನು ಕೊಡುತ್ತಿದ್ದರು. ಆದರೆ ಇತ್ತೀಚೆಗೆ ಈ ಯಾವುದೇ ವಸ್ತುಗಳನ್ನು ಅರಣ್ಯ ಇಲಾಖೆಯವರು ಕೊಡುವುದಿಲ್ಲ ಎಂದು ಮರಿಮಾದಯ್ಯ– ಮದ್ದೂರು ಕಾಲೋನಿ ಹಾಗು ಬಂಡೀಪುರದ ಸುತ್ತಮುತ್ತಲಿನ ಸೋಲಿಗ ಬುಡಕಟ್ಟು ಸಮುದಾಯದವರು ಹೇಳುತ್ತಾರೆ'. ಸೋಲಿಗರಿಗೆ ಈ ಭಾಗದಲ್ಲಿ ಜುಲೈ, ಆಗಸ್ಟ್, ಸಪ್ಟೆಂಬರ್ ತಿಂಗಳಿನಲ್ಲಿ ಯಾವ ಕೆಲಸವೂ ಸಿಗುವುದಿಲ್ಲ. ಬಹು ಮಂದಿಗೆ ವ್ಯವಸಾಯ ಮಾಡಲು ಭೂಮಿಯೇ ಇರುವುದಿಲ್ಲ ಹಾಗಾಗಿ ತಮ್ಮ ಜೀವನಕ್ಕಾಗಿ ಕಡಿಮೆ ಕೂಲಿ ದೊರೆತರೂ ಸಹ ಅದನ್ನು ಲೆಕ್ಕಿಸದೆ ಅರಣ್ಯ ಇಲಾಖೆಯಲ್ಲಿ ಕೆಲಸ ಮಾಡುತ್ತಾರೆ. ಮತ್ತೊಂದು ರೀತಿಯಲ್ಲಿ ಈ ಕಾಡು ನಮ್ಮದು, ನಮ್ಮ ಕಾಡಿನ ಕೆಲಸ ದೇವರ ಕೆಲಸ ಎಂದು ನಂಬಿರುವ ಜನ ಸೋಲಿಗ ಸಮುದಾಯದವರು. ಆದುದರಿಂದ ಇಲ್ಲಿ ಹಣಕ್ಕೆ ಬೆಲೆ ಇಲ್ಲ ಕಾಡಿನ ರಕ್ಷಣೆಗೆ ಬೆಲೆ.

### ಸೋಲಿಗರ ಸಾಲದ ವ್ಯವಸ್ಥೆ

ಇತ್ತೀಚೆಗೆ ಸೋಲಿಗರಲ್ಲಿ ಸಾಲ ತೆಗೆದುಕೊಳ್ಳುವ ಮನೋಭಾವ ಬಂದುಬಿಟ್ಟಿದೆ. ಧರ್ಮಸ್ಥಳ ಸ್ವಸಹಾಯ ಸಂಘ ಹಾಗೂ ಇತರೆ ಆಂಧ್ರ, ತಮಿಳುನಾಡು ಕಂಪೆನಿಗಳು ಪ್ರತಿಯೊಂದು ಹಾಡಿ, ಪೋಡು, ಕಾಲೋನಿಗಳಿಗೂ ಹೋಗಿ ಸಾಲದ ಪರಿಚಯವನ್ನು ಮಾಡಿಬಿಟ್ಟಿದ್ದಾರೆ. **ವಾರದ ಸಾಲ, ೧೫ ದಿನದ ಸಾಲ, ೧ ತಿಂಗಳ ಸಾಲ** ಹೀಗೆ ಅವರು ಮಹಿಳೆಯರನ್ನೇ ಬಂಡವಾಳವಾಗಿ ಮಾಡಿಕೊಂಡು ಮೊದಲಿಗೆ ಎಲ್ಲಾ ಮೂಲ ದಾಖಲಾತಿಯನ್ನು ಪಡೆದು, ಗಂಡನಿಂದ ಹೇಳಿಕೆಯ ಮುಚ್ಚಳಿಕೆ ಪತ್ರ ಬರೆಯಿಸಿಕೊಂಡು ೫ ಜನರ ಗುಂಪನ್ನು ಮಾಡಿ, ಆ ೫ ಜನರಲ್ಲಿ ಯಾರು ಆ ವಾರ ಸಾಲದ ಹಣ ಕಟ್ಟಲ್ಲವೋ ಅಂತಹವರಲ್ಲಿ ಉಳಿದ ೪ ಜನರು ಒಬ್ಬರ ಹಣವನ್ನು ಸೇರಿಸಿ ಕಟ್ಟಬೇಕು. ಹೀಗೆ ಮಾತುಕತೆ, ಬರವಣಿಗೆಯ ಮೂಲಕ ಹಣವನ್ನು ಸಾಲದ ರೂಪದಲ್ಲಿ ಪ್ರತಿಯೊಬ್ಬರಿಗೂ ೨೦

ಸಾವಿರ, ೩೦ ಸಾವಿರ ಹೀಗೆ ಹಣವನ್ನು ಕಟ್ಟಿ ಅದರ ಜೊತೆ ಬಡ್ಡಿಯನ್ನು ಸೇರಿಸಿ ಒಟ್ಟು ಅಸಲು ಮತ್ತು ಬಡ್ಡಿಯ ಹಣವನ್ನು ಪ್ರತಿವಾರ ವಸೂಲು ಮಾಡುತ್ತಾರೆ. ಮೊದಲಿಗೆ ಹಾಡಿಗಳಲ್ಲಿ, ಪೋಡು, ಕಾಲೋನಿಗಳಲ್ಲಿ ಬಹಳ ಖುಷಿಯಿಂದ ಈ ಹಣವನ್ನು ತೆಗೆದುಕೊಂಡು ಒಂದು ವಾರದಲ್ಲಿ ಖರ್ಚು ಮಾಡುತ್ತಾರೆ. ಆ ನಂತರ ಸಾಲ ತೀರಿಸುವಾಗ ಸೋಲಿಗ ಮಹಿಳೆಯರು ಪಡುವ ಕಷ್ಟ ಅಷ್ಟಿಷ್ಟಲ್ಲ. ಇದರಿಂದ ಮಾನಸಿಕ ನೆಮ್ಮದಿ ಕಳೆದುಕೊಳ್ಳುತ್ತಾರೆ. ಕೆಲವರು ವಾರಗಟ್ಟಲೆ ಕಾಡಿನ ಕಡೆಗೆ ಹೋಗುತ್ತಾರೆ, ಕಡಿಮೆ ಹಣಕ್ಕೆ ಕೂಲಿ ಮಾಡುತ್ತಾರೆ. ಗಂಡ ಹೆಂಡತಿ ಜಗಳವಾಡುತ್ತಾರೆ. ಬೆಳಿಗ್ಗೆ ೭ ಗಂಟೆಗೆ ಜಮೀನ್ದಾರರ ಹೊಲಕ್ಕೆ ಕೂಲಿಗೆ ಹೊರಟು ಹೋಗುತ್ತಾರೆ ವಿಶ್ರಾಂತಿಯ ಪ್ರಶ್ನೆಯೇ ಇವರಿಗೆ ಬರುವುದಿಲ್ಲ. ಮನೆಯಲ್ಲಿ ಶಾಲಾ ಮಕ್ಕಳಿಗೆ ಉಪಚರಿಸುವುದಿಲ್ಲ, ಆರೋಗ್ಯದ ತೊಂದರೆ, ಸರಿಯಾಗಿ ಮನೆಯಲ್ಲಿ ಊಟ, ತಿಂಡಿ ಮಾಡುವುದಿಲ್ಲ, ಗಂಡಸರು ಮಾನಸಿಕ ತೊಂದರೆಗೀಡಾಗುತ್ತಾರೆ. ಮಹಿಳೆ ಗಂಡ ಮಕ್ಕಳೂ ಸಹ ಕುಡಿತದ ದಾಸರಾಗುತ್ತಿದ್ದಾರೆ. ಒಟ್ಟಾರೆ ಸಾಲದ ಶೂಲಕ್ಕೆ ಸಿಕ್ಕಿಕೊಂಡು ಒದ್ದಾಡುವ ಪರಿಸ್ಥಿತಿಯನ್ನು ತಂದುಕೊಂಡಿದ್ದಾರೆ.

ಸೋಲಿಗರಲ್ಲಿ ಕಲಿತ ಹೆಣ್ಣುಮಕ್ಕಳು, ಗಂಡುಮಕ್ಕಳು ಕೇವಲ ಕೆಲವು ಮಂದಿ ಮಾತ್ರ, ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಬಿ.ಎ., ಬಿ.ಎಸ್ಸಿ, ಎಂ.ಎ., ಎಂ.ಎಸ್ಸಿ. ಮಾಡಿಕೊಂಡಿದ್ದಾರೆ. ಆದರೆ ಅವರ್ಯಾರಿಗೂ ಸರಕಾರಿ ಉದ್ಯೋಗ ಸಿಗುತ್ತಿಲ್ಲ. ಕಾರಣ ಪೈಪೋಟಿಯ ಜಗತ್ತಿನಲ್ಲಿ ಸೋಲಿಗರು ಸೋತು ಹಿಂದೆ ಹೋಗುತ್ತಿದ್ದಾರೆ. ಅವರುಗಳಲ್ಲಿ ಕೆಲವರು ಅರಣ್ಯ ಇಲಾಖೆಯಲ್ಲಿ, ಆಶ್ರಮ ಶಾಲೆಗಳಲ್ಲಿ, ಮೊರಾರ್ಜಿ ಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ, 'ಡಿ' ಗ್ರೂಪ್ ನೌಕರರಾಗಿ, ಅಲ್ಪ ಮಂದಿ ಮಾತ್ರ ಕೆಲಸ ನಿರ್ವಹಿಸುತ್ತಿದ್ದಾರೆ. ಮತ್ತೆ ಕೆಲವರು ಆರೋಗ್ಯ ಇಲಾಖೆಯಲ್ಲಿ ಆರೋಗ್ಯ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಮತ್ತೆ ಕೆಲವರು ಇತ್ತೀಚೆಗೆ ಚಾಮರಾಜನಗರ, ಮೈಸೂರು, ಕೊಡಗು ಇತರೇ ಕಡೆಗಳಲ್ಲಿ ಸಂಘ–ಸಂಸ್ಥೆಗಳಲ್ಲಿ, ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಹಲವಾರು ಮಂದಿ ಸೋಲಿಗರ ಹುಡುಗ ಹುಡುಗಿಯರು ಇತ್ತ ಕಡೆ ಕೂಲಿ ಕೆಲಸ, ಕಾಡಿನ ಕೆಲಸವೂ ಮಾಡಲಾಗದೆ ಪಟ್ಟಣಕ್ಕೂ ಬಂದು ಕೆಲಸಕ್ಕೂ ಸೇರಲಾಗದೆ ಅತಂತ್ರ ಪರಿಸ್ಥಿತಿಯಲ್ಲಿ ತಮ್ಮ ಅಮೂಲ್ಯವಾದ ಸಮಯವನ್ನು ಹಾಳು ಮಾಡುತ್ತಿದ್ದಾರೆ.

Growing Rural – Urban Dispartiy in Gujarath ಎಂಬ ಪುಸ್ತಕದಲ್ಲಿ ಆದಿವಾಸಿಗಳ ಜೀವನ ಮತ್ತು ಯಾವ ರೀತಿಯ ಸೌಲಭ್ಯಗಳು ಆದಿವಾಸಿಗಳಿಗೆ ಬೇಕಾಗುತ್ತದೆ ಎಂಬುದನ್ನು ತಿಳಿಸಿದ್ದಾರೆ. "Quality and security of rural livelihood seems to have been adversely affected with the low level of spending by both center and state on social sectors including health, family welfare and education technology like land, water and forest is going to be economically marginalized with very little purchasing power at their disposal with became more precarious. Both first and second generation reforms so for, over look various social objectives such as eradication of poverty, prevention of concentration of economic power is fewer hands regional imbalances and promotions of labour intensive economic activities creating more job opportunities."[12] (Sharma S S P, K V Raju K V, Sobyasachi Sarkar:2009:viii)

ಬುಡಕಟ್ಟು ಅಧ್ಯಯನ, ಸಂಪುಟ–೩, ಸಂಚಿಕೆ ೧: ಎಂಬ ಈ ಪುಸ್ತಕದಲ್ಲಿ ಸೋಲಿಗರ ಆರ್ಥಿಕ ಜೀವನದ ಕುರಿತು ಶ್ರೀರಾಮ ಅವರು ಹೀಗೆ ತಿಳಿಸಿದ್ದಾರೆ. "ಹಿಂದೆ ಕಾಡಿನಲ್ಲಿ ವಾಸಿಸುವಾಗ ಆನೆ, ಕರಡಿ, ಹುಲಿ, ಕಾಡೆಮ್ಮೆ ಇತ್ಯಾದಿಗಳದ್ದು ಒಂದು ಕಡೆ ಭಯವಿದ್ದರೆ, ಇನ್ನೊಂದು ಕಡೆ ಮಳೆಯನ್ನೇ ಆಶ್ರಯಿಸಿ ಬೇಸಾಯ ಮಾಡುತ್ತಿದ್ದರು. ಅವರ ವ್ಯವಸಾಯ ಅವರು ನಂಬಿರುವ ನಂಬಿಕೆ ಹಾಗೂ ಧರ್ಮಗಳಿಗೆ ಬದ್ಧವಾಗಿ ನಡೆಯುತ್ತಿತ್ತು. ಇವರ ಮುಖ್ಯ ಆಹಾರ ರಾಗಿ, ಕಾಡಿನಲ್ಲಿ ಗೆಡ್ಡೆ ಗೆಣಸು ಅಗೆಯುವುದು, ಕಾಡುಪ್ರಾಣಿಗಳನ್ನು, ಮೀನುಗಳನ್ನು, ಜೇನನ್ನು ಬೇಟೆಯಾಡುವುದು, ಹಾಗೆಯೇ ಕಾಡಿನಲ್ಲಿರುವ ೨೦ರಿಂದ ೨೫ ಗಿಡಮೂಲಿಕೆಗಳನ್ನು ಸಂಗ್ರಹಿಸಿ ಪಟ್ಟಣದಲ್ಲಿ ಮಾರಿ ಜೀವನ ನಡೆಸುತ್ತಿದ್ದರು. ಆಹಾರವನ್ನು ಎಲ್ಲಾ ಕಾಲಕ್ಕೂ ಬರುವ ಹಾಗೆ ಸಂಗ್ರಹ ಹಾಗೂ ಸಂರಕ್ಷಣೆ ಮಾಡುತ್ತಿದ್ದರು. ಇವರು ಬುಟ್ಟಿ, ರೇಷ್ಮೆಯ ತಟ್ಟೆ, ಚಂದ್ರಿಕೆ ಮುಂತಾದ ಸಾಮಾನುಗಳನ್ನು ಪೂರಕವಾಗಿ ತಯಾರಿಸುತ್ತಿದ್ದರು. ಇವರಲ್ಲಿ ಜೀತಗಾರಿಕೆಯಿತ್ತು. ಆದರೆ ನಾಗರಿಕತೆ ಬದಲಾದಂತೆ ಜೀವನ ವಿಧಾನ, ವೃತ್ತಿ, ವ್ಯವಸಾಯದಲ್ಲಿ ಇನ್ನೂ ಅನೇಕ ರೀತಿಯಲ್ಲಿ ಬದಲಾಗುವುದರ ಜೊತೆಗೆ ಸರ್ಕಾರಿ ಉದ್ಯೋಗಕ್ಕೂ ಕಾಲಿಟ್ಟಿದ್ದಾರೆ. ಹಾಗೆಯೇ ವ್ಯವಸಾಯವು ಆಧುನಿಕ ಪದ್ಧತಿಯ ಪ್ರಕಾರ ನಡೆಯುತ್ತಿದ್ದು, ಹಸುಗಳು, ಆಡು, ಕುರಿ, ಇತ್ಯಾದಿ ಪ್ರಾಣಿಗಳನ್ನು ಸಾಕುತ್ತಿದ್ದಾರೆ. ಇಲ್ಲಿ ನೋಡುವುದಾದರೆ ರಾಗಿಯು ಸೋಲಿಗರ ಮುಖ್ಯ ಬೆಳೆಯಾಗಿದೆ ಹಾಗೂ ಆಹಾರವೂ ಆಗಿದೆ."(೧೦೦೬:೬೨).

ಬೂದಿಪಡಗದ ಹಾಡಿಯಲ್ಲಿರುವ ಕೆಲವು ಸೋಲಿಗರಿಗೆ ಸರ್ಕಾರದ ವತಿಯಿಂದ ಒಂದು ಕುಟುಂಬಕ್ಕೆ ೩ರಿಂದ ೪ ಎಕರೆ ಜಮೀನನ್ನು ವಿತರಿಸಲಾಗಿದೆ. ಈ ಜಮೀನುಗಳಲ್ಲಿ ಇವರು ಹುಣಸೆ ಹಣ್ಣಿನ ಮರಗಳನ್ನು ಬೆಳೆಸಿ ವರ್ಷಕ್ಕೆ ಒಂದು ಮರದಿಂದ ೪ರಿಂದ ೫ ಕ್ವಿಂಟಾಲ್ ಹುಣಸೆಹಣ್ಣನ್ನು ಪಡೆಯುತ್ತಾರೆ. ಒಂದು ಕ್ವಿಂಟಾಲ್ ಹುಣಸೆಹಣ್ಣಿಗೆ ರೂ. ೬೦೦ರಿಂದ ರೂ. ೯೦೦ವರೆಗೆ ಮಾರಿ ಹಣ ಗಳಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಇವರು ತಮ್ಮ ಜಮೀನಿನಲ್ಲಿ ಹೂವಿನ ಬೇಸಾಯವನ್ನು ಮಾಡುವುದುಂಟು. ಹೂವಿನ ಬೇಸಾಯವೆಂದರೆ ಪಕ್ಕದಲ್ಲಿರುವ ತಮಿಳುನಾಡಿನ ತೋಟಗಾರಿಕೆ ಇಲಾಖೆ ಯವರು ಅಥವಾ ಸುಗಂಧ ದ್ರವ್ಯಗಳನ್ನು ತಯಾರಿಸುವ ಕಾರ್ಖಾನೆಯವರು ಧನಸಹಾಯ ಮಾಡಿ ಮಲ್ಲಿಗೆ, ಚೆಂಡು, ಕನಕಾಂಬರ ಹೂವಿನ ಬೇಸಾಯವನ್ನು ಮಾಡುತ್ತಿದ್ದಾರೆ. ಇಲ್ಲಿನ ಸೋಲಿಗರ ಕೆಲವು ಮಹಿಳೆಯರು ಹಸು ಮತ್ತು ಕುರಿಗಳನ್ನು ಬೇರೆಯವರಿಂದ ಪಡೆದು ಅವುಗಳನ್ನು ಬಾಡಿಗೆಗಾಗಿ ಮೇಯಿಸುತ್ತಾರೆ. ಇವುಗಳನ್ನು ಮೇಯಿಸಲು ದಿನವೊಂದಕ್ಕೆ ೧ ಹಸುವಿಗೆ ೧ ರೂ.ನಂತೆ ವರ್ಷಕ್ಕೆ ೩೫೦ರಿಂದ ೪೫೦ ರೂ.ಗಳನ್ನು ಪಡೆಯುತ್ತಾರೆ.

ಬೆರಳೆಣಿಕೆಯಷ್ಟು ಸೋಲಿಗರು ಸರ್ಕಾರದ ಕೆಲಸಗಳಿಗೆ ಸೇರಿಕೊಂಡಿದ್ದಾರೆ. ೯ನೇ ತರಗತಿವರೆಗೆ ಓದಿದ ನಂತರ ಅರಣ್ಯ ಇಲಾಖೆಯಲ್ಲಿ ವನಪಾಲಕ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಾ ಹಾಗೂ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ನಡೆಯುವ ಆಶ್ರಮ ಶಾಲೆಗಳಲ್ಲಿ ಹಾಗೂ ವಿದ್ಯಾರ್ಥಿ ನಿಲಯಗಳಲ್ಲಿ ಅಡುಗೆ, ಅಡುಗೆ ಸಹಾಯಕರು, ರಾತ್ರಿ ಕಾವಲುಗಾರರಾಗಿ, ದಿನಗೂಲಿ ಹಾಗೂ ಖಾಯಂ ನೌಕರರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕೆಲವು ಸೋಲಿಗರು ಕಾಡಿನ ಅಂಚಿನಲ್ಲಿ ದೊರೆಕುವ ಒಣ ಕಟ್ಟಿಗೆಗಳನ್ನು ಮಾರಿ ಜೀವನ ನಡೆಸುತ್ತಿದ್ದಾರೆ. ಅಭಯಾರಣ್ಯದ ಒಳಗೆ ಹಾಗೂ ಹೊರಗಿನ ಸಾವಿರಾರು ಜನರು ಉರುವಲಿಗಾಗಿ ೫೬೦ ಚ.ಕಿ.ಮೀ. ವಿಸ್ತೀರ್ಣದ ಕಾಡನ್ನೇ ಅವಲಂಬಿಸಿದ್ದಾರೆ.

ಅಭಯಾರಣ್ಯದ ಅಂಚಿನ ಕಾಡಲ್ಲಿ ಜನವಸತಿ ಹೇರಳವಾಗಿರುವುದರಿಂದ ಆ ಪ್ರದೇಶದಲ್ಲಿ ಶೇ. ೮೭ರಷ್ಟು ಉರುವಲು ಸಂಗ್ರಹಣೆಯಾಗುತ್ತದೆ. ಇಲ್ಲಿ ವರ್ಷಕ್ಕೆ ಸುಮಾರು ೫೦ ಟನ್‌ಗಳಷ್ಟು ಸೌದೆಗೆ ಬೇಡಿಕೆ ಇದೆ. ಸಹಜವಾಗಿಯೇ ಅತಿಯಾದ ಪ್ರಮಾಣದಲ್ಲಿ ಉರುವಲನ್ನು ಸಾಗಿಸುವ ಪ್ರಯತ್ನಗಳು ನಡೆಯುತ್ತವೆ. ಅಂದರೆ ದಿನಕ್ಕೆ ಸರಾಸರಿ ೩೦ ಕೆ.ಜಿ.ಯಷ್ಟು ಉರುವಲನ್ನು ಸಂಗ್ರಹಿಸಿ ೧ ಕಟ್ಟಿಗೆಗೆ ರೂ. ೫೦ರಿಂದ ೧೦೦ ರೂ.ರಂತೆ ಹಣ ಸಂಗ್ರಹಿಸುತ್ತಾರೆ.

ಸೋಲಿಗರ ಮುಖ್ಯ ವೃತ್ತಿ ಬೇಸಾಯ ಶೇ. ೯೭ ಭಾಗದ ಕುಟುಂಬಗಳು ವ್ಯವಸಾಯ ಒಂದು ಮುಖ್ಯ ಕಸುಬೆಂದು ಇದನ್ನು ವೃತ್ತಿಯನ್ನಾಗಿ ಮಾಡುತ್ತಿವೆ. ಆರ್ಥಿಕಾಧಾರಿತ ಯೋಜನೆಗಳ ಜೊತೆಗೆ ಅಥವಾ ಅದಕ್ಕೆ ಪೂರಕವಾಗಿ ಪೂರ್ವದಲ್ಲಿಯೇ ಆ ಜನರನ್ನು ಸಜ್ಜುಗೊಳಿಸುವುದು ಮುಖ್ಯವಾಗಿದೆ ಅಂದರೆ–

- ➢ ಆಧುನೀಕತೆಯ ವೈಪರೀತ್ಯದಿಂದಾಗಿ ಕೀಳರಿಮೆಗೆ ಒಳಗಾದ ಸಮುದಾಯಕ್ಕೊಂದು ಅನನ್ಯತೆ ಹಾಗೂ ವೈಶಿಷ್ಟತೆ ಇದೆ ಎಂಬುದನ್ನು ಮನಗಾಣಿಸುವ ಕೆಲಸ ಆಗಬೇಕು. ಅವರ ಪರಂಪರೆಯ ಆಹಾರ, ಆರೋಗ್ಯ, ನ್ಯಾಯ ಪರಿಸ್ಥಿತಿ, ಆಡಳಿತ, ವ್ಯವಸ್ಥೆ ನಿಸರ್ಗದ ಬಗೆಗಿನ ಪರಿಭಾವನೆ ಮುಂತಾಗಿ ಅವರ ಆರೋಗ್ಯಕರ ಮೌಲ್ಯಗಳನ್ನು ಗುರುತಿಸುವಂತಹ ಜ್ಞಾನ ಪರಂಪರೆಗಳ ಶೋಧ ಆಗಬೇಕು. ಆ ಮೂಲಕ ಅವರ ಅನನ್ಯತೆಯನ್ನು ಮನಗಾಣಿಸಬೇಕು.
- ➢ ಈ ಅನನ್ಯತೆ ಮತ್ತು ವೈಶಿಷ್ಟ್ಯತೆಯ ಕಾರಣಕ್ಕಾಗಿ ಈ ನಾಡಿನ ಚರಿತ್ರೆಯಲ್ಲಿ ತಮಗೂ ಪ್ರಧಾನ ಪಾತ್ರವಿದೆ ಎಂಬ ಅರಿವಿನಲ್ಲಿ ಸ್ವಾಭಿಮಾನಿಗಳಾಗುವಂತೆ ಮಾಡಿ ತಾವು ಯಾರಿಗೂ ಕಡಿಮೆ ಇಲ್ಲ ಎಂಬ ಎಚ್ಚರ ಮಾಡುವ ಕಾರ್ಯಕ್ರಮಗಳನ್ನು ರೂಪಿಸಬೇಕು.

ಅಂದರೆ ಇಲ್ಲಿ ಮುಖ್ಯವಾಗಿ ಆಗಬೇಕಾದುದು ತಮ್ಮ ಮೇಲ್‌ಸ್ತರದಲ್ಲಿರುವ ಮೇಲು ವರ್ಗದವರ ಅಥವಾ ಭೂಮಾಲೀಕರ ಬದುಕಿಗಿಂತ ತಮ್ಮದು ಸ್ವಚ್ಛಂದವಾದ ಮತ್ತು ಸುಂದರವಾದ ಬದುಕು ಎಂಬುದನ್ನು ಮನಗಾಣಿಸುವ, ಆತ್ಮವಿಶ್ವಾಸ ತುಂಬುವ ಕಾರ್ಯಯೋಜನೆಗಳು ರೂಪುಗೊಳ್ಳಬೇಕು.

- ಬಹುಸಂಖ್ಯಾಂತರಿಂದ ಭೂಮಾಲೀಕರಿಂದ, ಅಧಿಕಾರಿಗಳಿಂದ ಬುಡಕಟ್ಟುಗಳನ್ನು ರಕ್ಷಿಸುವ ಸೂಕ್ತ ಕಾನೂನುಗಳ ರಚನೆಯಾಗಬೇಕು.
- ಬುಡಕಟ್ಟುಗಳ ಸಾಂಸ್ಕೃತಿಕ ವೈಶಿಷ್ಟ್ಯಗಳ ರಕ್ಷಣೆ ಆಗಬೇಕು. ಅಂದರೆ ಅವರ ಭಾಷೆ, ಮೌಖಿಕ ಸಾಹಿತ್ಯ, ದೈವಾರಾಧನೆ, ಹಬ್ಬದ ಆಚರಣೆ, ಉಡುಗೆ–ತೊಡುಗೆ, ಕಲೆ ಹಾಗೂ ವಾಸ್ತುಶಿಲ್ಪಗಳನ್ನು ಆಧುನಿಕ ಸ್ವರೂಪದ ಸ್ಪರ್ಶ ನೀಡಿ ಉಳಿಸಿಕೊಳ್ಳುವಂತಾಗಬೇಕು. ಇದ್ದ ಹಾಗೆ ಇರಬೇಕೆಂಬ ಹಟವೂ ಬೇಕಾಗಿಲ್ಲ. ಸಮುದಾಯದ ಅಭಿವೃದ್ಧಿಗೆ ತಕ್ಕಂತೆ ಬದಲಾಗುತ್ತಲೇ ಅವು ಉಳಿಯುವಂತೆ ಕ್ರಮ ಗಳನ್ನು ಕೈಗೊಳ್ಳಬೇಕು. ಅಂದರೆ ಅವರ ಅನನ್ಯತೆಯನ್ನು ಕಾಪಾಡಿಕೊಂಡು ಆಧುನಿಕತೆಯನ್ನು ರೂಢಿಸಿಕೊಳ್ಳುವಂತೆ ಆಗಬೇಕು.
- ಸರಕಾರ ಅವರಿಗಾಗಿ ರೂಪಿಸಿರುವ ಯೋಜನೆಗಳನ್ನು ಅವರ ಮಧ್ಯೆಯೇ ರೂಪಿಸಬೇಕು. ಅವುಗಳ ಸಾಧಕ ಬಾಧಕಗಳನ್ನು ಕಾಯ್ದು ನೋಡಿ, ಮರುಪರಿಶೀಲಿಸಿ, ಪುನರ್‌ವಿಮರ್ಶಿಸಿ ಅಂತಿಮವಾಗಿ ಜಾರಿಗೆ ತರಬೇಕು. ಹಾಗೆ ತಾಳ್ಮೆಯಿಂದ ರೂಪಿಸಿದ ಯೋಜನೆಗಳು ಅವರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಅವರ ಅನನ್ಯತೆ ರಕ್ಷಣೆಗೂ ಕಾರಣವಾಗುತ್ತದೆ.

ಸೋಲಿಗರು ಬೇಸಾಯವನ್ನು ತುಂಬಾ ಇಷ್ಟಪಡುತ್ತಾರೆ. ತಮಗೆ ಒಂದಿಷ್ಟು ಭೂಮಿ ಬೇಕು ಎನ್ನುವುದು ಅವರ ಆಸೆ ಹಾಗೂ ಆ ಭೂಮಿಯಲ್ಲಿ ರಾಗಿಯನ್ನು ಇತರೆ ಕಾಳುಗಳು, ಮಿಶ್ರ ಬೇಸಾಯದ ಕ್ರಮದಲ್ಲಿ ವ್ಯವಸಾಯ ಮಾಡುವುದು ಕಂಡು ಬರುತ್ತದೆ. ಕಿರು ಅರಣ್ಯ ಉತ್ಪಾದನೆ ಸಂಗ್ರಣೆ, ವಲಸೆ ಪದ್ಧತಿ, ಕೂಲಿ ಆಳುಗಳಾಗಿ ದುಡಿಯುವುದು ಈ ಎಲ್ಲಾ ವ್ಯವಸ್ಥೆಯೊಳಗೆ ತಮ್ಮ ಬದುಕನ್ನು ಕಟ್ಟಿಕೊಂಡು ಬಾಳುವುದನ್ನು ಕಾಣಬಹುದು. ಸೋಲಿಗರ ಪೋಡು, ದೊಡ್ಡಿ, ಕಾಲೋನಿಗಳಲ್ಲಿ ಪ್ರಸ್ತುತ ದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿದಾಗ ಈ ಕೆಳಗಿನಂತೆ ಸೋಲಿಗ ಸಮುದಾಯದಲ್ಲಿ ಪ್ರತಿಯೊಂದು ಕುಟುಂಬದಲ್ಲಿನ ಆದಾಯವನ್ನು ತಿಳಿಯಲಾಗಿದೆ. ಹೊಸ ಪೋಡು ಮುತ್ತುಗದ ಗದ್ದೇ ಪೋಡು, ಯರಕನಗದ್ದೆ ಪೋಡು, ಕನ್ನೇರಿ ಕಾಲೋನಿ, ಮದ್ದೂರು ಕಾಲೋನಿ ಚೆನ್ನಮಲ್ಲಿಪುರ ಚೆನ್ನಿಕಟ್ಟೆ, ಕಾರೆಮಾಳ ಕೆರೆದಿಂಬ, ಗೊಂಬೆಗಲ್ಲು ಪೋಡುಗಳನ್ನು ಆಯ್ಕೆ ಮಾಡಿಕೊಂಡು ಒಟ್ಟು ೩೨೪ ಕುಟುಂಬಗಳು, ಅವುಗಳಲ್ಲಿ ಜನಸಂಖ್ಯೆ ೧೭೩೦ ಮಹಿಳೆಯರು ೮೬೬, ಪುರುಷರು ೮೬೪ ಇವರುಗಳಲ್ಲಿ ಸೋಲಿಗರ ಆದಾಯ ವ್ಯವಸಾಯ, ಕಿರುಅರಣ್ಯ ಉತ್ಪಾದನೆ, ಕೂಲಿ ಇತರೆ ಮೂಲಗಳಿಂದ ವಾರ್ಷಿಕವಾಗಿ ಎಷ್ಟು ಆದಾಯವನ್ನು ಪಡೆಯುತ್ತಾರೆ ಎಂಬುದರ ಬಗ್ಗೆ ಪೋಡುಗಳಲ್ಲಿನ ಆರ್ಥಿಕ ಮೂಲಭೂತ ಸೌಲಭ್ಯಗಳನ್ನು ತಿಳಿಯುವ ಸಲುವಾಗಿ ಅಧ್ಯಯನಕ್ಕೆ ಸಂಬಂಧಿಸಿದ ಮಾಹಿತಿಯ ವಿವರ.

**ಕೋಷ್ಟಕ ೪.೪.೧. ಸೋಲಿಗರು ಕಸುಬುಗಳಿಂದ ಗಳಿಸುವ ವಾರ್ಷಿಕ ಆದಾಯ**

| ಕ್ರಸಂ | ಆದಾಯ | ಆವರ್ತನ | ಶೇ. |
|---|---|---|---|
| ೧ | ೧,೦೦೦–೫,೦೦೦ | ೧೦೩ | ೩೧.೧೮ |
| ೨ | ೫,೦೦೧–೧೦,೦೦೦ | ೮೫ | ೨೬.೨೩ |
| ೩ | ೧೦,೦೦೧–೧೫,೦೦೦ | ೪೪ | ೧೩.೫೮ |
| ೪ | ೧೫,೦೦೦೧–೨೦,೦೦೦ | ೨೧ | ೬.೪೮ |
| ೫ | ೨೦,೦೦೦೧–೨೫,೦೦೦ | ೧೯ | ೫.೮೬ |
| ೬ | ೨೫,೦೦೦೧–೩೦,೦೦೦ | ೧೬ | ೪.೯೩ |
| ೭ | ೩೦,೦೦೦೧–೩೫,೦೦೦ | ೧೩ | ೪.೩೧ |
| ೮ | ೩೫,೦೦೦೧–೪೦,೦೦೦ | ೮ | ೨.೬೬ |
| ೯ | ೪೦,೦೦೦೧–೫೦,೦೦೦ | ೬ | ೧.೮೫ |
| ೧೦ | ೫೦,೦೦೦–೧,೦೦,೦೦೦ | ೫ | ೧.೬೦ |
| ೧೧ | ೧,೦೦,೦೦೧ ಮೇಲೆ | ೪ | ೧.೨೩ |
| | | ೩೨೪ | ೧೦೦.೦೦ |

**ವೃತ್ತಚಿತ್ರ ೪.೪.೧. ಸೋಲಿಗರು ಕಸುಬುಗಳಿಂದ ಗಳಿಸುವ ವಾರ್ಷಿಕ ಆದಾಯ ಪ್ರಮಾಣ**




ಮೇಲಿನ ಕೋಷ್ಟಕ ಹಾಗೂ ವೃತ್ತಚಿತ್ರದಲ್ಲಿ ಕಂಡುಬರುವಂತೆ ಸೋಲಿಗರು ವಿವಿಧ ಕಸುಬುಗಳಿಂದ ಗಳಿಸುವ ವಾರ್ಷಿಕ ಆದಾಯವನ್ನು ಕ್ಷೇತ್ರಕಾರ್ಯದಲ್ಲಿ ನೀಡಿರುವ ಮಾಹಿತಿಗಳನ್ವಯ ರೂ. ೧೦೦೦-೫೦೦೦ವರೆಗೆ ವಾರ್ಷಿಕ ಆದಾಯ ಪಡೆಯುವ ಕುಟುಂಬಗಳು ಶೇ. ೩೧.೧೮ರಷ್ಟಿದ್ದು, ರೂ. ೫೦೦೦-೧೦೦೦೦ವರೆಗೆ ವಾರ್ಷಿಕ ಆದಾಯ ಪಡೆಯುವ ಕುಟುಂಬಗಳು ಶೇ. ೨೬.೨೩ರಷ್ಟು ಹಾಗೂ ರೂ. ೧೦೦೦೧-೧೫೦೦೦ವರೆಗೆ ವಾರ್ಷಿಕ ಆದಾಯ ಪಡೆಯುವ ಕುಟುಂಬಗಳು ಶೇ. ೧೩.೫೮ರಷ್ಟು ಮತ್ತು ೧೫೦೦೧ರಿಂದ ೨೫೦೦೦ ರೂ.ಗಳವರೆಗಿನ ಶೇ.೧೩ರಷ್ಟಿರುವುದು ಕಂಡುಬಂದರೆ ರೂ. ೩೫೦೦೧ರಿಂದ ೧೦೦೦೦೦ ರವರೆಗೆ ಹೊಂದಿರುವ ಕುಟುಂಬಗಳು ಶೇ. ೨ರಷ್ಟಿರುವುದು ಗಮನಿಸಬಹುದು. ಶೇ.೧.೨೩ರಷ್ಟು ಒಂದು ಲಕ್ಷ ಮೇಲ್ಪಟ್ಟ ಆದಾಯ ಕುಟುಂಬಗಳಾಗಿವೆ. ಹೀಗೆ ಸೋಲಿಗರು ಬುಡಕಟ್ಟು ವಾರ್ಷಿಕ ವರಮಾನದ ಗಳಿಕೆ ಕಡಿಮೆ ಇರುವುದನ್ನು ಅವಲೋಕಿಸಿದಾಗ ಮೊದಲನೆಯದಾಗಿ ಭೂಮಿಯ ಸಮಸ್ಯೆ, ಅಲ್ಪಸ್ವಲ್ಪ ಭೂಮಿ ಹೊಂದಿದ ಕುಟುಂಬಗಳಿದ್ದರು ಮಳೆಯಾಶ್ರಿತ ವ್ಯವಸಾಯವಾಗಿದೆ. ಹೆಚ್ಚಿನ ಕುಟುಂಬಗಳು ಕೂಲಿ ಮತ್ತು ವಲಸೆ ಕೂಲಿಗಳನ್ನಾಧರಿಸಿ ಜೀವಿಸುವಂತಹ ಬದುಕನ್ನು ಕಟ್ಟಿಕೊಂಡಿದ್ದಾರೆ. ಇವರ ಕಡಿಮೆ ಆರ್ಥಿಕ ಮೂಲವನ್ನು ಗಮನಿಸಿ ಸರ್ಕಾರವು ಸೋಲಿಗರಿಗೆ ವರ್ಷದಲ್ಲಿ ಆರು ತಿಂಗಳ ಕಾಲ ಪೌಷ್ಟಿಕ ಆಹಾರವನ್ನು ನೀಡುತ್ತಿದೆ. ಬಿಡುದಿನಗಳಲ್ಲಿ ಸಿಗುವ ಕೂಲಿ ಕೆಲಸಗಳನ್ನು ಮಾಡುತ್ತಾ ಬಂದ ಹಣವು ಉಳಿತಾಯ ಮಾಡುವ ಗೊಜಿಗೆ ಹೋಗದೆ ಪ್ರಸ್ತುತ ದಿನಗಳಲ್ಲಿ ಮದ್ಯಪಾನ ಮಾಡುವ ಮೂಲಕ ಬಂದತಹ ಹಣವನ್ನು ವ್ಯಯ ಮಾಡುತ್ತಾರೆ. ಈ ಹಿನ್ನೆಲೆಯಲ್ಲಿ ಇವರ ವಾರ್ಷಿಕ ವರಮಾನದ ಪ್ರಮಾಣ ಕಡಿಮೆ ಇರುವುದು ಮೂಲ ಕಾರಣವಾಗಿದೆ. ಅರಣ್ಯ ಇಲಾಖೆ, ಇತರೆ ಕೆಲಸಗಳಲ್ಲಿ ತೊಡಗಿಸಿಕೊಂಡ ಕೆಲವು ಕುಟುಂಬಗಳ ವಾರ್ಷಿಕ ವರಮಾನ ಉತ್ತಮವಾಗಿರುವುದು ಕಂಡುಬರುತ್ತದೆ.

**ಕೊನೆಟಿಪ್ಪಣಿ**

1. Morab S G, 1977, *The Soliga of Biligirirangana Hills*, Anthropology Survey Of India, Calcut, P. 36

2. Ibed., P. 21

3. Anantha Krishna Iyer L K, 1935, *The Mysore Tribes And Castes*, Mysore University Mysore, P. 593

4. Saradindu bose 1991, *Shifting Cultivation in India*, Director General Anthropological Survey of India, P. 261

5. Misra K K, 2016, *The Particularly Vulnerable Trible Groups in India*, Published Ajay Kumar Jain for Manohar and Dharayagana, New Delhi ASI, P. 105

೬. ಮೈತ್ರಿ ಕೆ ಎಂ, ೨೦೦೨, *ಬುಡಕಟ್ಟು ಕುಲಕಸುಬುಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೨೧

೭. Morab S G, 1977, *The Soliga of Biligirirangana Hills*, Anthropology Survey Of India, Calcutta.

೮. ಸೋಮಸುಂದರಮ್ ಎಚ್ ಎಂ, ೨೦೦೯, ಸೋಲಿಗ ಸಿರಿ, ವಿವೇಕಾನಂದ ಗಿರಿಜನ ಕಲ್ಯಾಣಕೇಂದ್ರ ಬಿಳಿಗಿರಿರಂಗನ ಬೆಟ್ಟ ಚಾಮರಾಜನಗರ, ಪು. ೯

೯. Edgar Thurston, Rangachari K, 1909 *Caste and Tribes of Southern India,* Vol.4 – 6, Asian Educational Serices, New Delhi, P.383

೧೦. ಚಂದ್ರು ಕಾಳೇನಹಳ್ಳಿ, ೨೦೦೬, *ಸೋಲಿಗರ ಸಂಸ್ಕೃತಿ,* ಕರ್ನಾಟಕ ಜನಪದ ಅಕಾಡೆಮಿ, ಬೆಂಗಳೂರು, ಪು. ೬೯

೧೧. Morab S G, 1977, *The Soliga of Biligirirangana Hills*, Anthropology Survey Of India, Calcutta, P.36

೧೨. Sharma S S P, K Raju K B, Sabhyasa G Sarkar, 2009, Growing Rural-Urban Disparity in Gujarat, Serials Publication, New Delhi, P.8

ಅಧ್ಯಾಯ ಐದು

# ಸೋಲಿಗರು ಬುಡಕಟ್ಟಿನ ಧಾರ್ಮಿಕ ಹಿನ್ನೆಲೆ

೫.೧. ಪ್ರಕೃತಿ ಧರ್ಮ

೫.೨. ಹಿರಿಯರ ಆರಾಧನೆ

೫.೩. ಶೈವ ಧರ್ಮ

೫.೪. ವೈಷ್ಣವ ಧರ್ಮ

ಅಧ್ಯಾಯ ಐದು

# ಸೋಲಿಗರು ಬುಡಕಟ್ಟಿನ ಧಾರ್ಮಿಕ ಹಿನ್ನೆಲೆ

ಇಂದು ಜಗತ್ತಿನಲ್ಲಿ ಅತ್ಯಂತ ಹೆಚ್ಚು ಪ್ರಭಾವ ಶಕ್ತಿ ಎಂದರೆ ದೈವೀಕಶಕ್ತಿ. ಕೆಲವು ಧರ್ಮಗಳಲ್ಲಿ ಒಂದೇ ದೇವರು ಇರುವುದರಿಂದ ಆ ದೈವವನ್ನು ನೆನೆಯುವುದು, ಆರಾಧಿಸುವುದು, ಅದರ ಹೆಸರಲ್ಲಿ ಹಬ್ಬ–ಉತ್ಸವ–ಜಾತ್ರೆ ನೆರವೇರಿಸುವುದು ಸಹಜ. ಈ ಸಾಲಿಗೆ ಕ್ರೈಸ್ತ, ಇಸ್ಲಾಂ, ಜೈನ, ಬೌದ್ಧ, ಸಿಖ್, ಪಾರ್ಸಿ ಇವೇ ಮುಂತಾದ ಧರ್ಮಗಳನ್ನು ಹೆಸರಿಸುವುದು ಸಹಜ. ಹಿಂದು ಧರ್ಮದಲ್ಲಿ ಹಾಗೆ ಹೇಳುವುದು ಸಾಧ್ಯವಿಲ್ಲ. ಏಕೆಂದರೆ ಮುಕ್ಕೋಟಿ ದೈವಗಳು ಬರುತ್ತವೆ. ಇನ್ನು ಮುಂದುವರಿದು ಮೂವತ್ತಮೂರು ಕೋಟಿ ದೈವಗಳು ಎಂಬ ಉಲ್ಲೇಖವು ಬರುತ್ತದೆ. ಹಲವಾರು ವೈರುಧ್ಯಗಳ ನಡುವೆಯು ಸಂದುಹೋದ ಸಾಧು, ಸಂತರು, ಋಷಿಮುನಿಗಳು, ತಪಸ್ವಿಗಳು, ಮಹಾಜ್ಞಾನಿಗಳು, ಮಹಾತ್ಮರು, ತಮ್ಮ ತ್ಯಾಗ ಮತ್ತು ಸಾಧನೆಯ ಫಲವಾಗಿ ಅಪಾರವಾದ ಜ್ಞಾನವನ್ನು ಮಹತ್ವದ ಜೀವನ ತತ್ವಗಳನ್ನು ಕೊಟ್ಟುಹೋಗಿದ್ದಾರೆ.

ಅನಂತಶರ್ಮರವರು ಬರೆದಿರುವ ಧರ್ಮಾನ್ವೇಷಣೆಯಲ್ಲಿ ಸೋಲಿಗ ಸಮುದಾಯಲ್ಲಿ ಒಟ್ಟಿಗೆ ಜೀವನ ನಡೆಸುವುದನ್ನು ಉಲ್ಲೇಖಿಸಲಾಗಿದೆ. ಕುಲದಲ್ಲಿ ಎಲ್ಲರೂ ಒಂದೇ ನಿಲುವನ್ನು ತೆಗೆದುಕೊಂಡು ತಮ್ಮ ವೈಯಕ್ತಿಕ ನಿಲುವಿಗಿಂತ ಸಮುದಾಯದ ನಿಲುವಿಗೆ ಹೆಚ್ಚಿನ ಮಹತ್ವ ಕೊಡುತ್ತಾರೆ ಅದುವೇ ಧರ್ಮದ ಲಕ್ಷಣವಾಗಿದೆ. ಆದುದರಿಂದ ಧರ್ಮ ಎಂದರೆ ಅದೊಂದು ವ್ಯವಸ್ಥೆ. ಸಕಲ ಜೀವ ರಾಶಿಗಳು, ಪ್ರಾಣಿ ಪಕ್ಷಿಗಳು ಒಟ್ಟಾಗಿ ಕೂಡಿ ಬಾಳಬೇಕು, ನಾವೂ ಬದುಕಬೇಕು ಇತರರನ್ನು ಬದುಕಿಸಬೇಕು ಎಂಬ ಆಶಾಭಾವನೆಯೊಂದಿಗೆ ಪ್ರಕೃತಿಯ ಮಡಿಲಿನಲ್ಲಿ ಬದುಕನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿರುವವರು ಸೋಲಿಗರು. ಇದುವೇ ಅವರು ಪಾಲಿಸಿಕೊಂಡು ಬರುತ್ತಿರುವ ಧರ್ಮವಾಗಿದೆ.

"ರೆಡ್ ಫಿಲ್ಡ್ ವರ್ಣಿಸುವ ಜನಪದ ಸಮಾಜ ಚಿಕ್ಕ ಗಾತ್ರದ, ಪ್ರತ್ಯೇಕವಾಗುಳಿದ, ಅನಕ್ಷರಸ್ಥರಿಂದ ಕೂಡಿದೆ. ಸಮಾನ ಗುಣಲಕ್ಷಣವುಳ್ಳ ಮತ್ತು ಪ್ರಬಲವಾದ ಏಕತಾ ಭಾವನೆ ಇರುವ ಸಮಾಜ. ಪರಂಪರಾನುಗತ ವರ್ತನೆ, ಬಂಧು–ಬಳಗದ ಪ್ರಾಬಲ್ಯ, ಲೌಖಿಕಕಿಂತ ಧಾರ್ಮಿಕಕ್ಕೆ ಹೆಚ್ಚು ಮರ್ಯಾದೆ, ಮಾರುಕಟ್ಟೆಗಳಿಲ್ಲದ ಸರಳ ಆರ್ಥಿಕತೆ, ಸ್ಥಾನಮಾನಕ್ಕೆ ಎಲ್ಲಿಲ್ಲದ ಗೌರವ, ಕಾಯ್ದೆಗಳ ಬದಲು ರೂಢಿಗಳ ಬಳಕೆ"[೧] ಇವೆಲ್ಲಾ ಅದರ ಪ್ರಮುಖ ಲಕ್ಷಣಗಳು. 'ಲಿಟ್ಲ್ ಕಮ್ಯೂನಿಟಿ' ಎಂಬ (೧೯೫೫) ಗ್ರಂಥದಲ್ಲಿ ಈ ಗುಂಪಿಗೆ ಸೇರಿದ ಕಿರು ಸಮುದಾಯಗಳನ್ನು ವರ್ಣಿಸಿದ್ದಾರೆ. ಈ ಎಲ್ಲಾ ಕಿರು ಸಮುದಾಯಗಳು ಕಾಲಕ್ರಮೇಣ ಸಾಮಾಜಿಕ ಪರಿವರ್ತನೆ ಮತ್ತು ಸಾಂಸ್ಕೃತಿಕ ವಿಘಟನೆಗೆ ಒಳಗಾಗಬಹುದು ಎಂದಿದ್ದಾರೆ. ಈ ಮೇಲಿನ ಬರಹಗಳನ್ನು ತಿಳಿದಾಗ ಸೋಲಿಗರು ಸರಳ ಜೀವನ, ಸರಳ ಆರ್ಥಿಕ

ವ್ಯವಸ್ಥೆ, ಪ್ರಕೃತಿಯೊಡಗಿನ ಧಾರ್ಮಿಕ ನಂಬಿಕೆ, ಅವರದೇ ಆದ ರೂಢಿ ಸಂಪ್ರದಾಯಗಳು ಎಲ್ಲವೂ ಸೋಲಿಗರ ಕಿರು ಸಮುದಾಯವನ್ನು ತಿಳಿಸುತ್ತದೆ. ಭೌಗೋಳಿಕವಾಗಿ ಗುರುತಿಸಬಲ್ಲ ತಮ್ಮದೇ ಆದ ಪ್ರದೇಶಗಳ ವಿಶಿಷ್ಟತೆಗಳಿಂದ ಕೂಡಿದ್ದಾರೆ. ಸೋಲಿಗರ ಕೆಲಸ ಮತ್ತು ಕಾರ್ಯಚಟುವಟಿಕೆಯಲ್ಲಿ ಸಮರೂಪತೆ ಇದೆ. ಹುಟ್ಟಿನಿಂದ ಸಾಯುವವರೆಗಿನ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಂತಹ ಸ್ವಯಂ ಪರಿಪೂರ್ಣತೆ ಪಡೆದುಕೊಂಡಿದ್ದಾರೆ. ಅದೇ ರೀತಿಯಲ್ಲಿ ಕಾಡಿನಿಂದ ನಾಡಿನತ್ತ ಸ್ಥಳಾಂತರ ಗೊಂಡ ನಂತರದಲ್ಲಿ ಸೋಲಿಗರು ಸ್ವಲ್ಪ ಪ್ರಮಾಣದಲ್ಲಿ ಸಾಮಾಜಿಕ ಪರಿವರ್ತನೆಗೆ, ಬದಲಾವಣೆಗೆ ಒಳಗಾಗಿತ್ತಿರುವುದು ಕಂಡುಬರುತ್ತಿದೆ.

ಸೋಲಿಗರ ಸರಳ ಜೀವನ, ಸಹಬಾಳ್ವೆ, ಹಂಚಿಕೊಂಡು ತಿನ್ನುವ ಪದ್ಧತಿ ರೂಢಿಯಲ್ಲಿದೆ. ಪ್ರಕೃತಿಯ ಎಲ್ಲ ಜೀವ ರಾಶಿಗಳಲ್ಲಿಯೂ ದೇವರನ್ನು ಕಾಣುವ ಗುಣ ಇವರಲ್ಲಿದೆ. ಪ್ರಾಣಿ ಪಕ್ಷಿಗಳನ್ನು ತಮ್ಮ ದೇವರೆಂದು ಪೂಜಿಸುವ ಸೋಲಿಗರು ಪ್ರಕೃತಿ ಆರಾಧಕರು, ಪ್ರಕೃತಿ ಮಕ್ಕಳು, ಪ್ರಕ್ರತಿಯನ್ನೇ ತಮ್ಮ ದೇವರೆಂದು ಪೂಜಿಸುತ್ತಾರೆ ಮಾನವ ತನ್ನ ಅಲೆಮಾರಿ ಜೀವನವನ್ನು ಕೈಬಿಟ್ಟು ಒಂದು ಕಡೆ ನೆಲೆ ನಿಂತು ಪ್ರಕೃತಿಯನ್ನು ಪೂಜಿಸಲು ಆರಂಭಿಸಿದ. ಮೂಲದಲ್ಲಿ ಪ್ರಕೃತಿಯ ಆರಾಧನೆ, ದೈವರಾಧನೆ ಯನ್ನು ಕಟ್ಟುನಿಟ್ಟಾಗಿ ಆಚರಿಸಿಕೊಂಡ ಬುಡಕಟ್ಟುಗಳು ಕಾಲ ಕ್ರಮೇಣ ಇತರ ಜಾತಿ- ಧರ್ಮಗಳ ಪ್ರಭಾವದಿಂದ ಇತರ ಕೆಲವು ದೇವರುಗಳನ್ನು ಪೂಜಿಸಲು ಆರಂಭಿಸಿದರು. ಬಹು ಸಂಸ್ಕೃತಿಯ ಮಿಲನದಿಂದ ಅನೇಕ ಹಬ್ಬದಾಚರಣೆಗಳು ದ್ವಿಮುಖಗೊಂಡರೂ ಸಹ ಕೆಲವೊಂದು ಮೂಲ ಆಚರಣೆಗಳು ಸೋಲಿಗರಲ್ಲಿ ಉಳಿದಿರುವುದನ್ನು ಕಾಣಬಹುದಾಗಿದೆ. ಆದಿ ಕಾಲದಿಂದಲೂ ಸೋಲಿಗರಿಗೆ ಕಾಡು ಬದುಕಿನ ಸರ್ವಸ್ವದ ನೆಲೆಯಾಗಿದೆ. ಸೋಲಿಗರು ಅವರ ಪೂರ್ವಜರನ್ನು ಮತ್ತು ಭೂತ ಪ್ರೇತಗಳನ್ನು ಪೂಜಿಸುತ್ತಾರೆ. ಶಕ್ತಿ ರೂಪದ ಆತ್ಮಗಳಲ್ಲಿ ನಂಬಿಕೆಯನ್ನು ಇಟ್ಟಿರುವಂತಹವರು. ಸೋಲಿಗರಲ್ಲಿರುವ ಆಚರಣೆಗಳು ಇವರ ದೈವಾರಾಧನೆಗೆ ಸಾಕ್ಷಿಯಾಗಿವೆ.

ಶಿವನು ಬಹುತೇಕ ಬುಡಕಟ್ಟುಗಳ ಆರಾಧ್ಯ ದೈವ. ಸೋಲಿಗರು ಸೂರ್ಯ, ಚಂದ್ರ, ತಾರಕ್ಕಿಯನ್ನು ಪೂಜಿಸುವಂತೆ ಶಿವನನ್ನೂ ಪೂಜಿಸುತ್ತಾರೆ. ಶಿವೋಪಾಸನೆ ಬಹಳ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಶೈವಾರಾಧನೆಯು ಇಂದಿಗೂ ದೇಶದ ಬಹುತೇಕ ಬುಡಕಟ್ಟುಗಳಲ್ಲಿ ಕಾಣಬರುತ್ತದೆ.

ಸೋಲಿಗರಲ್ಲಿ ದೈವಾರಾಧನೆಯು ಸಾಮಾಜಿಕ ಜೀವನದ ಒಂದು ಪ್ರಮುಖ ಅಂಗವಾಗಿದೆ. ಇವರ ಜೀವನ ಕಾಡಿನ ಪರಿಸರ, ಪ್ರಾಣಿ, ಪಕ್ಷಿ, ಕಾಡಿನ ಸಕಲ ಜೀವ ರಾಶಿಗಳಿಂದ ಹಿಡಿದು, ವ್ಯವಸಾಯ, ಕಿರು ಅರಣ್ಯ ಉತ್ಪಾದನೆ, ಜೇನು ಬೇಟೆ ಇತ್ಯಾದಿಯಗಿ ಸೋಲಿಗರ ಕಸುಬಿಗೆ ಸಂಬಂಧಿಸಿದಂತೆ ದೈವಾರಾಧನೆಯ ಆಚರಣೆಗಳು ನಡೆಯುತ್ತಲೇ ಇರುತ್ತವೆ. ಜಗತ್ತಿನಾದ್ಯಾಂತ ಪ್ರಾಚೀನ ಕಾಲದ ಸಮಾಜ ಮಾತೃಪ್ರಧಾನವಾಗಿತ್ತೆಂಬುದರ ಬಗ್ಗೆ ಇತಿಹಾಸಕಾರರಲ್ಲಿ, ಮಾನವಶಾಸ್ತ್ರಜ್ಞನರಲ್ಲಿ, ಸಂಸ್ಕೃತಿಯ ಶೋಧಕರಲ್ಲಿ ಸಮಾನ ಅಭಿಪ್ರಾಯಗಳಿವೆ. ಮಾತೃಪ್ರಧಾನ ಸಮಾಜದಿಂದಲೇ ವ್ಯವಸಾಯ ಪ್ರಾರಂಭವಾಗಿರಬೇಕೆಂದು ವಿದ್ವಾಂಸರ ಅಭಿಪ್ರಾಯ. ಸೋಲಿಗರು ತಮ್ಮ ವ್ಯವಸಾಯದ ಪ್ರಾರಂಭವನ್ನು 'ತಾಯಿ' ಅಂದರೆ ಭೂಮಿತಾಯಿಗೆ 'ಭೂಮಿತಾಯಿ ಪೂಜೆ' ಮಾಡುವುದರಿಂದಲೇ ಪ್ರಾರಂಭ ಮಾಡುತ್ತಾರೆ. ಅಂದರೆ ಮಾತೃ ಸ್ವರೂಪಿಣಿಯಾದ ಭೂಮಿತಾಯಿ ನಮ್ಮನ್ನು ಕಾಪಾಡುತ್ತಾಳೆ ನಾವೆಲ್ಲ ಆ; ತಾಯಿಯ

ಮಕ್ಕಳು ಎಂಬ ನಂಬಿಕೆ ಸೋಲಿಗರದ್ದು. ಮತ್ತೊಂದು ಕಡೆ ಹೊಸರಾಗಿ ಹಬ್ಬದಲ್ಲಿ ಸೋಲಿಗರು ಪುಸುಮಾಲೆ(ಕುಸುಮಾಲೆ) ತಾಯಿಗೆ ಹಬ್ಬದ ಹಿಂದಿನ ಅಂದರೆ ಮೊದಲೇ ಪೂಜೆ ಮಾಡುತ್ತಾರೆ. ಅಂದರೆ ತಾವು ತಮ್ಮ ಜಮೀನಿನಲ್ಲಿ ಬೆಳೆದ, ಕಾಡಿನ ಗೆಡ್ಡೆ ಗೆಣಸನ್ನು ತಂದು ಅವಳಿಗೆ ಎಡೆಯಿಟ್ಟು ಪೂಜೆ ಮಾಡುತ್ತಾರೆ, ಇದನ್ನು ಸೋಲಿಗರು 'ಪುಸುಮಾಲೆಗೆ ಕಾಪು ಹಾಕೋದು, ಅಥವಾ ಕಾಪು ಬಿಡುವುದು ಎಂದು ಕರೆಯುತ್ತಾರೆ' ಈ ರೀತಿಯಲ್ಲಿ ಸೋಲಿಗರು ಪ್ರಕೃತಿಯ ಆರಾಧನೆಯನ್ನು ಮಾಡುತ್ತಾರೆ. ಅವುಗಳಲ್ಲಿ ಕೇತೇದೇವರು ಬಹಳ ಶಕ್ತಿಶಾಲಿ ದೇವರು ಎಂದು ನಂಬಿದ್ದಾರೆ.

### ೫.೧. ಸೋಲಿಗರ ಪ್ರಕೃತಿಯ ಆರಾಧನೆ

ಸೋಲಿಗರು ಪ್ರಕೃತಿಯ ಆರಾಧಕರು; ನಂಬಿಕೆ ಮತ್ತು ಆಚರಣೆಗಳ ಮೂಲಕ ಪ್ರಕೃತಿಯನ್ನು ಆರಾಧಿಸುತ್ತಾರೆ. ಪ್ರಕೃತಿಯ ಮಡಿಲಿನಲ್ಲಿ ನೆಲೆಸಿರುವ ಸೋಲಿಗರು ಪ್ರಕೃತಿಯ ಬಗ್ಗೆ ತಮ್ಮಲ್ಲಿ ಅಪಾರವಾದ ಜ್ಞಾನವನ್ನು ಹೊಂದಿದ್ದಾರೆ. ಸೋಲಿಗರು ಇತರೆ ಧರ್ಮಗಳಾದ ಶೈವ ಹಾಗೂ ವೈಷ್ಣವ ಧರ್ಮಗಳಿಗೆ ಕಾಲಾನಂತರದಲ್ಲಿ ಪ್ರಭಾವಿತವಾಗಿರುವುದನ್ನು ಅವರು ಆರಾಧಿಸುವ ಮೂಲ ದೊಡ್ಡಸಂಪಿಗೆ ಪ್ರಕೃತಿ ಮಾತೆಯಿಂದಲೇ ತಿಳಿಯಬಹುದಾಗಿದೆ. ದೇಶದುದ್ದಕ್ಕೂ ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಧಾರ್ಮಿಕ ನಂಬಿಕೆ ಹಾಗೂ ದೈವಭಕ್ತಿಯ ಅಂಗವಾಗಿ ಹಿಂದಿನಿಂದಲೂ ಪರಿಸರ ಸಂರಕ್ಷಣೆಯ ಕ್ರಮಗಳನ್ನು ಅನುಸರಿಸುತ್ತಲೇ ಬಂದಿವೆ. ಇಂಥ ಆಚರಣೆಗಳಲ್ಲಿ ಪರಿಸರ ಸಂರಕ್ಷಣೆಯ ಪವಿತ್ರ ಕೆಲಸ ಸೋಲಿಗರಿಂದ ಆಗಿದೆ. ಕೆಲವು ಬುಡಕಟ್ಟು ಸಮುದಾಯಗಳು ಜೀವ ವೈವಿಧ್ಯತೆಯ ತತ್ವವನ್ನು (ಟೋಟಾಯಿಸಮ್) ಪಾಲಿಸಿಕೊಂಡು ಬಂದಿವೆ. ಸೋಲಿಗರೇ ಹೇಳುವ ಪ್ರಕಾರ 'ಸೋಲಿಗರ ಪೂರ್ವಜರು ಸತ್ತ ಆತ್ಮವು ಯಾವುದೋ ನಿಗದಿತ ಸಸ್ಯ, ಪ್ರಾಣಿ ಇಲ್ಲವೇ ಬಂಡೆ– ಇವುಗಳಲ್ಲಿ ಅವಿತಿದೆ ಎಂಬ ನಂಬಿಕೆ ಇಟ್ಟುಕೊಂಡು ಆ ಸಸ್ಯ, ಪ್ರಾಣಿ, ಬಂಡೆ, ಕಲ್ಲು ಹೀಗೆ ಪ್ರಕೃತಿಯಲ್ಲಿರುವ ಪ್ರತಿಯೊಂದು ಜೀವ ರಾಶಿಯನ್ನೂ, ಸಂರಕ್ಷಿಸಿ ಅವುಗಳನ್ನು ಧರ್ಮದ ಹೆಸರಿನಲ್ಲಿ ಪೂಜಿಸಿ ಆರಾಧಿಸುತ್ತಾರೆ. ಈ ರೀತಿ ಆಚರಣಾ ಪದ್ಧತಿಯನ್ನು ಸೋಲಿಗರು ಇಂದಿಗೂ ಸಹ ನಡೆಸಿಕೊಂಡು ಬರುತ್ತಿದ್ದಾರೆ.

ಯಾವುದೇ ಜೀವ ಪ್ರಭೇದವು ಪವಿತ್ರವಾಯಿತೆಂದು ತೀರ್ಮಾನವಾದರೆ ಇಡೀ ಸೋಲಿಗ ಸಮುದಾಯವೇ ಅದನ್ನ ಗೌರವಿಸಿ ಪೂಜಿಸುತ್ತದೆ. ಉದಾ: ದೇವರಹಳ್ಳಿಯ ದೇವರಗಡ್ಡ ಮತ್ತು ಕಾರಯ್ಯನ ಗಡ್ಡ, ಸೀಗೆಬೆಟ್ಟ ರಂಗಪ್ಪನ ಕಲ್ಲು, ಮಲಕಿಬೆಟ್ಟ ಇತ್ಯಾದಿ. ಇಂತಹ ಕಡೆಗಳಲ್ಲಿ ನಮ್ಮ ಪೂರ್ವಿಕರು ಬಾಳಿ ಬದುಕಿ ನಮ್ಮನ್ನು ಬಿಟ್ಟು ಹೋಗಿದ್ದಾರೆ ಎಂದು ಸೋಲಿಗರು ನಂಬುತ್ತಾರೆ.

ಸೋಲಿಗರ ಜೊತೆ ಹತ್ತಾರು ವರ್ಷಗಳ ಕಾಲ ಒಡನಾಟವಿದ್ದವರಿಗೆ ತಿಳಿದುಬರುವ ಸತ್ಯಸಂಗತಿ ಎಂದರೆ ಅವರು ಯಾವುದನ್ನೂ ವಿರೋಧಿಸುವುದಿಲ್ಲ. ವಿರೋಧಿಸುವುದರಿಂದ ಅವರಿಗೆ ಎದುರಾಗುವ ಸಮಸ್ಯೆ ಅಥವಾ ಸವಾಲುಗಳನ್ನು ಎದುರಿಸಲು ಅವರು ಸಿದ್ಧರಿಲ್ಲ. ಕಾಡಿನ ವಾಸಿಗಳಾದ ಸೋಲಿಗರ ಜೀವನಶೈಲಿ ಬಹಳ ಸರಳ. ಅವರಿಗೆ ಆಸ್ತಿ, ಅಂತಸ್ತುಗಳನ್ನು ಪಡೆದುಕೊಳ್ಳುವ, ಉಳಿಸುವ, ಬೆಳೆಸುವ, ಅಧಿಕಾರ, ನಾನು, ನನ್ನದು ಎಂಬ ವ್ಯಾಮೋಹವಂತು ಮೊದಲೇ ಇಲ್ಲ. ಮೈಮೇಲೊಂದು ಅರಿವೆ(ತುಂಡು ಬಟ್ಟೆ), ಸೊಂಟದಲ್ಲೊಂದು ಕತ್ತಿ ಇಷ್ಟಿದ್ದರೆ ಅವರಿಗೆ ಬೇರೇನು ಬೇಕಿಲ್ಲ. ಹಸಿವಾದಾಗ ಆಹಾರದ ಅನ್ವೇಷಣೆ, ಹಸಿವು ತಣಿದಾಗ ಈ ಜಗತ್ತಿನ ಪರಿವೇ ಇಲ್ಲದೇ ಬೆಂಕಿ ಸುತ್ತ ದಣಿವಾರಿಸಿಕೊಳ್ಳುತ್ತಾರೆ.

ಆದರೆ ಈ ಯಾವ ಸಂದರ್ಭದಲ್ಲೂ ತನ್ನ ಕುಲದೈವ ಮತ್ತು ಸಮುದಾಯದ ಆರಾಧ್ಯ ದೈವಗಳಾದ ಮಾದಪ್ಪ ಮತ್ತು ರಂಗಪ್ಪ, ಕಾರಯ್ಯ, ಬಿಲ್ಲಯ್ಯ, ಪುಸುಮಾಲೆಯವರನ್ನು ನೆನೆಯಲೇ ಬೇಕು. ಏಕೆಂದರೆ ಅವರು ಈ ಸಮುದಾಯದ ತಮ್ಮ ಆರಾಧ್ಯ ದೈವ ಮತ್ತು ಸಾಂಸ್ಕೃತಿಕ ನಾಯಕರೂ ಹೌದು.

ಸೋಲಿಗರು ಪೂರ್ವದಿಂದಲೂ ಆರಾಧಿಸಿಕೊಂಡು ಬರುತ್ತಿರುವ ದೈವಗಳೆಂದರೆ– ಕೇತೇದೇವರು (ಕೇತೇಶ್ವರ), ಜಡೇದೇವರು(ಜಡೇಸ್ವಾಮಿ), ತಾವರಗಟ್ಟೆ ಮಾದಪ್ಪ, ಕೊಂಗಾಳಯ್ಯ, ಮದ್ದೂರಯ್ಯ, ಗುಂತೂರಯ್ಯ, ಅಚ್ಚುಗದೇವರು, ಕೋಣೂರ ದೇವರು(ಕೋಣೂರೇಶ್ವರ), ಪಂದೇದೇವರು (ಪಂದೇಶ್ವರ), ವೀರು, ಬೊಮ್ಮದೇವರು, ಬೀರುದೇವರು(ಬೀರೇಶ್ವರ), ಕಾರಯ್ಯ(ಮಾದೇಶ್ವರ ವರದಿಂದ ಹುಟ್ಟಿದ ಇಬ್ಬರು ಮಕ್ಕಳಲ್ಲಿ ಒಬ್ಬ), ಕೊಲ್ಲೇದೇವರು, ಈರಣ್ಣ, ಪುಸುಮಾಲೆ, ಮಲ್ಲೆದೇವರು(ಮಲ್ಲೇಶ್ವರ), ಮಾರಮ್ಮ(ಮಾರಿ), ನಾಗದೇವರು, ಭದ್ರೇದೇವರು(ಭದ್ರೇಶ್ವರ), ಹನುಮದೇವರು, ನಂಜುಂಡ (ನಂಜುಂಡೇಶ್ವರ), ಸಿದ್ದಪ್ಪಾಜಿ, ಜವನೇಶ್ವರ, ಬೇದೆರಾಯ, ಬಿಳಿಗಿರಿರಂಗ(ಬಿಳಿಗಿರಿರಂಗಸ್ವಾಮಿ), ಬಸಪ್ಪ(ಬಸವೇಶ್ವರ), ಮುತ್ತಪ್ಪ, ಕುಂಬ (ಕುಂಬೇಶ್ವರ), ಕಡುಬಿನ ದೇವರು(ಬಸವೇಶ್ವರ) ಮತ್ತು ಚಾಮುಂಡೇಶ್ವರಿ.

ಮೇಲೆ ಹೆಸರಿಸಿದ ದೈವಗಳನ್ನು ಸಾವಿರಾರು ವರ್ಷಗಳಿಂದ ತಮ್ಮ ಪೂರ್ವಜರು ಪೂಜಿಸುತ್ತಿದ್ದರು ಎಂದಿರುವ ಸೋಲಿಗರು ಬದಲಾಗುವ ವಿದ್ಯಮಾನಗಳಿಗೆ ಅನುಗುಣವಾಗಿ ಹೊಸ ಹೊಸ ದೈವಗಳು ಸೇರ್ಪಡೆಯಾಗುತ್ತ ಬಂದಿವೆ ಎಂದು ಹೇಳುತ್ತಾರೆ. ಇತ್ತೀಚೆಗೆ ಹೊಸದಾಗಿ ಸೇರಿರುವ ದೈವದಲ್ಲಿ ಅಯ್ಯಪ್ಪ ಸ್ವಾಮಿಯು ಒಂದಾಗಿದೆ. ಅಂದರೆ ಒಂದೇ ಸಂದರ್ಭದಲ್ಲಿ ಈ ಎಲ್ಲವೂ ಆರಾಧನೆಗೆ ಒಳಪಟ್ಟಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಸೋಲಿಗರ ದೈವಗಳಿಗೆ ಸಂಬಂಧಿಸಿದಂತೆ ಎರಡು ಮಹತ್ವದ ವ್ಯಕ್ತಿಗಳನ್ನು ಉಲ್ಲೇಖಿಸುವುದು ಅಗತ್ಯ. ವಿಶೇಷವೆಂದರೆ ಈ ಎರಡು ದೈವಗಳು ಬೇರೆ ಬೇರೆ ಪಂಥಕ್ಕೆ ಸೇರಿದ್ದಾಗಿವೆ. ಆದರೂ ಸೋಲಿಗರಿಗೆ ಅದರಿಂದ ಯಾವ ವ್ಯತ್ಯಾಸವೂ ಕಾಣುತ್ತಿಲ್ಲ. ಅವುಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಮೌಖಿಕ ಕಥೆಗಳು ಅವರ ಭಕ್ತಿ ಮತ್ತು ಆರಾಧನೆಯನ್ನು ಮುಂದುವರಿಸುತ್ತವೆ. ಸುಮಾರು ೧೪– ೧೫ನೇ ಶತಮಾನದಲ್ಲಿ ಇದ್ದಿರಬಹುದು ಎಂಬ ಊಹೆಯನ್ನು ಅಧ್ಯಯನಕಾರರು ಲಭ್ಯವಿರುವ ದಾಖಲೆಗಳೊಂದಿಗೆ ವ್ಯಕ್ತಪಡಿಸುತ್ತಾರೆ. ಆದ್ದರಿಂದ ಮಾದಪ್ಪನ(ಮಹದೇಶ್ವರ) ಕಾಲವನ್ನು ಅಲ್ಲಿಂದ ಗುರ್ತಿಸಿಕೊಳ್ಳುತ್ತಾರೆ. ಆದರೆ ಸೋಲಿಗರು ಸಾವಿರಾರು ವರ್ಷಗಳಿಂದಲೂ ಕಾಡಲ್ಲಿ ಇತರೆ ಹಲವಾರು ಸಮುದಾಯಗಳೊಂದಿಗೆ ಬದುಕುತ್ತಿದ್ದರು. ಅಂದರೆ ಅವರದು ಒಂದು ರೀತಿ ಅನಾಗರಿಕ ಬದುಕು ಎಂದೇ ಹೇಳಬೇಕು. ಇಂತಹ ಸಂದರ್ಭದಲ್ಲಿ ಮಾದಪ್ಪ ಎಂಬ ಹೆಸರಿನ ಓರ್ವ ವ್ಯಕ್ತಿ ಉತ್ತರ ದೇಶದಿಂದ ಬಂದು ಸುತ್ತೂರು ಮತ್ತು ಕುಂತೂರು ಮಠಗಳಲ್ಲಿ ಕಾಯಕ ಮಾಡಿದ್ದು ಅಲ್ಲಿಂದ ಪೂರ್ವ ದಿಕ್ಕಿನ ದಟ್ಟಾರಣ್ಯಕ್ಕೆ ಬಂದು ನೆಲೆಸಿದನು. ಅಷ್ಟೇ ಅಲ್ಲ ಆ ಕಾಡಲ್ಲಿದ್ದ ಮುಗ್ಧ ಹಾಗೂ ಅನಾಗರಿಕರಂತಿದ್ದ ಜನರಿಗೆ ಒರಟು ರೀತಿಯ ಅನಾಗರಿಕ ಬದುಕನ್ನು ಬಿಟ್ಟು ಕೃಷಿಯನ್ನು ಮಾಡುತ್ತ ಉತ್ತಮ ಜೀವನ ಸಾಗಿಸುವ ಕಡೆಗೆ ಮಾರ್ಗದರ್ಶನ ಮಾಡಿದನು. ಆತನಿಗೆ ಮಂತ್ರವಿದ್ಯೆ ತಿಳಿದಿತ್ತು. ಸಹಕಾರದಿಂದ ಇರಬೇಕು ಎಂಬ ಸರಳ ತತ್ವವನ್ನು ಮನವರಿಕೆಯಾಗುವಂತೆ ಬೋಧಿಸುತ್ತಿದ್ದನು. ಕೇಡಿಗರನ್ನು ಕಠೋರವಾಗಿ ಶಿಕ್ಷಿಸುವ ಮೂಲಕ ಬುದ್ಧಿ ಕಲಿಸುತ್ತಿದ್ದನು. ಇದು ಜನರಿಗೆ ಮಾದಪ್ಪನಲ್ಲಿ ಭಯ–ಭಕ್ತಿಯನ್ನು ಹೊಂದುವಲ್ಲಿ ಮಹತ್ವದ ಪಾತ್ರವನ್ನು ವಹಿಸಿತು. ಅನಂತರದ ಚಿತ್ರಣ ವಿಸ್ಮಯವಾದುದು.

ಏಕೆಂದರೆ ಕೇವಲ ಕಾಡಿನ ಸೀಮಿತ ಜನರಿಗೆ ಮಾತ್ರ ಪರಿಚಿತನಾಗಿದ್ದ ಮಾದಪ್ಪನ ಕೀರ್ತಿ ಎಲ್ಲೆಡೆಯೂ ಹಬ್ಬಿತು. ಮಾದಪ್ಪನನ್ನು ಕುರಿತು ಹೇಳುವ ಮೌಖಿಕ ಕಥೆಯು ಆತನು ಪವಾಡಗಳನ್ನು ವರ್ಣಿಸುತ್ತದೆ. ಹುಲಿಯನ್ನು ವಾಹನವನ್ನಾಗಿ ಹೊಂದಿದ್ದನು ಎಂದು ಹೇಳುವುದೇ ಮಾದಪ್ಪನ ಶಕ್ತಿಯನ್ನು ಸೂಚಿಸುತ್ತದೆ. ಅದರಲ್ಲಿ ವಿಶೇಷವಾಗಿ ಸೋಲಿಗರ ಸಂಕಮ್ಮನಿಗೆ ಮಕ್ಕಳ ವರವನ್ನು ನೀಡಿದನು. ಅವರೇ ಕಾರಯ್ಯ-ಬಿಲ್ಲಯ್ಯ ಇವರನ್ನು ಮಾದಪ್ಪನಿಗೆ ಕಾಣಿಕೆಯಾಗಿ ನೀಡುವುದರ ಮೂಲಕ ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತಾರೆ(ಸಂಕಮ್ಮ, ನೀಲೇಗೌಡ). ಮುಂದೆ ಮಾದಪ್ಪನ ಕಾಲದ ಅನಂತರ ಆ ಸ್ಥಳವು ಒಂದು ಪವಿತ್ರ ಕ್ಷೇತ್ರವಾಗಿ ನಾಡಿನಾದ್ಯಂತ ಲಕ್ಷಾಂತರ ಜನರನ್ನು ಆಕರ್ಷಿಸುತ್ತಿದೆ. ಮಾದಪ್ಪನ ಶಿಷ್ಯಂದಿರಾದ ಕಾರಯ್ಯನ ಕುಲದವರೇ ನಾವು ಎಂದು ಮಾದಪ್ಪನನ್ನು ಕುಲದೈವವಾಗಿ ಸ್ವೀಕರಿಸಿದ್ದಾರೆ. ಶೈವ ಪಂಥವೆಂದು ಅಥವಾ ಕ್ಷೇತ್ರವು ಗುರ್ತಿಸಿಕೊಂಡಿದ್ದರೂ ಹಿಂದೆ ಮಾಂಸಹಾರಕ್ಕೆ ಯಾವುದೇ ನಿಷೇಧವಿದ್ದಿರಲಿಲ್ಲವಾದ್ದರಿಂದ ಸೋಲಿಗರು ಮಾಂಸಹಾರಿಗಳು ಹೌದು.

"ಬುಡಕಟ್ಟು ಜನಾಂಗದ ಜ್ಞಾನ ಪ್ರಕೃತಿಯೊಡನೆ ಇವರ ಸಂಬಂಧ ಮತ್ತು ಪ್ರಕೃತಿಯನ್ನು ತಮ್ಮ ಆದಿ ಅಯ್ಯನ ಆವಾಸಸ್ಥಾನ ಎಂದು ನಂಬಿರುತ್ತಾರೆ." ಅಮೇರಿಕಾದಲ್ಲಿ ವಾಷಿಂಗ್‌ಟನ್ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲು 'ಸಿಯಾಟಲ್' ಎಂಬ ಬುಡಕಟ್ಟು ಜನಾಂಗದ ಮುಖ್ಯಸ್ಥನನ್ನು ಭೇಟಿಮಾಡಿ ನಿಮ್ಮ ಕಾಡನ್ನು ನಾನು ಕೊಳ್ಳುತ್ತೇನೆಂದು; ಅದಕ್ಕೆ ಎಷ್ಟಾದರೂ ಹಣವನ್ನು ಕೊಡುತ್ತೇನೆಂದು ಹೇಳುತ್ತಾನೆ. ಆಗ ಆ ಬುಡಕಟ್ಟು ಜನಾಂಗದ ನಾಯಕ ಹೇಳುತ್ತಾನೆ ಈ ನೆಲ, ಈ ಜಲ, ಗಾಳಿ, ಮರ, ಇವೆಲ್ಲವನ್ನು ನಾವು ದೇವರೆಂದು ಭಾವಿಸುತ್ತೇವೆ, ಅವನೇ ಇವನ್ನೆಲ್ಲ ಕೊಟ್ಟವನು, ನಾವು ಇದನ್ನು ಕೊಡುವುದಿಲ್ಲ. ಆದುದರಿಂದ ನಾವು ಮಾರುವುದಿಲ್ಲ ಇಂದು ಹೇಳುತ್ತಾನೆ. "ಅದೇ ರೀತಿಯಲ್ಲಿ ಸೋಲಿಗರೂ ಸಹ ಪ್ರಕೃತಿಯನ್ನು ದೇವರೆಂದು ಪೂಜಿಸುತ್ತಾರೆ. ತಮ್ಮ ಹಿರಿಯರನ್ನು ಆದಿ ಅಯ್ಯ ಎಂದು ಕರೆಯುತ್ತಾರೆ. "ಸೋಲಿಗರು ಮರದ ಕೆಳಗೆ ಕಲ್ಲನ್ನಿಟ್ಟು ಪೂಜೆ ಮಾಡುತ್ತಾರೆ" ಎಂದಿದ್ದಾರೆ. ಚಾಮರಾಜನಗರ ಜಿಲ್ಲೆಯಲ್ಲಿ ಕಾಡಿನ ಮಧ್ಯದಲ್ಲಿರುವ ಕೆರೆದಿಂಬ ಮತ್ತು ಗೊಂಬೆಗಲ್ಲು ಕಾಡಿನಲ್ಲಿ ದೊಡ್ಡಸಂಪಿಗೆ ಮರದ ಕೆಳಗೆ ಪ್ರತೀ ವರ್ಷವೂ ಸಹ ಒಂದೊಂದು ಕಲ್ಲನಿಟ್ಟು ರೊಟ್ಟಿ ಹಬ್ಬದಲ್ಲಿ ಪೂಜೆ ಮಾಡುತ್ತಾರೆ. ಸುಮಾರು ಸಾವಿರಾರು ಕಲ್ಲುಗಳು ಈ ಮರದ ಕೆಳಗೆ ಇರುವುದನ್ನು ಈಗಲೂ ನೋಡಬಹುದು.

ಇತ್ತೀಚಿನ ದಿನಗಳಲ್ಲಿ ಸೋಲಿಗರಲ್ಲಿ ಧಾರ್ಮಿಕ ವ್ಯವಸ್ಥೆಯಲ್ಲಿ ಸ್ವಲ್ಪ ಪ್ರಮಾಣದ ವ್ಯತ್ಯಾಸಗಳಾಗುತ್ತಿವೆ. ಕಾರಣ ಅರಣ್ಯ ಇಲಾಖೆಯವರು ಸೋಲಿಗ ಸಮುದಾಯದವರನ್ನು ಕಾಡಿನಿಂದ ನಾಡಿಗೆ ಸ್ಥಳಾಂತರಗೊಳಿಸುತ್ತಿರುವುದು, ಪರಿಸರದಿಂದ ದೂರ ಸರಿಯುತ್ತಿರುವುದು, ಕಾಡಿನ ಪರಿಸರದ ಬಗ್ಗೆ ಯವಪೀಳಿಗೆಯವರಲ್ಲಿ ಪಾರಂಪರಿಕ ಜ್ಞಾನ ಕಡಿಮೆಯಾಗುತ್ತಿರುವುದು, ಅರಣ್ಯ ಇಲಾಖೆಯವರು ಕಾಡಿನಲ್ಲಿರುವ ಸೋಲಿಗ ಸಮುದಾಯದವರ ದೇವರುಗಳು ಸಗ್ಗದ ಮನೆಯವರು, ಪೂಜೆ ಆರಾಧನೆ ಸಾಂಸ್ಕೃತಿಕ ಆಚರಣೆಗೆ ಕಾಡಿನ ಒಳಗೆ ಬಿಡದೆ ಅಡ್ಡಿಪಡಿಸುತ್ತಿರುವುದು, ಹೊರಗಿನವರ, ಸರಕಾರದ ಒತ್ತಡ, ಆಸೆ ಆಮಿಷಗಳಿಗೆ ಇಷ್ಟವಿಲ್ಲದಿದ್ದರೂ ಬಲವಂತವಾಗಿಯಾದರೂ ಒಪ್ಪಿಕೊಂಡು ಮಾನಸಿಕ ಆತ್ಮಸ್ಥೈರ್ಯ ಕಳೆದುಕೊಂಡು ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ಹೊರಗಿನ ಧಾರ್ಮಿಕ ಆಚರಣೆಗಳಿಗೆ ಒಗ್ಗಿಕೊಳ್ಳುತ್ತಿದ್ದಾರೆ.

ಸೋಲಿಗರಲ್ಲಿ ಪ್ರತಿಯೊಂದು ಕುಲದವರಿಗೂ ಸಹ ಅವರದೇ ಆದ ದೇವರುಗಳಿರುತ್ತವೆ. ಪ್ರತಿ ಕುಲದ ಕುಲ ದೈವದ ಹುಟ್ಟು ಸ್ಥಳ ಅಡವಿಯ ಬೇರೆ ಬೇರೆ ಜಾಗದಲ್ಲಿದೆ. ಅಡವಿಯಲ್ಲಿರುವ ದೇವರನ್ನು ಅಡಗು ಎಂದು ಕರೆಯುತ್ತಾರೆ. ಹಾಗು ಅಡವಿಯಲ್ಲಿರುವ ದೇವರನ್ನು ಶಾಶ್ವತ ದೇವರೆಂದು ಸೋಲಿಗರು ಪರಿಗಣಿಸುತ್ತಾರೆ. ಕಾರಣ ಅದು ದೇವರ ಹುಟ್ಟು ಸ್ಥಳವಾಗಿದೆ. ಕುಲದೈವದ ಜೊತೆಗೆ ಇತರ ದೇವ ದೇವತೆಗಳನ್ನು ಸಹ ಪೂಜಿಸುತ್ತಾರೆ.




**೩.೧.೧ ದೊಡ್ಡ ಸಂಪಿಗೆ ಆರಾಧನೆ ಮತ್ತು ದೇವರ ಹಾಡು**

ದೊಡ್ಡಸಂಪಿಗೆ ಮರವು ಸೋಲಿಗ ಸಮುದಾಯದ ಪ್ರಕೃತಿಯ ಆರಾಧ್ಯ ದೈವ. ಈ ಮರವು ಸುಮಾರು ೨೩೦೦ ವರ್ಷಗಳಷ್ಟು ಹಿಂದಿನದು ಎಂದು ನಂಬಲಾಗಿದೆ. ದೊಡ್ಡ ಸಂಪಿಗೆಯ ಮರದ ಬಳಿ **'ಭಾರ್ಗವ'** ಹೆಸರಿನ ಒಂದು ತೊರೆಯು(ನದಿಯ) ಹರಿಯುತ್ತಿದೆ. ಸೋಲಿಗರ ದೇವರಲೊಬ್ಬನಾದ ಮಾದೇಶ್ವರ ಸ್ವಾಮಿ ಈ ಸ್ಥಳದಲ್ಲಿ ಒಂದು ಸಂಪಿಗೆ ಗಿಡವನ್ನು ಇಟ್ಟು ಪಕ್ಕದ ಊರಿಗೆ ಹೋಗುವಾಗ ತನ್ನ ಕಮಂಡಲವನ್ನು ಮರೆತು ಗಿಡದ ಹತ್ತಿರ ಬಿಟ್ಟು ಹೋದನಂತೆ. ಆತ ಹಿಂದಿರುಗಿ ಬರುವುದರೊಳಗಾಗಿ ಆ ಪುಟ್ಟ ಗಿಡ ಒಂದು ದೊಡ್ಡ ಬೃಹದಾಕಾರವಾದ ಮರವಾಗಿ ಬೆಳೆದಿತ್ತು. ಸೋಲಿಗರು ಕಾಡಿನ ಒಡೆಯನಾದ ಕಾರಯ್ಯನ ವಂಶಸ್ಥರಿಗೆ ಸಂಪಿಗೆ ಮರದ ಬಗ್ಗೆ ವಿಶೇಶವಾದ ಮತ್ತು ಅಪಾರವಾದ ಭಕ್ತಿ ಇದೆ. ಈ ಮರದ ಕೆಳಗೆ ಸಾವಿರಾರು ಕಾಡಿನ ಕಲ್ಲುಗಳಿವೆ. ಇದನ್ನು ಸೋಲಿಗರು ಲಿಂಗದ ಕಲ್ಲುಗಳೆಂದು ಹೇಳುತ್ತಾರೆ. ಸೋಲಿಗರು ಈ ಮರವನ್ನು ಪ್ರತಿವರ್ಷವೂ ಪೂಜಿಸುವುದರ ಜೊತೆಗೆ ಇಲ್ಲಿ ಮುಖ್ಯ ದೇವತೆಗಳಾದ ಮಾದೇಶ್ವರ, ಕಾರಯ್ಯ, ಬಿಲ್ಲಯ್ಯ, ಜಡೆಸ್ವಾಮಿ, ಕೇತಪ್ಪ, ಕೇತದೇವರು,

ನಂಜಪ್ಪ, ಸಿದ್ದಪ್ಪಾಜಿ ಮತ್ತು ಬಸಪ್ಪ ಇನ್ನೂ ಮುಂತಾದ ತಮ್ಮ ದೇವರುಗಳನ್ನು ಪೂಜಿಸುತ್ತಾರೆ. ಈ ಎಲ್ಲಾ ದೇವರುಗಳನ್ನು ಕಾಡಿನ ಕಲ್ಲಿನ ರೂಪದಲ್ಲೂ ಪೂಜಿಸುತ್ತಾರೆ.

ಸೋಮವಾರ ಮತ್ತು ಶುಕ್ರವಾರ ದೊಡ್ಡಸಂಪಿಗೆಯಲ್ಲಿ ಪೂಜೆ ಮಾಡುತ್ತಾರೆ. "ಕೋಂಬುಡಕಿ, ಹೆಣ್ಣೆಗೊಂಪಿನ ಸಾಲು, ಗೇರಮಾಳ, ಕಾಡಿಗೆರೆ, ಬೆಳ್ಳಜ್ಜಿ, ಕನ್ನೇರಿ ಕಾಲೋನಿ, ಬಿಳಿಗಿರಿರಂಗಸ್ವಾಮಿ ಬೆಟ್ಟ ಗುಂಡ್ಲುಪೇಟೆ, ಕೊಳ್ಳೇಗಾಲ, ಯಳಂದೂರು, ಚಾಮರಾಜನಗರ ಮತ್ತು ದೂರದ ತಮಿಳುನಾಡಿನ ತಿರುಪುರದಿಂದಲೂ ಸೋಲಿಗರು ಮಹದೇಶ್ವರನ ಪೂಜೆಯ ದಿನ ದೊಡ್ಡ ಸಂಪಿಗೆಗೆ ಬರುತ್ತಾರೆ."[೨] ಸಂಪಿಗೆ ಹೂವಿನ ಕಾಲದಲ್ಲಿ ದೊಡ್ಡ ಸಂಪಿಗೆ ಮರದಲ್ಲಿ ದೇವರು ಇರುತ್ತಾನೆ. ಮಲೆಯ ಮಹದೇಶ್ವರ ಆ ಮರದ ಹೂವಿನಲ್ಲಿ ಶೃಂಗಾರ ಮಾಡಿಕೊಂಡು ಕುಳಿತಿರುತ್ತಾನೆ ಎಂಬ ನಂಬಿಕೆ ಸೋಲಿಗರಲ್ಲಿ ಇದೆ. ಆ ಹೂವು ಬಿಳಿಯ ಬಣ್ಣದ್ದಾಗಿರುತ್ತದೆ ಅಂದರೆ ಬಿಳಿ ಎಂದರೆ ಸೋಲಿಗರ ಅರ್ಥದಲ್ಲಿ ಶುದ್ಧವಾಗಿದೆ ಎಂದರ್ಥ.

**ಸೋಲಿಗರ ದೊಡ್ಡ ಸಂಪಿಗೆ ಮರದ ದೇವರ ಹಾಡು**

ದೊಡ್ಡ ಸಂಪಿಗೆ ನನ್ನೊಡೆಯ
ಕಾತು ಕಾಪಾಡಿ ಮಡುಗುನಯ್ಯಾ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಸೇಬಿನ ಕೋಬೆ ಸೇಬಿನೂವ್ವೆ
ಸಾಮಿ ಕತ್ತಲಿ ಬಾಗಿದದೆ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಹೂವಿನ ಕೊಂಬು ಮುರಿಯಾಗಿಲ್ಲೆ
ಮೊಗ್ಗಿನ ಕೊಂಬು ಬಾಡಗಿಲ್ಲೆ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಮೊಗ್ಗು ಮೊಗುರೆಲ್ಲಾ ನಿನ್ನದೆಯ್ಯೋ
ಕಣ್ಣಿಟ್ಟು ನೋಡುನು ದೇವರೆ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಬೆಜ್ಜ ಗುಂಡಿಯಾ ಜಾಲಾದೂವೆ
ದೇವರ ಮಂಡಕ್ಕೆ ನೀ ಬಂದೆಲ್ಲೋ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಇನ್ನಿಂತ ವರ್ಷ ಬಾರನಯ್ಯಾ
ಕಾಪಿಟ್ಟು ಮಡುಗುನು ದೇವರಯ್ಯಾ
ಗೋರು ಗೊರುಕೂ ಗೋರುಕನ ಗೋರು ಗೊರುಕೂ ಗೋರುಕನ //ಗೋರು//

ಸೋಲಿಗ ಸಮುದಾಯದಲ್ಲಿ ಸಾಮಾನ್ಯವಾಗಿ ಗೋರುಕಾನ ನೃತ್ಯವನ್ನು ಮಾಡುತ್ತ ಈ ಹಾಡನ್ನು ಹಾಡುತ್ತ ಕಾಡಿನಲ್ಲಿರುವ ಎಲ್ಲಾ ದೇವರುಗಳನ್ನು ನೆನೆದು ಪ್ರಾರ್ಥಿಸುತ್ತಾರೆ.

**ಸಾರಾಂಶ:** ಸೋಲಿಗರು ಈ ಹಾಡಿನಲ್ಲಿ ದೊಡ್ಡ ಸಂಪಿಗೆಯ ಮರವನ್ನು ಪೂಜಿಸುತ್ತ ನೀನೆ ನಮ್ಮ ದೇವರು, ನಮ್ಮನ್ನು ಕಾಪಾಡು, ಯಾವುದೇ ಕಷ್ಟ ಹಾಗೂ ಎಲ್ಲಾ ರೀತಿಯ ತೊಂದರೆಯಿಂದ ದೂರ ಮಾಡಿ ಸೋಲಿಗ ಮಕ್ಕಳನ್ನು ಕಾಪಾಡು ಎಂದು ಕಾಡಿನಲ್ಲಿರುವ ಪ್ರತಿಯೊಂದು ಹೂವುಗಳನ್ನು ಅರ್ಪಿಸುತ್ತಾರೆ. ಈ ಕಾಡಿನಲ್ಲಿರುವ ಪ್ರತಿಯೊಂದು ಜೀವ ರಾಶಿಯೂ ನಿನ್ನದೇನೇ! ನಮ್ಮನ್ನು ಕಣ್ಣಿಟ್ಟು ಜೋಪಾನವಾಗಿ ಕಾಪಾಡುವ ಹೊಣೆ ನಿನ್ನದು ಮರೆಯಬೇಡ ಎಂದು ಹಾಡುತ್ತಾ, ಗೋರುಕನ ನೃತ್ಯ ಮಾಡುತ್ತಾ ಸಂಜೆ ಆರರಿಂದ ಪೂಜೆ ಪ್ರಾರಂಭಿಸಿ ಮರುದಿನ ಬೆಳಿಗ್ಗೆ ಆರರ ಸಮಯದವರೆಗೂ ಬಿಡದೇ ದೇವರನ್ನು ಪ್ರಾರ್ಥಿಸುತ್ತಾರೆ. ಮುಂದಿನ ವರ್ಷ ಬರುವವರೆಗೂ ನಮ್ಮನ್ನು ಕಾಪಾಡಬೇಕು ಎಂದು ದೇವರಿಗೆ ಮನವಿಯನ್ನು ಸಲ್ಲಿಸುತ್ತಾರೆ.

**೫.೧.೨. ಚಿಕ್ಕ ಸಂಪಿಗೆ**

ಇನ್ನೊಂದು ಸಂಪಿಗೆ ಮರವಿದೆ. ಇದನ್ನೂ ಸಹ ಸೋಲಿಗರು ಪವಿತ್ರ ಮರವೆಂದು ನಂಬಿದ್ದಾರೆ. ಸಂಪಿಗೆ ಹೂವು ತನ್ನ ಪರಿಮಳವನ್ನು ಸೂಸುತ್ತ ಅರಳುವ ಸಮಯದಲ್ಲಿ ಈ ಮರಗಳ ಮೇಲೆ ದೇವರು ಮಲಗಿ ನಿದ್ರಿಸುತ್ತಾನೆ ಎಂದು ಸೋಲಿಗರು ನಂಬಿದ್ದಾರೆ. ಈ ರೀತಿಯ ಪ್ರಕೃತಿಯ ಆಚರಣೆಯು ಸೋಲಿಗರ ತವರು ಜಿಲ್ಲೆಯಾದ ಚಾಮರಾಜನಗರ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ಸೋಲಿಗರಲ್ಲಿ ಕೆಲವೊಂದು ನಂಬಿಕೆಗಳಿವೆ. ಅವುಗಳೆಂದರೆ–

**ಸೂರ್ಯ:** ಸೋಲಿಗರು 'ನೀನು ಪ್ರಪಂಚವನ್ನು ಬೆಳಗುವ ಮಹಾತ್ಮ, ಎಲ್ಲರಿಗೂ ಹೊತ್ತನ್ನು ಕೊಡುತ್ತಿಯಾ(ಸಮಯ) ಸಕಲ ಜೀವರಾಶಿಗಳು ನಿನ್ನಿಂದಲೇ ಬೆಳೆಯುತ್ತವೆ ಎಂದು ಸೂರ್ಯನನ್ನು ನಂಬುತ್ತಾರೆ. ಸೋಲಿಗರು ಗಳಿಗೆಯನ್ನು(ಸಮಯ) ಮರದ ನೆರಳಿನಿಂದಲೇ ತಿಳಿಯುತ್ತಾರೆ. ಇನ್ನೊಂದು ರೀತಿಯಲ್ಲಿ ಸೋಲಿಗರು ತಮ್ಮ ಹೊತ್ತನ್ನು ಕಾಡಿನಲ್ಲಿ ಬೆಳೆಯುವ **'ಮೂರು ಗಂಟೆ ಗಿಡ' 'ಸೈಡಾ ರೆಂಬಿಫೋಲಿಯಾ'** ಎಂಬ ಗಿಡದಿಂದ ತಿಳಿಯುತ್ತಾರೆ. ಸರಿಯಾಗಿ ಮೂರು ಗಂಟೆಯ ಸಮಯಕ್ಕೆ ಸೂರ್ಯನ ಕಡೆಗೆ ಇದು ತಿರುಗಿಕೊಳ್ಳುತ್ತದೆ. ಪ್ರಾಣಿ, ಪಕ್ಷಿಗಳ ಸೂಚನೆ, ಚಿಹ್ನೆ, ವರ್ತನೆಗಳಿಂದ ಅನೇಕ ವಿಷಯಗಳನ್ನು ಸೂಕ್ಷ್ಮವಾಗಿ ಗಮನಿಸಿ ಅದರ ಚಲನವಲನಗಳನ್ನು ಕಂಡುಹಿಡಿಯುತ್ತಾರೆ. ಇದೇ ಸೋಲಿಗರು ಮತ್ತು ಪ್ರಕೃತಿಗೂ ಇರುವ ನೇರ ಅವಿನಾಭಾವ ಸಂಬಂಧ.

**೫.೧.೩. ಕಾರಯ್ಯನ ಗುಡ್ಡ**

ಇದು ಸೋಲಿಗರು ಪೂಜಿಸುವ ಪ್ರಕೃತಿ ದೇವರು. ಈ ಕಾರಯ್ಯನ ಗುಡ್ಡವು ಕೊಳ್ಳೇಗಾಲ ತಾಲ್ಲೂಕಿನ ಲೊಕ್ಕನಹಳ್ಳಿ ಹೋಬಳಿಯ, ಜಡೇಸ್ವಾಮಿದೊಡ್ಡಿಯ ಹತ್ತಿರದಿಂದ ಒಂದು ಕಿಲೋಮೀಟರ್ ದೂರದಲ್ಲಿ ಕಾಡಿನ ಒಳಗೆ ಇರುವ ಒಂದು ದೊಡ್ಡ ಗುಡ್ಡ. ಈ ಗುಡ್ಡವು ಕಲ್ಲಿನಿಂದ ಕೂಡಿದ್ದು ಪ್ರಕೃತಿಯ ಮಡಿಲಿನಲ್ಲಿದೆ. ಈ ಭಾಗದ ಪೋಡುಗಳಾದ ಹಾವಿನಮೂಲೆ ಜಡೇಸ್ವಾಮಿದೊಡ್ಡಿ ಲೊಕ್ಕನಹಳ್ಳಿ ಸುತ್ತಮುತ್ತಲಿನ ಜನಸಮುದಾಯದವರು ಸೇರಿಕೊಂಡು ಜಡೇಸ್ವಾಮಿ ಉತ್ಸವ ಮಾಡುತ್ತಾರೆ ಆದರೆ ಪೋಡಿನಲ್ಲಿ ಹಬ್ಬಕೊಂಡ ಉತ್ಸವ ಮಾಡುವುದಕ್ಕಿಂತ ಮೊದಲು ಸೋಲಿಗರು ತಮ್ಮ ಮೂಲ ಕಾಡಿನ ದೇವರಾದ ಕಾರಯ್ಯನನ್ನು ಕರೆತರುತ್ತಾರೆ. ಬೆಳಗಿನ ಜಾವ ಮಡಿಯಿಂದ ತಮ್ಮಡಿ ಪೂಜೆ ಸಲ್ಲಿಸಿ ಮೈನೆರೆಯದೇ ಇರುವ(ಮುಟ್ಟಾಗದೇ ಇರುವ) ಹೆಣ್ಣುಮಕ್ಕಳ ಕೈಯಲ್ಲಿ ತಂಪನ್ನು ಗಿಂಡಿಯಲ್ಲಿ(ಚೊಂಬು) ತೆಗೆದುಕೊಂಡು ಬಂದು ತೀರ್ಥ ಮತ್ತು ಪ್ರಸಾದವನ್ನು ಊರಿನ ಎಲ್ಲಾ ದೇವಸ್ಥಾನಗಳಿಗೆ, ಕಿಚ್ಚಿನ

ಕೊಂಡಕ್ಕೂ ಹಾಕುತ್ತಾರೆ. ಇದರಿಂದ ಎಲ್ಲವೂ ಮಡಿಯಾಯಿತು ಎಂದು ಭಾವಿಸಿ ಹಬ್ಬದ ಆಚರಣೆಯಲ್ಲಿ ತೊಡಗುತ್ತಾರೆ. ಒಂದು ವಿಶೇಷವೇನೆಂದರೆ, ಸೋಲಿಗರು ಯಾರೇ ಆಗಲಿ ಹಬ್ಬ, ಕೊಂಡ ಮಾಡಿದ್ದರೂ ಸಹ ಸಮುದಾಯದ ಎಲ್ಲರ ಪರವಾಗಿ ಬೇಡಿಕೊಳ್ಳುತ್ತಾರೆ. ಸಕಲ ಜೀವ ರಾಶಿಗಳಿಗೂ ಸಹ ಒಳ್ಳೆಯದಾಗಲಿ, ಮಳೆ, ಬೆಳೆ ಚೆನ್ನಾಗಿ ಆಗಲಿ ಎಂದು ದೇವರನ್ನು ಕರೆದು ಬೇಡಿಕೊಳ್ಳುತ್ತಾರೆ. ಸಮುದಾಯದವರಿಗೆ ಯಾವುದೇ ಕೇಡು-ಗಂಡಾಂತರ ಬಾರದೇ ಇರಲಿ, ಪೋಡಿನ ಎಲ್ಲಾ ಜನರೂ ಒಂದಾಗಿದ್ದು ಏನೇ ತಪ್ಪು ಒಪ್ಪುಗಳಾದರೂ ನೀನೆ ಅದನ್ನೆಲ್ಲವನ್ನು ನಿನ್ನ ಹೊಟ್ಟೆಗೆ ಹಾಕಿಕೊಂಡು ನಮ್ಮನ್ನು ಕಾಪಾಡು ಎಂದು ಪ್ರಾರ್ಥಿಸುತ್ತಾರೆ. ಸೋಲಿಗರಲ್ಲಿರುವ ಒಳ್ಳೆಯ ಗುಣವೆಂದರೆ ನಾವು ಬದುಕಬೇಕು ಹಾಗೂ ನಮ್ಮ ಸುತ್ತಿರುವ ಸಕಲ ಜೀವರಾಶಿಯೂ ಸಹ ಬದುಕಬೇಕು ಎಂದು ಆಶಿಸುವುದು. ಗುಂಡ್ಲುಪೇಟೆಯ ಸುತ್ತಮುತ್ತಲ ಭಾಗಗಳಲ್ಲಿ ಸೋಲಿಗರು ಅಯನೂರು ಮಾರಮ್ಮ, ತಾವರೆಗಟ್ಟೆ ಮಾದಪ್ಪ, ಸೀಗನಮುಂಟಿ ಮಾರಮ್ಮ, ಮಲಕಿಬೆಟ್ಟ, ಕೋಣನೂರು ಮಾರಿ ಹೀಗೆ ಇನ್ನೂ ಹಲವಾರು ಕಾಡಿನ ದೇವರುಗಳನ್ನು ಪೂಜಿಸುತ್ತಾರೆ.

### ೫.೨. ಸೋಲಿಗರ ಕಾಡಿನ ದೇವರುಗಳು, ಮುನಿಗಳು, ಮಾರಮ್ಮ ಮತ್ತು ತಾಯಂದಿರು

**ದೇವರುಗಳು:** ದೊಡ್ಡ ಸಂಪಿಗೆ, ಚಿಕ್ಕ ಸಂಪಿಗೆ, ಕಾರಯ್ಯನ ಬೆಟ್ಟ, ದೊಡ್ಡರಾಯರು, ಬೇದರಾಯರು, (ತಮಿಳುನಾಡಿನಲ್ಲಿದೆ) ಬಸಪ್ಪನ ಕಡುವು, ಮೂರುಡು ಬಸಪ್ಪ, ಕೊಲ್ಲಿ ಮಲೆ ಬಸಪ್ಪ, ಕುಂಟುಗುಡಿ ಕೇತಪ್ಪ, ಕ್ಯಾತದೇವರ ಗುಡಿ(ಕೆ.ಗುಡಿ), ಹುಲ್ಲು ಪಚ್ಚೆ ಪುರಕಾಡು ದೇವರು, ಹಾಲತಾಳ ಮಾದೇಶ್ವರ ಹಾಲದ ಮರದಲ್ಲಿರುತ್ತಾನೆ ಎಂದು ಸೋಲಿಗರು ಹಾಲದ ಮರವನ್ನು ಪೂಜಿಸುತ್ತಾರೆ. ಮುತ್ತಗಲಕ್ಕೆ ಮಾದೇಶ್ವರ, ಹುಲಿಹೀರಪ್ಪ, ಕಂಬಳಿ ಹಬ್ಬಿ ಜಡೆಸ್ವಾಮಿ. ಮುತ್ತಗಲಕ್ಕಿ ಮಾದೇಶ್ವರ, ಕಂಳಿ ಹಬ್ಬಿ ಜಡೇಸ್ವಾಮಿ, ಜಡೆಸ್ವಾಮಿಯು ನೇರಳೆ ಮರದಲ್ಲಿರುತ್ತಾನೆ ಎಂದು ಸೋಲಿಗರು ನೇರಳೆ ಮರವನ್ನು ಪೂಜಿಸುತ್ತಾರೆ. ಬೂರದ ಮರವನ್ನು ಬೂರದಡ್ಡೆಸ್ವಾಮಿ ಎಂದು ಕೊಂಗಾಳಯ್ಯ, ಮದ್ದೂರು ಮಾಯಕಾರ, ಬೇಲದ ಕುಪ್ಪಯ್ಯ, ತಾವರೆಗಟ್ಟೆ ಮಾದಪ್ಪ, ಇನ್ನು ಮುಂತಾದ ದೇವರುಗಳನ್ನು ಸೋಲಿಗರು ಪೂಜಿಸುತ್ತಾರೆ. ಮಾರಿಗುಡಿ ಮಾರಿ(ಬೇಡಗುಳಿ). ಕೂಳೆಮಾರಿ. ಇತ್ತೀಚಿನ ದಿನಗಳಲ್ಲಿ ತಾರೆ ಮರವನ್ನು ದೇವರಿರುವರೆಂದು ಪೂಜಿಸುತ್ತಾರೆ. ಕಾರಯ್ಯ ಬಿಲ್ಲಯ್ಯ ಹಾಗೂ ಪುಸುಮಾಲೆಯನ್ನು ಸೋಲಿಗರು ತಮ್ಮ ದೇವರೆಂದು ಹಾಗು ಮೂಲಪುರುಷರೆಂದು ಪೂಜಿಸುತ್ತಾರೆ. ಸೋಲಿಗರ ಎಲ್ಲಾ ಕುಲದೈವಗಳ ಬಾಹ್ಯರೂಪವೆಂದರೆ ಕಲ್ಲಿನ ಲಿಂಗಗಳು. ಆದುದರಿಂದ ಸೋಲಿಗರಲ್ಲಿ ಕುಲಗಳು ಬೇರೆಯಾದರೂ ಸಹ ಅವರು ಪೂಜಿಸುವ ದೇವರು ಒಬ್ಬನೇ. ಅವನೇ 'ಶಿವ', 'ಈಶ್ವರ'; ಇನ್ನು ಹಲವಾರು ಕಾಡಿನಲ್ಲಿರುವ ಮಾರಿಯಮ್ಮನನ್ನು ಸೋಲಿಗರು ಪೂಜಿಸುತ್ತಾರೆ.

ಪ್ರತಿ ಪೋಡು ಕಾಲೋನಿ, ದೊಡ್ಡಿಗಳಲ್ಲಿ ದೇವಸ್ಥಾನ ಅಥವಾ ಕೆಲವೊಂದು ಸಲ ಎರಡೂ ಪೋಡುಗಳಿಗೂ ಸೇರಿದಂತೆ ಒಂದೇ ದೇವಸ್ಥಾನಗಳಿರುತ್ತವೆ. ಲಿಂಗದ ಜೊತೆಗೆ ನಾಗಚಿತ್ರ, ಗಂಧಗುಳಿ, ಛತ್ರಿ, ಮೆಟ್ಟುಪಾವಾಡ, ಮುಳ್ಳು ಕುರ್ಚಿ, ಗಂಟೆ, ಧೂಪದ ಆರತಿ, ಕಾಡಿನ ಹೂವು, ಹಣ್ಣು, ಕಾಯಿ ಇಷ್ಟು ಸಾಮಾನುಗಳನ್ನು ಪೂಜೆಯಲ್ಲಿ ಬಳಸುತ್ತಾರೆ.

ಕೆಲವು ಪೋಡುಗಳಲ್ಲಿ ಇರುವ ದೇವರುಗಳನ್ನು ಉದಾಹರಣೆ ಸಮೇತ ಇಲ್ಲಿ ತಿಳಿಸಲಾಗಿದೆ. ಅವುಗಳಲ್ಲಿ,

ಹೊಸ ಪೋಡು – ಜಡೇಸ್ವಾಮಿ, ದೊಡ್ಡಸಂಪಿಗೆ, ಕಾರಯ್ಯ.

ಯರಕನಗದ್ದೆ – ಬಸವೇಶ್ವರ, ಶನಿಮಾಹಾತ್ಮ,

ಸೀಗೆಬೆಟ್ಟ – ಕೇತದೇವರು.

ಮುತ್ತಗದಗದ್ದೆ – ಕೇತಪ್ಪ

ಪುರಾಣಿ – ಜಡೆಸ್ವಾಮಿ

ದೇವರಳ್ಳಿ – ಜಡೆಸ್ವಾಮಿ

ಬಂಗ್ಲೆಪೋಡು – ಜಡೆಸ್ವಾಮಿ, ಕೇತದೇವರು.

ಮದ್ದರು ಕಾಲೋನಿ – ಮದ್ದುರಯ್ಯ,

ಚನ್ನಮಲ್ಲಿಪುರ – ಮದ್ದುರಯ್ಯ

ಬೇರಂಬಾಡಿ – ಬಸವೇಶ್ವರ

ಚೆನ್ನಿಕಟ್ಟೆ – ತಾವರಗಟ್ಟ ಮಾದಪ್ಪ ಹೀಗೆ ಸೋಲಿಗರು ಪೋಡು, ಕಾಲೋನಿ ದೊಡ್ಡಿಗಳಲ್ಲಿ ತಮ್ಮ ತಮ್ಮ ದೇವರುಗಳನ್ನು ಪೂಜಿಸುತ್ತಾರೆ.

ಸೋಲಿಗರ ಮನೆಯಲ್ಲಿ ದೇವರ ಮನೆ ಎಂಬುದು ಇರುವುದಿಲ್ಲ. ಕಾರಣ ದೇವರಿಟ್ಟಿರುವ ಜಾಗವು ಬಹಳ ಶುದ್ಧಿಯಾಗಿರಬೇಕು ಆದರೆ ಕೆಲವೊಂದು ಪೋಡುಗಳ ಮನೆಗಳಲ್ಲಿ ದೇವರುಗಳನ್ನು ಇಟ್ಟಿರುತ್ತಾರೆ. ಇವರು ಸಾಮಾನ್ಯವಾಗಿ ತಮ್ಮಡಿ ಮನೆಯವರಾಗಿರುತ್ತಾರೆ. ಇಲ್ಲವೇ ಸಮುದಾಯದಲ್ಲಿ ಹಿರಿಯರು, ದೇವರು ಕರೆಯವವರ ಮನೆಯವರು, ದೇವರನ್ನು ಪೂಜಿಸುವವರ ಮನೆಯವರು ಆಗಿರುತ್ತಾರೆ. ಇವರ ಮನೆಯಲ್ಲಿ ದೇವರನ್ನು ಇಟ್ಟು ಪೂಜಿಸುತ್ತಾರೆ. ದೇವರು ಇಟ್ಟಿರುವ ಮನೆಯೊಳಗೆ ಯಾರಿಗೂ ಪ್ರವೇಶವಿರುವುದಿಲ್ಲ ಹಾಗು ಯಾರೂ ದೇವರಿರುವ ಮನೆಗೆ ನೇರವಾಗಿ ನುಗ್ಗುವುದಿಲ್ಲ.

**ಮಾರಮ್ಮ:** ಸೋಲಿಗರು ವನದೇವತೆಯನ್ನು ಅಮ್ಮ ಎಂದು ಕರೆಯುತ್ತಾರೆ. ಒಂದೊಂದು ಕುಟುಂಬಗಳಿಗೆ ಒಂದೊಂದು ತಾಯಿ, ಒಂದೊಂದು ಮಾರಮ್ಮ ದೇವತೆ ಇರುತ್ತದೆ. ಕುರಿಜುಂಜಿನಮ್ಮ, ಉಡಿಕನಾಡಮ್ಮ, ಹಟ್ಟಿಮಾಳತಾಯಿ, ಕುಳ್ಳನೇರಿ ತಾಯಿ, ಐದು ಮಂದಿ ಅಮ್ಮ, ಸಿಮ್ಮಟ್ಟಿ ತಾಯಿ, ಹುರಿಯ ತುಂಡದ ತಾಯಿ, ಬೆಳಜ್ಜಿ ಮಾರಿ ಹುದ್ದಟ್ಟಿ ಮಾರಿ ಚಿಕ್ಕತುಪ್ಪೂರು ಮಾರಿ ಅಣೆಕೆರೆ ಮಾರಿ, ಮಾರಿಗುಳಿ ಮಾರಿ(ಬೇಡಗುಳಿ ತಾಯಿ) ಸೀಗನಮುಂಟಿ ಮಾರಮ್ಮ, ಏಳುಕೇರಿ ಮಾರಮ್ಮ, ನಡುವಲದವ್ವಾ, ದೊಡ್ಡಮ್ಮತಾಯಿ, ಚಿಕ್ಕಮ್ಮತಾಯಿ, ಐನೂರು ಮಾರಮ್ಮ, ಸೀರೆತಾಯಿ ಐದು ಮಂದಿ ಅಮ್ಮ ದೇವತೆಗಳಿರುತ್ತಾರೆ.

**ಮುನಿಗಳು/ವೀರುಗಳು:** ಸೋಲಿಗರ ಗಂಗು ದೇವರು ಆಗಿನ ಕಾಲದಲ್ಲಿ ಕಾಡಿನಲ್ಲಿ ಕಲ್ಲುಗಳಾಗಿ ನಿಂತಿದ್ದಾರೆ. ಸೋಲಿಗರು ಹೇಳುವ ಪ್ರಕಾರ ತಪಸ್ಸು ಮಾಡುವ ರೀತಿಯಲ್ಲಿ ಕೆಲಸ ಮಾಡುವ ರೀತಿಯಲ್ಲಿ, ಎಮ್ಮೆಯನ್ನು ಮೇಯಿಸುವ ರೀತಿಯಲ್ಲಿ, ಹಾಗೂ ಕೊಂಗದಲ್ಲಿ ಧವಸಧಾನ್ಯ ತೂರುವ ರೀತಿಯಲ್ಲಿ, ಕೈಯಲ್ಲಿ ಮಗುವನ್ನು ಹಿಡಿದಿರುವ ಹಾಗೆ, ಇಟ್ಟಿಗೆಯ ಮೇಲೆ ಬರೆ ಎಳೆದಿರುವ ಹಾಗೆ, ಕೆರೆಯಲ್ಲಿ ವ್ಯಕ್ತಿ ನಿಂತಿರುವ ಹಾಗೆ, ಕಂಬಳಿಯನ್ನು ಹೊದ್ದಿರುವ ಹಾಗೆ– ಹೀಗೆ ನಾನಾ ತರಹದಲ್ಲಿ

ಕಾಡಿನ ಒಳಗೆ ವೀರ ಕಲ್ಲುಗಳು ಇವೆ ಎಂದು ಸೋಲಿಗರು ಹೇಳುತ್ತಾರೆ. ಎಮ್ಮೆ ಗದ್ದೆ ವೀರು, ಮುನಿಯಪ್ಪ, ಕಂಬಳಿ ಗದ್ದೆ ವೀರು, ಕೊಂಗಸಿಹರೆ ವೀರು, ಜ್ಯೋತಿ ಬೆಟ್ಟ ವೀರು, ಕಬ್ಬಿನ ಗದ್ದೆ ವೀರು, ನೇಣದಕಲ್ಲು ವೀರು, ಸಿದ್ದನ ಕೆರೆ ವೀರು, ಹೊನ್ನತಿ ವೀರು, ಗೋಂಬೆಗಲ್ಲು ವೀರು, ದಡಸಲಾರೆ ವೀರು, ಇಟ್ಟಗೆ ಬರೆವೀರು, ಈ ಎಲ್ಲ ವೀರು ಮತ್ತು ಮುನಿಗಳು ನಮ್ಮ ದೇವರುಗಳು ಎಂದು ಭಾವಿಸಿ ಅವರುಗಳನ್ನು ಪೂಜಿಸುತ್ತಾರೆ. ಅವರುಗಳಿಗೆ ಭಯ–ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಕಾರಣ ಅವುಗಳು ನಮಗೆ ತೊಂದರೆಯನ್ನು ಕೊಡದೇ ನಮ್ಮನ್ನು ಕಾಪಾಡಲಿ ಎಂಬ ನಂಬಿಕೆ ಸೋಲಿಗರಲ್ಲಿದೆ.

ಸೋಲಿಗರು ಪ್ರಕೃತಿ ಪ್ರಿಯರು; ಪ್ರಕೃತಿಯನ್ನು ದೇವರೆಂದು ಆರಾಧಿಸುತ್ತಾರೆ. ಉದಾ:– ತಮ್ಮ ಅವಶ್ಯಕತೆಗೆ ಯಾವುದಾದರೂ ಒಂದು ಚಿಕ್ಕ ಮರವನ್ನು ಕಡಿಯುವುದಕ್ಕೂ ಮುನ್ನ 'ಕಾತು ಕಾಪಾಡುವ ದೇವರಿಗೆ ಕೈಮುಗಿದು', ಮಾತಾಕಿ, ಕಾಡಿನ ಒಂದು ಕಲ್ಲನ್ನು ಆ ಮರದ ಬುಡದಲ್ಲಿಟ್ಟು ನಂತರ ಕಡಿದ ಮರವನ್ನು ತೆಗೆದುಕೊಂಡು ಬರುತ್ತಾರೆ. ಇದರಲ್ಲಿಯೇ ತಿಳಿಯುತ್ತದೆ ಸೋಲಿಗರಿಗೂ ಕಾಡಿನ ಪರಿಸರಕ್ಕೂ ಇರುವ ಅವಿನಾಭಾವ ಸಂಬಂಧ. ಹೀಗಿರುವುದಕ್ಕೆ ಸೋಲಿಗರು ಅನಾದಿಕಾಲದಿಂದಲೂ ಕಾನನಗಳ ಮಧ್ಯದಲ್ಲಿನ ವಾಸ, ಪರಿಸರದೊಡಗಿನ ನಿಕಟ ಸಂಬಂಧ, ನಾಡಿನಿಂದ ದೂರ ಉಳಿದಿರುವುದು, ಸಮುದಾಯದ ಜೀವನ, ಸರಳ, ಸುಂದರವಾದ ಜೀವನ ಈ ಎಲ್ಲಾ ಕಾರಣಗಳಿಂದ ಸೋಲಿಗರು ಹೆಚ್ಚು ಪ್ರಕೃತಿ ಆರಾಧಕರಾಗಿದ್ದಾರೆ. ಸೋಲಿಗರು ಅದೆಷ್ಟೋ ವರ್ಷಗಳ ಹಿಂದೆ ಸ್ವಚ್ಛಂದವಾಗಿ ಸರಳವಾಗಿ ಬಾಳಿ ಬದುಕಿದವರು. ಆದರೆ ಇತ್ತೀಚೆಗೆ ಸುಮಾರು ೪೦–೫೦ ವರ್ಷಗಳ ಹಿಂದಿನಿಂದ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಾರೆ. ಸೋಲಿಗರು ತಮ್ಮ ಪ್ರಕೃತಿಯಲ್ಲಿ ನಡೆಯುವ ಗೋರುಕಾನ ಹಬ್ಬ, ರೊಟ್ಟಿ ಹಬ್ಬ, ಹೊಸರಾಗಿಹಬ್ಬ, ಜಡೆಸ್ವಾಮಿ ಹಬ್ಬ, ಇತ್ಯಾದಿ ಹಬ್ಬಗಳನ್ನು ಆಚರಣೆ ಮಾಡುವಾಗ ತಮ್ಮ ಇಷ್ಟವಾದ ದೇವರುಗಳ ಮೇಲೆ ಹಾಡುಗಳನ್ನು ಹಾಡುತ್ತಾರೆ.

**೫.೩. ಸೋಲಿಗರು ಕಾಡಿನ ಪರಿಸರಕ್ಕೆ ಸಂಬಂಧಿಸಿದಂತೆ ಮೌಖಿಕವಾಗಿ ಹಾಡುವ ಹಾಡಿನ ಸಾಲುಗಳು**

೧. ಸೋಲಿಗ ಪುರುಷರ 'ಗೊರುಕನ ಕುಣಿತ'ದ ಹಾಡುಗಳು

೨. ಸೋಲಿಗ ಮಹಿಳೆಯರ 'ಹಾಡುಕೆ'ಗಳು

೩. ಓಲಗದ ಹಾಡುಗಳು

೪. ಕಗ್ಗದ ಸಾಲುಗಳು

೫. ಜೇನು ಕೊಯ್ಯುವಾಗಿನ ಹಾಡುಗಳು

**೫.೪.೧. ಬಿಳಿಗಿರಿ ರಂಗನ ಬೆಟ್ಟದ ಸೋಲಿಗರು ಹಬ್ಬಗಳಲ್ಲಿ ಹಾಡುವ ಹಾಡುಗಳು**

ರಾಗಿ ಹಬ್ಬ, ರೊಟ್ಟಿ ಹಬ್ಬ, ಊರೊಟ್ಟಿನ ಹಬ್ಬಗಳಲ್ಲಿ ಸಂಜೆಯಿಂದ ಬೆಳಗಿನವರೆಗೆ ಸೋಲಿಗ ಗಂಡಸರು 'ಗೊರುಕಾನ ಕುಣಿತ' ಮತ್ತು ಮಹಿಳೆಯರು 'ಹಾಡುಕೆಗಳನ್ನು' ಹೇಳುತ್ತಾರೆ. ಈ ಹಾಡುಗಳನ್ನು ಹಬ್ಬಗಳಲ್ಲಿ ಮಾತ್ರ ಹಾಡುತ್ತಾರೆ. ಗೋರುಕಾನ ಹೇಳಬೇಕಾದರೆ ಮೊದಲು ದೇವರ ಮೇಲೆ ಗೋರುಕಾನ

ನಂತರ, ಮರಗಿಡಗಳ ಮೇಲೆ, ಸೌದೆ, ಹಣ್ಣುಗಳ ಮೇಲೆ, ಬೆಳೆದ ಬಳೆಗಳ ಬಗ್ಗೆ, ಹುಡುಗಿಯರ ಮೇಲೆ ಹಾಡುವರು.

**ದೇವರ ಮೇಲೆ ಗೊರುಕಾನ:**

ದೊಡ್ಡ ಸಂಪಗೆ ನನ್ನೊಡೆಯ
ಕಾತು ಕಾಪಾಡಿ ಮಡುಗುನಯ್ಯೊ
ಗೋರುಗೋರುಕಾ ಗೋರುಕಾನ
ಕಾವಿಕಂತೆ ಹೊತ್ತುರಯ್ಯ
ಬಂದು ನಿಂದವನೆ ರಂಗದಲ್ಲಿ
ಗೋರುಗೋರುಕಾ ಗೋರುಕಾನ
ಇನ್ನಿಂತ ವರ್ಷ ಬಾರನಯ್ಯ
ಹೋವಿಸಾಕಿ ನೀನು ಮಡಗುನಯ್ಯೊ
ಗೋರುಗೋರುಕಾ ಗೋರುಕಾನ
ಹೂವಿನ ಕೊಂಬು ಮುರಿಯಗಿಲ್ಲೆ
ಮೊಗ್ಗಿನ ಕೊಂಬು ಬಾಡಗಿಲ್ಲೆ
ಮೊಗ್ಗು ಮೊಗರೆಲ್ಲ ನಿನ್ನದಯ್ಯೊ
ಗೋರು ಗೋರುಕಾ ಗೋರುಕಾನ
ಹಾಗೆವೆನೆನೆತು ನೋಡಿದರೆ
ಜೀವನ ಬೆಂಡು ಅದದೇಲೊ
ಕಾಗೆಲೆ ಹಾಗೆ ಬೆಂದದೆಲೆ
ಗೋರು ಗೋರುಕಾ ಗೋರುಕಾನ
ಇನ್ನಿಂತ ವರ್ಷ ಬರನಯ್ಯೊ
ಕಾಪಿಟ್ಟು ಮಡಗುನು ದೇವರೆಯ್ಯ
ಗೋರು ಗೋರುಕಾ ಗೋರುಕಾನ

**ಸಾರಾಂಶ:** ದೊಡ್ಡ ಸಂಪಿಗೆ ದೇವರು ನಮ್ಮ ದೇವರು, ಅವನೇ ನಮ್ಮ ಸೋಲಿಗರಿಗೆ ಒಡೆಯ. ನಮ್ಮನ್ನೆಲ್ಲಾ ಕಾಪಾಡುವವ ಹಾಗೂ ದೊಡ್ಡಸಂಪಿಗೆ ಒಡೆಯನು ಆಗಿದ್ದಾನೆ. ಕಾವಿ ಬಟ್ಟೆಯನ್ನು ತೊಟ್ಟು ಬಂದು ನಿಂತಿದ್ದಾನೆ. ಈ ದೊಡ್ಡ ಕಾಡಿನಲ್ಲಿ ಕಾಡಿನ ಪ್ರತಿಯೊಂದು ಹೂವು, ಮೊಗ್ಗು ಹಣ್ಣು, ಕಾಯಿ ಎಲ್ಲದರಲ್ಲಿಯೂ ಸಹ ನೀನೇ ತುಂಬಿಕೊಂಡಿದ್ದೀಯಾ. ಈ ಕಾಡಿನ ಪ್ರತಿಯೊಂದು ಜೀವ ರಾಶಿಯೂ ಸಹ ನಿನ್ನಿಂದೇ ಆಗುತ್ತದೆ. ನಿನ್ನನ್ನು ನಾವು ನೆನೆದುಕೊಂಡರೆ ನಮ್ಮ ಜೀವನ ಸಂತೋಷವಾಗುತ್ತದೆ, ಪಾವನವಾಗುತ್ತದೆ. ಮುಂದಿನ ವರ್ಷ ಬರುವವರೆಗೂ ನೀನು ನಮ್ಮನ್ನು ಜೋಪಾನವಾಗಿ ನಿನ್ನ ಕಣ್ಣಲ್ಲಿ ಕಣ್ಣಿಟ್ಟು ನಮ್ಮ ಸೋಲಿಗ ಸಮುದಾಯವನ್ನು ಕಾಪಾಡುವ ಹೊಣೆ ನಿನ್ನದು ಎಂದು ದೊಡ್ಡ ಸಂಪಿಗೆ ದೇವರನ್ನು ಸಾಮೂಹಿಕವಾಗಿ, ನೇರವಾಗಿ ಹಾಡುತ್ತ ಪ್ರಾರ್ಥಿಸುತ್ತಾರೆ.

**ಹಾಡುಕೆ**

ಕಾವಿ ಜೋತುರಲುಟ್ಟು ಸಾಮಿ
ಪಾದಕ ಜಂಗಾ ತೊಟ್ಟಾರೆ......
ಜಡೆಯ ಸಾಮಿಯಾ ಲಿಂಗಾಕ
ಕಾಡೆಯ ಕೊಡಿ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಟಲೆ......
ಜಡೆಯ ಸಾಮಿಯ ಲಿಂಗಾಕ
ಇದು ಮೂಲಗಿರಿ ಅಯ್ಯಾನಿಗ
ದೋಸವಾಲೆ ಗಂಮೆಂದೂ......
ಪಾದಕ ಜಂಗಾ ತೊಟ್ಟಲೆ......
ಜಡೆಯ ಸಾಮಿಯ ಲಿಂಗಾಕ......
ಮೂರು ನಾಮದ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಟಲೆ......
ಜಡೆಯ ಸಾಮಿಯ ಲಿಂಗಾಕಾ
ಹಲಕೇತರು ಬರಲಾಗಿ
ಪಾದಕಜಂಗಾ ತೊಟ್ಟಾಲೆ......
ಜಡೆಯ ಸಾಮಿಯ ಲಿಂಗಾಕಾ
ಬಸಪ್ಪ ಸಾಮಿ ಬರಲಾಗಿ......
ಪಾದಾಕ ಜಂಗ ತೊಟ್ಟಾರೆ......
ಜಡೆಯ ಸಾಮಿಯ ಲಿಂಗಾಕ
ಕುಂಭಪ್ಪಾ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಟಾಲೇ......
ಜಡೆಯ ಸಾಮಿ ಲಿಂಗಾಕ
ಹಾಲನೂರ ಸಾಮಿ ಬರಲಾಗಿ
ಪಾದಕ ಜಂಗಾ ತೊಟ್ಟಾಲೇ......
ಜಡೆಯ ಸಾಮಿಯ ಲಿಂಗಾಕ.

**ಸಾರಾಂಶ:** ಸೋಲಿಗರು ಪೂರ್ವದಿಂದಲೂ ಪೂಜಿಸಿಕೊಂಡು, ಆರಾಧಿಸಿಕೊಂಡು, ಭಯ ಭಕ್ತಿಯಿಂದ ಕಾಡಿನಲ್ಲಿ ತಮ್ಮ ಹಬ್ಬ-ಹರಿದಿನಗಳಲ್ಲಿ ಹಾಗೂ ಗೋರುಕಾನ, ರೊಟ್ಟಿಹಬ್ಬ ಮುಂತಾದ ಆಚರಣೆಗಳಲ್ಲಿ ದೇವರ ಮುಂದೆ ಕುಳಿತುಕೊಂಡು ದೇವರನ್ನು ಸ್ತುತಿಸುವ ಹಾಡೇ ಹಾಡುಕೆ. ಈ ಹಾಡುಕೆಯಲ್ಲಿ ಸೋಲಿಗರು ಒಂದೊಂದು ದೇವರ ಮೇಲೆ ಕಟ್ಟಿಕೊಂಡು ಹಾಡುತ್ತಾರೆ. ಈ ಹಾಡುಕೆಯಲ್ಲಿ ಜಡೆಯ, ಬಸಪ್ಪ, ಕುಂಭಪ್ಪ, ಹಾಲನೂರುಸ್ವಾಮಿ- ಹೀಗೆ ಹಲವಾರು ದೇವರುಗಳ ಮೇಲೆ ಹಾಡುಕೆಯನ್ನು ಸೋಲಿಗ ಮಹಿಳೆಯರು ಹಾಡುತ್ತಾರೆ. ಖಾವಿ ಬಟ್ಟೆಯನ್ನು ಹಾಕಿಕೊಂಡು ಜಡೆಯಸ್ವಾಮಿ ಬರುತ್ತಿದ್ದಾನೆ

ಅವನಿಗೆ, ಅವನ ಪಾದಕ್ಕೆ ನಮಸ್ಕಾರ ಮಾಡುತ್ತಿದ್ದೇವೆ. ಮೂಡಲಗಿರಿಯ ಅಯ್ಯ ಘಮ್ ಎಂದು ಸುವಾಸನೆಯಿಂದ ಕೂಡಿ ಬರುತ್ತಿದ್ದಾನೆ. ಅವನಿಗೆ, ಅವನ ಪಾದಕ್ಕೆ ನಮಸ್ಕಾರ ಮಾಡುತ್ತಿದ್ದೇವೆ. ಕಾಡಿನಿಂದ ಬಸಪ್ಪ, ಹಾಲನೂರು ವೀರಪ್ಪ ಬರುತ್ತಿದ್ದಾನೆ; ಅವನ ಪಾದಕ್ಕೆ ಒಂದು ಸಾರಿ ನಮಸ್ಕಾರ ಮಾಡುತ್ತಿದ್ದೇವೆ. ಜಡೆಯ ಸ್ವಾಮಿಯ ಲಿಂಗಕ್ಕೆ ಅಂದರೆ ಲಿಂಗದ ರೀತಿಯಲ್ಲಿರುವ ಕಾಡಿನ ಕಲ್ಲಿಗೂ ಸಹ ಒಂದು ಸಾರಿ ನಮಸ್ಕಾರ ಮಾಡುತ್ತಿದ್ದೇವೆ. ಹೀಗೆ ಸೋಲಿಗರು ತಮ್ಮ ಕಾಡಿನ ದೇವರುಗಳನ್ನು ಕರೆಯುತ್ತ, ನೆನೆಯುತ್ತ ನೇರವಾಗಿ ಹಾಡಿನ ಮೂಲಕ ನಮಸ್ಕರಿಸಿ ತಮ್ಮ ಕಷ್ಟ ಸುಖಗಳ ಬಗ್ಗೆ ವಿಚಾರಿಸಿಕೊಳ್ಳುತ್ತಾರೆ. ಅದೇ ರೀತಿ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ.

**ಮುಳ್ಳಂದಿ ಹಾಡುಕೆ**

ಪೆಯಕೆ ಬೆಟ್ಟದ ಇಚಲು......
ಇಚಿಲು ಲೊ ಹಂದಿ
ಗೊಕ್ಕಿಸಿ ಗೊಕ್ಕಿಸಿ ಸಾಕತು ಲೋಪಂದಿ.....
ನಡುವಿನ ನೆಟ್ಟಿ ಸುಳಿರೆಂದು
ಸುಳಿಲೆಂದು ಲೊ ಹಂದಿ
ಮುದ್ದೆಗಾ ರಾಗಿ ಮಾವಯ್ಯ
ಸೆಟ್ಟು ಪಾದಕ ಕೊಟ್ಟಗೆ
ಹಾಕಿಯಾದೆ ಲೋ ಹಂದಿ
ಮುದ್ದೆಗ ಮಾಮಯ್ಯ
ಲೋ ಹಂದಿ.......
ಹಳ್ಳದ ಕಲ್ಲು ಗುಡಿರೆಂದೂ ಲೋ ಹಂದಿ
ಇಂದೊಂದಾ ದಾರಿ ನಾಳೆ ಹೋಗಬೇಡಿ
ಮಕ್ಕಳಿರಾ ಲೊ ಹಂದಿ
ನಾಳಿದ್ದು ಹೋಗದಾರಿ ಹೋಗಿ ಲೋ ಹಂದಿ
ನೀನೊಂದ ಸಾಕುನು ಅಕ್ಕದಿರಾ
ಲೊ ಹಕ್ಕದಿರಲೋ ಹಂದಿ
ಕಾಸಿನ ಕಳ್ಳೆ ಹೊ ಜೊಚಿ ಮೆಲರಿ
ಜೋ ಜೋ ಹೋ...
ಬಕ್ಕಳ ಕಳ್ಳೆಕ ಮುಗುನಾಗಿ
ಜೋ ಜೋ ಜೋ... ಮೇಲರಿ
ಜೋ ಜೋ ಹೋ...
ಮಂಗಳರ ಸಂತೆ ಮರಿಯಳ್ಳಿ
ಜೋ ಜೋ ಹೋ... ಮಲರಿ
ಲೆ ಲೇ ಲಾ ..

ಕಡವೆ ಕಂಬಳಿ ತೊಟ್ಟವನ
ಮೇಲರಿ ಜೋ ಜೋ ಹೋ...
ಗುಡು ಗೂಡೆಂದು
ಗೊಂಟು ಕರಡಿ
ದೊಡ ದಾರಿಯೇ ಹೋಗನೆ
ಗುಡು ಗೊಡೆಂದು ಗೊಂಟು ಕರಡಿ
ಹಾಳುದ್ದ ಬತ್ತಾವ ಕಿಳನೆ
ಗುಡು ಗೂಡೆಂದು ಗೊಂಟು ಕರಡಿ

**ಹಾಡಿದವರು:** ಶ್ರೀಮತಿ ರಂಗಮ್ಮ ಕೋಂ ಬೀದಿ ನಂಜೇಗೌಡ ಬಂಗ್ಲೇ ಪೋಡು, ಬಿಳಿಗಿರಿರಂಗನಬೆಟ್ಟ ಯಳಂದೂರು ತಾಲ್ಲೂಕು ಚಾಮರಾಜನಗರ ಜಿಲ್ಲೆ.

**ಪುರಾತನ ಕಾಲದಲ್ಲಿ ಪ್ರಾಣಿಬೇಟೆ:** ಹಿಂದಿನ ಕಾಲದಲ್ಲಿ ಹಂದಿ ಮುಂತಾದ ಪ್ರಾಣಿಗಳನ್ನು ಬಲೆ, ಕುಣಿಕೆ ಹಾಕಿ ಹಿಡಿದು ಆಹಾರಕ್ಕೆ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. "ಇಂದು ಹೋದ ದಾರಿಯಲ್ಲಿ ನಾಳೆ ಹೋಗಬೇಡಿ, ಮಾಯದಾ ಬಲೆ ಮಡಗಿದದೆ" ಎಂದು ಹಂದಿ ತನ್ನ ಮಕ್ಕಳಿಗೆ ಬುದ್ಧಿ ಹೇಳುತ್ತದೆ. ಸಿಡಿಮದ್ದನ್ನು ರಾಗಿ ಹಿಟ್ಟಿನಲ್ಲಿ ಹಾಕಿ ಇಡುತ್ತಿದ್ದ, ಗುಂಡಿ ತೋಡಿ ಖೆಡ್ಡಾ ರೀತಿ ಹಿಡಿಯುತ್ತಿದ್ದ ವಿಚಾರವೂ ನಮಗೆ ತಿಳಿದುಬರುತ್ತದೆ. ಈಗ ಅರಣ್ಯ ಕಾಯಿದೆಗಳು ಬಂದಿರುವುದರಿಂದ ಇದು ನಡೆಯುವುದಿಲ್ಲ. ಆದರೆ ಯಾವುದಾದರೂ ಪ್ರಾಣಿ ತಾನೆ ತಾನಾಗಿ ಕೊಲ್ಲಲ್ಪಟ್ಟಿದ್ದರೆ ಪಾಲು ಹಾಕಿಕೊಳ್ಳುವುದು ರೂಢಿಯಲ್ಲಿದೆ. ಈ ರೀತಿಯಾಗಿ ಸೋಲಿಗರು ಹಂದಿಯ ಮೇಲೆ ಹಾಡನ್ನು ಕಟ್ಟಿ ಹಾಡುವುದನ್ನು ನೋಡಬಹುದಾಗಿದೆ.

**ಮಾಸ್ತಮ್ಮನ ಮೇಲೆ ಹಾಡುಕೆ**

ಮಾಸಿತಮ್ಮ.. ಲೆಲೆಲೋ..
ಕೊಂಡ ಮಾಳೆಂಬ ದಾರಿಯಲ್ಲಿ
ಮಾಸಿತಮ್ಮ ಲಲಾಲೆ.. ಲೆಲೆಲೋ..
ಗಂಡನ ತಲೆಯ ಮಾಡಿಲಕಟ್ಟಿ
ಮಾಸಿತಮ್ಮ ಲಲಾಲೇ.. ಲೆಲೆಲೋ..
ಮಾಸಿತಮ್ಮ ಸಿಗಸರಿ ಗಂಧವ ತರಿದವಳೆ
ಮಾಸಿತಮ್ಮ ಗಂಡನ ತಲೆಯ ತಿರಿದಾಳೊ
ಮಾಸಿತಮ್ಮ ಮುಕುತ್ತಿ ಕಳೆದು ಒಲೆ ಮುಂದೆ
ಮಾಸಿತಮ್ಮ ಮುರುದಳ ಕೊಂಡಕಾ ಮುಗುನಗೆ
ಮಾಸಿತಮ್ಮ ಇಂದಾಳ ಕೊಂಡಾಕ ಕಣ್ಣೀರು

**ಹಾಡಿದವರು:** ಕೇತಮ್ಮ, ಪುರಾಣಿ ಪೋಡು, ಬಿಳಿಗಿರಿರಂಗನಬೆಟ್ಟ, ಯಳಂದೂರು ತಾ., ಚಾಮರಾಜನಗರ ಜಿಲ್ಲೆ.

**ಕಾಡಿನ ಹೂ ಬಗ್ಗೆ ಹಾಡು**

ಸೇಬಿನ ಕೂಬೆ ಸೋವಿನೊವ್ವೆ
ಹನುಕು ಮಳೆಕ ಜಲ್ಲೆಂದೂಲ
ಗೋರು ಗೋರುಕಾ ಗೋರುಕಾನ
ಬೆಟ್ಟ ಬೆಟ್ಟವೆ ಹೋಗನೆಲೊ
ಬೆಟ್ಟಸುಳ್ಳಿಯ ಹೂವದೆಲೊ
ಗೋರು ಗೋರುಕಾ ಗೋರುಕಾನ
ಹಳ್ಳಹಳ್ಳವೆ ಹೊಗನೆಲ
ಹಳ್ಳ ಸುಳ್ಳಿಯ ಹೂವದೆಲೊ
ಗೋರು ಗೋರುಕಾ ಗೋರುಕಾನ
ಬೆಂಜಗುಂಡಿಯ ಜಾಲದುಂವೆ
ದೇವರ ಮಂಡೇಕ ನಿ ಬಂದೆಲೊ
ಗೋರು ಗೋರುಕಾ ಗೋರುಕಾನ
ಗೋರು ಗೋರುಕಾ ಗೋರುಕಾನ
ಸೂರುಗಿ ಹೂವಿನ ಸಾರಮಲೆ
ದರಕತ್ತಿನ ಜೋಲಿದಾದೆ
ಗೋರು ಗೋರುಕಾ ಗೋರುಕಾನ
ಮಲ್ಲಿಗುವಿನ ರುಂಡಮಾಲೆ
ದೇವರ ಮಂಡೆಲಿ ಮೆರೆದದೆಲೊ
ಗೋರು ಗೋರುಕಾ ಗೋರುಕಾನ
ಸುಳ್ಳಿ ಹೂವಿನ ಸರಮಾಲೆಲೋ
ಗೋರು ಗೋರುಕಾ ಗೋರುಕಾನ
ಮುತ್ತಗೂವಿನ ಸಾರ ಮಾಲೆ
ಮುತ್ತುಗಲಕ್ಕೆ ಮುದ್ದು ಪಾದ
ಗೋರು ಗೋರುಕಾ ಗೋರುಕಾನ
ಕಾಡು ಕಾಡೆಲ್ಲ ಕೋಲಿ ಹೂ
ಕಾಡಕೂಲಿಯ ಹೂವದೆಲ
ದಾರಮಂಡೆಲೆ ಜೋಲಿದಾದೆ
ಅಯ್ಯನ ಮಂಡೆಲೆ ಜೋಲಿದಾದೆ
ಗೋರು ಗೋರಕಾ ಗೋರುಕಾನ

**ಸಾರಾಂಶ:** ಗೋರುಕಾನ ಕುಣಿಯುತ್ತ ಸೋಲಿಗರು ಕಾಡಿನ ಪ್ರತಿಯೊಂದು ಹೂವುಗಳನ್ನು ದೇವರಿಗೆ ಕೊಯ್ದು ಸರಮಾಲೆ ದೇವರಿಗೆ ಮುಡಿಸುತ್ತ ಆನಂದದಿಂದ ಹಾಡಿ ಕುಣಿಯುತ್ತಾರೆ. ಅದೇ

ರೀತಿ ಇಲ್ಲಿ ಸೇಬಿನ ಹೂವು ಸೇಬಿನಕೋಬೆ ಪೋಡಿನದ್ದು. ಈ ಹೂವು ಹನಕು ಮಳೆ ಅಂದರೆ ಆದ್ರಿ ಮಳೆಯಲ್ಲಿ ನೀನು ಹೂವು ಬಿಟ್ಟು ದೇವರಿಗೆ ಮುಡಿಸುತ್ತೇವೆ. ಅದೇ ರೀತಿ ಸೊಳ್ಳಿಯ ಹೂವು, ಬೆಂಡೆಯ ಹೂವು, ಬೆಜ್ಜಲ ಹೂವು, ಮುತ್ತುಗದ ಹೂವು, ಕಾಡು ಕೋಲಿ ಹೂವು ಇವುಗಳೆಲ್ಲ ಯಾರ ತಲೆಯ ಮೇಲೆ ತೂಗುತ್ತೀರಾ ಎಂದರೆ ದೇವರ ಮಂಡೇಲಿ, ಅಯ್ಯನ ಮಂಡೇಲಿ ಮುಡಿಸಿ ಪೂಜೆ ಮಾಡಿಸಿ ಸಂತೋಷಪಡುತ್ತೇವೆ ಎಂದು ಸೋಲಿಗರು ಹಾಡಿ ಕುಣಿಯುತ್ತಾರೆ.

**ಕಾಡ ಸೌದೆ ಬಗ್ಗೆ ಹಾಡು**

ಸೋಲಿಗರು ಸೌದೆಯ ವರ್ಣನೆಯನ್ನು ಮಾಡುತ್ತ ಮರಗಿಡಗಳನ್ನು ಪೂಜಿಸುತ್ತಾರೆ.

ಮತ್ತಿ ಸೊಯಿದೆ ಗೋರುಕಾನಾದೆ
ಬೆಚ್ಚದ ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ
ಸೊರವಿಲು ಸೊಯಿದೆ ಗೋರುಕಾನಾದೆ
ಬೆಜ್ಜದ ಸೊಯಿದೆ ಗೋರುಕಾನಾದೆ
ಬೀಡಿ ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ
ಬೆಂಡೆ ಸೊಯಿದೆ ಗೋರುಕಾನಾದೆ
ನೀರು ಮತ್ತಿ ಸೊಯಿದೆ ಗೋರುಕಾನಾದೆ
ಸೀಳಲು ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ
ಸಿರೊನ್ನೆ ಸೊಯಿದೆ ಗೋರುಕಾನಾದೆ
ಸುರುಗಿ ಸೊಯಿದೆ ಗೋರುಕಾನಾದೆ
ಬೂರದ ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ
ಕಂಚಳ ಸೊಯಿದೆ ಗೋರುಕಾನಾದೆ
ಎಬ್ಬೆವು ಸೊಯಿದೆ ಗೋರುಕಾನಾದೆ
ಬಾಣೆ ಸೊಯಿದೆ ಗೋರುಕಾನಾದೆ
ಪಪಟ್ಟೆ ಸೊಯಿದೆ ಗೋರುಕಾನಾದೆ
ಹಾಲುಪ್ಪೆ ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ
ನೆಲ್ಲಿ ಸೊಯಿದೆ ಗೋರುಕಾನಾದೆ
ನೇರಿ ಸೊಯಿದೆ ಗೋರುಕಾನಾದೆ
ಮುತ್ತಗದ ಸೊಯಿದೆ ಗೋರುಕಾನಾದೆ
ಅಗುರಿ ಸೊಯಿದೆ ಗೋರುಕಾನಾದೆ

ಕಪ್ಪಾಲಿ ಸೊಯಿದೆ ಗೋರುಕಾನಾದೆ
ದೂಪದ ಸೊಯಿದೆ ಗೋರುಕಾನಾದೆ
ಗೋರು ಗೋರುಕಾ ಗೋರುಕಾನಾದೆ

**ಸಾರಾಂಶ:** ಸೋಲಿಗರು ಕಾಡಿನಲ್ಲಿರುವ ಪ್ರತಿಯೊಂದು ಮರವನ್ನು ಮಕ್ಕಳಿಂದ ಹಿಡಿದು ದೊಡ್ಡವರೂ ಗುರುತಿಸುತ್ತಾರೆ. ಪ್ರಕೃತಿದತ್ತವಾಗಿಯೇ ಅವರ ಸಮುದಾಯದ ಆಚರಣೆಗಳಲ್ಲಿ ಈ ರೀತಿ ಪ್ರಕೃತಿ ಬಗೆಗಿನ ಜ್ಞಾನವನ್ನು ಸಹಜವಾಗಿಯೇ ತಿಳಿದುಕೊಳ್ಳುತ್ತಾರೆ. ಅವುಗಳಲ್ಲಿ ಒಂದು ಹಾಡೇ ಈ ಕಾಡು ಸೌದೆಯ ಹಾಡು. ಈ ಹಾಡಿನಲ್ಲಿ ಮತ್ತಿ ಸೌದೆ, ಬೆಜ್ಜಲಸೌದೆ, ನೀರುಮತ್ತಿ ಸೌದೆ. ಸೀರೊನ್ನೆ ಸೌದೆ, ಬೀಡಿ ಸೌದೆ, ನೆಲ್ಲಿ ಸೌದೆ ಕಪ್ಪಾಲಿ ಸೌದೆ, ಮುತ್ತುಗದ ಸೌದೆ, ನೇರಿ ಸೌದೆ ದೂಪದ ರ್ಸವದೆ, ಬಣೆ ಸೌದೆ ಇತ್ಯಾದಿ ಕಾಡಿನ ನೂರಾರು ಸೌದೆಯ ಮರಗಳನ್ನು ಹಾಡು ಕಟ್ಟಿ ಹೇಳುವುದರ ಮೂಲಕವಾಗಿ ತಿಳಿದುಕೊಂಡಿರುತ್ತಾರೆ. ಇದನ್ನು ತಮ್ಮ ಪರಿಸರದಲ್ಲಿಯೇ ಮಕ್ಕಳು ಕಲಿಯುವುದು ಕಂಡುಬರುತ್ತದೆ.

**ಹುಡುಗಿಯರಿಗೆ ಸಂಬಂಧಪಟ್ಟ ಹಾಡು**

ಹಬ್ಬಗಳಲ್ಲಿ ಸೋಲಿಗ ಹುಡುಗಿಯ ಬಗ್ಗೆ ಹಾಡಿನ ಮೂಲಕ ಸೋಲಿಗ ಹುಡುಗರು ಗೋರುಕಾನ ಹಾಡನ್ನು ಹಾಡಿ ಸಂತೋಷ ವ್ಯಕ್ತಪಡಿಸುತ್ತಾರೆ.

ಗೋರುಗೋರುಕಾ ಗೋರುಕಾನ
ಚೆನ್ನಾಂಗಿ ಮರ ತಾಳಿನಲ್ಲಿ
ನಿನಮ್ಮಿ ಚೆನ್ನಾಂಜಿ ಕೂತಿದ್ದಾದು
ಗೋರು ಗೋರುಕಾ ಗೋರುಕಾನ
ನನ್ನ ಜೊತೆಯಲ್ಲಿ ಬಂದಿದ್ದಾರೆ
ಕೈಕಾರೇಡಿಯ ಕಬ್ಬಿಸೆಲ
ಮೈಸೂರು ಪಾಕ ತಿನ್ನಿಸೆಲ
ಗೋರಕ ನೋಡಿದರೆ ಮೈಗೆರುಡುಗಿ
ದಂಡೇಲಿ ನೋಡಿದರೆ ರಾಜ ಕುವರಿ
ಗೋರು ಗೋರುಕಾ ಗೋರುಕಾನ
ಕಕ್ಕೆ ಕರಿಯನ ದಾರಿಯಲ್ಲಿ
ನಿನ್ನ ಕೆಕ್ಕೆ ಕರಿಯದೆ ಬುಡದಿಲ್ಲೆಲ
ಗೋರು ಗೋರುಕಾನ ಗೋರುಕಾನ
ಸಿಕ್ಕ ಕಂಡಿಲಿ ಸಿಕ್ಕಲೆಲೆ
ನಿಬಗ್ಗ ಕಡ್ಡಿಲಿ ನಿಬಗ್ಗಿತಿವೆ
ಗೋರು ಗೋರುಕಾನ ಗೋರುಕಾನ
ದೊರೆಯನ ಬಟ್ಟ ದಾರಿಲಿಲ
ಈ ಹೆಣ್ಣಿಗೆ ಪಟಿ ದೊರೆತನವ

ಗೋರು ಗೋರುಕಾ ಗೋರುಕಾನ
ಕಣ್ಣೀರು ಮರ ತಾಳಿನಲ್ಲಿ
ಕಣ್ಣಿನ ನೀರು ದಾರ ಬಂದೊ
ಗೋರು ಗೋರುಕಾ ಗೋರುಕಾನ
ಹಾಗರ ಕಟ್ಟಿ ಹಳ್ಳದಲ್ಲಿ
ಹಾಳಗೆಲಿ ನೀರು ಕಾದದೆಲ
ತಣ್ಣಿರು ತಾನ ನೀಮಾಡಿಲ
ಬಿಸಿ ನೀರು ತಾನ ನಾಮಾಡಿಲ
ಗೋರು ಗೋರುಕಾ ಗೋರುಕಾನ
ಬೆಟ್ಟಕಾ ಬೆಟ್ಟ ಬಂದಲುವೆ
ಕತ್ತಿಕ ಬೆಟ್ಟ ಬಂದಲುವೆ
ಅದು ಹೊಂದುಕ ನೋಡ್ರುತಿಗಿ
ಗೋರು ಗೋರುಕಾ ಗೋರುಕಾನ

ಸೋಲಿಗ ಹುಡುಗ ಮತ್ತು ಪುರುಷರು ಸೋಲಿಗ ಹುಡುಗಿಯರನ್ನು ತಮಾಷೆ ಮಾಡುತ್ತ ಹರೆಯದ ವಯಸ್ಸಿನಲ್ಲಿ ತಮಗೆ ಇಷ್ಟವಾದವರನ್ನು ಪ್ರೀತಿಸುವುದರ ಜೊತೆಗೆ ಹುಡುಗಿಯರ ಮೇಲೆ ಹಾಡನ್ನು ಕಟ್ಟಿ ಹಾಡುತ್ತಾರೆ. ಇಲ್ಲಿ ಒಂದು ಹಾಡಿನ ಮೂಲ ತಿಳಿಸಲಾಗಿದೆ. ಚೆನ್ನಂಗಿ ಮರದ ನೆರಳಿನಲ್ಲಿ ಚೆನ್ನಿ ನೀನೇ ಅಲ್ಲಿ ಕುಳಿತಿದ್ದವಳು. ನೀನು ಅಲ್ಲಿ ಏಕೆ ಕುಳಿತಿದ್ದೆ ನನ್ನ ಜೊತೆಯಲ್ಲಿ ಬಂದಿದ್ದರೆ ನಿನ್ನ ಕೈಯಲ್ಲಿ ಒಂದು ಮಗುವನ್ನು ಕೊಡುತಿದ್ದೆನಲ್ಲಾ? ಎಂದು ಹುಡುಗ ಹೇಳುತ್ತಾನೆ. ನಿನಗೆ ಮೈಸೂರು ಪಾಕ ತಿನ್ನಿಸುತಿದ್ದೆ ಹತ್ತಿರಕ್ಕೆ ಬಂದು ನೋಡಿದರೆ ನೀನು ರಾಜಕುವರಿ ಹಾಗೆ ಕಾಣುತ್ತಿದ್ದಿಯಾ; ನಾನು ನಿನ್ನ ಕೆನ್ನೆಯನ್ನು ಮುತ್ತಿಕ್ಕದೇ ಬಿಡುವುದಿಲ್ಲಾ ನಾವಿಬ್ಬರು ಒಂದಾಗಿ ಕಾಡಿನಲ್ಲಿ ಕೂಡಿಕೊಂಡು ಸಂಸಾರ ಮಾಡೋಣ ಬಾ ಎಂದು ಹಾಡುತ್ತಾರೆ.

**ಸೋಲಿಗ ಮಹಿಳೆಯರು ಹಾಡು 'ಹಾಡುಕೆಗಳು'**

ಸೋಲಿಗ ಮಹಿಳೆಯರು ಹಬ್ಬಗಳಲ್ಲಿ ದೇವರ ಮುಂದೆ ಕುಳಿತು ಬೆಳಗಿನ ಜಾವದವರೆಗೂ ಅವರದೇ ಆದ ಭಾಷೆಯಲ್ಲಿ **'ಹಾಡುಕೆ'** ಹಾಡುತ್ತಾರೆ. ರಾಗ ದೀರ್ಘವಾಗಿ ಎಳೆದು ಹಾಡುತ್ತಾರೆ. ಇವರ ಪಕ್ಕ ಹಬ್ಬದಲ್ಲಿ ಗಂಡಸರು ಗೋರುಕಾನ ಹಾಡು ಹೇಳುತ್ತಿರುತ್ತಾರೆ. ಹಾಡುಕೆ ಪ್ರಾರಂಭ ಮಾಡಿಕೊಡಲು ಒಬ್ಬರು ಗಂಡಸರು ಇರುತ್ತಾರೆ. ಅವರನ್ನು ಸೋಲಿಗರು ಅವರ ಭಾಷೆಯಲ್ಲಿ **'ಗುರು'** ಎಂದು ಕರೆಯುತ್ತಾರೆ.

ಕಾವಿ ಜೋತುರಲುಟ್ಟು ಸಾಮಿ
ಪಾದಕ ಜಂಗಾ ತೊಟ್ಟಾರೆ......
ಜಡೆಯ ಸಾಮಿಯಾ ಲಿಂಗಾಕ
ಕಾಡೆಯ ಕೊಡಿ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಟಲೆ......

ಜಡೆಯ ಸಾಮಿಯ ಲಿಂಗಾಕ
ಇದು ಮೂಲಗಿರಿ ಅಯ್ಯಾನಿಗ
ದೋಸವಾಲೆ ಗಂಮೆಂದೂ......
ಪಾದಕ ಜಂಗಾ ತೊಟ್ಲಲೆ......
ಜಡೆಯ ಸಾಮಿಯ ಲಿಂಗಾಕ......
ಮೂರು ನಾಮದ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಲಲೆ......
ಜಡೆಯ ಸಾಮಿಯ ಲಿಂಗಾಕಾ
ಹಲಕೇತರು ಬರಲಾಗಿ
ಪಾದಕಜಂಗಾ ತೊಟ್ಟಾಲೆ......
ಜಡೆಯ ಸಾಮಿಯ ಲಿಂಗಾಕಾ
ಬಸಪ್ಪ ಸಾಮಿ ಬರಲಾಗಿ......
ಪಾದಾಕ ಜಂಗ ತೊಟ್ಟಾರೆ......
ಜಡೆಯ ಸಾಮಿಯ ಲಿಂಗಾಕ
ಕುಂಭಪ್ಪಾ ಸಾಮಿ ಬರಲಾಗಿ
ಪಾದಕ ಜಂಗ ತೊಟ್ಟಾಲೇ......
ಜಡೆಯ ಸಾಮಿ ಲಿಂಗಾಕ
ಹಾಲನೂರ ಸಾಮಿ ಬರಲಾಗಿ
ಪಾದಕ ಜಂಗಾ ತೊಟ್ಟಾಲೇ......
ಜಡೆಯ ಸಾಮಿಯ ಲಿಂಗಾಕ

**ರಂಗಸಾಮಿ ಮೇಲೆ ಹಾಡುಕೆ**

ಅಂಕಲ್ಲು ಮೇಲೆ ಜಂತ ಪಲ್ಲಕ್ಕಿ
ಮಣಿಯಾಕು ದಾಸಯ್ಯ
ದಾಸನ ಹೆಂಡತಿ ದೇಶಕ ಚೆಲುವೆ
ಮಣಿಯಾಕು ದಾಸಯ್ಯ
ರಂಗ ಸಾಮಿಕ ಕನ್ನಡ...
ರಾಮಸಾಮಿಕ ಬಾಳಗಳೆ..ಎ.. ಎ
ಬಾಣಾ ಗೂಡುಗಿ ಹೋಗುವಾಗ
ಮಾದಪ್ಪನಿಗೆ ಕನ್ನಡ..
ರಾಮಸಾಮಿಕ ಬಾಣಗಳೆ...
ರಂಗಸಾಮಿಕ..

ಕೇತಸಾಮಿಕಾ ಕನ್ನಡ..
ರಂಗಸಾಮಿಕ ಬಾಣಗಳೆ..ಎ .. ಎ
ಬಾಣಗುಡುಗಿ ಹೋಗುವಾಗ..
ಜಡೆಯಪ್ಪನಿಗಾ ಕನ್ನಡ..
ರಾಮಸಾಮಿಕ ಬಾಣಗಳೆ ..ಎ.. ಎ
ಬಾಣಗೂಡುಗಿ ಹೋಗುವಾಗ...
ಕಡೆಕೊಡಿಯ್ಯನಿಗ ಕನ್ನಡಿ ..ಎ..
ರಾಮಸಾಮಿಕ ಬಾಣಗಳೆ..ಎ.. ಎ..
ಬಾಣಗುಡುಗಿ ಹೋಗುವಾಗ
ಕಾರಯ್ಯನಿಗೆ ಕನ್ನಡಿ..
ರಂಗಸಾಮಿಕಾ ಬಾಣಗಳೆ ..ಎ.. ಎ
ಬಾಣಗುಡುಗಿ ಹೋಗುವಾಗ
ಹಾಲಕೇತಪ್ಪನಿಗ ಕನ್ನಡಿ..
ರಾಮಸಾಮಿಕ ಬಾಣಗಳೆ..ಎ..
ಬಾಣಗೂಡುಗಿ ಹೋಗುವಾಗ..
ಮುರುನಾಮುದಾ ಒಡೆಯನಿಗ ಕನ್ನಡಿ..
ರಾಮಸಾಮಿಕ ಬಾಣಗಳೇ..
ಬಾಣಗುಡುಗಿ ಹೋಗುವಾಗ..
ಹಾಲನೂರಯ್ಯನಿಗೆ ಕನ್ನಡಿ..
ರಾಮಸಾಮಿಕ ಬಾಣಗಳೆ
ಬಾಣಗುಡುಗಿ ಹೋಗುವಾಗ

**ಸೋಲಿಗ ಜನರು ದೇವರ ಕರೆವ ಹಾಡು**

ಹಬ್ಬದಲ್ಲಿ ದೇವರನ್ನು ಕರೆದು ಸೋಲಿಗ ಜನರು ತಮ್ಮ ಕಷ್ಟವನ್ನು ಪರಿಹಾರ ಮಾಡಲು ಕೇಳಿಕೊಳ್ಳುತ್ತಾರೆ. ಈ ಸಮಯದಲ್ಲಿ ಹಾಡುವ ಹಾಡಿಗೆ 'ಓಲಗ' ಎನ್ನುತ್ತಾರೆ.

ಕೂಗು ಕೂಗು ಮಾದೇವನ
ನಿಂದು ಕೂಗೊ ದುಂಡು ಮಾದೇವನ
ಕತ್ತಿಯ ವಡು ರತ್ತದ ಬೊಟ್ಟು
ನಿಂದು ಕೂಗೂ ದುಂಡು ಮಾದೇವನ
ಎಕ ನನ್ನಯ್ಯಾ ರೂಡಿಗಳೆಲ್ಲ
ಮೆಲ್ಲಗೆ ಬಂದರೂ ಮಾದೇವ
ಕೂಗೂ ಕೂಗು ಮಾದೇವನ

ನಿಂದು ಕೂಗೂ ದುಂಡು ಮಾದೇವನ
ಹಳ್ಳದ ಕಲ್ಲು ಹೂವಿನ ಗಂಟು
ನಿಂದು ಕೂಗೂ ದುಂಡು ಮಾದೇವನ
ಮುಳ್ಳುವಿಗೆ ಮುಡುವಿನ ಜಂಗು
ಮಳ್ಳಗೆ ಬಂದರು ಮಾದೇವನ
ಕೂಗು ಕೂಗೂ ಮಾದೇವನ
ನಿಂದು ಕೂಗೂ ದುಂಡು ಮಾದೇವನ
ಕಾಸೆಯ ಕಟ್ಟಿ ಕರಿಮೀಸೆ ಬದ್ದುರ
ಮೀಸೆಯ ತಿರುಗಿಸಿ ಬರ್ತಾವನೆ
ತೋಪಿನ ವನದಲ್ಲಿ ಕಾಸೆಯ ಕಟ್ಟಿ
ನಿಂದು ಕೂಗೂ ದಂಡು ಮಾದೇವನ
ಬಾಯರ ಬಸವಣ್ಣನಿಗೆಲ್ಲ
ನಿಂದು ಕೂಗೂ ದುಂಡು ಮಾದೇವನ
ಬಾಯರ ಬಸವಣ್ಣನಿಗೆಲ್ಲ ನಿಂದು ಕೂಗೊಂದುಂಡು ಮಾದೇವನ
ಸಣ್ಣ ಉಲ್ಲಲ್ಲಿ ಉದುರಕ್ಷರ
ಸರಣರಿಗೆಲ್ಲಾ ಮಾದಪ್ಪ
ಶವಣನಾ ಕೊಂದ ಬೊಳಿಯ ಮೇಲೆ
ಸಸಾತೀರವಾರೆ
ಕೂಗೂ ಕೂಗೂ ಮಾದೇವನ
ನಿಂದು ಕೂಗೂ ದುಂಡು ಮಾದೇವನ
ಹಾಲಿಕರವೇನೊ ಸಾಮಿ ಹೋಗಿ ಕರೆವೆನು
ಬೇಡಿ ಬನ್ನಾ ಮಾಡುವಾಗ
ಬೇಗನೆ ಬರಾನೊ
ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗಾ
ಮರದ ದೂಪದೇವರಿಗ
ಕಾನ ದೂಪದೇವರಿಗ
ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಮಣ್ಣುದೂಪಾ ದೇವರಿಗಾ
ಅಪಾ ದೂಪ ದೇವರಿಗ
ದೂಪದ ಪರಿಮಳ ದೇವರಿಗ

ಅಡವಿ ದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಎಕೊ ನನ್ನಯ್ಯ ಕೂಡಿಗಳೆಲ್ಲ
ದೂಪಾದ ಪರಿಮಾಳ ದೇವರಿಗ
ಮರುಕೊಂದಾರತಿ ಎಲೆಗಳ ಪೂಜೆ
ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಲಿಂಗಾ ಬಾ ಮಾದೇವ ಬಾ
ಗಿರಿಯಲ್ಲಿ ಮಾದೇವ ಲಿಂಗಾ ಬಾ
ಎಕೊ ನನ್ನಯ್ಯಾ ಕೋಡಿಗಳೆಲ್ಲ
ಮೆಳ್ಳಗೆ ಬಂದರು ಮಾದೇವ
ಎಕೋ ನನ್ನಯ್ಯಾ ರೂಡಿಗಳೆಲ್ಲಾ
ಮೆಳ್ಳಗೆ ಬಂದರು ಮಾದೇವ
ಬಾಗೆ ಮರ ಬಾಗಿದವೂ
ಬರಲು ಕೊಂಬು ಚಿಗುರೆರಿದಾವು
ಬರಲು ಕೊಂಬು ಚಿಗುರರೆದಾವು
ಪಂದಪ್ಪ ನರಳಲ್ಲಿ ಗದ್ದೆಗೆಯ್ಯೊ
ಕೊಪವ ಕಟ್ಟೆರೋಷವ ಹೊಡೆದು
ಲಿಂಗ ಬಾ ಮಾದೇವ ಬಾ
ಎಕೆನ್ನಯ್ಯ ರೂಡಿಗಳೆಲ್ಲ ಮೆಳ್ಳಗೆ ಬಂದರು ಮಾದೇವ.

**ಕಗ್ಗ**

ಹಬ್ಬ ಪ್ರಾರಂಭಿಸುವಾಗ ಒಬ್ಬ ವ್ಯಕ್ತಿ ದೇವರ ಮುಂದೆ ನಿಂತು ಐದು ಕಗ್ಗಗಳನ್ನು ಹಾಕುತ್ತಾನೆ. ಇದರ ಅರ್ಥವೆಂದರೆ ಇಡೀ ರಾತ್ರಿ ಹಬ್ಬವು ನಿಶ್ಚಿಂತೆಯಿಂದ ನಡೆದು ಯಾವುದೇ ಪ್ರೇತ–ಪಿಶಾಚಿಗಳು ಬಾರದಿರಲಿ ಎಂದು ಪ್ರಾರ್ಥಿಸುವರು.

ಎಲೆಲೆಲೊ ಬಾರ ಬಾರೆಲೊ
ವೀರನ ಅರಲಂಗಿರುವುದು
ದೇವೇಂದ್ರ ಪಟ್ಟಣ
ಅಂದಾಕ್ಷಣಕ್ಕೆ
ದೇವೇಂದ್ರನ ಮಗಳನ್ನೆ
ಕರೆತಂದು ಹೋಮದ
ಬಿಳಿ ಆನೆಯ ಮಾಡಿ
ದೇವೇಂದ್ರನ ಪಟ್ಟಾಣಕಾ ಹೋಗಿ

ಎಲುಗದ ಬಿದಿರು
ನೀಲಿ ಮಾದ
ಕೊಟ್ವಾಣ್ಣ ಬಾಯಿ ಮೇಲೆ
ಪರವಾದಿ ಹಾಲು
ಬಾಡಲಾಗಿ ನೋಡಿದರೆ
ಬಾಳೆ ಆನೆ ಕಂಬ
ತೆಂಕಾಲಾಗಿ ನೋಡಿದರೆ
ತೇಕಿನಾನೆ ಕಂಬ
ಮೂಡಲಾಗಿ ನೋಡಿದರೆ
ಮುತ್ತಿನಾನೆ ಕಂಬ
ಪಡುಗಲಾಗಿ ನೋಡಿದರೆ
ಸಜ್ಜೆ ಆಸೆ ಕಂಬ
ನೆಟ್ಟ ನಡುವಣ ಚಿನ್ನಾದಾನೆ ಕಂಬ
ಚಿನ್ನದಾನೆ ಮೇಲೆ
ಎಳು ಮಂದಿ ಮಾದೇಶ್ವರು
ಕಟ್ಟೆ ಕಟ್ಟೆ ದೇವರು
ಕಟ್ಟೆಗಾಣ್ಣ ದೇವರು
ಈಗೆರಮರ ಇನ್ನು
ಹೊಡೆದು ಮೂಡಿದ
ಮಾದೇಶ್ವರ ಬರ್ತಾನೆ ಆಲು
ಎಲೆಲೆಲೂ ಬಾರ ಬಾರೆಲೊ
ಬಸಬಸವಣ್ಣ
ಬಸವಣ್ಣನಿಗ ಮೈ ಜೋಡು
ನಿಸದಲ್ಲಿ ತೊಳು
ಪಾಪದಲ್ಲಿ ಕೋಟೆ
ಪರ್ಸದಲ್ಲಿ ತೆನೆ
ರಚ್ಚಚಿಚರ ಗದ್ದಿಗೆಲಿ
ಕತ್ತಿ ಹಿಡಿದವನು ಮೈಲಾರ
ಹಳ್ಳದ ನೀರ ಹರವಿಕ ತಳ್ಳಿ
ಮಾಗೆಯ ನೀರ ಮೊಕ ಮೊಜ್ಜನ ಮಾಡಿ
ಏಳು ಮಂದಿ ಮಾದೇಶ್ವರರು
ಕಟ್ಟೆ ಕಟ್ಟೆ ದೇವರು

ಕಟ್ಟೆಗಣ್ಣ ದೇವರು
ಮೂರು ಮುತ್ತಿನಾ
ಕುಮಾರಸಾಮಿ ಬರ್ತಾವನೆ ಹಾಲು.
ಎಲೆಲೆಲೊ ಬಾರೆ ಬಾರೆಲೊ
ಮಟ ಮಟ ಮಹೇಶ್ವರನ ಮಟ
ಕರ್ನಾಟಕ, ನಂಜಲಗೂಡು
ಹತ್ತು ಬಾಗಿಲು, ಹದಿನಾರು ಹಿಕ್ಕಿರಿ
ಹುಲಿ ಚರ್ಮ ತೆಗೆದು
ಕರಡಿ ಪೊಕ್ಕೆಯನ್ನು ಮಾಡಿ
ಬಂಡಿಗುಡಿಸಲು
ಕೆಂಡದ ವೀರಭದ್ರಯ್ಯ
ಬರ್ತಾನೆ ಆಲಿ....

**೫.೨. ಹಿರಿಯರ ಆರಾಧನೆ(ಪಿತೃ ಪೂಜೆ)**

ಸೋಲಿಗರು ತಮ್ಮ ಕುಟುಂಬದಲ್ಲಿ ಮರಣ ಹೊಂದಿದ ವ್ಯಕ್ತಿಗೆ ಮರಣದ ಸಂಸ್ಕಾರದಿಂದ ಹಿಡಿದು ಸಗ್ಗದ ಮನೆಯಲ್ಲಿನವರೆಗೆ ಹಿರಿಯರಿಗೆ ಆರಾಧನೆ ಮಾಡುವುದನ್ನು ಹಿರಿಯರ ಆರಾಧನೆ ಎಂದು ಕರೆಯಲಾಗಿದೆ. ಸಗ್ಗದ ಮನೆಯಿಂದ ಕರೆತಂದು ಸೋಲಿಗರು ತಮ್ಮ ಒಳಿತು ಕೆಡುಕುಗಳ ಬಗ್ಗೆ ವಿಚಾರಿಸಿ, ತಮಗೆ ಯಾವಾಗ ಹಿರಿಯರನ್ನು ಮಾತನಾಡಿಸಬೇಕೆನಿಸಿದಾಗಲ್ಲಲ್ಲಾ ಸೋರೆ ಬುರುಡೆ ಅಥವಾ ಮೊರದ ಮೂಲಕ ಗುಂಜಿಯನ್ನು ಹಚ್ಚುವುದರ ಮೂಲಕ ಕುಟುಂಬದಲ್ಲಿ ಮರಣ ಹೊಂದಿದ ವ್ಯಕ್ತಿಯನ್ನು ಕರೆಯುವ ಆಚರಣೆಯು ಹಿರಿಯರ ಆರಾಧನೆಯಲ್ಲಿ ಒಂದಾಗಿದೆ. ಸತ್ತ ವ್ಯಕ್ತಿಯನ್ನು ಪೂಜಿಸುವುದು ಅವರಿಗೆ ವರ್ಷಕ್ಕೆ ಒಂದು ಬಾರಿ ಅಥವಾ ಮೂರು ವರ್ಷಕ್ಕೆ ಹಾಗೂ ನಮಗೆ ಯಾವಾಗ ಇಷ್ಟವಾಗುತ್ತದೆಯೇ ಅಂತಹ ದಿನ ಮತ್ತು ಸಮಯದಲ್ಲಿ ಮರಣ ಹೊಂದಿದವರಿಗೆ ಪೂಜೆ ಪುನಸ್ಕಾರ ಮಾಡುತ್ತಾರೆ.

ಸೋಲಿಗರಲ್ಲಿ ತಮ್ಮ ಕುಟುಂಬದಲ್ಲಿ ಸತ್ತ ವ್ಯಕ್ತಿಯು ಹಲವಾರು ರೀತಿಯಲ್ಲಿ ಕನಸಿನಲ್ಲಿ ಬರುತ್ತಾನೆ. ತಮಗೆ ಪ್ರೀತಿಪಾತ್ರರಾದವರ ಕನಸಿನಲ್ಲಿ ಆಗಾಗ್ಗೆ ಬಂದು ಕಾಣಿಸಿಕೊಳ್ಳುತ್ತಾರೆ. ಅವರನ್ನು ಸದಾ ಸತ್ತಿರುವ ವ್ಯಕ್ತಿಯು ಅವರ ಸುತ್ತಲಿನಲ್ಲಿಯೇ ಏನು ಅಪಾಯ ಆಗದಿರುವ ಹಾಗೆ ನೋಡಿಕೊಳ್ಳುತ್ತಾರೆ ಎಂಬ ನಂಬಿಕೆ ಸೋಲಿಗರಲ್ಲಿದೆ. ತಮ್ಮ ಮನೆಯ ಕುಟುಂಬದಲ್ಲಿ ಏನಾದರೂ ಕೆಟ್ಟ ಶಕುನ, ಶುಭ ಸೂಚನೆಗಳು ಆಗುವಾಗ ಕನಸಿನಲ್ಲಿ ಬಂದು ಹೇಳುತ್ತಾರೆ ಅಥವಾ ಸೂಚಿಸುತ್ತಾರೆ. ಒಂದು ವೇಳೆ ಆ ಕುಟುಂಬದಲ್ಲಿ ಏನಾದರೂ ತಪ್ಪುಗಳನ್ನು ಮಾಡುತ್ತಿದ್ದರೆ ಕನಸಿನಲ್ಲಿ ಬಂದು ಕುಟುಂಬದವರಿಗೆ ಬುದ್ಧಿವಾದದ ಮಾತನ್ನು ಹೇಳುತ್ತಾರೆ. ಸತ್ತ ವ್ಯಕ್ತಿಯನ್ನು ಯಾರಾದರೂ ಮಾಟದಿಂದ ಸಾಯಿಸಿದ್ದರೆ ಅಂತಹವರ ಕನಸಿನಲ್ಲಿ ಆಗಾಗ್ಗೆ ಬಂದು ಹೆದರಿಸಿ ಬೆದರಿಸುವ ಹಾಗೆ ಕನಸಿನಲ್ಲಿ ಬರುತ್ತಾರೆ. ಒಂದು ವೇಳೆ ಸತ್ತ ವ್ಯಕ್ತಿಗೆ ಸಗ್ಗದ ಮನೆಯಲ್ಲಿ ಏನಾದರೂ ತೊಂದರೆಗಳಿದ್ದರೆ ಮನೆಯವರ ಕನಸಿನಲ್ಲಿ ಬಂದು ತಿಳಿಸುತ್ತಾರೆ.

ಹೀಗೆ ಸೋಲಿಗರಲ್ಲಿ ಮರಣ ಹೊಂದಿದ ವ್ಯಕ್ತಿಯು ಹಲವಾರು ಕಾರಣಗಳಿಗಾಗಿ ಕನಸಿನಲ್ಲಿ ಬರುತ್ತಾರೆ ಎಂಬುದನ್ನು ಸೋಲಿಗರು ಬಲವಾಗಿ ನಂಬುತ್ತಾರೆ.

**೫.೬. ಬುರುಡೆ ಕರೆಯುವುದು / ಗುಂಜಿ ಹುಯ್ಯುವುದು**

ಸೋಲಿಗ ಬುಡಕಟ್ಟಿನ ಉಪಪಂಗಡಗಳಲ್ಲಿ ಒಂದಾದ ಪಂಗಡವನ್ನು ಬುಂಡೆ ಸೋಲಿಗರು ಅಥವಾ ಬುರುಡೇ ಸೋಲಿಗರು ಎಂದು ಕರೆಯುತ್ತಾರೆ. ಬುರುಡೇ ಸೋಲಿಗರು ಹೆಚ್ಚಾಗಿ ಗುಂಡ್ಲುಪೇಟೆ, ಹುಣಸೂರು, ಹೆಗ್ಗಡದೇವನಕೋಟೆ ಭಾಗಗಳಲ್ಲಿ ವಾಸಿಸುತ್ತಾರೆ. ಈ ಕಡೆಗಳಲ್ಲಿ ಸೋಲಿಗರು ಹೆಚ್ಚಾಗಿ ಸೋರೆ ಬುರುಡೆಯನ್ನು ಸಮುದಾಯದ ಹಿರಿಯರನ್ನು ಆರಾಧಿಸಲು ಉಪಯೋಗಿಸುತ್ತಾರೆ.

ಬುರುಡೆ ಎಂದರೆ ಸೋರೆ ಬುರುಡೆ ಒಣದ ಗಿಡದ ಎರಡು ಕಹಿ ಸೋರೆ ಬುರುಡೆಯನ್ನು ತೆಗೆದುಕೊಂಡು ಅದರ ಮುಂದಿನ ಭಾಗದಲ್ಲಿ ಒಂದು ಚಿಕ್ಕ ತೂತನ್ನು ಮಾಡಿ ಅದರ ಒಳಕ್ಕೆ ಕಾಡಿನಲ್ಲಿ ಸಿಗುವ ಕೆಂಪು ಬಣ್ಣದ ಗುಲಗಂಜಿಯನ್ನು ಹಾಕಿ ಕಾಡಿನ ಮರದ ಮೇಣದಿಂದ ಆ ಕಿಂಡಿಯನ್ನು ಮುಚ್ಚುತ್ತಾರೆ. ಆ ಗುಲಗಂಜಿಯನ್ನು ಸುತ್ತಲೂ ಮೇಣವನ್ನು ಅಂಟಿಸಿ ಅದರ ಮೇಲೆ ಹಾಕಿ ಅಲಂಕಾರವನ್ನು ಮಾಡುತ್ತಾರೆ. ಹೀಗೆ ಮಾಡಿದ ಸೋರೆಕಾಯಿ ಬುರುಡೆಯೇ ಸೋಲಿಗರಿಗೆ **'ದೇವರನ್ನು ಕರೆಯುವ ಬುರುಡೆ'** ಕುಟುಂಬದಲ್ಲಿ ಹಿರಿಯರನ್ನು ಕರೆದು ಅವರ ಜೊತೆ ಸಂಭಾಷಣೆ ಮಾಡುವುದರ ಮೂಲಕ ಹಿರಿಯರ ಆರಾಧನೆಯನ್ನು ಬುರುಡೆ ಕರೆಯುವುದರ ಮೂಲಕ ಮಾಡುತ್ತಾರೆ. ಹೀಗೆ ಸೋಲಿಗರು ಬುರುಡೆ ಕರೆಯುತ್ತಿದುದ್ದರಿಂದ ಇವರಿಗೆ **'ಬುರುಡೆ ಸೋಲಿಗ'**ರೆಂದು ಹೆಸರು.

ಬುರುಡೆ ಕರೆಯುವಾಗ ಸೋಲಿಗರಿಗೆ **'ಮೊರ'** ಮುಖ್ಯವಾದುದು. ಮೊರದ ಮೇಲೆಯೇ ಬುರುಡೆಯನ್ನು ಇಡುತ್ತಾರೆ. ಮೊರದಲ್ಲಿ ತೆಂಗಿನಕಾಯಿ, ಬಾಳೆಹಣ್ಣು, ಗಂಧದ ಕಡ್ಡಿ, ಎಲೆ ಅಡಿಕೆ ಪಕ್ಕದಲ್ಲಿ ಬೀಡಿ, ಹೊಗೆಸೊಪ್ಪು, ಸುಣ್ಣ ಇವುಗಳನ್ನು ಇಟ್ಟಿರುತ್ತಾರೆ. ತಮ್ಮಡಿಯು ಆ ಮೊರಕ್ಕೆ ಪೂಜೆ ಸಲ್ಲಿಸಿ ಬುರುಡೆಗೆ ನಮಸ್ಕರಿಸಿ ಎರಡು ಕೈಗಳಿಂದ ಬುರುಡೆಯನ್ನು ತೆಗೆದುಕೊಂಡು ನೇರವಾಗಿ ಕೈಗಳನ್ನು ಕುಲುಕುತ್ತಾ ಬಲದ ಕೈ ಎಡಭುಜಕ್ಕೆ ಎಡದ ಕೈ ಬಲಭುಜಕ್ಕೆ ತಾಗಿಸುವಂತೆ ಜೋರಾಗಿ ಗುದ್ದಿ, ಗುದ್ದಿ, ಬುರುಡೆ ಕರೆದು ದೇವರು ಕರೆದು ಮೈಮೇಲೆ ಆಹ್ವಾನಿಸಿಕೊಳ್ಳುತ್ತಾನೆ. ಪಕ್ಕದಲ್ಲಿ ಕುಳಿತಿರುವ ಗಂಡಸರು, ಹೆಂಗಸರು ದೇವರ ಜೊತೆ ಮಾತನಾಡುತ್ತಾರೆ ಹಾಗೂ ಸಂಭಾಷಣೆ ನಡೆಸುತ್ತಾರೆ. ತಮ್ಮ ಕಷ್ಟ ಸುಖ ಹೇಳಿ, ಪರಿಹಾರ ಪಡೆದುಕೊಳ್ಳುತ್ತಾರೆ. ತಮಗೆ ಇಷ್ಟವಾದ ಹಾಗೂ ತಮ್ಮ ಮನೆದೇವರುಗಳನ್ನು ಕರೆಯುತ್ತಾರೆ. ನಂತರ ಕೊನೆಯಲ್ಲಿ ತಮ್ಮ ಕುಟುಂಬದಲ್ಲಿ ಸತ್ತಿರುವ ವ್ಯಕ್ತಿಗಳ ಸಗ್ಗದ ಮನೆಯವರನ್ನು ಕರೆದು ಮಾತನಾಡಿಸಿ, ಅತ್ತು ಕರೆದು, ಯೋಗಕ್ಷೇಮ ತಿಳಿದುಕೊಂಡು ಮೈ ಬಿಡುತ್ತಾರೆ. ಈ ಕಾರ್ಯ ನಡೆಯುವ ಮಧ್ಯ ಮಧ್ಯ ಕಾಫಿ, ಟೀ ಕಾಯಿಸಿ ಕುಡಿಯುತ್ತಾರೆ. ಎಲೆಅಡಿಕೆ ಕೊಡುತ್ತಾರೆ. ಬುರುಡೆ ಕರೆಯುವುದರಲ್ಲಿ ಮುಖ್ಯವಾಗಿ ದೆವ್ವ, ಪೀಡೆ, ಪಿಶಾಚಿ ಬಿಡಿಸುವುದು ಕಂಡುಬರುತ್ತದೆ. ದೇವರಿಗೆ ಹರಕೆ ಕಟ್ಟಿಕೊಂಡು ರೋಗ ವಾಸಿಯಾದ ಮೇಲೆ ಹರಕೆಯನ್ನು ತೀರಿಸುವ ಪದ್ಧತಿಯೂ ಸೋಲಿಗರಲ್ಲಿದೆ.

**ಸೋಲಿಗರು ಬುರುಡೆ ಕರೆಯುವ ಸ್ಥಳಗಳು ಮತ್ತು ಕಾರಣ**

- ಸಮುದಾಯದಲ್ಲಿ ಯಾರಿಗಾದರೂ ಹುಷಾರಿಲ್ಲದೆ ಇರುವಾಗ ಬುರುಡೆ ಕರೆಯುತ್ತಾರೆ.

- ಒಂದು ಕುಟುಂಬದಲ್ಲಿ ಯಾವುದಾದರೂ ಕಾರ್ಯ ಮಾಡುವಾಗ, ದೇವರ ಹಾಗೂ ಸಗ್ಗದವರಿಗೆ ತಿಳಿಸಿ ಒಪ್ಪಿಗೆ ಪಡೆಯಲು ಬುರುಡೆ ಕರೆಯುತ್ತಾರೆ.
- ಹರಕೆ ಅಥವಾ ಇನ್ನ್ಯಾವುದೇ ವಿಷಯಗಳನ್ನು ಹಾಗೂ ಸಮುದಾಯದಲ್ಲಿ ಯಾರಾದರೂ ಕಳ್ಳತನ, ಮೋಸ, ವಂಚನೆ ಮಾಡಿದರೆ ಬುರುಡೆ ಕರೆಯುತ್ತಾರೆ.
- ಸಮುದಾಯದಲ್ಲಿ ಯಾರಿಗಾದರೂ ಮಾಟ ಮಂತ್ರ, ಮಾಟಲೆ, ಜಾಟಳೆ ಮಾಡಿಸಿದ್ದಾರೆ ಎಂದು ಅದನ್ನು ತಿಳಿಯಲು ಬುರುಡೆ ಕರೆಯುತ್ತಾರೆ.
- ಬುರುಡೆ ಸೋಲಿಗರು ಶವಸಂಸ್ಕಾರವನ್ನು ಭಾಷೆಯಲ್ಲಿ 'ಜಿನ' ಮಾಡುವ (ತಿಥಿ) ೧೧-೧೨ ದಿನದಲ್ಲಿ ಸತ್ತ ವ್ಯಕ್ತಿಗೆ ಅನ್ನ-ನೀರು ಹಾಕಿ ಎಣ್ಣೆ ಕೈ ಹಿಡಿಸಿ ಆತನನ್ನು ಸಗ್ಗಕ್ಕೆ ಅಂದರೆ ಸತ್ತ ವ್ಯಕ್ತಿಯ ಮನೆಗೆ ಕಳುಹಿಸುವ ಕಾರ್ಯ ಮಾಡುವಾಗ ಬುರುಡೆಯನ್ನು ಕರೆಯುತ್ತಾರೆ.
- ಕೆಲವೊಂದು ಸಲ ದೇವರ ಹತ್ತಿರ ಹೋಗಿ ನಾನು ಮನಸ್ಸಿನಲ್ಲಿ ಅಂದುಕೊಂಡಿರುವ ಕಾರ್ಯ ಸಿದ್ಧಿಯಾಗುತ್ತದೆಯೋ ಇಲ್ಲವೋ ಎಂಬುದನ್ನು ತಿಳಿಯಲು ಈ ಬುರುಡೆಯನ್ನು ಕರೆಯುತ್ತಾರೆ.

ಬುರುಡೆ ಕರೆಯುವ ಸ್ಥಳಗಳನ್ನು ಸೋಲಿಗರು ಆಯ್ಕೆ ಮಾಡಿಕೊಳ್ಳುವಾಗ ಸಾಮಾನ್ಯವಾಗಿ 'ಜಿನಮಾಡುವ'(ಶವಸಂಸ್ಕಾರ) ಮಾಡುವ ಸ್ಥಳವು ಮಾತ್ರ ವಿಶೇಷವಾಗಿರುತ್ತದೆ. ಯಾವ ಮನೆಯಲ್ಲಿ ಜಿನ ಮಾಡುತ್ತಾರೆಯೋ ಆ ವ್ಯಕ್ತಿಯ ಮನೆಯ ಮುಂಭಾಗ ಚಪ್ಪರ ಹಾಕಿ ಅದರ ಮೇಲೆ ಒಂದು ಬಿಳಿ ಪಂಚೆಯಿಂದ ತೆರೆಬಿಡುತ್ತಾರೆ. ಅದರ ಮಧ್ಯದಲ್ಲಿ ಹೂವಿನ ಸರವನ್ನು ಕಟ್ಟಿ ನೆಲದ ಮೇಲೆ ಚಾಪೆಯನ್ನು ಹಾಕುತ್ತಾರೆ. ಆನಂತರ ಚಪ್ಪರದ ಮಧ್ಯ ಭಾಗದಲ್ಲಿ ಮೊರವನ್ನಿಟ್ಟು ಅದಕ್ಕೆ ಅಕ್ಕಿ ತುಂಬಿ ಅದರ ಮೇಲೆ ಕಳಸ ಇಟ್ಟು ತೆಂಗಿನಕಾಯಿ, ಹೂ ಹಾಕಿ, ಹೂ ಆ ಕಳಸದ ನೇರಕ್ಕೆ ನೇತಾಡುವಂತೆ ಇಟ್ಟಿರುತ್ತಾರೆ. ಕಾರಣ ಬುರುಡೆ ಕರೆಯುವಾಗ ದೇವರುಗಳು, ಗಾಳಿ-ಸತ್ತ ವ್ಯಕ್ತಿಯ ಆತ್ಮ ಸಲೀಸಾಗಿ ಆ ಹೂವಿನ ದಾರದಿಂದ ಇಳಿದು ಮನುಷ್ಯರ ಮೇಲೆ ಬರಲಿ ಎಂದು ಅವರಿಗೆ ದಾರಿಯನ್ನು ಮಾಡಿ ಕೊಟ್ಟಿರುತ್ತಾರೆ. ಯಾವ ಕಡೆಯು ಹೋಗದೆ ನೇರವಾಗಿ ದಾರಿಯ ಮೂಲಕ ಬೇಗ ಬಂದು ಸೇರಲಿ ಎಂಬ ನಂಬಿಕೆಯು ಸೋಲಿಗರಲ್ಲಿದೆ.

ಜಿನ ಮಾಡುವ ೧೧-೧೨ನೇ ದಿನಕ್ಕಿಂತ ಮೊದಲು ಸಮಾಧಿ ೪ ಮೂಲೆಗೂ ಮರದ ಚೆಕ್ಕೆಯನ್ನು ಹಾಕಿರುತ್ತಾರೆ. ಕಾರಣ ಯಾರೂ ಈ ಸತ್ತ ವ್ಯಕ್ತಿಗೆ ತೊಂದರೆ ಕೊಡಬಾರದು. ನಾವು ಜಿನ ಮಾಡಿ ಸಗ್ಗಕ್ಕೆ ಸೇರಿಸುವುದಕ್ಕೂ ಮುನ್ನ ಏನೂ ತೊಂದರೆಯಾಗಬಾರದು ಎಂದು ಚೆಕ್ಕೆಯನ್ನು ಇಟ್ಟಿರುತ್ತಾರೆ. ಆ ನಂತರ ೧೧-೧೨ನೇ ದಿನಕ್ಕೆ ಆ ಚೆಕ್ಕೆಯನ್ನು ಇಟ್ಟಿರುವ ವ್ಯಕ್ತಿಯೆಂದು ದೂರಕ್ಕೆ ಎಸೆಯುತ್ತಾನೆ. ೭ ಜನ ಈರಮಾಸ್ತರು ಇರುತ್ತಾರೆ. ಇವರು ಯಾವಾಗಲೂ ಸತ್ತ ವ್ಯಕ್ತಿಯನ್ನೂ ಸದಾ ಕಾಯುತ್ತಿರುತ್ತಾರೆ.

ಸತ್ತ ವ್ಯಕ್ತಿಯ ಸೂಲನ್ನು ಯಕ್ಕದ ಮಾದಗಿತ್ತಿ ತನ್ನ ಸುಣ್ಣದ ಡಬ್ಬಿಗೆ ಹಾಕಿಕೊಂಡು ಕುಳಿತಿರುತ್ತಾಳೆ. ಇದರಿಂದ ಕಾಡಿಸಿ ದುಂಬಿ, ಇರುವೆ, ನಾಯಿ ಎಲ್ಲವೂ ಸಹ ಕಷ್ಟದಲ್ಲಿರುತ್ತವೆ. ಆ ಸಮಯದಲ್ಲಿ ಕೋಳಿಯನ್ನು ಬಲಿ ಕೊಡುತ್ತಾರೆ. ಆಗ ಹನುಮಂತ ದೇವರು ಮತ್ತು ಭೂತ ಎರಡಕ್ಕೂ ಯುದ್ಧ

ನಡೆದು ಹನುಮಂತ ದೇವರು ಸತ್ತಿರುವ ಆತ್ಮವನ್ನು ಭೂತದಿಂದ ಬಿಡಿಸಿಕೊಡುತ್ತದೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಹೀಗೆ ಬುರುಡೆ ಕರೆಯುವ ಆಚರಣೆಯು ಸೋಲಿಗರಲ್ಲಿ ಈಗಲೂ ಸಹ ರೂಢಿಯಲ್ಲಿದೆ. ಈ ಕಾರ್ಯವನ್ನು ಬಿಟ್ಟು ಉಳಿದ ಇತರೆ ವಿಷಯಗಳಿಗೆ ಬುರುಡೆ ಕರೆಯುವಾಗ ಅವರವರ ಮನೆಯ ಒಳಗೆ, ಪಡಸಾಲೆ, ಗುಡಿಸಲು, ಬೀದಿಯ ಮಧ್ಯ ಬೆಂಕಿಗುಳಿಯ ಮುಂದೆ ಇಂತಹ ಸ್ಥಳಗಳಲ್ಲಿ ಬುರುಡೆಯನ್ನು ಕರೆಯುತ್ತಾರೆ.

ಇಂದಿಗೂ ಸಹ ಆಸ್ಪತ್ರೆಯನ್ನು ಕಾಣದ ವೈದ್ಯರಿಂದ ಚುಚ್ಚುಮದ್ದು ಹಾಕಿಸಿಕೊಳ್ಳದ ಅದೆಷ್ಟೋ ಸೋಲಿಗ ಸಮುದಾಯದವರು ಹೆಚ್ಚಾಗಿ ಕಾಣಿಸುತ್ತಾರೆ. ಕಾಡಿನಲ್ಲಿ ವಾಸ ಮಾಡುವ ಸೋಲಿಗರು ಆಧುನಿಕ ರೀತಿಯ ಆಸ್ಪತ್ರೆಗಳೆಂದರೆ ಭಯಭೀತರಾಗುತ್ತಾರೆ. ಹಲವಾರು ಸಾಂಕ್ರಾಮಿಕ ರೋಗಗಳಿಂದ ಬಹುಪಾಲು ಜನರ ಪ್ರಾಣ ಹಾನಿ ಆಯಿತೆಂದರೆ ಅದನ್ನು ಅವರು ಅವರ ಹಣೆಬರಹ, ದೇವರ ಕೆಲಸ, ಮಾಟಲೇ-ಜಾಟಲೇ ಕೆಲಸ ಎಂದು ನಂಬುತ್ತಾರೆ.

ಬುರುಡೇ ಸೋಲಿಗರು ಇಂದಿಗೂ ಸಹ ತಮ್ಮ ರೋಗವನ್ನು ಗುಣಪಡಿಸಿಕೊಳ್ಳಲು ತಮ್ಮ ತಮ್ಮ ಕಾಡಿನ ದೇವರ ಮೊರೆಹೋಗುತ್ತಾರೆ. ಹರಕೆ ಹೊತ್ತಿಕೊಳ್ಳುತ್ತಾರೆ. ಮೊದಮೊದಲು ಸೋಲಿಗರು ನೇರವಾಗಿ ವೈದ್ಯರ ಹತ್ತಿರ ಸುಳಿಯುವುದಿಲ್ಲ. ಇದಕ್ಕೆ ಮುಖ್ಯ ಕಾರಣ ಸೋಲಿಗರಲ್ಲಿ ಸೃಷ್ಟಿಯ ಬಗೆಗೆ ಇರುವ ಅಪಾರವಾದ ನಂಬಿಕೆ ಮತ್ತು ಆತ್ಮವಿಶ್ವಾಸ ಎಲ್ಲಾ ಜನರ ನಂಬಿಕೆಯ ಸತ್ವವೇ ಆಗಿದೆ ಎಂದಿದ್ದಾರೆ. 'God Almighty never put us here without a remedy for every ailmight'[3] ಎಂಬ ಡಾನ್‌ಯೋಡರ್ ಅವರ ಮಾತು ಎಲ್ಲ ಜನರ ನಂಬಿಕೆಯ ಜೀವಸತ್ವವೇ ಆಗಿದೆ. ಪ್ರತಿಯೊಂದು ರೋಗಕ್ಕೂ ಯಾವುದಾದರೊಂದು ಬಗೆಯ ಗಿಡಮೂಲಿಕೆಯ ಔಷಧಿ ಸೃಷ್ಟಿಯಲ್ಲಿ ದೇವರು ಮರೆಯದೇ ಇರಿಸಿದ್ದಾನೆ ಎಂಬುದು ಹಾಗೂ ಆ ಔಷಧಿಗಳನ್ನು ಪರಿಚಯಿಸುವ ಪಾಠವನ್ನು ಸಗ್ಗದವರು, ಹಿರಿಯರು, ದೇವರುಗಳನ್ನು ಕರೆದು ಆಗಾಗ್ಗೆ ತಿಳಿದುಕೊಳ್ಳುತ್ತಾರೆ. ಜಾನಪದ ವೈದ್ಯಕ್ಕಿರುವ ಜನಶಾಸ್ತ್ರೀಯ ಮುಖವನ್ನು ನಾವು ಅಷ್ಟೊಂದು ಸುಲಭವಾಗಿ ಅಲ್ಲಗಳೆಯುವಂತಿಲ್ಲ.

ಸೋಲಿಗರು ಹೆಚ್ಚಾಗಿ ತಮ್ಮ ಸಗ್ಗ-ದೇವರುಗಳನ್ನು ನಂಬಿದರೆ ತಮ್ಮ ರೋಗವನ್ನು ಗುಣಪಡಿಸಬಹುದು ಎಂಬ ಬಲವಾದ ನಂಬಿಕೆಯನ್ನು ಇಟ್ಟುಕೊಂಡು ಈ ರೀತಿಯ ಬುರುಡೆ ಕರೆಯುವ ಆಚರಣೆಯನ್ನು ಮಾಡುವುದರ ಮೂಲಕ ಮಾನಸಿಕ ನೆಮ್ಮದಿಯನ್ನು ಪಡೆಯುತ್ತಾರೆ. ಸೋಲಿಗರು ವಾಸಿಸುವ ಪೋಡು-ಕಾಲೋನಿಗಳಲ್ಲಿ ಅಲ್ಲಲ್ಲಿ ಈ ರೀತಿಯಾಗಿ ಜನಪದ ವೈದ್ಯರ ಮೇಲೆ ಧಾರ್ಮಿಕ ಪ್ರಭಾವ ಹೆಚ್ಚಾಗಿರುವುದರಿಂದ ಅವರು ಜನಪದ ವೈದ್ಯರನ್ನು ಸಾಮಾಜಿಕ ಜನಪದ ಆಚರಣೆಯಲ್ಲಿಟ್ಟು ಬೆಸೆಯುತ್ತಾರೆ.

ಬುರುಡೆ ಕರೆಯುವುದನ್ನು ಹಾಗೂ ಈ ರೀತಿಯ ಜಾನಪದ ವೈದ್ಯವನ್ನು ಮಾಡುವುದನ್ನು ಸೋಲಿಗರು ಕಲಿಯಲು ಯಾವುದೇ ವೈದ್ಯಕೀಯ ಪದವಿಯನ್ನು ಪಡೆದಿರುವುದಿಲ್ಲ. ಅವರಲ್ಲಿ ಇರುವುದು ಆ ಬುರುಡೆ ಕರೆಯುವ ಕಲೆ, ಔಷಧಿಯ ಅನುಭವ. ದೇವರುಗಳ ಬಗ್ಗೆ ಇರುವ ಭಯಭಕ್ತಿ ಹಾಗೂ ಯಾವ ದೇವರುಗಳು, ಆಯಾ ದೇವರುಗಳ ಚರಿತ್ರೆ, ಸಗ್ಗಗಳ ಪರಿಚಯ ಎಲ್ಲದಕ್ಕೂ ಮುಖ್ಯವಾಗಿ ಸೋಲಿಗ ಸಮುದಾಯದ ಒಟ್ಟಾರೆ ಜೀವನವನ್ನು ಯಾವ ರೀತಿ ಹೆಣೆದುಕೊಂಡಿದೆ ಎಂಬ ಸಂಬಂಧ, ಆಚಾರ, ವಿಚಾರ, ಜೀವನ ಶೈಲಿ ಎಲ್ಲಾ ಅಂಶವನ್ನು ತಮ್ಮಡಿ (ಗುಡ್ಡಪ್ಪ) ತನ್ನ ಹಿಂದಿನ ತಲೆಮಾರಿನಿಂದ, ಹಿರಿಯರಿಂದ ಕಲಿತುಕೊಂಡು ರೂಢಿಸಿಕೊಂಡು ಬಂದಿರುತ್ತಾರೆ.

**ಕಲ್ಲು ಗುಡಿ**

ಸೋಲಿಗರು ಕುಟುಂಬದಲ್ಲಿ ಮರಣ ಹೊಂದಿದವರನ್ನು ಸಗ್ಗದ ಮನೆಗೆ ಕಳುಹಿಸುತ್ತಾರೆ. ಇಲ್ಲಿ ನಮಗೆ ಮನೆ ಇರುವಂತೆ ಸತ್ತವರಿಗೂ ಸಹ ಸ್ವರ್ಗದಲ್ಲಿ ಮನೆಯಿರುತ್ತದೆ. ಇದನ್ನು ಅವರು ಸಗ್ಗದ ಮನೆ ಎಂದು ಕರೆಯುತ್ತಾರೆ. ಒಂದೊಂದು ಕುಲದವರಿಗೂ ತಮ್ಮದೇ ಆದ ಸಗ್ಗದ ಜಾಗವನ್ನು ಮಾಡಿಕೊಂಡಿರುತ್ತಾರೆ. ತಮ್ಮ ಕುಟುಂಬದ ಸದಸ್ಯರು ಮರಣ ಹೊಂದಿದರೆ ಅವರನ್ನು ಮೀಸಲಿಟ್ಟಿರುವ ಸಗ್ಗದಲ್ಲಿಯೇ ಸಂಸ್ಕಾರ ಮಾಡುತ್ತಾರೆ.

**ಗುಂಜಿ ಉಯ್ಯುವುದು**

ಸಾಮಾನ್ಯವಾಗಿ ಮಲೆ ಸೋಲಿಗರು ಚಾಮರಾಜನಗರ, ಬಿಳಿಗಿರಿಗಂಗನ ಬೆಟ್ಟ, ಕೊಳ್ಳೇಗಾಲ, ಮಹದೇಶ್ವರ ಬೆಟ್ಟದ ಸುತ್ತಮುತ್ತ ಗುಂಜಿ ಉಯ್ಯುವುದು ಪದ್ಧತಿ ಆಚರಣೆಯಲ್ಲಿದೆ. ತಮಗೆ ಬಂದಿರುವ ಸಮಸ್ಯೆಗಳನ್ನು ಪರಿಹಾರ ಮಾಡಿಕೊಳ್ಳಲು ಹಾಗೂ ದೆವ್ವ, ಭೂತ, ಪಿಶಾಚಿ ಯಾರಿಗಾದರೂ ಬಂದು ಸೇರಿಕೊಂಡಿದ್ದರೆ ಗುಂಜಿ ಉಯ್ಯುವುದರ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಗುಂಜಿಯನ್ನು ಉಯ್ಯುವ ವ್ಯಕ್ತಿಯು ದೇವರಿಗೆ ಪೂಜೆ ಮಾಡಿ ಗುಂಜಿಯ ಮೊರವನ್ನಿಟ್ಟು ಪೂಜೆ ಮಡಿ ಆನಂತರ ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡು ಗುಲಗಂಜಿಯನ್ನು ಮೊರಕ್ಕೆ ಹಾಕಿ ಗುಂಜಿ ಉಯ್ಯುತ್ತಾ ಅತ್ತ-ಇತ್ತ ಆಡಲಾರಂಭಿಸುತ್ತಾನೆ. ಕೆಂಪು, ಬಿಳಿ, ಹಸಿರು ಬಣ್ಣದ ಗುಲಗಂಜಿ ಹರಳುಗಳಲ್ಲಿ ಸಮಸ್ಯೆ ಹೇಳುತ್ತಿರುವಾಗ ಮೊರಕ್ಕೆ ಕಚ್ಚಿಕೊಂಡರೆ ಅಲ್ಲಿ ಸಮಸ್ಯೆ ಇದೆ ಎಂದರ್ಥ. ಆಗ ಸಂಭಾಷಣೆಯ ಮೂಲಕ ಸಮಸ್ಯೆ ಬಾರದಿರಲೆಂದು ಸಮಕಟ್ಟಿ ಆ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಯಂತ್ರ-ಮಂತ್ರಗಳನ್ನು ಮಾಡಿಕೊಂಡು ಕೆಲವೊಂದು ಗಿಡಮೂಲಿಕಾ ಔಷಧಿಗಳನ್ನೂ ಸಹ ನೀಡಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾರೆ. ಕೊನೆಗೆ ಕುಟುಂಬದಲ್ಲಿ ಸತ್ತಿರುವ ಸಗ್ಗದ ಮನೆಯವರು, ಹಿರಿಯರು, ಮಕ್ಕಳು ಮಹಿಳೆಯರು ಇವರುಗಳನ್ನು ಯಾರ ಮೈಮೇಲಾದರೂ ಇಳಿಸಿ ಸಂಭಾಷಣೆ ಮಾಡುತ್ತಾರೆ. ನಾವು ನಿಜ ಜೀವನದಲ್ಲಿ ಹೇಗೆ ಮಾತನಾಡುತ್ತೇವೋ ಅದೇ ರೀತಿ ಪ್ರತಿಯೊಬ್ಬರು ಮಾತನಾಡುತ್ತಾರೆ. ಕಾಫಿ ಕುಡಿಯುತ್ತಾರೆ ಅವರಿಗೆ ಇಷ್ಟವಾದುದನ್ನು ತಿನಿಸುತ್ತಾರೆ. ಬೀಡಿ, ಎಲೆ, ಅಡಿಕೆ, ಹೊಗೆಸೊಪ್ಪು ಕೊಡುತ್ತಾರೆ. ಕೊನೆಗೆ ಸಮಸ್ಯೆಗಳ ಬಗ್ಗೆ ಪರಿಹಾರ ಕೇಳಿಕೊಂಡು ವಾಸಿಮಾಡು, ಇಲ್ಲದಿದ್ದರೆ ನಿಮಗೆ 'ಮೆಣಸಿನ ಕಾಯಿ ಹೊಗೆ' ಹಾಕುತ್ತೇವೆ ಎಂದು ಹೇಳುತ್ತಾರೆ. ಕೊನೆಗೆ ಏನೇನು ಸಲಹೆ ಸೂಚನೆ ಕೊಡುತ್ತಾರೆ ದೇವರುಗಳೂ ಮತ್ತು ಸಗ್ಗದವರು ಈ ಇಬ್ಬರ ಸಲಹೆಯಂತೆ ಮುಂದೆ ಮಾಡಿ ಸಮಸ್ಯೆ ಪರಿಹಾರ ಕಂಡುಕೊಳ್ಳುತ್ತಾರೆ. ಕೊನೆಗೆ ಹೇಳುತ್ತಾರೆ ಹೋಗು ಮಗನೆ ಹೋಗು ನಾನಿದ್ದೇನೆ. ನೀನೇನು ಹೆದರಬೇಡ ಹೋಗು' ಎಂದು ಆಶ್ವಾಸನೆ ಕೊಡುತ್ತಾರೆ.

**ತಮ್ಮಡಿಗಳು/ಗುಡ್ಡಪ್ಪ/ಪೂಜಾರಿಗಳು**

ಸೋಲಿಗರಲ್ಲಿ ತಮ್ಮಡಿಗಳು ಸಮುದಾಯದಲ್ಲಿ ವಿಶೇಷವಾದ ಸ್ಥಾನಮಾನವನ್ನು ಪಡೆದುಕೊಂಡಿರುತ್ತಾರೆ. ಸಮುದಾಯದಲ್ಲಿ ತಮ್ಮಡಿ ಮನೆಗಳ ಗುಂಪಿನವರೆಂದರೆ ಭಯ, ಭಕ್ತಿ ಹಾಗು ಅವರನ್ನು ಯಾರೂ ಸಹ ಎದುರುಹಾಕಿಕೊಳ್ಳದೆ ಸಮುದಾಯದಲ್ಲಿ ಜೀವನ ಮಾಡುತ್ತಾರೆ. ಈ ತಮ್ಮಡಿಯು ಸೋಲಿಗರಿಗೆ ದೇವರ ಪ್ರತಿ ರೂಪವೇ ಆಗಿರುತ್ತಾರೆ. ತಮ್ಮಡಿಯು ಹೇಳಿದ ಮಾತನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಕೆಲವೊಂದು ಸಲ ಮನೆಯವರ ಮಾತನ್ನು ಕೇಳದಿದ್ದರೂ ಸಹ ತಮ್ಮಡಿಗಳು ಹೇಳಿದ ಮಾತನ್ನು

ಎಂದೂ ಮೀರುವುದಿಲ್ಲ. ಸೋಲಿಗರಲ್ಲಿ ತಮ್ಮಡಿಗಳಾಗುವವರು ಆ ಸಮುದಾಯದ, ಆ ಪೋಡಿನ, ಆಗುಹೋಗುಗಳ ಬಗ್ಗೆ ಯಾವಾಗಲೂ ಗಮನವಹಿಸುತ್ತಿರುತ್ತಾರೆ. ಎಲ್ಲಿಲ್ಲದ ಕಾಳಜಿಯನ್ನು ಆ ಪೋಡಿನ ಬಗ್ಗೆ ನಿಗಾ ಇಟ್ಟಿರುತ್ತಾರೆ. ತಮ್ಮಡಿಗಳು ತಮ್ಮ ಪೋಡಿನ ಕಷ್ಟ ಸುಖಗಳು, ಒಳ್ಳೆಯದ್ದು, ಕೆಟ್ಟದ್ದು ಇವುಗಳ ಬಗ್ಗೆ ಸದಾ ಗಮನವಹಿಸಿರುತ್ತಾರೆ. ಆದುದರಿಂದ ಸಮುದಾಯದ ಬಗ್ಗೆ ಹೆಚ್ಚಿನ ಕಾಳಜಿ ಇರುವವರೇ ಹೆಚ್ಚಾಗಿ ತಮ್ಮಡಿಗಳಾಗಿರುತ್ತಾರೆ. ಇವರು ಖಾವಿ ಪಂಚೆ, ಖಾವಿಯ ಟವಲ್ ಬಟ್ಟೆಯನ್ನು ಧರಿಸುತ್ತಾರೆ. ತಮ್ಮಡಿಗಳು ತಲೆಯ ಕೂದಲನ್ನು ಬಿಟ್ಟಿರುತ್ತಾರೆ. ಸೋಲಿಗರಲ್ಲಿ ಯಾರಾದರೂ ಕೂದಲು ಬಿಟ್ಟಿದ್ದಾರೆ ಎಂದರೆ ಅವರುಗಳು ತಮ್ಮಡಿಗಳು ಎಂದು ತಿಳಿಯಬಹುದು.

ಸೋಲಿಗ ಸಮುದಾಯದಲ್ಲಿ ತಮ್ಮಡಿಗಳು ಹುಟ್ಟಿನಿಂದ ಮರಣ ಹೊಂದುವವರೆಗೆ ತಮ್ಮಡಿಗಳು ವಿವಿಧ ನಂಬಿಕೆ ಮತ್ತು ಆಚರಣೆಗಳನ್ನು ಮಾಡುತ್ತಾರೆ. ಅಲ್ಲದೆ ತಮ್ಮಡಿಗಳು ಸೋಲಿಗ ಸಮುದಾಯದಲ್ಲಿ ಬಹಳ ಶಿಸ್ತಿನ, ಕಟ್ಟು ನಿಟ್ಟಿನ ಸಮುದಾಯಕ್ಕೆ ಪೂರಕವಾದ ನಡವಳಿಕೆಯನ್ನು ಹೊಂದಿದವರಾಗಿರುತ್ತಾರೆ. ಇವರು ಕಾಲಿಗೆ ಚಪ್ಪಲಿಯನ್ನು ಹಾಕುವುದಿಲ್ಲ, ಹೊರಗಡೆ ಹೋಟೆಲ್‌ನಲ್ಲಿ ಊಟೋಪಚಾರ ಮಾಡುವುದಿಲ್ಲ, ಗೌರವಯುತವಾಗಿ ಎಲ್ಲರಿಗೂ ಮಾದರಿಯಾಗಿ ನಡೆದುಕೊಳ್ಳುತ್ತಾರೆ. ಯಾವುದೇ ಕಾರ್ಯಕ್ರಮದಲ್ಲಿಯೂ ಸಹ ಇವರೇ ಪೂಜೆಯನ್ನು ಮಾಡುತ್ತಾರೆ. ಸೋಲಿಗ ಸಮುದಾಯದಲ್ಲಿ ಸಾಮಾನ್ಯವಾಗಿ ತಮ್ಮಡಿಯು ಹಲವಾರು ಕೆಲಸಗಳನ್ನು ನಿರ್ವಹಿಸುತ್ತಾರೆ. ಅವುಗಳೆಂದರೆ ವೈದ್ಯರಾಗಿ, ಪೂಜಾರಿಗಳಾಗಿ, ಸಲಹೆಗಾರರಾಗಿ ಸಮಾಜ ಸೇವಕರಾಗಿ, ಕಾನೂನು ತಜ್ಞರಾಗಿ, ರಕ್ಷಕರಾಗಿ ತಮ್ಮಡಿಗಳು ಸೋಲಿಗ ಸಮುದಾಯದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ.

ಇತ್ತೀಚೆಗೆ ಸೋಲಿಗರಲ್ಲಿ ಸಾಮಾನ್ಯವಾಗಿ ದೇವರನ್ನು ಕೇಳುವವರು, ದೇವರನ್ನು ಕರೆಯುವವರು, ತಮ್ಮಡಿಗಳು ಇವರುಗಳ ಆಲೋಚನೆ ಹಾಗೂ ಬದುಕಿನ ಕ್ರಮಗಳು ಆಧುನಿಕತೆಯ ಕಡೆಗೆ ತೆರೆದುಕೊಳ್ಳುತ್ತಿದೆ. ಹಿಂದೆ ಇವರುಗಳು ಯಾರು ತಮ್ಮ ಕಾಲಿಗೆ ಚಪ್ಪಲಿಯನ್ನೇ ಹಾಕುತ್ತಿರಲಿಲ್ಲ. ತಲೆಕೂದಲನ್ನು ಉದ್ದವಾಗಿ ಬೆಳೆಸುತ್ತಿದ್ದರು. ಕಾಡು–ಮೇಡುಗಳಲ್ಲಿ ಚಪ್ಪಲಿ ಹಾಕದೇ ತಿರುಗಾಡುತ್ತಿದ್ದರು. ಸಾಮಾನ್ಯವಾಗಿ ಯಾವುದೇ ದುಶ್ಚಟಕ್ಕೆ ಒಳಗಾಗುತ್ತಿರಲಿಲ್ಲ. ಆದರೆ ಇಂದು ವಿವಿಧ ಚಪ್ಪಲಿಗಳನ್ನು ಹಾಕುತ್ತಾರೆ. ಚಪ್ಪಲಿ ಹಾಕದೇ ಇರುವವರು ತುಂಬಾ ಕಡಿಮೆ. ಭಯ–ಭಕ್ತಿಯಿಂದ ದೇವರಿಗೆ ಉಪವಾಸವಿದ್ದು, ದೇವರನ್ನು ಕರೆದು ಪೂಜಿಸುತ್ತಿದ್ದರು. ಆದರೆ ದೇವರನ್ನು ತಮ್ಮ ಮೈಮೇಲೆ ಅವತರಿಸಿಕೊಳ್ಳುವವರ ಸಂಖ್ಯೆ ಕಡಿಮೆಯಾಗುತ್ತಿದೆ. ತಮ್ಮಡಿಗಳ ಸಂಖ್ಯೆಯೂ ಸಹ ಕಡಿಮೆಯಾಗುತ್ತಿದೆ. ಈ ರೀತಿ ದೇವರನ್ನು ಆಮಂತ್ರಿಸಿಕೊಂಡು ಮಾತನಾಡುವ ವಿದ್ಯೆಯನ್ನು ಕಲಿಯುವ ಆಸಕ್ತಿ ಯುವಕರಲ್ಲಿ ಕಡಿಮೆಯಾಗುತ್ತಿದೆ. ಯುವಕರು, ಯುವತಿಯರು ಹೆಚ್ಚು ಆಧುನಿಕತೆಗೆ ಒಗ್ಗಿಕೊಳ್ಳುತ್ತಿದ್ದಾರೆ. ಹಿಂದೆ ಕುಟುಂಬದಲ್ಲಿ ವೈಯುಕ್ತಿಕವಾಗಿ ಅಥವಾ ಸಮುದಾಯದಲ್ಲಿಯಾಗಲೀ, ಸೋಲಿಗರು ಯಾವುದೇ ಕೆಲಸ ಕಾರ್ಯ, ಹಬ್ಬ, ಪೂಜೆ ಇತ್ಯಾದಿ ಮಾಡುವುದಕ್ಕೆ ಮುಂಚೆ ದೇವರನ್ನು ಕರೆದು ಅಪ್ಪಣೆ ಪಡೆದು ನಂತರ ತಮ್ಮ ಕೆಲಸಕಾರ್ಯ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಇವುಗಳಲ್ಲಿಯೂ ಸ್ವಲ್ಪ ಕಡಿಮೆಯಾಗುತ್ತಾ ಬರುತ್ತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಸೋಲಿಗರು ಆಧುನಿಕತೆಯೆಡೆಗೆ ಸಾಗುತ್ತಿರುವುದನ್ನು ಇಲ್ಲಿ ಗುರುತಿಸ ಬಹುದಾಗಿದೆ.

## ೫.೩. ಸೋಲಿಗರ ಬದುಕಿನಲ್ಲಿ ಶೈವ ಧರ್ಮ

ಸೋಲಿಗ ಬುಡಕಟ್ಟು ಸಮುದಾಯ ಮಾದಪ್ಪ(ಮಹದೇಶ್ವರ) ಶೈವ, ಬಿಳಿಗಿರಿರಂಗಸ್ವಾಮಿ ವೈಷ್ಣವ ಈ ಎರಡು ಪಂಥದ ದೈವಗಳನ್ನು ಆರಾಧಿಸುತ್ತ ಜೊತೆಯಲ್ಲೇ ತಮ್ಮ ಮೂಲ ದೈವ, ಕುಲ ದೈವಗಳೆಂದು ನಡೆದುಕೊಳ್ಳುತ್ತಿರುವುದು ಬಹಳ ವಿಶಿಷ್ಟ ಎಂದು ಹೇಳಬಹುದು. ಸಾಮಾನ್ಯವಾಗಿ ಆಧುನಿಕರಲ್ಲಿ ಯಾವುದಾದರೂ ಒಂದು ಪಂಥಕ್ಕೆ ಮಾತ್ರ ನಡೆದುಕೊಳ್ಳುವುದು(ಸೇರಿರುವುದು) ವಾಡಿಕೆ. ಆದರೆ ಸೋಲಿಗರು ಈ ವಿಷಯದಲ್ಲಿ ಅದನ್ನು ಮೀರಿದ್ದಾರೆ. ಅಂದರೆ ಇದನ್ನು ಮುಗ್ಧತೆ ಎನ್ನಬಹುದೋ ಅಥವಾ ಅನಿವಾರ್ಯತೆ ಎನ್ನಬಹುದೋ ಎಂದು ತೀರ್ಮಾನಿಸುವುದು ಸಾಧ್ಯವಿಲ್ಲ. ಏಕೆಂದರೆ ಒಬ್ಬ ವ್ಯಕ್ತಿಯ ಅಥವಾ ಸಮುದಾಯದ ಮನಸ್ಸನ್ನು ಹೊರಗಿನ ಮತ್ತೊಬ್ಬ ವ್ಯಕ್ತಿ ಗ್ರಹಿಸಿ ತೀರ್ಮಾನ ನೀಡುವುದು ಎಷ್ಟು ಸರಿ ಎಂಬ ಪ್ರಶ್ನೆ ಎದುರಾಗುತ್ತದೆ.

ಮೊರಾರ್ಬ್ ಅವರು ತಮ್ಮ ಪುಸ್ತಕವಾದ 'ದ ಸೋಲಿಗಾ ಆಫ್ ಬಿಳಿಗಿರಿರಂಗನ ಹಿಲ್ಸ್'ನಲ್ಲಿ ಸೋಲಿಗರ ಧರ್ಮ ಮತ್ತು ಸೋಲಿಗರು ಆಚರಿಸುವ ವಿಧಿ ವಿಧಾನ, ಸೋಲಿಗರ ದೇವರುಗಳು ಅವರಿಗೆ ಇರುವ ಕಾಡಿನ ಸಂಬಂಧ ಮತ್ತು ನಂಬಿಕೆ ಹುಟ್ಟು ಸಾವು, ಇವುಗಳ ನಡುವಿನ ಸೋಲಿಗರ ಧರ್ಮದ ಆಚರಣೆಗಳೆಲ್ಲವನ್ನು ತಿಳಿಸಿದ್ದಾರೆ. ಅವುಗಳಲ್ಲಿ ಇಲ್ಲಿ ಒಂದು ಬರವಣಿಗೆಯ ರೂಪದಲ್ಲಿ ಇಲ್ಲಿದೆ.

Hindu god and gooddnesses : The soliga pantheon consists of a number trinity is considered as the protector of human beings by the soliga. He is the protector from all calamities and benefactor of mankind. The soliga are savities as they regard themselves as descendants of Karayyaswamy, who is the son of god Mahadeswara Swamy. God Shiva is worshipped in the form of 'Linga', and 'Trident'.and in his. Various manifestation like Madeswara, Basaveswar, Kumbhaya, Siddheswar, Mallappa,and Huliyerappa. Folksong of the Soliga mostly contain deification of these deities."[4] Morab(1977: p 94).

### ಮಹದೇಶ್ವರ

ಸೋಲಿಗರು ಮಹದೇಶ್ವರ ಬೆಟ್ಟದ ಮಾದಪ್ಪನಿಗೆ ವರ್ಷದಲ್ಲಿ ಒಮ್ಮೆ ಆಚರಿಸುವ ರೊಟ್ಟಿ ಹಬ್ಬದಲ್ಲಿ ತಮ್ಮ ಪೋಡಿನಲ್ಲಿ ಒಂದು ಕಡೆ ಕ್ರಮಬದ್ಧವಾಗಿ ಬಿದಿರಿನಿಂದ ಮಾದಪ್ಪನ ದೇವಸ್ಥಾನವನ್ನು ಅಲಂಕರಿಸಿ ಅಂದು ಇಡೀ ಸಮುದಾಯವೇ ಅಲ್ಲಿ ಸೇರಿ ತಮ್ಮ ಹರಕೆಯನ್ನು ಒಪ್ಪಿಸುವರು. ಅವರದೇ ಆದ ಮಾದಪ್ಪನ ದೇವಸ್ಥಾನ ತಾವಿರುವ ಪೋಡಿನಲ್ಲಿಯೇ ನಿರ್ಮಿಸಿದ್ದಾರೆ. ಹೀಗೆ ಚಾರಿತ್ರಿಕ ಹಿನ್ನೆಲೆಯೊಂದಿಗೆ ದೈವತ್ವವನ್ನು ಪಡೆದುಕೊಂಡ ಮಾದಪ್ಪ ಇವರಿಗೆ ಕುಲದೈವ. ಸೋಲಿಗರ ದೇವರುಗಳಿಗೆ ಸಂಬಂಧಿಸಿದಂತೆ ಎರಡು ಮಹತ್ವದ ವ್ಯಕ್ತಿಗಳನ್ನು ಉಲ್ಲೇಖಿಸುವುದು ಅಗತ್ಯ. ವಿಶೇಷವೆಂದರೆ ಈ ಎರಡು ದೇವರುಗಳು ಬೇರೆ ಬೇರೆ ಪಂಥಕ್ಕೆ ಸೇರಿದ್ದಾಗಿವೆ. ಆದರೂ ಸೋಲಿಗರಿಗೆ ಈ ದೇವರುಗಳ ಬಗ್ಗೆ ಯಾವ ವ್ಯತ್ಯಾಸವೂ ಕಾಣಿಸುವುದಿಲ್ಲ. ಅವುಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಮೌಖಿಕ ಕಥೆಗಳು ಅವರ ಭಕ್ತಿ ಮತ್ತು ಆರಾಧನೆಯನ್ನು ಮುಂದುವರಿಸುತ್ತವೆ. ಮಲೆಮಾದಪ್ಪ ಸುಮಾರು ೧೨– ೧೬ನೇ ಶತಮಾನದಲ್ಲಿ ಇದ್ದಿರಬಹುದು ಎಂಬುದನ್ನು ಅಧ್ಯಯನಕಾರರು ಲಭ್ಯವಿರುವ ಮೌಖಿಕ

ದಾಖಲೆಗಳೊಂದಿಗೆ ಸ್ಪಷ್ಟಪಡಿಸಿದ್ದಾರೆ. ಮಾದಪ್ಪನ(ಮಹದೇಶ್ವರ) ಕಾಲವನ್ನು ಅಲ್ಲಿಂದ ಗುರ್ತಿಸಿಕೊಳ್ಳುತ್ತಾರೆ. ಆದರೆ ಸೋಲಿಗರು ಸಾವಿರಾರು ವರ್ಷಗಳಿಂದಲೂ ಕಾಡಲ್ಲಿ ಇತರೆ ಹಲವಾರು ಸಮುದಾಗಳೊಂದಿಗೆ ಬದುಕುತ್ತಿದ್ದರು. ಅಂದರೆ ಅವರದು ಒಂದು ರೀತಿ ಅನಾಗರಿಕ ಬದುಕು ಎಂದೇ ಹೇಳಬಹುದು. ಇಂತಹ ಸಂದರ್ಭದಲ್ಲಿ ಮಾದಪ್ಪ ಎಂಬ ಹೆಸರಿನ ಓರ್ವ ವ್ಯಕ್ತಿ ಉತ್ತರ ದೇಶದಿಂದ ಬಂದು ಸುತ್ತೂರು ಮತ್ತು ಕುಂತೂರು ಮಠಗಳಲ್ಲಿ ಕಾಯಕ ಮಾಡಿದ್ದು ಅಲ್ಲಿಂದ ಪೂರ್ವ ದಿಕ್ಕಿನ ದಟ್ಟಾರಣ್ಯಕ್ಕೆ ಬಂದು ನೆಲೆಸಿದ್ದಲ್ಲದೆ ಕಾಡಲ್ಲಿದ್ದ ಮುಗ್ಧ ಹಾಗೂ ಅನಾಗರಿಕರಂತಿದ್ದ ಜನರಿಗೆ ಒರಟಾದ ಅನಾಗರಿಕ ಬದುಕನ್ನು ಬಿಟ್ಟು ಕೃಷಿಯನ್ನು ಮಾಡುತ್ತಾ ಉತ್ತಮ ಜೀವನ ಸಾಗಿಸುವ ಕಡೆಗೆ ಅವರಿಗೆ ಮಾರ್ಗದರ್ಶನ ಮಾಡಿದನು. ಆತನಿಗೆ ಮಂತ್ರವಿದ್ಯೆ ತಿಳಿದಿತ್ತು. ಒಬ್ಬರಿಗೊಬ್ಬರು ಸಹಕಾರದಿಂದ ಇರಬೇಕು ಎಂಬ ಸರಳ ತತ್ವವನ್ನು ಮನವರಿಕೆಯಾಗುವಂತೆ ಬೋಧಿಸುತ್ತಿದ್ದನು. ಕೇಡುಗರನ್ನು ಕಠೋರವಾಗಿ ಶಿಕ್ಷಿಸುವ ಮೂಲಕ ಬುದ್ಧಿ ಕಲಿಸುತ್ತಿದ್ದನು. ಇದರಿಂದ ಜನರಿಗೆ ಮಾದಪ್ಪನಲ್ಲಿ ಭಯ-ಭಕ್ತಿ ಮೂಡಿತು.

ಮಂಟೇಸ್ವಾಮಿ ಹಾಗೂ ಮಲೆಯ ಮಹದೇಶ್ವರರ ಜನಪದ ಕಾವ್ಯಗಳು ದಕ್ಷಿಣ ಕರ್ನಾಟಕದ ಮಹತ್ವದ ಜೋಡಿ ಕಾವ್ಯಗಳು ಈ ಎರಡೂ ಪರಂಪರೆಗಳು ಒಂದೇ ಭೌಗೋಳಿಕ ಪರಿಸರದಲ್ಲಿ ಹುಟ್ಟಿ ನೆಲೆಗೊಂಡು ಪ್ರಶಾಂತವಾದ ವಾತಾವರಣವನ್ನು ನಿರ್ಮಿಸಿದೆ. ಈ ಎರಡೂ ಮಹಾ ಕಾವ್ಯದ ಮೂಲ ಸೆಲೆ ಆರಂಭವಾಗುವುದು ಉತ್ತರ ಕರ್ನಾಟಕದಿಂದ-ದಕ್ಷಿಣದ ಕಡೆಗೆ ತಮ್ಮ ಪಯಣವನ್ನು ಬೆಳೆಸುತ್ತಾರೆ. ಈ ಪಯಣವಲ್ಲಯೇ ತಮ್ಮ ಆಲೋಚನೆಗಳನ್ನು ಗಟ್ಟಿಗೊಳಿಸುತ್ತ, ಸಮುದಾಯವನ್ನು ಕಟ್ಟುತ್ತಾ ಸಾಗುತ್ತಾರೆ. ತಮ್ಮ ಪಯಣದಲ್ಲಿ ರಾಜ ಪಯಣವನ್ನು ಮುರಿಯುತ್ತಾ ಪ್ರವೇಶಿಸುವುದು ದಕ್ಷಿಣದ ಕತ್ತಲ ರಾಜ್ಯವನ್ನು ಅಲ್ಲಿ ಅವರು ಕತ್ತಲ ರಾಜ್ಯದ ಪ್ರಜೆಗಳಿಗೆ ಪರಂಜ್ಯೋತಿಯಾಗಿ ನಿಲ್ಲುತ್ತಾರೆ. ಮಹದೇಶ್ವರರು ಉತ್ತರದಲ್ಲಿ (ಅಂದರೆ ಉತ್ತರ ಕರ್ನಾಟಕದಲ್ಲಿ) ತಾಳುಗತೆಯಲ್ಲಿ ಕಲ್ಯಾಣ ಪಟ್ಟಣದ ಬಿಜ್ಜಳನ ರಾಜನ ರಾಜ್ಯದಲ್ಲಿ ಉತ್ತರಾಜಮ್ಮ ಚಂದ್ರಶೇಖರ ಮೂರ್ತಿ ದಂಪತಿಗಳ ಮಗನಾಗಿ ಉತ್ತಾರಾಜಮ್ಮನ ಬೆನ್ನಿನಿಂದ ಅವತರಿಸಿದರು. ನಂತರ ಕಲ್ಯಾಣ ಪಟ್ಟಣ ಬಿಟ್ಟು ದಕ್ಷಿಣ ಕಡೆಗೆ ಪಯಣ ಬೆಳೆಸುತ್ತಾ ಕಪಿಲಾ ತೀರದ ಸುತ್ತೂರಿಗೆ ಮೊದಲು ಬರುತ್ತಾರೆ. ಕುಂತೂರು ಮಠ, ನಂತರ ಮೂಡಮುಂದಾಗಿ ಹೊರಟು ಸೋಲಿಗರು, ಬೇಡಗಂಪಣರು ಮೊದಲಾದ ಬುಡಕಟ್ಟು ಜನರು ವಾಸಿಸುತ್ತಿದ್ದ ದುರ್ಗಮವಾದ ಅರಣ್ಯ ಪ್ರದೇಶವನ್ನು ಹೊಕ್ಕಿ ಕಾಡಿನ ಮೂಲಕ ಪ್ರವೇಶಿಸಿ ಆದಿವಾಸಿ ಸಮುದಾಯವನ್ನು ಗೆದ್ದು ಅಲ್ಲಿ ಸಾಂಸ್ಕೃತಿಕ ನಾವಿಕನಾಗಿ ರೂಪುಗೊಳ್ಳುತ್ತಾರೆ. ಶಿಷ್ಯರನ್ನು(ಶಿಶು ಮಕ್ಕಳನ್ನು) ಪಡೆಯುವ ಪ್ರಸಂಗವು ಎರಡೂ ಕಾವ್ಯಗಳಲ್ಲಿಯೂ ಕಾಣುತ್ತವೆ. ಮಲೆಮಹದೇಶ್ವರರ ಕಾವ್ಯದಲ್ಲಿ ಕಾರಯ್ಯ, ಬಿಲ್ಲಯ್ಯ ಎಂಬ ಶಿಶು ಮಕ್ಕಳನ್ನು ಪಡೆಯಲು ಸೋಲಿಗರ ನೀಲಯ್ಯ ಸಂಕಮ್ಮ ದಂಪತಿಯೊಡನೆ ಘರ್ಷಣೆಗಿಳಿದು ಜಯಶಾಲಿಯಾಗುತ್ತಾರೆ.

ಅದೇ ರೀತಿಯಲ್ಲಿ ಕಲ್ಯಾಣದಿಂದ ಮಂಟೇಸ್ವಾಮಿಯವರು ರಾಚಪ್ಪಾಜಿ, ಸಿದ್ದಪ್ಪಾಜಿ ಮತ್ತು ದೊಡ್ಡಮ್ಮ ತಾಯಿಯನ್ನು ಶಿಶುಮಕ್ಕಳಾಗಿ ಪಡೆಯುತ್ತಾರೆ. ಈ ಎರಡೂ ಪ್ರಸಂಗಗಳ ಕಾವ್ಯಗಳನ್ನು ಮೌಖಿಕ ಪರಂಪರೆಯಲ್ಲಿ ಕಾಣಬಹುದು. ಇವುಗಳು ಚಾಮರಾಜನಗರ, ಮೈಸೂರು, ಮಂಡ್ಯ ಜಿಲ್ಲೆಗಳ ಗ್ರಾಮಾಂತರ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ರೀತಿಯಾಗಿ ಸೋಲಿಗರ ಮೌಖಿಕ ಪರಂಪರೆಯಲ್ಲಿ ಮೂಡಿಬಂದ ಮಹದೇಶ್ವರರು, ಸೋಲಿಗರ ಆರಾಧ್ಯ ದೈವವಾಗಿ ಪ್ರಸ್ತುತದಲ್ಲಿಯೂ ಕಾಣುತ್ತಾರೆ.

ಕೆಲವು ಕಡೆ ಸೋಲಿಗರು ಮಾದೇಶ್ವರನನ್ನು ತಮ್ಮ ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೆ ಪ್ರತೀ ವರ್ಷವೂ ನಡೆಯುವ ಮಾದೇಶ್ವರನ ಜಾತ್ರೆಯಲ್ಲಿ ದೀಪಾಳಿಯಲ್ಲಿ ತಪ್ಪದೆ ಹರಕೆಯನ್ನು ಹೊತ್ತು ಸ್ವಾಮಿಯ ನೆಲೆಗೆ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ.

ನಂತರದ ಚಿತ್ರಣ ವಿಸ್ಮಯವಾದುದು. ಏಕೆಂದರೆ ಕೇವಲ ಕಾಡಿನಲ್ಲಿ ಸೀಮಿತ ಜನರಿಗೆ ಮಾತ್ರ ಪರಿಚಿತನಾಗಿದ್ದ ಮಾದಪ್ಪನ ಕೀರ್ತಿ ಎಲ್ಲೆಡೆಯೂ ಹಬ್ಬಿತು. ಮಾದಪ್ಪನನ್ನು ಕುರಿತು ಹೇಳುವ ಮೌಖಿಕ ಕಥೆಯು ಆತನ ಪವಾಡಗಳನ್ನು ವರ್ಣಿಸುತ್ತದೆ. ಹುಲಿಯನ್ನು ವಾಹನವನ್ನಾಗಿ ಹೊಂದಿದ್ದನು ಎಂದು ಹೇಳುವುದೇ ಮಾದಪ್ಪನ ಶಕ್ತಿಯನ್ನು ಸೂಚಿಸುತ್ತದೆ. ಅದರಲ್ಲಿ ವಿಶೇಷವಾಗಿ ಸೋಲಿಗರ ಸಂಕಮ್ಮನಿಗೆ ಮಕ್ಕಳ ವರವನ್ನು ನೀಡಿದನು. ವರದ ಪ್ರತಿರೂಪ ಕಾರಯ್ಯ-ಬಿಲ್ಲಯ್ಯ. ಇವರನ್ನು ಮಾದಪ್ಪನಿಗೆ ಕಾಣಿಕೆಯಾಗಿ ನೀಡುವುದರ ಮೂಲಕ ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತಾರೆ(ಸಂಕಮ್ಮ ಮತ್ತು ನೀಲೇಗೌಡ). ಮುಂದೆ ಮಾದಪ್ಪನ ಕಾಲದ ಅನಂತರ ಆ ಸ್ಥಳವು ಒಂದು ಪವಿತ್ರ ಕ್ಷೇತ್ರವಾಗಿ ನಾಡಿನಾದ್ಯಂತ ಲಕ್ಷಾಂತರ ಜನರನ್ನು ಆಕರ್ಷಿಸುತ್ತಿದೆ. ಮಾದಪ್ಪನ ಶಿಷ್ಯಂದಿರಾದ ಕಾರಯ್ಯನ ಕುಲದವರೇ ಸೋಲಿಗರು ಎಂದು ಮಾದಪ್ಪನನ್ನು ಕುಲದೈವವಾಗಿ ಸ್ವೀಕರಿಸಿದ್ದಾರೆ. ಇಂದು ಶೈವ ಪಂಥದ ಕ್ಷೇತ್ರವೆಂದು ಗುರುತಿಸಿಕೊಂಡಿದೆ.

ಎಪ್ಪತ್ತೇಳು ಮಂಡಲಗಳನ್ನು ನೀಲಯ್ಯ ಕಾಡಿನಲ್ಲಿ ಸೊಪ್ಪಿನ ಗುಡಿಸಲಿನ ಮುಂದೆ ಎಪ್ಪತ್ತೇಳು ಮಂಡಲಗಳನ್ನು ಬರೆದು, ಬರೆದ ಆ ಮಂಡಲಗಳಿಗೆಲ್ಲಾ ಎತ್ತಿ ಶಾಪವನ್ನು ಕೊಟ್ಟಿದ್ದಾನೆ. ಆ ಶಾಪಗಳು ಹೇಗೆಂದರೆ-

"ಒಂದು ಮಂಡಲ ದಾಟಿದರೆ ಅವ್ನ ಕಾಲಿನ ನರವೇ ಸೇದೋಗ್ಲಿ
ಎರಡು ಮಂಡಲ ದಾಟಿದರೆ ಅವ್ನ ಕತ್ತಿನ ಕಳಸ ಮುರುದೋಗ್ಲಿ
ಮೂರು ಮಂಡಲ ದಾಟಿದರೆ ಅವ್ನ ಕಣ್ಣಿನ ಗುಳ್ಳೆ ಕಡದೋಗ್ಲಿ
ನಾಕು ಮಂಡಲ ದಾಟಿದರೆ ಅವ್ನ ನಾಲ್ಗೆ ಹಿರಿದು ಸಾಯಲಿ
ಐದು ಮಂಡಲ ದಾಟಿದರೆ ಅವ್ನ ಬಾದ್ರಿ ಬಂದು ಸಾಯಲಿ
ಆರು ಮಂಡಲ ದಾಟಿದರೆ ಅವ್ನ ಹಾರಿ ಬಿದ್ದು ಸಾಯಲಿ
ಏಳು ಮಂಡಲ ದಾಟಿದರೆ ಅವ್ನ ಎದೆ ಹೊಡ್ಕೊಂಡು ಸಾಯಲಿ
ಎಂಟು ಮಂಡಲ ದಾಟಿದರೆ ಅವ್ನ ಗಂಟಲು ಸೇದೋಗ್ಲಿ
ಒಂಬತ್ತು ಮಂಡಲ ದಾಟಿದರೆ ಅವ್ನ ತಲೆ ತೊಂಭತ್ತೆರಡು ಹೋಳಾಗಲಿ
ಹತ್ತು ಮಂಡಲ ದಾಟಿದರೆ ಅವ್ನ ಕತ್ಕೊಂಡರ್ದು ಸಾಯಲಿ"[೫]

ಹೀಗೆ ನೀಲಯ್ಯನು ತನ್ನ ಮಡದಿಯು ಮನೆಯಿಂದ ಹೊರಬಾರದೇ ಇರುವ ಹಾಗೆ ಬಂಧನ ಮಾಡಿ, ಅವಳನ್ನು ನೋಡಲು ಯಾರಾದರೂ ಬಂದರೆ ಅವರಿಗೆ ಮಂಡಲಗಳನ್ನು ಬರೆದು ಕಾಡಿಗೆ ಸಮುದಾಯದವರ ಜೊತೆಯಲ್ಲಿ ಜೇನು ಬೇಟೆಗೆ ಹೋಗುತ್ತಾನೆ. ಇತ್ತ ಕಡೆ ಮಹದೇಶ್ವರ ಸಂಕಮ್ಮನಲ್ಲಿಗೆ

ಬಂದು ಕಷ್ಟಗಳನ್ನೆಲ್ಲ ಪರಿಹರಿಸಿ ನೀಲಯ್ಯನಿಗೆ ಸಮಾಧಾನಮಾಡಿ ಅವನ ಪವಾಡದ ನಿಜರೂಪವನ್ನು ತೋರಿಸಿದ ನಂತರದಲ್ಲಿ ಸೋಲಿಗ ನೀಲಯ್ಯ ಮತ್ತು ಮಡದಿ ಸಂಕಮ್ಮನಿಗೆ ತಮ್ಮ ಆರಾಧ್ಯ ದೇವರಾಗಿ ತಮ್ಮ ಸಮುದಾಯದಲ್ಲಿ ಸೋಲಿಗರು ಪೂಜಿಸುವ ಆರಾಧಿಸುವ ದೇವರಾಗುತ್ತಾನೆ.

**ಓಲಗದ ಹಾಡುಗಳು**

ಸೋಲಿಗ ಜನರು ದೇವರ ಕರೆವ ಹಾಡು ಹಬ್ಬದಲ್ಲಿ ದೇವರನ್ನು ಕರೆದು ಸೋಲಿಗ ಜನರು ತಮ್ಮ ಕಷ್ಟವನ್ನು ಪರಿಹಾರ ಮಾಡಲು ಕೇಳಿಕೊಳ್ಳುತ್ತಾರೆ. ಈ ಸಮಯದಲ್ಲಿ ಹಾಡುವ ಹಾಡಿಗೆ **'ಓಲಗ'** ಎನ್ನುತ್ತಾರೆ. ಈ ಓಲಗವು ಮಹದೇವನ ಮೇಲೆ ಇರುವುದನ್ನು ಸೋಲಿಗರು ಹಾಡಿನ ಸುತ್ತ ಸೋಲಿಗರಿಗೆ ಯಾವ ರೀತಿಯಾದ ಸಂಬಂಧವು ಹೆಣೆದುಕೊಂಡಿದೆ ಎಂಬುದನ್ನು ತಮ್ಮ ಹಾಡಿನ ಮೂಲಕ ಹೇಳುತ್ತಾರೆ.

**'ಓಲಗ'**

ಕೂಗು ಕೂಗು ಮಾದೇವನ
ನಿಂದು ಕೂಗೊ ದುಂಡು ಮಾದೇವನ
ಕತ್ತಿಯ ವಡು ರತ್ತದ ಬೊಟ್ಟು
ನಿಂದು ಕೂಗೂ ದುಂಡು ಮಾದೇವನ
ಎಕ ನನ್ನಯ್ಯಾ ರೂಡಿಗಳೆಲ್ಲ
ಮೆಲ್ಲಗೆ ಬಂದರೂ ಮಾದೇವ
ಕೂಗೂ ಕೂಗು ಮಾದೇವನ
ನಿಂದು ಕೂಗೂ ದುಂಡು ಮಾದೇವನ
ಹಳ್ಳದ ಕಲ್ಲು ಹುವಿನ ಗಂಟು
ನಿಂದು ಕೂಗೂ ದುಂಡು ಮಾದೇವನ
ಮುಳ್ಳುವಿಗೆ ಮುಡುವಿನ ಜಂಗು
ಮಳ್ಳಗೆ ಬಂದರು ಮಾದೇವನ
ಕೂಗು ಕೂಗೂ ಮಾದೇವನ
ನಿಂದು ಕೂಗೂ ದುಂಡು ಮಾದೇವನ
ಕಾಸೆಯ ಕಟ್ಟಿ ಕರಿಮೀಸೆ ಬದ್ದುರ
ಮೀಸೆಯ ತಿರುಗಿಸಿ ಬರ್ತಾವನೆ
ತೋಪಿನ ವನದಲ್ಲಿ ಕಾಸೆಯ ಕಟ್ಟಿ
ನಿಂದು ಕೂಗೂ ದಂಡು ಮಾದೇವನ
ಬಾಯರ ಬಸವಣ್ಣನಿಗೆಲ್ಲ
ನಿಂದು ಕೂಗೂ ದುಂಡು ಮಾದೇವನ
ಬಾಯರ ಬಸವಣ್ಣನಿಗೆಲ್ಲ ನಿಂದು ಕೂಗೊಂದುಂಡು ಮಾದೇವನ
ಸಣ್ಣ ಉಲ್ಲಲ್ಲಿ ಉದುರಕ್ಷರ

ಸರಣರಿಗೆಲ್ಲಾ ಮಾದಪ್ಪ
ಶವಣನಾ ಕೊಂದ ಬೊಳಿಯ ಮೇಲೆ
ಸಸಾತೀರವಾರೆ
ಕೂಗೂ ಕೂಗೂ ಮಾದೇವನ
ನಿಂದು ಕೂಗೂ ದುಂಡು ಮಾದೇವನ
ಹಾಲಿಕರವೇನೊ ಸಾಮಿ ಹೋಗಿ ಕರೆವೆನು
ಬೇಡಿ ಬನ್ನಾ ಮಾಡುವಾಗ
ಬೇಗನೆ ಬರಾನೊ.

**'ಓಲಗ'**

ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗಾ
ಮರದ ದೂಪದೇವರಿಗ
ಕಾನ ದೂಪದೇವರಿಗ
ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಮಣ್ಣುದೂಪಾ ದೇವರಿಗಾ
ಅಪಾ ದೂಪ ದೇವರಿಗ
ದೂಪದ ಪರಿಮಳ ದೇವರಿಗ
ಅಡವಿ ದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಎಕೊ ನನ್ನಯ್ಯ ಕೂಡಿಗಳೆಲ್ಲ
ದೂಪಾದ ಪರಿಮಾಳ ದೇವರಿಗ
ಮರುಕೊಂದಾರತಿ ಎಲೆಗಳ ಪೂಜೆ
ಅಪಾದೂಪ ದೇವರಿಗ
ದೂಪಾದ ಪರಿಮಳ ದೇವರಿಗ
ಲಿಂಗಾ ಬಾ ಮಾದೇವ ಬಾ
ಗಿರಿಯಲ್ಲಿ ಮಾದೇವ ಲಿಂಗಾ ಬಾ
ಎಕೊ ನನ್ನಯ್ಯಾ ಕೋಡಿಗಳೆಲ್ಲ
ಮೆಳ್ಳಗೆ ಬಂದರು ಮಾದೇವ
ಎಕೋ ನನ್ನಯ್ಯಾ ರೂಡಿಗಳೆಲ್ಲಾ
ಮೆಳ್ಳಗೆ ಬಂದರು ಮಾದೇವ
ಬಾಗೆ ಮರ ಬಾಗಿದವೂ

ಬರಲು ಕೊಂಬು ಚಿಗುರೆರಿದಾವು
ಬರಲು ಕೊಂಬು ಚಿಗುರರೆದಾವು
ಪಂದಪ್ಪ ನರಳಲ್ಲಿ ಗದ್ದೆಗೆಯ್ಯೊ
ಕೊಪವ ಕಟ್ಟಿರೋಷವ ಹೊಡೆದು
ಲಿಂಗ ಬಾ ಮಾದೇವ ಬಾ
ಎಕೆ ನ್ನಯ್ಯ ರೂಡಿಗಳೆಲ್ಲ
ಮೆಳ್ಳಗೆ ಬಂದರು.

ಹಬ್ಬ ಪ್ರಾರಂಭಿಸುವಾಗ ಒಬ್ಬ ವ್ಯಕ್ತಿ ದೇವರ ಮುಂದೆ ನಿಂತು ಐದು ಕಗ್ಗಗಳನ್ನು ಹಾಕುತ್ತಾನೆ. ಇದರ ಅರ್ಥವೆಂದರೆ ಇಡೀ ರಾತ್ರಿ ಹಬ್ಬವು ನಿಶ್ಚಿಂತೆಯಿಂದ ನಡೆದು ಯಾವುದೇ ಪ್ರೇತ-ಪಿಶಾಚಿಗಳು ಬಾರದಿರಲು ಎಂದು ಪ್ರಾರ್ಥಿಸುವರು.

ಸೋಲಿಗರು ಮಾದಪ್ಪನನ್ನು ತಮ್ಮ ಮನೆ ದೇವರು ಎಂದು ಬಹಳ ನಿಷ್ಠೆಯಿಂದ ಪೂಜೆಯನ್ನು ಸಲ್ಲಿಸುತ್ತಾರೆ. ವರ್ಷಕ್ಕೆ ಹಲವು ಬಾರಿಯಾದರೂ ಮಾದಪ್ಪನ ದೇವಸ್ಥಾನಕ್ಕೆ ಹೋಗುತ್ತಾರೆ. ಹಿಂದೆ ದೇವಸ್ಥಾನಕ್ಕೆ ಜನರು ಬಹಳ ಭಕ್ತಿ ಭಾವದಿಂದ ಕಾಡಿನಲ್ಲಿಯೇ ಕಾಲು ದಾರಿಯಲ್ಲಿಯೇ ನಡೆದು ಹೋಗುತ್ತಿದ್ದರು. ಅಲ್ಲಿಗೆ ಹೋಗುವಾಗ ಸೋಲಿಗರು ತಪ್ಪು ಮಾಡಿದರೆ ದೇವರು ಶಿಕ್ಷೆಯನ್ನು ನಮಗೆ ಕೊಡುತ್ತಾನೆ ಎಂದು ತಿಳಿದು ಹೋಗುತ್ತಿದ್ದರು. ದೇವಸ್ಥಾನದ ಪರಿಧಿಯೊಳಗೆ ಏನಾದರೂ ಅನಾಚಾರವನ್ನು ಮಾಡಿದರೆ ನಮಗೆ ಶಿಕ್ಷೆಯನ್ನು ಕೊಡುತ್ತಾನೆ ಎಂದು ಅವರಿಗೆ ತಿಳಿದಿತ್ತು. ಒಂದು ವೇಳೆ ಅಂಥ ಅನಾಚಾರವೇನಾದರೂ ನಡೆದರೆ ಅವರ ದಾರಿಯಲ್ಲಿ ಹುಲಿಯ ಬಾಯಿಗೆ ಬಲಿಯಾಗುತ್ತಾರೆ. ಅಂಥ ಸಂದರ್ಭದಲ್ಲಿ ಅದೇ ಮಾರ್ಗವಾಗಿ ಹೋಗುವ ಭಕ್ತರು ಹೆಣದ ಮೇಲೆ ಒಂದು ಕಲ್ಲನ್ನು ಹಾಕಿ ಹಾಗೆ ಮುಂದೆ ಸಾಗುತ್ತಿದ್ದರು. ಈಗಲೂ ಸಹ ಇಲ್ಲಿ ಒಂದು ಕಲ್ಲಿನ ಗುಡ್ಡೆ ಇದೆ ಇದಕ್ಕೆ **"ಕಲ್ಲು ಮಲ್ಲಯ್ಯ"** ಎಂದು ಕರೆಯುತ್ತಾರೆ. ಆದರೆ, ಇವುಗಳನ್ನು ನೋಡಿದಾಗ ಸಮಾಜದಲ್ಲಿ ಭಕ್ತರು ದೇವಸ್ಥಾನಕ್ಕೆ ಬರುವಾಗ ನಿಯಮ ನಿಷ್ಠೆಯಿಂದ ಬಂದು ಹೋಗುವುದು ಮುಖ್ಯವಾದುದು ಯಾವುದೇ ರೀತಿಯ ತೊಂದರೆಗೂ ಸಹ ಎಡೆಮಾಡಿಕೊಡಬಾರದು ಎಂಬುದನ್ನು ತಿಳಿಯಬಹುದಾಗಿದೆ. ಆದರೆ ಇಲ್ಲಗೆ ಬರುವ ಭಕ್ತರು ಮಾದಪ್ಪ ಮಾಯಕಾರ ಎಂಬ ಭಯ ಭಕ್ತಿಯನ್ನು ಇಟ್ಟುಕೊಂಡಿದ್ದಾರೆ. ಮಾದಪ್ಪ ಒಬ್ಬ ಸಾಂಸ್ಕೃತಿಕ ನಾಯಕನಾಗಿ ಸೋಲಿಗರು ತಮ್ಮ ದೇವರೆಂದು ಪೂಜಿಸುತ್ತಾರೆ. ಸಮುದಾಯ ಮತ್ತು ಸಮಾಜದಲ್ಲಿರುವ ಅನೇಕ ತಪ್ಪುಗಳನ್ನು ಸರಿ ಮಾಡುವ ಸಲುವಾಗಿ ಕತ್ತಲೆಯಲ್ಲಿದ್ದವರನ್ನು ಬೆಳಕಿನೆಡೆಗೆ ತರುತ್ತಾ ಒಬ್ಬ ಸಾಂಸ್ಕೃತಿಕ ನಾಯಕರಾಗಿ ಕಾಣಿಸಿಕೊಳ್ಳುತ್ತಾರೆ.

"ತಮ್ಮ ಸುತ್ತಮುತ್ತಲ ಪ್ರದೇಶದಲ್ಲಿ ಲಕ್ಷಾಂತರ ಭಕ್ತರಿಂದ ಆರಾಧಿಸಲ್ಪಡುತ್ತಿರುವ ಚಾಮುಂಡೇಶ್ವರಿ, ನಂಜುಡೇಶ್ವರ ಇವರನ್ನು ಒಪ್ಪಿಕೊಂಡು ಅಯ್ಯಪ್ಪನನ್ನು ಅಪ್ಪಿಕೊಂಡು ಒಂದು ರೀತಿ ಎಲ್ಲದರಲ್ಲಿಯೂ ಒಳ್ಳೆಯದನ್ನೇ ಬಯಸುತ್ತಾ ಯಾವುದರಲ್ಲೂ ವ್ಯತ್ಯಾಸವನ್ನು ಎಣಿಸದೇ ದೇವರು ಒಬ್ಬನೇ ಆದರೆ ಆತನ ಹೆಸರುಗಳು ಮಾತ್ರ ಹಲವು ಎಂಬ ಸತ್ಯವನ್ನು ಅರಿತು ಬದುಕುತ್ತಿದ್ದಾರೆ."[೬] ಬಹುಮುಖ್ಯವಾಗಿ ಸೋಲಿಗರಲ್ಲಿ ಗಮನಿಸಬೇಕಾದ ಒಂದು ಮಹತ್ವದ ಸಂಗತಿ ಎಂದರೆ ಇವರನ್ನು ಪ್ರಭಾವಕ್ಕೆ ಒಳಪಡಿಸಿರುವುದು ಅರಣ್ಯ ಅದರೊಳಗೆ ಬದುಕಿರುವ ನೂರಾರು ಜಾತಿಯ ಪ್ರಾಣಿ-ಪಕ್ಷಿ, ಹುಳು-

ಹುಪ್ಪಟೆ, ಕ್ರಿಮಿ-ಕೀಟ, ವಿಷಜಂತು ಎಲ್ಲವೂ ಒಟ್ಟಾಗಿ ಒಂದಾಗಿ ಬದುಕುತ್ತಿರುವುದು ಆತನಿಗೆ ಮಾದರಿ. ಅದರಂತೆ ಒಂದೇ ನೆಲ-ಜಲದಲ್ಲಿ ಸಾವಿರಾರು ಜಾತಿಯ ಗಿಡ-ಮರ ವಿವಿಧ ಜಾತಿಯ ಹೂವು-ಹಣ್ಣು, ಹುಲ್ಲು-ಸೊಪ್ಪು, ಗಡ್ಡೆ-ಗೆಣಸು ಆತನ ಮಾನಸಿಕ ವೈಶಾಲ್ಯತೆಗೆ ಕಾರಣವಾಗಿವೆ. ಆದ್ದರಿಂದಲೇ, ಅನಾಗರೀಕನಂತೆ ಕಂಡರೂ ಅವನ ಜೀವನ ಶೈಲಿ ಒಪ್ಪಿಕೊಂಡಿರುವ ಮೌಲ್ಯಗಳು ಈ ಜಗತ್ತಿಗೆ ಮಾದರಿಯಾಗಿ ನಿಲ್ಲುತ್ತವೆ.

### ೫.೪. ವೈಷ್ಣವ ಧರ್ಮ

ಧರ್ಮ ಎಂಬುದು ಒಂದು ಪುಟ್ಟ ಶಬ್ಧ ಧರ್ಮ ಇದರ ವ್ಯಾಪ್ತಿ ವಿಶಾಲವಾದುದು. ಪ್ರಾಚೀನ ಕಾಲದಿಂದಲೂ ಧರ್ಮದ ಶೇಷ್ಠತೆಯ ಬಗ್ಗೆ, ಲೋಕಕ್ಕೆ ಅದರ ಅವಶ್ಯಕತೆಯ ಬಗ್ಗೆ ತಿಳಿಯುತ್ತಾ ಬರುತ್ತಿದ್ದೇವೆ. ಧರ್ಮವು ವಿಶ್ವಕ್ಕೆ ಆಶ್ರಯವನ್ನು ಕೊಡುತ್ತದೆ. ಧರ್ಮವು ವೈಯಕ್ತಿಕ ಮತ್ತು ಸಾಮೂಹಿಕವಾದ ಹಿತವನ್ನು ಕಾಯುವಂತಹದ್ದು.

ಸೋಲಿಗರ ದೈವಗಳು ಮತ್ತು ಅವರ ದೇವರುಗಳು ಮತ್ತು ಸೋಲಿಗರ ಮಗಳು ಪುಸುಮಾಲೆ (ಕುಸುಮಾಲೆ) ಮತ್ತು ಬಿಳಿಗಿರಿರಂಗಪ್ಪನ ಸಂಬಂಧವನ್ನು ಕಾವ್ಯದ ರೂಪದಲ್ಲಿ ನೋಡಬಹುದು. ಹಿಂದೆ ಹೇಳಿದಂತೆ ಸೋಲಿಗರು ದ್ರಾವಿಡ ಮೂಲದವರು, ಈ ನೆಲಕ್ಕೆ ಪ್ರಾಚೀನರು; ಕಾಲಾನಂತರದಲ್ಲಿ ವೈಷ್ಣವ ಪಂಥದಿಂದ ಪ್ರಭಾವಿತರಾದರು. "ವೈಷ್ಣವ ಪಂಥವು ಕೂಡ ಅರಣ್ಯವಾಸಿ ಸೋಲಿಗರನ್ನು ತನ್ನ ತೆಕ್ಕೆಗೆ ಸೆಳೆದುಕೊಂಡಿದೆ. ಇದು ಸಾಮಾನ್ಯ ಸಂಗತಿಯಲ್ಲ. ಇದಕ್ಕೊಂದು ಐತಿಹಾಸಿಕ ಕಾರಣ ಇದ್ದಿರಲೇಬೇಕು ಎಂದು ಪರಿಶೀಲಿಸಿದಾಗ ತಿಳಿದು ಬಂದ ಸಂಗತಿ ಈ ರೀತಿ ಇದೆ. "Ramanujacharya, the doyan seen of the Sri Vaishnavas who lived in the early 1200's who had to run away from hims preseverant and vivify a survival of sorts for himself and his many followers in his native madras state, had soughts sanctuary in the hill city of Melukote, in the nieghbouring Mysore State, and even gone to establish new Srivaishnava fellowship there."[7] (the quarterly journal of the mythic society, july- September 1997 –page.4)

ಸೋಲಿಗರು ವೈಷ್ಣವ ಧರ್ಮಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡಿರುವುದಲ್ಲದೇ ರಾಮಾನುಜಾಚಾರ್ಯರು ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದು ಬಿಳಿಗಿರಿರಂಗನ ಬೆಟ್ಟದಲ್ಲಿ ನೆಲೆ ಇತರೆ ಕಡೆಗಳಲ್ಲೂ ವೈಷ್ಣವ ಪಂಥದ ಪ್ರಚಾರ ಮಾಡಿದರು. ಹನ್ನೆರಡನೇ ಶತಮಾನದ ಆರಂಭದಲ್ಲಿ ಮದ್ರಾಸ್ ಪ್ರಾಂತ್ಯದ ರಾಜನಾಗಿದ್ದ ಚೋಳನ ಆಳ್ವಿಕೆಯ ಸಂದರ್ಭದಲ್ಲಿ ರಾಮಾನುಜಾಚಾರ್ಯರು ಮತ ಸಂಪ್ರದಾಯಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದಿದ್ದ ಕಾರಣಕ್ಕಾಗಿ ತಮಿಳುನಾಡಿನಿಂದ ರಾಮಾನುಜಾಚಾರ್ಯರನ್ನು ಗಡಿಪಾರು ಮಾಡಲಾಗುತ್ತದೆ. ಆಗ ರಾಮಾನುಜಾಚಾರ್ಯರು ತಮ್ಮ ಅನುಯಾಯಿಗಳನ್ನು ಕರೆದುಕೊಂಡು ತಮ್ಮ ಜೀವವನ್ನು ಉಳಿಸಿಕೊಳ್ಳುವ ಸಲುವಾಗಿ ಕರ್ನಾಟಕದ ಕಡೆಗೆ ಆಶ್ರಯವನ್ನು ಅರಸಿ ಬರುತ್ತಾರೆ. ತಮಿಳುನಾಡಿನಿಂದ ಬರುವಾಗ ಹತ್ತಿರವಿದ್ದ ಪ್ರದೇಶವೆಂದರೆ ಅದು ಈಗಿನ ಚಾಮರಾಜನಗರ ಜಿಲ್ಲೆಯ ಬಿಳಿಗಿರಿರಂಗನ ಬೆಟ್ಟ, ಕಾಡಿನಿಂದ ಬರುವಾಗ ಕಾಡಿನ ಮಕ್ಕಳಾದ ಸೋಲಿಗರನ್ನು ಭೇಟಿಯಾಗಿ, ಮಾತನಾಡಿಸಿಕೊಂಡು ಅವರ ಸಹಾಯವನ್ನು ಪಡೆದು ಅವರಿಗೆ ಮತ ಪ್ರಚಾರ ಮಾಡಿ ದೇವರ ಹಾಗೂ ರಂಗಪ್ಪನ ಮಹಿಮೆಯನ್ನು ತಿಳಿಸಿ ಅದೇ

ಮಾರ್ಗವಾಗಿ ಬಿಳಿಗಿರಿರಂಗನ ಬೆಟ್ಟಕ್ಕೆ ಬರುತ್ತಾರೆ. ಅಲ್ಲಿ ಕೆಲವು ಕಾಲ ಆಶ್ರಯ ಪಡೆದು ಮತ್ತೆ ತಮ್ಮ ಜೊತೆ ಬಂದಿದ್ದವರಲ್ಲಿ ಕೆಲವರನ್ನು ಅಲ್ಲಿಯೇ ಬಿಟ್ಟು, ರಾಮಾನುಜಾಚಾರ್ಯರು ತಮ್ಮ ಜೊತೆಯಲ್ಲಿ ಇನ್ನುಳಿದ ಅನುಯಾಯಿಗಳನ್ನು ಕರೆದುಕೊಂಡು ಕರ್ನಾಟಕದ ಇತರೆ ಭಾಗಗಳಿಗೆ ಹೋಗಿ ನೆಲೆಸುತ್ತಾರೆ. ಹೋದಲ್ಲೆಲ್ಲಾ ಮತ ಪ್ರಚಾರ ಮಾಡುತ್ತಾರೆ. ಅವುಗಳಲ್ಲಿ ಮುಖ್ಯವಾದ ಸ್ಥಳಗಳು ಮೇಲುಕೋಟೆ ಚೆಲುವನಾರಾಯಣ ದೇವಸ್ಥಾನ, ಗೋಪಾಲಸ್ವಾಮಿ ಬೆಟ್ಟ ಇತ್ಯಾದಿ. ಹೀಗೆ ಬಿಳಿಗಿರಿರಂಗನ ಬೆಟ್ಟದಲ್ಲಿ ವೈಷ್ಣವ ಪಂಥಕ್ಕೆ ಸೋಲಿಗರೂ ಸಹ ಪ್ರಭಾವಿತರಾಗಿ ಬೀಳಿಗಿರಿ ರಂಗಯ್ಯನನ್ನು ತಮ್ಮ **ಭಾವ** ಎಂದು ಕರೆಯುವುದರ ಜೊತೆಗೆ ತಮ್ಮ **"ಆರಾಧ್ಯ ದೇವ"** ಎಂದು ವರ್ಷದಲ್ಲಿ ಜಾತ್ರೆ ದೊಡ್ಡ ಜಾತ್ರೆ ಮತ್ತು ಚಿಕ್ಕ ಜಾತ್ರೆಯನ್ನು ಆಚರಿಸಿ ಸಂತೋಷದಿಂದ, ಭಕ್ತಿ ಭಾವದಿಂದ ಸಂಭ್ರಮಿಸುತ್ತಾರೆ.

**ವೈಷ್ಣವ ಧರ್ಮದ ಆಚರಣೆ**

ಇನ್ನೊಂದು ಮಹತ್ವದ ದೈವವೆಂದರೆ ಬಿಳಿಗಿರಿರಂಗನ ಬೆಟ್ಟದಲ್ಲೂ ಎತ್ತರವಾದ ಒಂದು ಬೆಟ್ಟದ ತುದಿಯಲ್ಲಿ ನಿರ್ಮಿಸಿರುವ ದೇವಸ್ಥಾನದಲ್ಲಿ ಪ್ರತಿಷ್ಠಾಪಿಸಲಾಗಿರುವ ರಂಗಸ್ವಾಮಿ. ಇದನ್ನು ಬಿಳಿಗಿರಿರಂಗಸ್ವಾಮಿ ಎಂಬ ಹೆಸರಿನಿಂದಲೂ ಕರೆಯುವುದುಂಟು. ಏಕೆಂದರೆ ಈ ಗಿರಿ ಅಥವಾ ಬೆಟ್ಟವು ಮಂಜಿನಿಂದ ಮುಚ್ಚಿಕೊಂಡಾಗ ಬೆಳ್ಳಗೆ ಕಾಣುತ್ತದೆ. ಆದ್ದರಿಂದ ಬಿಳಿಯ ಬಣ್ಣದ ಬೆಟ್ಟದಲ್ಲಿ ನೆಲೆಗೊಂಡಿರುವ ರಂಗಸ್ವಾಮಿಗೆ **'ಬಿಳಿಗಿರಿ'** ಎಂದು ನಾಮಕರಣ ಮಾಡಲಾಗಿದೆ. ಸೋಲಿಗರು ಈ ದೈವವನ್ನು ಕೇವಲ ದೇವರಾಗಿ ಮಾತ್ರ ಪೂಜಿಸುತ್ತಿಲ್ಲ. ಈತ ಅವರಿಗೆ ಭಾವನು ಹೌದು. ಆದ್ದರಿಂದ ಪ್ರೀತಿಯಿಂದ **"ರಂಗಭಾವ"** ಎಂದೇ ಕರೆಯುವುದು ವಾಡಿಕೆ. ರಂಗಸ್ವಾಮಿಯನ್ನು ಕುರಿತು ಒಂದು ಮೌಖಿಕ ಕತೆಯು ರೂಢಿಯಲ್ಲಿದೆ. ಅದರ ಪ್ರಕಾರ ಸೋಲಿಗರ ಬೊಮ್ಮೆನಗೌಡನ ಮಗಳಾದ ಕುಸುಮಾಲೆಯನ್ನು ರಂಗಸ್ವಾಮಿ ಅಪಹರಿಸಿ ಮದುವೆಯಾದನು. ಆದ್ದರಿಂದ ಆತ ನಮಗೆ ಭಾವನಾಗಬೇಕು ಎಂದು ನಂಬುತ್ತಾರೆ. ಅಷ್ಟೇ ಅಲ್ಲ ಆತ ಕುಸುಮಾಲೆಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾದನು. ಅದಕ್ಕಾಗಿ ಸೋಲಿಗರಲ್ಲಿ ಹುಡುಗಿಯನ್ನು ಅಪಹರಿಸಿಕೊಂಡು ಹೋಗುವ ಮೂಲಕ ಮದುವೆಯಾಗುವ ಪದ್ಧತಿ ಇದೆ. ಆದರೆ ಇತ್ತೀಚೆಗೆ ಬದಲಾವಣೆಗೆ ಒಳಗಾಗುತ್ತಿರುವುದನ್ನು ಕಾಣಬಹುದಾಗಿದೆ. ಜೊತೆಗೆ ರಂಗಸ್ವಾಮಿ ಕುಸುಮಾಲೆಯನ್ನು ಮೆಚ್ಚಿ ಅಪಹರಿಸಿಕೊಂಡು ಹೋಗಿ ಮದುವೆಯಾದುದಕ್ಕೆ ಕೊಂಗದ (ಮೊರ) ತುಂಬ ಬಂಗಾರದ ನಾಣ್ಯವನ್ನು ಕೊಟ್ಟನಂತೆ. ಆದರೆ ಮಗಳನ್ನು ಕಳೆದುಕೊಂಡು ವ್ಯಾಪ್ರನಾಗಿದ್ದ ಬೊಮ್ಮೇಗೌಡ ಆ ಹಣವನ್ನು ಬೆಟ್ಟದಿಂದ ಕೆಳಕ್ಕೆ ಸುರಿದುಬಿಟ್ಟನು. ಕಥೆಯಲ್ಲಿ ಅವನಿಗೆ ಸಿಕ್ಕಿದ್ದು ಮಾತ್ರ ಕೇವಲ ಹನ್ನೆರಡು ನಾಣ್ಯಗಳು ಮಾತ್ರ, ಆಗ ಅವುಗಳನ್ನೇ ತೆಗೆದುಕೊಂಡು ಮಗಳನ್ನು ಅನಿವಾರ್ಯವಾಗಿ ರಂಗಸ್ವಾಮಿಗೆ ಧಾರೆ ಎರೆಯುತ್ತಾನೆ. ಅಂದಿನಿಂದ ಅಪಹರಿಸಿಕೊಂಡು ಹೋಗಿ ಮದುವೆಯಾಗುವ ಪದ್ಧತಿ ಸೋಲಿಗರಲ್ಲಿ ಇದೆ ಎಂದು ಹೇಳುತ್ತಾರೆ. ತಪ್ಪಿದರೆ ಹನ್ನೆರಡು ನಾಣ್ಯಗಳನ್ನು ತೆರವಾಗಿ ತಪ್ಪೊಪ್ಪಿಗೆ ಕಾಣಿಕೆಯಾಗಿ ಸೋಲಿಗರು ನ್ಯಾಯ ಪಂಚಾಯಿತಿಯಲ್ಲಿ ನೀಡುತ್ತಾರೆ.

ಮುಂದೆ ನಾಟಕೀಯವಾಗಿ ದಾಸಯ್ಯನ ವೇಷದಲ್ಲಿ ರಂಗಸ್ವಾಮಿ ಬರುತ್ತಾನೆ. ಸೋಲಿಗರ ಬೊಮ್ಮೇಗೌಡ ಕೊನೆಯ ಮಗಳಾದ ಕುಸುಮಾಲೆಯನ್ನು ಇಷ್ಟಪಟ್ಟು ತನ್ನ ಮಂತ್ರಶಕ್ತಿಯಿಂದ ಅವಳನ್ನು ವರಿಸಲು ಪವಾಡಗಳನ್ನು ಮಾಡುತ್ತಾನೆ. ಈತನ ಮಾಯಾವಿ ಗುಣವನ್ನು ಕಂಡ ಬೊಮ್ಮೇಗೌಡ ಸೋತು ತನ್ನ ಮಗಳನ್ನು ರಂಗಪ್ಪನಿಗೆ ಕೊಟ್ಟು ಮದುವೆ ಮಾಡಿಕೊಡುತ್ತಾನೆ. ಇದನ್ನು ಸೋಲಿಗರು

ಹಾಡಿದ ಬಿಳಿಗಿರಿರಂಗನ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಅಂತಿಮವಾಗಿ ತಮ್ಮ ಮಗಳನ್ನು ಹಿಂಬಾಲಿಸಿಕೊಂಡು ಹೋದಾಗ ರಂಗಸ್ವಾಮಿ ಮತ್ತು ಕುಸುಮಾಲೆ ದೇವಸ್ಥಾನಕ್ಕೆ ನುಗ್ಗುತ್ತಾರೆ. ಅಲ್ಲಿ ಇಬ್ಬರು ಕಣ್ಮರೆಯಾಗುತ್ತಾರೆ. ಈ ಹಿನ್ನೆಲೆಯಲ್ಲಿ ರಂಗಭಾವ ಕುಸುಮಾಲೆಯನ್ನು ಆರಾಧಿಸುತ್ತ ವೈಷ್ಣವ ಪಂಥವನ್ನು ಒಪ್ಪಿಕೊಂಡು ಈ ದೇವಸ್ಥಾನದ ಪ್ರತಿಯೊಂದು ಕೆಲಸದಲ್ಲೂ ಅವರದೇ ಆದ ಕರ್ತವ್ಯ ಮತ್ತು ಹಕ್ಕನ್ನು ಹೊಂದಿದ್ದಾರೆ. ಜೊತೆ ಜೊತೆಗೆ ಹತ್ತು ಹಲವಾರು ದೈವಗಳನ್ನು(ಪಾರಂಪರಿಕವಾದುವು) ಕಾಲಕಾಲಕ್ಕೆ ಪೂಜಿಸುವುದರ ಮೂಲಕ ಸಂಕೀರ್ಣತೆಯೊಂದಿಗೆ ಸರಳತೆಯನ್ನು ರೂಢಿಸಿಕೊಂಡು ಎಲ್ಲಾ ತೊಂದರೆಗಳನ್ನು ದೂರ ಮಾಡಿ ನೆಮ್ಮದಿ ಬದುಕನ್ನು ಸಾಗಿಸಲು ಪ್ರಯತ್ನಿಸುತ್ತಿದ್ದಾರೆ.

ಅಧ್ಯಯನಗಳಿಂದ ಸತ್ಯವೆಂದು ತಿಳಿದುಕೊಳ್ಳಬಹುದಾದ ಸಂಗತಿಗಳನ್ನು ಪ್ರಸ್ತಾಪಿಸುವುದಾದರೆ, ತಮಿಳುನಾಡಿನಲ್ಲಿ ಚೋಳ ಮಹಾರಾಜನು ಆಡಳಿತ ನಡೆಸುತ್ತಿದ್ದ ಸಂದರ್ಭದಲ್ಲಿ ಅದೇ ನೆಲದ ಕ್ರಾಂತಿಕಾರಿ ವೈಷ್ಣವ ಪಂಥದ ಮೂಲ ಪುರುಷನಾದ ರಾಮಾನುಜಾಚಾರ್ಯ ಈ ಪಂಥಕ್ಕೆ ಮೇಲು–ಕೀಳು ಎಂಬ ಭೇದ–ಭಾವವಿಲ್ಲದ ಎಲ್ಲರನ್ನು ಸೇರಿಸಿಕೊಳ್ಳಲು ಬೋಧಿಸಿ ಜನರಲ್ಲಿ ಜಾಗ್ರತಿಯನ್ನು ಉಂಟುಮಾಡುತ್ತಿದ್ದುದು ಸಹಜವಾಗಿ ಚೋಳಮಹಾರಾಜನಿಗೆ ಒಪ್ಪಲಾಗಲಿಲ್ಲ. ಆದ್ದರಿಂದ ರಾಮಾನುಜಾಚಾರ್ಯರನ್ನು ತನ್ನ ರಾಜ್ಯದಿಂದ ಗಡಿಪಾರು ಮಾಡುತ್ತಾನೆ. ಆಗ ಸಾವಿರಾರು ಅನುಯಾಯಿಗಳೊಂದಿಗೆ ರಾಮಾನುಜಾಚಾರ್ಯ ಕರ್ನಾಟಕವನ್ನು ಪ್ರವೇಶಿಸುತ್ತಾರೆ. ಇಲ್ಲಿಯೂ ಸಹ ವೈಷ್ಣವ ಪಂಥದ ತತ್ವಗಳನ್ನು ಪ್ರಚಾರ ಮಾಡುತ್ತಾ ಸಾಗುತ್ತಾರೆ. ಅನುಯಾಯಿಗಳು ನಾಡಿನ ಬೇರೆ ಬೇರೆ ಕಡೆಗಳಲ್ಲೂ ಪಸರಿಸುತ್ತಾರೆ. ಆ ಸಂದರ್ಭದಲ್ಲಿ ಗುಂಡ್ಲುಪೇಟೆಯ ಗೋಪಾಲಸ್ವಾಮಿಬೆಟ್ಟ, ಯಳಂದೂರಿನ ಬಿಳಿಗಿರಿರಂಗನ ಬೆಟ್ಟ, ಕೊಳ್ಳೇಗಾಲದ ಬುದುವಾಳು, ಮೇಲುಕೋಟೆ ಇಲ್ಲೆಲ್ಲಾ ವೈಷ್ಣವ ಪಂಥದ ಕೇಂದ್ರಗಳು ಹುಟ್ಟಿಕೊಂಡವು. ಆಗ ಈ ಪ್ರದೇಶದಲ್ಲಿ ನೆಲೆಸಿದ್ದ ಸೋಲಿಗರು ಸಹಾ ಅದರ ತತ್ವ ಪ್ರಚಾರಕ್ಕೆ ಒಳಗಾಗಿರುವ ಸಾಧ್ಯತೆ ಇದೆ.

ತಮ್ಮ ಸುತ್ತಮುತ್ತಲ ಪ್ರದೇಶದಲ್ಲಿ ಲಕ್ಷಾಂತರ ಭಕ್ತರಿಂದ ಆರಾಧಿಸಲ್ಪಡುತ್ತಿರುವ ಚಾಮುಂಡೇಶ್ವರಿ, ನಂಜುಡೇಶ್ವರ ಇವರನ್ನು ಒಪ್ಪಿಕೊಂಡು ಅಯ್ಯಪ್ಪನನ್ನು ಅಪ್ಪಿಕೊಂಡು ಒಂದು ರೀತಿ ಎಲ್ಲದರಲ್ಲಿಯೂ ಒಳ್ಳೆಯದನ್ನೇ ಬಯಸುತ್ತಾ ಯಾವುದರಲ್ಲೂ ವ್ಯತ್ಯಾಸವನ್ನು ಎಣಿಸದೇ ದೇವರು ಒಬ್ಬನೇ ಆದರೆ ಆತನ ಹೆಸರುಗಳು ಮಾತ್ರ ಹಲವು ಎಂಬ ಸತ್ವವನ್ನು ಅರಿತು ಬದುಕುತ್ತಿದ್ದಾರೆ. ಬಹುಮುಖ್ಯವಾಗಿ ಸೋಲಿಗರಲ್ಲಿ ಗಮನಿಸಬೇಕಾದ ಒಂದು ಮಹತ್ವದ ಸಂಗತಿ ಎಂದರೆ ಇವರನ್ನು ಪ್ರಭಾವಕ್ಕೆ ಒಳಪಡಿಸಿರುವುದು ಅರಣ್ಯ ಅದರೊಳಗೆ ಬದುಕಿರುವ ನೂರಾರು ಜಾತಿಯ ಪ್ರಾಣಿ–ಪಕ್ಷಿ, ಹುಳು–ಉಪ್ಪಟೆ, ಕ್ರಿಮಿ–ಕೀಟ, ವಿಷಜಂತು ಎಲ್ಲವೂ ಒಟ್ಟಾಗಿ ಒಂದಾಗಿ ಬದುಕುತ್ತಿರುವುದು ಆತನಿಗೆ ಮಾದರಿ. ಅದರಂತೆ ಒಂದೇ ನೆಲ–ಜಲದಲ್ಲಿ ಸಾವಿರಾರು ಜಾತಿಯ ಗಿಡ–ಮರ ವಿವಿಧ ಜಾತಿಯ ಹೂವು–ಹಣ್ಣು, ಹುಲ್ಲು–ಸೊಪ್ಪು, ಗಡ್ಡೆ–ಗೆಣಸು ಆತನ ಮಾನಸಿಕ ವೈಶಾಲ್ಯತೆಗೆ ಕಾರಣವಾಗಿವೆ. ಆದ್ದರಿಂದಲೇ ಅನಾಗರಿಕನಂತೆ ಕಂಡರೂ ಅವನ ಜೀವನ ಶೈಲಿ ಒಪ್ಪಿಕೊಂಡಿರುವ ಮೌಲ್ಯಗಳು ಈ ಜಗತ್ತಿಗೆ ಮಾದರಿಯಾಗಿ ನಿಲ್ಲುತ್ತವೆ. ಬಿಳಿಗಿರಿರಂಗನಬೆಟ್ಟ, ಮಾದೇಶ್ವರಬೆಟ್ಟ ಈ ಹೆಸರಿನ ಅರಣ್ಯಗಳಲ್ಲಿ ಒಂದೊಂದು ದೈವಿಕ ಶಕ್ತಿಯನ್ನು ಕಾಣುವ ಮೂಲಕ ಸೋಲಿಗರು ಭರವಸೆಯ ಬದುಕನ್ನು ಕಟ್ಟಿಕೊಂಡಿದ್ದಾರೆ.

**ಕೊನೆಟಿಪ್ಪಣಿ**

೧. ಅನಂತಶರ್ಮ ಭುವನಗಿರಿ, ೨೦೦೭, *ಧರ್ಮಾನ್ವೇಶಣೆ*, ಉದಯ ಪ್ರಕಾಶನ, ಬೆಂಗಳೂರು ಪು. ೬

೨. ಹೆಗಡೆ ನಾಗೇಶ್, ವನಸಂಜೀವನ, ೨೦೦೮, *ಶಿಕ್ಷಕರಿಗಾಗಿ ಪರಿಸಯ ಕೈಪಿಡಿ*, ಬಿ ಆರ್ ಟಿ ಅಭಯಾರಣ್ಯ, ಕರ್ನಾಟಕ ಪಬ್ಲಿಕೇಷನ್ ಪ್ರೈವೈಟ್ ಲಿಮಿಟೆಡ್, ಬೆಂಗಳೂರು. ಪು. ೨೮

೩. ಕಾಳೇನಹಳ್ಳಿ ಚಂದ್ರು, ೧೯೯೩, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೦೧

೪. Morab S G, ೨೦೧೦, The Soliga of The B R Hills, An Anthropology Survey Of India, Government of India, P. 94

೫. ರಾಜಶೇಖರ ಪಿ ಕೆ, ೨೦೧೭, ಮಲೆಯ ಮಹಾದೇಶ್ವರ ಕಥಾ ಮಂಜರಿ, (ಜನಪದ ಮಹಾಕಾವ್ಯ) ರಾಜಶೇಖರ ಹೊನ್ನೂರು, ಮೈಸೂರು, ಪು. ३೪೮

೬. ಕೇಶವನ್ ಪ್ರಸಾದ್ ಕೆ (ಸಂ), ೨೦೦೫, *ಸೋಲಿಗರು ಹಾಡಿದ ಬಿಳಿಗಿರಿ ರಂಗನ ಕಾವ್ಯ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೬೨

೭ The Quarterly Journal of The Mythic Society, july-September 1997, P.4

೮. ಶಿವರಾಜಪ್ಪ ಎಸ್, ೨೦೦೩, ಮಹದೇಶ್ವರ ಚರಿತ್ರೆ, ಸಪ್ನ ಬುಕ್ ಹೌಸ್ ಬೆಂಗಳೂರು ಪು. ३೯-೪೧

ಅಧ್ಯಾಯ ಆರು

# ಸೋಲಿಗರು ಬುಡಕಟ್ಟಿನ ನಂಬಿಕೆ ಮತ್ತು ಆಚರಣೆಗಳು

೬.೧. ಹಬ್ಬಗಳು

೬.೨. ಸೋಲಿಗರ ವೈದ್ಯ ಪದ್ಧತಿ

ಅಧ್ಯಾಯ ಆರು

# ಸೋಲಿಗರು ಬುಡಕಟ್ಟಿನ ನಂಬಿಕೆ ಮತ್ತು ಆಚರಣೆಗಳು

ಸೋಲಿಗರು ಹುಟ್ಟಿನಿಂದ ಸಾಯುವವರೆಗೂ ಅನೇಕ ಆಚರಣೆಗಳು ಹಾಗೂ ವಿಧಿ ವಿಧಾನಗಳನ್ನು ಆಚರಿಸುತ್ತಾರೆ. ಸೋಲಿಗರು ಹೆಚ್ಚು ಪ್ರಕೃತಿ ನಂಬಿಕೆಯ ಮೇಲೆ ಬದುಕುತ್ತಿರುವರು. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವಾಗ ಮುಗ್ಧ ಮಗುವಿನಲ್ಲಿ ಆಗುವ ದೈಹಿಕ ಹಾಗೂ ಮಾನಸಿಕ ಬದಲಾವಣೆಗಳನ್ನು ಆಚರಣೆಯ ರೂಪದಲ್ಲಿ ಇಂದಿಗೂ ಪ್ರತಿನಿಧಿಸುತ್ತಾರೆ. ಸೋಲಿಗರಲ್ಲಿ ಕಂಡುಬರುವ ರೊಟ್ಟಿ ಹಬ್ಬ, ಹೊಸ ರಾಗಿ ಹಬ್ಬ, ಸೋಲಿಗರ ಗೋರುಕಾನ, ಹಾಡುಕೆ, ಖಗ್ಗ, ಬುರುಡೆ ಕರೆಯುವುದು ಹಾಗೂ ಸೋಲಿಗರ ನ್ಯಾಯದ ಆಚರಣೆ, ಕುಲದ ಪದ್ಧತಿ, ಹೊಂಗೆಲರ ಕುಲ, ಶೆಳಕರ ಕುಲ, ಸೂರ್ಯ ಕುಲ, ತೇನೇರು ಕುಲ, ಬುರುಡೆ ಕರೆಯುವುದು ಮುಂತಾದ ಜಾನಪದ ಆಚರಣೆಗಳು ಇಂದಿಗೂ ಸಹ ತಮ್ಮ ಮೂಲ ಸ್ವರೂಪದಲ್ಲಿಯೇ ಮುಂದುವರಿಯುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಕಾಡಿನ ಒಳಗೆ ಆಚರಣೆ ಮಾಡುತ್ತಿದ್ದ ದೇವರುಗಳ ಹಬ್ಬಗಳು, ವಿಧಿ ವಿಧಾನಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಕಾರಣ ಕಾಡಿನಿಂದ ಸೋಲಿಗರನ್ನು ಸ್ಥಳಾಂತರ, ಅರಣ್ಯ ಇಲಾಖೆ ಮತ್ತು ಸಮುದಾಯ ಇವೆರಡರ ನಡುವೆ ಅವರ ಆಚರಣೆಗಳ ಮೇಲೆ ಪರಿಣಾಮವನ್ನು ಬೀರಿದೆ. ಆದರೂ ಚಾಮರಾಜನಗರದ ಹಲವು ಕಡೆಗಳಲ್ಲಿ ಸೋಲಿಗರ ಸಂಸ್ಕೃತಿ ಆಚಾರ–ವಿಚಾರ, ಜೀವನ ಶೈಲಿ ಇವುಗಳು ಕಾಡಿನ ಪರಿಸರಕ್ಕೆ ಹೊಂದಿಕೊಂಡಂತೆ ಇವೆ.

ಸೋಲಿಗರು ಪ್ರತಿಯೊಂದು ಆಚರಣೆಯಲ್ಲಿ ನಂಬಿಕೆಯನ್ನಿಟ್ಟುಕೊಂಡಿದ್ದಾರೆ. ವಿವಾಹ ಸಂಬಂಧಿ ಆಚರಣೆಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಂಡುಕೊಂಡಿದ್ದಾರೆ. ಶವಸಂಸ್ಕಾರ ಸಂಬಂಧಿ ಆಚರಣೆಗಳನ್ನು ಬಹಳ ಕಟ್ಟುನಿಟ್ಟಾಗಿ ಮಾಡುತ್ತಾರೆ.

### ೬.೧. ಹಬ್ಬಗಳು

ಹಬ್ಬ ಎಂಬುದು ಎಲ್ಲಾ ಸಮುದಾಯಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಆಚರಿಸಲ್ಪಡುವ, ಮನುಷ್ಯ ಸಂಸ್ಕೃತಿಗೆ ಅಂಟಿಕೊಂಡು ಬಂದ ಒಂದು ಭಾಗ. ಎಲ್ಲ ಆದಿವಾಸಿ ಸಮುದಾಯಗಳಿಂದ ಹಿಡಿದು ತೀರಾ ಮುಂದುವರಿದ ಜನರಿಗೂ ಸಂತೋಷಪಡಲು ಆ ಮೂಲಕ ಕೆಲವೊಂದು ದಿನಗಳಲ್ಲಿ, ಸಮಯದಲ್ಲಿ, ಎಲ್ಲರೂ ಒಟ್ಟಾಗಿ ಸೇರಿ ಸಂತೋಷದಿಂದ ಸಂಭ್ರಮಿಸಲು ಹಬ್ಬಗಳು ಅವಶ್ಯಕವಾಗಿ ಬೇಕು.

"Festival from an essential aspect of all Cultures. In almost all Societies of the world, festivals are celebrated in one form or other since time immemorial"[1](Srivastava S L:1974:151) ಇಲ್ಲಿ ಹಬ್ಬದ ವಿಶ್ವವ್ಯಾಪಕತೆಯನ್ನು ಸಾದರಪಡಿಸುತ್ತದೆ.

**'ಹಬ್ಬ'** ಎಂಬ ಪದ ಸಂಸ್ಕೃತದ **'ಪರ್ವನ್'** ಎಂಬ ಪದದ ತದ್ಭವ ರೂಪ. ಹಬ್ಬಕ್ಕೆ ಹಲವಾರು ಉದ್ದೇಶಗಳಿದ್ದರೂ, ಮುಖ್ಯ ಉದ್ದೇಶ ಮನುಷ್ಯ ಅದರಿಂದ ಪಡೆಯುವ ಸಂತಸವೇ ಆಗಿದೆ. ಕಾಳಿದಾಸನ ತನ್ನ ವಿಕ್ರಮೋರ್ವಶಿ ಒಂದು ಮಾತನ್ನು ಹೇಳುತ್ತಾನೆ. ಉತ್ಸವಪ್ರಿಯನಾದ ಮನುಷ್ಯನ ಜೀವನಕ್ಕೆ ನೆಮ್ಮದಿ ಬೇಕಾದರೆ ನಂಬಿಕೆ ಇರಬೇಕು. ನೆಮ್ಮದಿ ಇಲ್ಲದ ಜೀವನ ಮರುಳುಗಾಡಿನಲ್ಲಿ ಇದ್ದಂತೆ. ಕಾಳಿದಾಸನು ಹೇಳಿದ ಈ ಮಾತು ಇಂದಿಗೂ ಸೋಲಿಗ ಸಮುದಾಯದವರಲ್ಲಿ ಹೇರಳವಾಗಿರುವುದನ್ನು ನಾವು ನೋಡಬಹುದು. ಸೋಲಿಗರು ಹಣವಂತರಲ್ಲ, ಶ್ರೀಮಂತರಲ್ಲದಿದ್ದರೂ ನಿತ್ಯದ ಅವರ ಹಬ್ಬಗಳ ಆಚರಣೆಯಲ್ಲಿ ಶ್ರೀಮಂತಿಕೆಯನ್ನು ಕಾಣಬಹುದು.

ಯಾವುದೇ ಪ್ರದೇಶದ ಜಾನಪದವಾದರೂ ಅದು ತನ್ನ ಸುತ್ತಿನ ಭೌಗೋಳಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳಿಂದ ಪ್ರಭಾವಿತವಾಗಿಯೇ ರೂಪುಗೊಳ್ಳುತ್ತದೆ. ಒಂದೇ ಸಂಪ್ರದಾಯ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಣೆಗೊಳ್ಳುತ್ತದೆ. ರೂಢಿಸಿಕೊಳ್ಳುವ ನಂಬಿಕೆ, ಸಾಹಿತ್ಯ, ಕಲೆ ಮುಂತಾದವು ಆಯಾ ಪ್ರದೇಶದ ಜಾನಪದಕ್ಕೆ ವಿಶಿಷ್ಟವಾಗಿರುತ್ತವೆ. ಬೇರೊಂದು ಪ್ರದೇಶದಿಂದ ಸ್ವೀಕರಿಸಿದ ಸಂಸ್ಕೃತಿಯ ಅಂಶವೂ ಅಷ್ಟೇ ಸಹಜವಾಗಿ ಆ ಪ್ರದೇಶದ ಸಂಸ್ಕೃತಿಯೊಂದಿಗೆ ಬೆರೆತುಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಹಬ್ಬ ಜಾತ್ರೆಗಳು ಸಾಮಾಜಿಕ ಜಾನಪದ ಸಂಪ್ರದಾಯಗಳು ಅವು ತಮಗೆ ವಿಶಿಷ್ಟವಾದ ಅರ್ಥಪೂರ್ಣ ಮೂಲದಿಂದ ತಮ್ಮ ಹುಟ್ಟನ್ನು ಪಡೆದುಕೊಳ್ಳುತ್ತದೆ. ಆ ಹಿನ್ನೆಲೆ ಭಯದ ಮೂಲದಿಂದ ಕಲ್ಪಿತವಾಗಿರಬಹುದು. ಇಲ್ಲವೇ ಮಾನವ ಪ್ರಕೃತಿಯ ಸಹಜ ಹೊಂದಾಣಿಕೆಯ ಪ್ರವೃತ್ತಿಯಿಂದ ಜನಿಸಿದ್ದಾಗಿರಬಹುದು. ಆದರೆ ಪ್ರತಿಯೊಂದು ಆಚರಣೆಯೂ ತನ್ನ ವ್ಯಾಪ್ತಿಯಲ್ಲಿ ಕಾಲ, ಸಂದರ್ಭಗಳ ಹಿನ್ನೆಲೆಯಲ್ಲಿ ಅರ್ಥಪೂರ್ಣ ಮಹತ್ವವನ್ನು ಪಡೆದುಕೊಂಡಿರುತ್ತದೆ.

ಸೋಲಿಗರ ಹಬ್ಬದ ಆಚರಣೆಗಳಲ್ಲಿ ಮೌಖಿಕವಾದ ಪರಂಪರೆಯ ಮೂಲಕ ಅವರ ನಂಬಿಕೆ, ವಿಶ್ವಾಸಗಳು, ಪ್ರೀತಿ, ಭರವಸೆಗಳು, ಪರಸ್ಪರ ಸಂಬಂಧಗಳು, ಸಹಬಾಳ್ವೆ, ಸರಳ ಜೀವನ, ಪ್ರಕೃತಿಯೊಂದಿಗಿನ ಸಂಬಂಧ, ಕಾನನಗಳ ಸಮಸ್ತ ಜೀವರಾಶಿಗಳೊಡನೆ ಉಂಟಾದ ಭಾವನೆಗಳು, ಇವೆಲ್ಲವೂ ಸಹ ಸೋಲಿಗರ ಹಬ್ಬದ ಆಚರಣೆಗಳಲ್ಲಿ ಹಾಸುಹೊಕ್ಕಾಗಿರುವುದನ್ನು ಕಾಣುತ್ತೇವೆ.

ಸೋಲಿಗರ ಹಬ್ಬದ ಆಚರಣೆಗಳನ್ನು ಗಮನಿಸಿದಾಗ ಇಡೀ ಮಾನವ ಬದುಕನ್ನು ಒಂದು ಋತುಮಾನದಿಂದ ಇನ್ನೊಂದು ಋತುಮಾನಕ್ಕೆ ವರ್ಗಾಯಿಸುತ್ತದೆ. ಸೋಲಿಗರೇ ಹೇಳುವ ಪ್ರಕಾರ ಸೋಲಿಗರ ಬದುಕು ಹಳೆಯದಾದರೂ ಹೊಸ ಜೀವನ, ಹೊಸ ಗಾಳಿ-ಬೆಳಕು, ಮಳೆ, ಹೊಸ ರಾಗಿಹಬ್ಬ, ರೊಟ್ಟಿಹಬ್ಬ, ಹೊಸದಾಗಿ ಚಿಗುರೊಡೆದ ಕಾನನಗಳ ಮಧ್ಯದಲ್ಲಿನ ದೊಡ್ಡಸಂಪಿಗೆ ಹಬ್ಬ, ಮಾರಿ ಹಬ್ಬ, ಹೀಗೆ ಹಲವಾರು ಹಬ್ಬದ ಆಚರಣೆಗಳು ಸೋಲಿಗರ ಜೀವನದಲ್ಲಿ ಹೊಸದಾಗಿರುತ್ತವೆ. ಹಬ್ಬಗಳ ಆಚರಣೆಯಲ್ಲಿ ಸೋಲಿಗ ಸಮುದಾಯದವರು ಎಲ್ಲರೂ ಸೇರಿ **'ಬಿಟ್ಟಿ ಸೇವೆ'**ಯನ್ನು ಮಾಡುತ್ತಾರೆ. ಅಂದರೆ, ಯಾವುದೇ ಫಲಾಪೇಕ್ಷೆ ಇಲ್ಲದೆ ಪುಕ್ಕಟೆಯಾಗಿ ಜಾತ್ರೆ ಕೆಲಸ, ದೇವರ, ಹಬ್ಬದ ಕೆಲಸವನ್ನು ಮಾಡುವುದು ಎಂದು ಹೇಳುತ್ತಾರೆ.

ಸೋಲಿಗರಲ್ಲಿ ಋತುಮಾನಕ್ಕೆ ತಕ್ಕ ಹಾಗೆ ಹಬ್ಬಗಳ ಆಚರಣೆ ಮಾಡುತ್ತಾರೆ. ಸಂಕ್ರಾಂತಿಯಿಂದ ಹಬ್ಬದ ಆಚರಣೆ ಪ್ರಾರಂಭವಾಗಿ ಅದು ಹೊಸರಾಗಿ ಹಬ್ಬ ಮೂಲಕ ದೊಡ್ಡ ಜಾತ್ರೆ ಮತ್ತು ರೊಟ್ಟಿ

ಹಬ್ಬದ ತನಕವೂ ಮಾರ್ಚ್, ಏಪ್ರಿಲ್ ತನಕವೂ ಹಬ್ಬಗಳ ಆಚರಣೆ ನಡೆಯುತ್ತದೆ. ಹೊಸ ರಾಗಿ ಹಬ್ಬ, ರೊಟ್ಟಿ ಹಬ್ಬ, ಸಂಕ್ರಾಂತಿ ಹಬ್ಬ, ಜಡೆಸ್ವಾಮಿ ಹಬ್ಬ ಇವುಗಳನ್ನು ಸೋಲಿಗರು ಹೇಗೆ ಆಚರಿಸುತ್ತಾರೆ ಮತ್ತು ಸೋಲಿಗರಿಗೂ ಪ್ರಕೃತಿಗೂ ನಡುವಿನ ಸಂಬಂಧ, ಹಬ್ಬದ ಆಚರಣೆಗಳ ಮೂಲಕ ಸೋಲಿಗರು ತಮ್ಮ ಸಾಮಾಜಿಕ ವ್ಯವಸ್ಥೆಯನ್ನು ಯಾವ ರೀತಿಯಲ್ಲಿ ಹೆಣೆದುಕೊಂಡಿದ್ದಾರೆ ಮತ್ತು ಅದರ ಅನುಕೂಲ, ಅನಾನುಕೂಲ, ಇತ್ತೀಚಿನ ಬದಲಾವಣೆಗಳನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

**೬.೧.೧. ಹೊಸರಾಗಿ ಹಬ್ಬ**

ಸೋಲಿಗರಿಗೆ **ರಾಗಿ** ಮುಖ್ಯ ಆಹಾರ ಬೆಳೆ. ತಮ್ಮ ಹೊಲದಲ್ಲಿ ಬೆಳೆದ ಮೊದಲ ಬೆಳೆಯನ್ನು ದೇವರಿಗೆ ಅರ್ಪಿಸುವುದು ಕಂಡುಬರುತ್ತದೆ. ಆದುದರಿಂದ ಈ ಹಬ್ಬವನ್ನು **'ಹೊಸರಾಗಿ ಹಬ್ಬ'** ಎಂದು ಕರೆಯುತ್ತಾರೆ. 'ಭೂಮಿಗೆ ಮಳೆ ಬಂದ ಮೇಲೆ ಸೋಲಿಗರು ತಮ್ಮ ಮನೆಯಲ್ಲಿ ಇಟ್ಟಿರುವ ರಾಗಿಯನ್ನು ವ್ಯವಸಾಯ ಮಾಡಿ ಜಮೀನಿನಲ್ಲಿ ಬಿತ್ತಿದಾಗ ಅದು ಮೊಳಕೆ ಬಂದು, ಪೈರು ಗಿಡವಾಗಿ, ತೆನೆ ಬಂದು ಹುಲುಸಾಗಿ ಬೀಜ ಬಲಿತು **'ಹಳೆ ರಾಗಿಯಿಂದ ಹೊಸರಾಗಿ'** ಆದ ಮೇಲೆ ಇದನ್ನು **'ತಾಯಿ-ತಂದೆ ದೇವರಿಗೆ ಮೊದಲನೇ ಅರ್ಪಣೆ'** ಎಂದು ಭೂಮಿ ತಾಯಿಗೆ ಅಡ್ಡಬಿದ್ದು ಕೈಮುಗಿದು ನಾವು ಜಮೀನಿನಲ್ಲಿ ಹಳೆ ಬೀಜ ಬಿತ್ತಿ ನೀನು ನಮಗೆ ಹೊಸ ಬೀಜ ಕೊಟ್ಟಿದ್ದೀಯ ತಾಯಿ ಎಂದು ಹೇಳಿ ಪೂಜೆ ಮಾಡುತ್ತಾರೆ. ತಮ್ಮ ಜಮೀನಿನಲ್ಲಿ ಮಾಡುವ ಪೂಜೆಯನ್ನು **'ಹೊಸರಾಗಿ ಪೂಜೆ, 'ಹೊಸರಾಗಿ ಹಬ್ಬ'** ಎಂದು ಕರೆಯುತ್ತಾರೆ.

ಸೋಲಿಗರ ಬಾಳು ನಿಂತಿರುವುದೇ ವ್ಯವಸಾಯ ಮತ್ತು ಕಾಡಿನ ಕಿರು ಅರಣ್ಯ ಉತ್ಪನ್ನದ ಮೇಲೆ. ಅವರ ವ್ಯವಸಾಯ ಸಂಬಂಧಿ ಹಬ್ಬಗಳ ಆಚರಣೆಗಳು ಪುರಾತನದಿಂದ ಬಂದವುಗಳಾಗಿವೆ. 'ಬಿತ್ತಿದ ಬೆಳೆ ಚೆನ್ನಾಗಿ ಬಂದು ಕೈಸೇರಲೆಂದು ಹಬ್ಬ ಆಚರಿಸಿ ಭೂಮಿಗೆ ಪೂಜೆ ಸಲ್ಲಿಸುತ್ತಾರೆ.' ಬೆಳೆ ಹಸನಾಗಿ ಬಂದಾಗ ಅದನ್ನು ಕೊಯ್ಲು ಮಾಡುತ್ತಾರೆ. ಬೆಳೆ ತಮ್ಮ ಕೈಸೇರಿದ ನಂತರ ಸೋಲಿಗರು ತಾವೊಬ್ಬರೇ ತಿನ್ನುವುದಿಲ್ಲ. ಹಂಚಿಕೊಂಡು ತಿನ್ನುವ ಮೂಲಕ ದೇವರ ಹೆಸರಿನಲ್ಲಿ ಹೊಸರಾಗಿ ಹಬ್ಬನ್ನು ಮಾಡಿ ಸಂಭ್ರಮಿಸುತ್ತಾರೆ. ಹೊಸ ಬೆಳೆಗೆ ಕಾರಣವಾದ ಭೂಮಿತಾಯಿಯ ಬಗೆಗೆ ಇರುವ ಭಕ್ತಿ ಭಾವವನ್ನು ಹೊಸರಾಗಿ ಹಬ್ಬವನ್ನು ಆಚರಿಸುವ ಮೂಲಕ ಸಂಭ್ರಮಿಸುತ್ತಾರೆ. ಸೋಲಿಗರು ಕುಲದ ದೇವರುಗಳನ್ನು ಪೂಜಿಸುತ್ತಾರೆ. ಅಲ್ಲದೆ ಹೆಚ್ಚು ಸೋಮವಾರ, ಶುಕ್ರವಾರ ಮತ್ತು ಶನಿವಾರಗಳಲ್ಲಿ ಈ ಹೊಸರಾಗಿ ಹಬ್ಬದ ಆಚರಣೆ ಮಾಡುತ್ತಾರೆ. ಜಡೆಯಪ್ಪ, ಕೇತಪ್ಪ, ಕೇತದೇವರು, ಮಹದೇಶ್ವರನನ್ನು ತಮ್ಮ ಮನೆದೇವರನ್ನಾಗಿ ಮಾಡಿಕೊಂಡಿರುವವರು ಸೋಮವಾರ ಮತ್ತು ಶುಕ್ರವಾರ ದಿನದಂದು ಹಾಗೂ ಬಿಳಿಗಿರಿರಂಗಪ್ಪನನ್ನು ತಮ್ಮ ಮನೆದೇವರನ್ನಾಗಿ ಮಾಡಿಕೊಂಡವರು ಶನಿವಾರದಂದು ಹೊಸರಾಗಿ ಹಬ್ಬದ ಆಚರಣೆಯನ್ನು ಮಾಡುತ್ತಾರೆ.

ಹೊಸರಾಗಿ ಹಬ್ಬವನ್ನು ಸಾಮಾನ್ಯವಾಗಿ ಸಂಕ್ರಾಂತಿ ಹಬ್ಬದ ನಂತರದಲ್ಲಿ ಆಚರಿಸುತ್ತಾರೆ. ವರುಷದ ಪ್ರಾರಂಭದಲ್ಲಿ ಜನವರಿಯಲ್ಲಿ ಈ ಹಬ್ಬದಾಚರಣೆ ಶುರುವಾಗಿ, ರೊಟ್ಟಿ ಹಬ್ಬದವರೆಗೂ ನಡೆಯುತ್ತಿರುತ್ತದೆ. ಅಂದರೆ ಮಾರ್ಚ್-ಏಪ್ರಿಲ್ ತಿಂಗಳವರೆಗೂ ಹೊಸರಾಗಿ ಹಬ್ಬದ ಆಚರಣೆ ನಡೆಯುತ್ತದೆ. ಈ ಹಬ್ಬವನ್ನು ವರ್ಷದಲ್ಲಿ ಒಂದು ನಿರ್ದಿಷ್ಟ ದಿನದಂದೇ ಮಾಡಬೇಕೆಂಬ ಯಾವ

ನಿಯಮವೂ ಇರುವುದಿಲ್ಲ. ಆಯಾ ಕುಲದವರು, ಕುಟುಂಬದವರು ಹಾಗೂ ಪೋಡಿನವರು ಸೇರಿಕೊಂಡು ಹಬ್ಬದ ದಿನಾಂಕ ಮತ್ತು ತೀರ್ಮಾನವನ್ನು ಮಾಡುತ್ತಾರೆ. ಹೊಸರಾಗಿ ಹಬ್ಬದ ದಿನದಂದು ಮನೆಯ ಹಿರಿಯರು ಉಪವಾಸವಿರುತ್ತಾರೆ. ಆ ದಿನದಂದು ಎಲ್ಲರೂ ಮಡಿಯಾಗುತ್ತಾರೆ. ಅಂದರೆ ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ, ಮನೆಗೆ ಸುಣ್ಣಬಣ್ಣ, ಗೋಡೆಗೆ ಕೆಮ್ಮಣ್ಣು ಬಳಿದು ಸುಣ್ಣದಿಂದ ರಂಗೋಲಿ ಹಾಕುತ್ತಾರೆ. ಮನೆಯ ಮುಂದೆ ರಂಗೋಲೆ ಹಾಕುತ್ತಾರೆ. ಬಾಗಿಲಿಗೆ ಪ್ರಾಣಿ, ಪಕ್ಷಿ, ಮರ ಇತ್ಯಾದಿ ಚಿತ್ರಗಳನ್ನು ಬಿಡಿಸಿ ಗುಡಿಸಲಿನ ನೆಲವನ್ನು ಸಗಣಿಯಿಂದ ಸಾರಿಸುತ್ತಾರೆ. ಗಾರೆ, ಮನೆಯಾದರೆ ನೀರಿನಿಂದ ತೊಳೆದು ಸ್ವಚ್ಚ ಮಾಡಿ ಮನೆಯ ಎಲ್ಲರೂ ಸಂಭ್ರಮದಿಂದ ಮೊದಲು ಹೊಸರಾಗಿ ಹಬ್ಬಕ್ಕೆ ಮನೆಯಿಂದಲೇ ಅಥವಾ ಗುಡಿಸಲಿನಿಂದಲೇ ತಯಾರಿ ಮಾಡಿಕೊಳ್ಳುತ್ತಾರೆ.

ಹೊಸ ರಾಗಿಯನ್ನು ಮಡಿಯಿಂದ ಶುದ್ಧೀಕರಿಸಿ ಅದನ್ನು ರಾಗಿ ಕಲ್ಲಿನಿಂದ ಬೀಸಿಕೊಂಡು **'ಹೊಸ ರಾಗಿಯ ಮುದ್ದೆ'**ಯನ್ನು ಮಾಡುತ್ತಾರೆ. ಇದೇ ಸೋಲಿಗರಿಗೆ ಹೊಸರಾಗಿ ಹಬ್ಬದಲ್ಲಿ **'ಹೊಸ ತಿನಿಸು'** ಆಗಿರುತ್ತದೆ. ಇದರ ಜೊತೆಗೆ ಇತ್ತೀಚೆಗೆ ಸ್ವಲ್ಪ ಉಳ್ಳವರು ಅನ್ನ ಉದುಕ(ಸಾಂಬಾರು) ಕುಂಬಳಕಾಯಿ ಪಲ್ಯ, ತಾಳಗ, ಪಾಯಸ ಮಾಡಿ ಮೊದಲು ಭೂಮಿತಾಯಿಗೆ ಅರ್ಪಿಸಿ ನಂತರ ಪೋಡಿನ, ಕಾಲೋನಿಯ ಕುಲದಿಂದ ೫ ಜನ ಹಿರಿಯರನ್ನು ಕರೆದು ಊಟ ಬಡಿಸುತ್ತಾರೆ. ಸೋಲಿಗರಲ್ಲಿ ಯಾವುದೇ ಹಬ್ಬವನ್ನು ಆಚರಣೆ ಮಾಡುವಾಗ ದೇವರ ಮುಂದೆ ಮಹಿಳೆಯರು ಮತ್ತು ಗುರು ಸೇರಿ ಹಾಡುಕೆಯನ್ನು ಹೇಳುತ್ತಾರೆ. ಇದು ಸಾಮಾನ್ಯವಾಗಿ ಊಟ ಮಾಡಿದ ನಂತರ ರಾತ್ರಿ ಹಾಡುಕೆ ಇರುತ್ತದೆ. ಈ ಹಾಡುಕೆಯ ವೈಶಿಷ್ಟ್ಯವೆಂದರೆ ರೊಟ್ಟಿ ಹಬ್ಬದ ರೀತಿಯಲ್ಲಿ ಗೋರುಕಾನ ನೃತ್ಯ ಇರುವುದಿಲ್ಲ. ನುರಿತ ಸೋಲಿಗ ಹಿರಿಯರು, ಮಹಿಳೆಯರು ದೇವರ ಗದ್ದುಗೆ ಎದುರು ಹಾಡುಕೆಯನ್ನು ಪ್ರಾರಂಬಿಸುತ್ತಾರೆ. ಮೊದಲಿಗೆ ದೇವರಿಗೆ ಸಂಬಂಧಿಸಿದ ಭಕ್ತಿಯ ಹಾಡುಕೆ, ನಂತರ ವೀರ–ವೀರಾದಿಗಳ ಹಾಡುಕೆ, ನಂತರ ಕಾಡಿನ ಪ್ರಾಣಿ–ಪಕ್ಷಿಗಳ ಮತ್ತು ಇತರೆ ವಸ್ತುಗಳ ವರ್ಣನೆಯನ್ನು ಮಾಡಲಾಗುತ್ತದೆ. ಇದಾದ ಎರಡು ಗಂಟೆಯ ನಂತರ ಗುರುವಿನ ಮೇಲೆ ದೇವರು ಬಂದು ಒಳ್ಳೆಯದು, ಕೆಟ್ಟದ್ದು ಮತ್ತು ಸಮಸ್ಯೆಗಳಿಗೆ ಪರಿಹಾರವನ್ನು ಕೊಡುತ್ತದೆ. ಹಾಡುಕೆ ಮತ್ತು ಓಲಗದ ನಡುವೆ ಜೋಗಿ ಕುಣಿತ ಇರುತ್ತದೆ. ಇಲ್ಲಿ ಜೋಗಿ ಕುಣಿತ ಎಂದರೆ ಒಬ್ಬ ನುರಿತ ಸೋಲಿಗ ವಯಸ್ಕ ಜೋಗಿ ವೇಷ–ಭೂಷಣಗಳನ್ನು ಧರಿಸಿಕೊಂಡು ಒಂದು ದೊಡ್ಡ ಮರದ ದೊಣ್ಣೆಯನ್ನು ಹಿಡಿದುಕೊಂಡು ದೇವರ ಗದ್ದುಗೆಯಿಂದ ದೇವಸ್ಥಾನದ ಬಾಗಿಲವರೆಗೆ ಜೋಗಿ ದೊಣ್ಣೆಯನ್ನು ಹಿಡಿದುಕೊಂಡು ಓ.. ಕೀಹೀ.... ಓ.. ಕೀಹೀ.... ಎಂದು ಕುಣಿಯುತ್ತಾನೆ. ಈ ಪ್ರಕ್ರಿಯೆಯು ಬೆಳಗಿನವರೆಗೂ ನಡೆಯುತ್ತದೆ.

ಹೊಸ ರಾಗಿ ಹಬ್ಬ ಆಚರಣೆಯ ಸಂದರ್ಭದಲ್ಲಿ ಕೆಲವರು ಹಾಡುಕೆ, ಗೊರುಕಾನ ಕುಣಿತವನ್ನು ರಾತ್ರಿಯ ಸಮಯದಲ್ಲಿ ಕಿಚ್ಚು ಹೊತ್ತಿಸಿ(ಬೆಂಕಿ ಹಾಕಿ) ಮಾಡುತ್ತಾರೆ. ಕೆಲವರು ಹಾಗೆಯೇ ದೇವರ ಪೂಜೆ ಮಾಡಿ ಬಂದವರಿಗೆ ಊಟ ಬಡಿಸಿ, ತಾವೂ ಸಹ ಮನೆಯಲ್ಲಿಯೇ ಹೊಸರಾಗಿ ಹಬ್ಬದ ಆಚರಣೆ ಮಾಡುತ್ತಾರೆ. ಮುದ್ದೆ, ಸಾಂಬಾರ್ ಮಾಡಿ ದೇವರಿಗೆ ಎಡೆ ಇಡುತ್ತಾರೆ. ಸಾಮಾನ್ಯವಾಗಿ ಹೊಸರಾಗಿ ಹಬ್ಬದಲ್ಲಿ ಆಯಾ ಕುಲದ ಕುಟುಂಬದವರು ಬಂದು ಸೇರುತ್ತಾರೆ. ಕೆಲವೊಂದು ಸಲ ಅವರ ಮನೆಯಲ್ಲಿ ಆ ವರ್ಷ ಹೊಸದಾಗಿ ರಾಗಿಯನ್ನು ಬೆಳೆಯದಿದ್ದರೆ, ಅವರ ಕುಲದವರೇ ಆದ ಮತ್ತೊಂದು ಕುಟುಂಬದಿಂದ ರಾಗಿಯನ್ನು ಪಡೆದುಕೊಂಡು ಬಂದು ದೇವರಿಗೆ ನೈವೇದ್ಯ ಇಡುತ್ತಾರೆ.

ಒಂದೆಡೆ ಬಾಳೆ ಎಲೆಯನ್ನು ಹಾಕಿ ಒಂದು ಚೊಂಬಿನಿಂದ ಒಂದು ಕಳಸವನ್ನು ಪೂಜಿಸಿ, ಅದಕ್ಕೆ ಕಾಡಿನಿಂದ ತಂದ ಹೂವು ಮುಡಿಸಿ ಇತ್ತೀಚೆಗೆ ಮನೆಯ ಮುಂಭಾಗ ತಾವು ಬೆಳೆಸಿದ ಹೂವುಗಳಾದ ದಾಸವಾಳ, ಗುಲಾಬಿ, ಡೇರೆ ಇತ್ಯಾದಿ ಹೂವುಗಳನ್ನು ಮುಡಿಸಿ, ಗಂಧ, ನಾಮ ಹಾಕಿ ಮನೆಯ ಹಿರಿಯರು ಮೊದಲು ಪೂಜೆ ಮಾಡುವರು. ಆ ನಂತರ ಉಳಿದವರು ಪೂಜೆ ಸಲ್ಲಿಸುತ್ತಾರೆ. **'ತಾವು ಬೆಳೆದ ಮೊದಲ ಬೆಳೆಯ ತುತ್ತನ್ನು ದೇವರಿಗೆ ಅರ್ಪಿಸುವುದು'** ಹಾಗೂ ಭೂಮಿ ದೇವತೆಗೆ ತೋರಿಸುವ ಅಪಾರ ಗೌರವದ ಸಂಕೇತವಾಗಿ ಈ ಹೊಸರಾಗಿ ಹಬ್ಬವು ಅಂದಿನಿಂದ ಇಂದಿನವರೆಗೂ ಮುಂದು ವರಿದುಕೊಂಡು ಬಂದಿದೆ. ಸೋಲಿಗರಿಗೆ ಪ್ರಿಯವಾದ ರಾಗಿ ಬೆಳೆಯನ್ನು ಕೊಯ್ದು, ಮೆದೆ ಹಾಕಿ, ಅನಂತರ ಅದನ್ನು ಒಕ್ಕಣೆ ಮಾಡಿ ಆ ಹೊಸ ರಾಗಿಯನ್ನು ಮೊದಲು ದೇವರಿಗೆ, ಭೂಮಿತಾಯಿಗೆ ಅರ್ಪಿಸಿ ಆ ನಂತರ ಸೋಲಿಗ ಸಮುದಾಯದವರು ಸೇರಿ 'ಹೊಸರಾಗಿ ಹಬ್ಬ ಆಚರಣೆ' ಮಾಡಿ ಸಂಭ್ರಮಿಸುತ್ತಾರೆ. ಎಲ್ಲರ ಪೂಜೆ ಆದ ನಂತರದಲ್ಲಿ ಎಲ್ಲರೂ ಕುಳಿತು ಸಂತೋಷದಿಂದ ಊಟ ಮಾಡುವರು.

**'ಗೀಕು ಮಕ್ಕನ ರಾಗಿಯರ'**

ಗೀಕು ಮಕ್ಕನ ರಾಗಿಯರ
ಬೀಸಾದು ನಮ್ಮ ರಾಗಿಯರ
ಕೇರದು ನಮ್ಮ ರಾಗಿಯರ
ಗೀಕ್ಕು ಮಕ್ಕನ ರಾಗಿಯರ ॥ ಗೀಕು ॥
ಬೆಜ್ಜ ಬೇರಿನ ರಾಗಿಯರ
ಬೆಂಡ ಬೇರಿನ ರಾಗಿಯರ
ಗೀಕ್ಕು ಮಕ್ಕನ ರಾಗಿಯರ ॥ ಗೀಕು ॥

ಬಡಿಯೋದ ನಮ್ಮ ರಾಗಿಯರ
ವಣಿಯೋದು ನಮ್ಮ ರಾಗಿಯರ
ಕೇರೋದು ನಮ್ಮ ರಾಗಿಯರ ॥ ಗೀಕು ॥

ಮತ್ತಿ ಬೇರಿನ ರಾಗಿಯರ
ಮುತ್ತುಗ ಬೇರಿನ ರಾಗಿಯರ
ದಡಸಲು ಬೇರಿನ ರಾಗಿಯರ ॥ ಗೀಕು ॥

ಮತ್ತಿ ಮದ ರಾಗಿಯರ
ಹೊನ್ನೆ ಮರದ ರಾಗಿಯರ
ಹಣಸೇ ಮರದ ರಾಗಿಯರ ॥ ಗೀಕು ॥

**ಸೌಜನ್ಯ:** ರಾಜು ಕನ್ನೇರಿ ಕಾಲೋನಿ

ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ, ಗುಂಡ್ಲುಪೇಟೆ, ಚಾಮರಾಜನಗರ ಪ್ರದೇಶಗಳಲ್ಲಿ ಹೊಸರಾಗಿ ಹಬ್ಬವನ್ನು ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತ ಆಚರಿಸುವ ರೀತಿಯಲ್ಲಿ ಆಚರಣೆ

ಮಾಡುವುದಿಲ್ಲ. ಆದರೂ ಈ ಕಡೆಯ ಸೋಲಿಗರೂ ಕೂಡ ರಾಗಿಯನ್ನು ಬೆಳೆಯುತ್ತಾರೆ. ಬೆಳೆದ ಮೊದಲ ಫಸಲನ್ನು ದೇವರಿಗೆ ಅರ್ಪಿಸುತ್ತಾರೆ. ರಾಗಿಯ ಬೆಳೆಯ ಕೊಯಿಲು ಮಾಡಿದ ನಂತರ, ಹೊಲದಲ್ಲಿಯೇ ಪೂಜೆ ಸಲ್ಲಿಸಿ ಭೂಮಿತಾಯಿಗೆ ನಮಸ್ಕರಿಸಿ, ಪ್ರಾಣಿ, ಪಕ್ಷಿಗಳಿಗೆ ನಮಸ್ಕರಿಸಿ ಸಗ್ಗದವರಿಗೆ ಪೂಜೆ ಸಲ್ಲಿಸಿ, ಅನಂತರ ಹೊಲದಲ್ಲಿಯೇ ಪಾಯಸ ಅಥವಾ ಬೆಲ್ಲದ ಅನ್ನ ಅಡುಗೆ ಮಾಡಿ ದೇವರಿಗೆ ಇಟ್ಟು ತಂದಿರುವ ಸಿಹಿಯನ್ನು ಉಣಬಡಿಸುತ್ತಾರೆ. ನಂತರ ತಾವು ಬೆಳೆದ ಬೆಳೆಯನ್ನು ಮನೆಗೆ ತೆಗೆದುಕೊಂಡು ಬರುತ್ತಾರೆ.

ಹೊಸರಾಗಿ ಹಬ್ಬದ ಆಚರಣೆಯಲ್ಲಿ ಸೋಲಿಗರು ತಾವು ಹೊಲದಲ್ಲಿ ಉಪಯೋಗಿಸುವ ಸಾಮಾನುಗಳಿಗೆ ಹಾಗೂ ಭೂಮಿತಾಯಿಗೆ ಪೂಜೆ ಸಲ್ಲಿಸುತ್ತಾರೆ. ಅವುಗಳೆಂದರೆ,

- ದೇವರಿಗೆ ಪೂಜೆ ಸಲ್ಲಿಸಿ ಎಡೆ ಅರ್ಪಿಸುತ್ತಾರೆ
- ಗುದ್ದಲಿಗೆ ಪೂಜೆ ಸಲ್ಲಿಸಿ ಎಡೆ ಅರ್ಪಿಸುತ್ತಾರೆ
- ರಾಗಿಕಲ್ಲಿಗೆ ಪೂಜೆ ಸಲ್ಲಿಸಿ ಎಡೆ ಅರ್ಪಿಸುತ್ತಾರೆ
- ತುಂಬಿದ ಹರಿವಿಗೆ ಪೂಜೆ ಸಲ್ಲಿಸಿ ಎಡೆ ಅರ್ಪಿಸುತ್ತಾರೆ

ಇವುಗಳಿಗೆಲ್ಲ ಕಾಡಿನಿಂದ ತಂದ ಧೂಪ, ಸಾಂಬ್ರಾಣಿ ಹಾಕಿ ಹೊಸರಾಗಿ ಹಬ್ಬದ ಆಚರಣೆ ಮಾಡಿ ಸಂಭ್ರಮಿಸುತ್ತಾರೆ.

**೬.೧.೨. ಸಪ್ಪೆ ಮಾದಪ್ಪ**

ಸೋಲಿಗರು ರಾಗಿಯನ್ನು ಕಲ್ಲಿನಿಂದಲೇ ಕುಂಬಿ, ಕುಟ್ಟಿ(ಪುಡಿಮಾಡಿ) ಯಾರೂ ತುಳಿಯದ ಜಾಗದಲ್ಲಿ ರಾಗಿಯನ್ನು ಒಣಗಿಸಿ ಬಡಿದು ಪುಡಿ ಮಾಡಿ ಅದಕ್ಕೆ ಉಪ್ಪನ್ನು ಉಪಯೋಗಿಸದೇ ರೊಟ್ಟಿ ಮಾಡಿ(ಸಪ್ಪೆ ರೊಟ್ಟಿ), ಮುದ್ದೆಯನ್ನೇ ಎಡೆಗೆ ಇಟ್ಟು ಪೂಜೆ ಮಾಡಿ ನಂತರ ಜನರಿಗೂ ಮತ್ತು ಮನೆಯವರೂ ಸಪ್ಪೆ ರೊಟ್ಟಿ, ಮುದ್ದೆಯನ್ನೇ ಬಡಿಸುತ್ತಾರೆ. ಇದಕ್ಕೆ ಸಪ್ಪೆ ಮಾದಪ್ಪ ಎಂದು ಕರೆಯುತ್ತಾರೆ. ಕಾರಣವೆಂದರೆ ರಾಗಿಯನ್ನು ನಾವು ಬಿತ್ತಿ, ಹೊಲದಲ್ಲಿ ಬೆಳೆಯುತ್ತೇವೆ. ಹಳೆರಾಗಿಯನ್ನು ಬಿತ್ತಿ ಹೊಸರಾಗಿ ಪಡೆದು ಅದನ್ನು ದೇವರಿಗೆ ಮಡಿಯಿಂದ ಅರ್ಪಿಸುತ್ತೇವೆ. ಆದರೆ ಈ ಉಪ್ಪನ್ನು ನಾವು ಬೆಳೆಯುವುದೂ ಇಲ್ಲ ಅಲ್ಲದೆ ನಾವು ತಯಾರು ಮಾಡುವುದೂ ಇಲ್ಲ. ಯಾರೋ ಬೇರೆಯವರು ತಯಾರು ಮಾಡುತ್ತಾರೆ. ಆದುದರಿಂದ ನಮ್ಮ ದೇವರಿಗೆ ಪೂಜೆ ಮಾಡುವಾಗ ನಾವು ಬೆಳೆದ ಪದಾರ್ಥವನ್ನು ಮಾತ್ರ ಎಡೆಗೆ ಹಾಕಿ ಪೂಜೆ ಮಾಡುವ ಪದ್ಧತಿ ಸೋಲಿಗರಲ್ಲಿ ರೂಢಿಯಲ್ಲಿದೆ. ಒಂದುವೇಳೆ ಸಪ್ಪೆ ಮಾದಪ್ಪನಿಗೆ ಹೊಸ ರಾಗಿ ಹಬ್ಬದಲ್ಲಿ ಉಪ್ಪನ್ನು ಹಾಕಿ ರೊಟ್ಟಿ, ಹಿಟ್ಟು ಮಾಡಿದರೆ ಸೋಲಿಗರಿಗೆ ಆ ಸಮಯದಲ್ಲೇ, ಸ್ಥಳದಲ್ಲಿಯೇ ತೊಂದರೆಯನ್ನು ತೋರಿಸಿಬಿಡುತ್ತದೆ. ಆದುದರಿಂದ ಹಾಗೆ ಮಾಡುವ ಹಾಗಿಲ್ಲ. ಕಾಡಿನಲ್ಲಿರುವ ದೇವರುಗಳಲ್ಲಿ ಹೆಚ್ಚಿನ ಶಕ್ತಿ ಮತ್ತು ಪಾವಿತ್ರತೆ ಇರುತ್ತದೆ. ನಿಜರೂಪದಲ್ಲಿ ದೇವರು ಮೈಮೇಲೆ ಆವೇಶ ಬಂದು ದೇವರು ಎಚ್ಚರಿಕೆ ಕೊಡುತ್ತಾನೆ ಎನ್ನುವ ನಂಬಿಕೆ ಸೋಲಿಗರದು.

ಸೋಲಿಗರು ಆ ವರ್ಷದಲ್ಲಿ ಅವರ ಜಮೀನಿನಲ್ಲಿ ರಾಗಿ ಬೆಳೆಯದಿದ್ದರೆ ಹೊಸರಾಗಿ ಹಬ್ಬವನ್ನು ಆಚರಿಸುವಂತಿಲ್ಲ. ಏಕೆಂದರೆ ಅವರ ಹೊಲದಲ್ಲಿ ಬೆಳೆದ ರಾಗಿಯನ್ನು ಮಾತ್ರ ತಂದು ಹೊಸರಾಗಿ

ಹಬ್ಬ ಆಚರಿಸಬೇಕು. ಅವರ ಕುಟುಂಬದಲ್ಲಿ ಯಾರಾದರೂ ಬೆಳೆದರೆ ಮಾತ್ರ ಅಲ್ಲಿ ಆಚರಣೆ ನಡೆಯುತ್ತದೆ. ಸೋಲಿಗರು ಅಂಗಡಿಯಿಂದ ರಾಗಿಯನ್ನು ತಂದು ಹೊಸರಾಗಿ ಹಬ್ಬವನ್ನು ಮಾಡುವಂತಿಲ್ಲ. ಹೊರಗಿನಿಂದ ರಾಗಿಯನ್ನು ತಂದು ಪೂಜೆ ಮಾಡಿದರೆ ಅದು ಮೈಲಿಗೆ ಆಗುತ್ತದೆ ಎಂದು ಭಾವಿಸುತ್ತಾರೆ. ಇತ್ತೀಚೆಗೆ ಈ ಹೊಸರಾಗಿ ಹಬ್ಬದ ಆಚರಣೆ ಕಡಿಮೆಯಾಗುತ್ತಿದೆ. ಕಾರಣ ಹಿಂದೆ ಪ್ರತಿಯೊಬ್ಬರು ತಮ್ಮ ಜಮೀನಿನಲ್ಲಿ ರಾಗಿಯನ್ನು ಬೆಳೆಯುತ್ತಿದ್ದರು. ಆದರೆ ರಾಗಿ ಬೆಳೆ ಇತ್ತೀಚೆಗೆ ಕಡಿಮೆಯಾಗುತ್ತಿದೆ.

ಈಗ ಪ್ರಾಣಿಗಳ ಹಾವಳಿ; ಆನೆ, ಜಿಂಕೆ, ಹಂದಿ, ಕಡವೆ ಇವೆಲ್ಲವುಗಳ ಹಾವಳಿ ಹೆಚ್ಚಾದ ಕಾರಣ ಸೋಲಿಗರ ಹೊಲದಲ್ಲಿ ವಾಣಿಜ್ಯ ಬೆಳೆಗಳಾದ ಕಾಫಿ, ಮೆಣಸು ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಹಿಂದಿನ ದಿನಗಳಲ್ಲಿ ದೇವರಿಗೆ ಕೊಂಡಹಾಕಲು ಕಟ್ಟಿಗೆ ತರಲು ಸೋಲಿಗರು ಕಾಲಿಗೆ ಚಪ್ಪಲಿಯನ್ನು ಹಾಕುತ್ತಿರಲಿಲ್ಲ. ಆದರೆ ಈಗ ಕಾಲಿಗೆ ಚಪ್ಪಲಿ ಹಾಕಿಕೊಂಡೇ ಕಾಡಿಗೆ ಹೋಗಿ ಕಟ್ಟಿಗೆ ತರುತ್ತಾರೆ ಹಾಗೂ ಎಲ್ಲಾ ಕೆಲಸಗಳನ್ನು ಮಾಡುತ್ತಾರೆ. ಸೋಲಿಗರು ಪ್ರಾಣಿಗಳು ಹೊಲಗಳಿಗೆ ಧಾಳಿ ಮಾಡಿದರೆ ದೇವರಿಗೆ ಹರಕೆ ಕಟ್ಟಿ ಬಿಟ್ಟುಬಿಡುತ್ತಾರೆ. ಈಗ ಇವರು ಬೇರೆ ಸಂಸ್ಕೃತಿಗೆ ಹೊಂದಿಕೊಳ್ಳುತ್ತಿದ್ದಾರೆ. ರೊಟ್ಟಿ ಹಬ್ಬ ಮಾಡುವಾಗ ಅಲ್ಲಿ ಕುಡಿತದವರೇ ಸೇರುವುದಿಲ್ಲ. ಅಂತಹ ಪ್ರಸಂಗವೇನಾದರೂ ಕಂಡುಬಂದಲ್ಲಿ ಯಜಮಾನ ಇವರಿಗೆ ಶಿಕ್ಷೆಯನ್ನು ವಿಧಿಸುತ್ತಿದ್ದರು. ಆದರೆ, ಇತ್ತೀಚೆಗೆ ದೇವರ ಮೇಲಿನ ನಂಬಿಕೆ ಕಡಿಮೆಯಾಗುತ್ತಿದೆ.

**೬.೧.೩. ರೊಟ್ಟಿ ಹಬ್ಬ**

ರೊಟ್ಟಿ ಹಬ್ಬವನ್ನು ಎಲ್ಲಾ ಪೋಡುಗಳಲ್ಲಿಯೂ ಆಚರಿಸುವ ಸಂಪ್ರದಾಯ ವಾಡಿಕೆಯಿದೆ. ಸಾಮಾನ್ಯವಾಗಿ ಈ ಹಬ್ಬವನ್ನು ಫೆಬ್ರವರಿ ಕೊನೆಯ ವಾರದಿಂದ ಮೇ ತಿಂಗಳವರೆಗೆ ಬೇಸಿಗೆ ಕಾಲದಲ್ಲಿ ಆಚರಿಸುತ್ತಾರೆ. ಪೋಡಿನ ಸಮೀಪ ದೇವಾಲಯಗಳಲ್ಲಿರುವ ದೇವರಿಗಾಗಿಯೇ ರೊಟ್ಟಿ ಹಬ್ಬ ಮಾಡುವುದು ವಿಶೇಷ. ತಮ್ಮ ಪೋಡಿನ ಜನರನ್ನು ರಕ್ಷಿಸುತ್ತಿರುವ ದೇವರನ್ನು ಆರಾಧಿಸುವ ಪರಿ ಇದು. ಈ ಹಬ್ಬಕ್ಕೆ ಸೋಲಿಗರು ಇತರೆ ಎಲ್ಲಾ ಪೋಡಿನ ಜನರನ್ನು ಆಹ್ವಾನಿಸುತ್ತಾರೆ. ಇದರಿಂದ ಪೋಡು-ಪೋಡುಗಳ ನಡುವೆ ಒಂದು ಅನ್ಯೋನ್ಯ ಸಂಬಂಧ ಬೆಳೆಯುತ್ತದೆ. ಅಲ್ಲದೆ ವಯಸ್ಸಿಗೆ ಬಂದ ಯುವಕ ಯುವತಿಯರು ತಮ್ಮ ದಾಂಪತ್ಯದ ಬದುಕನ್ನು ಕಟ್ಟಿಕೊಳ್ಳಲು ಅವಕಾಶ ಮಾಡಿಕೊಡಲಾಗುತ್ತದೆ. ಈ ಎಲ್ಲಾ ಕಾರಣಗಳಿಂದಾಗಿಯೇ **'ರೊಟ್ಟಿ ಹಬ್ಬ'** ಸೋಲಿಗರ ಜೀವನದ ಮುಖ್ಯ ಹಬ್ಬವಾಗಿದೆ ಎನ್ನಬಹುದು. **ಹುಣ್ಣಿಮೆಯ ದಿನ ಈ ಹಬ್ಬವನ್ನು ಆಚರಿಸುತ್ತಾರೆ** ಕಾರಣ, ಕಾಡಿನಲ್ಲಿ ದೀಪದ ಬೆಳಕು ಇಲ್ಲದಿರುವುದರಿಂದ ಹುಣ್ಣಿಮೆಯ ದಿನದಂದು ಆಕಾಶದಲ್ಲಿ ಚಂದ್ರನ ಬೆಳಕು ಹೆಚ್ಚಾಗಿ ಪ್ರಕಾಶಿಸುತ್ತದೆ. ಸ್ಥಳವನ್ನು ಕಾಡಿನ ಎತ್ತರದ ಸಮತಟ್ಟಾದ ಸ್ವಲ್ಪ ಪೋಡಿಗೂ ಹತ್ತಿರವಿರುವ ಅಥವಾ ಅಕ್ಕಪಕ್ಕದಲ್ಲಿಯೇ ತಮ್ಮ ಕಾಡಿನ ದೇವರು ಇರುವ ಪಕ್ಕದ ಸ್ಥಳದಲ್ಲಿ ಸೋಲಿಗರು **'ಕಾತು ಕಾಪಾಡುವ ದೇವರನ್ನು'** ಪೂಜಿಸುತ್ತಾರೆ.

ರೊಟ್ಟಿ ಹಬ್ಬವನ್ನು ಎರಡು ವಿಧದಲ್ಲಿ ಆಚರಿಸುತ್ತಾರೆ. ಮೊದಲನೆಯದ್ದು, ಪ್ರತೀ ಪೋಡಿನಲ್ಲಿಯೂ ಎಲ್ಲಾ ಕುಟುಂಬದವರು ತಾವು ಬೆಳೆದ ಹೊಸ ರಾಗಿಯನ್ನು ಮೊದಲೇ ಪೋಡಿನವರೆಲ್ಲ ಸಭೆ ಸೇರಿ ತೀರ್ಮಾನಿಸಿ ನಿಗದಿಪಡಿಸಿಕೊಂಡು ಕೋಲುಕಾರನ ಮುಖಾಂತರ ಪೋಡಿನ ಯಜಮಾನನಿಗೆ

ತಲುಪಿಸುವರು. ಈ ರೀತಿಯಲ್ಲಿ ಕ್ರೋಢೀಕರಿಸಿದ ರಾಗಿಯಿಂದ ದೇವರಿಗೆ ರೊಟ್ಟಿ ಸುಟ್ಟು ನೈವೇದ್ಯ ಇಡುತ್ತಾರೆ. ಇದನ್ನು **ಊರೊಟ್ಟಿನ ರೊಟ್ಟಿ ಹಬ್ಬ** ಎಂದು ಕರೆಯುತ್ತಾರೆ.(ಅಥವಾ ರೊಟ್ಟಿ ಪರ)

ಎರಡನೆಯದಾಗಿ ಪ್ರತಿವರ್ಷ ಪೋಡಿನಲ್ಲಿ ಎಲ್ಲಾ ಕುಟುಂಬದವರು ಸೇರಿ ತಾವು ಬೆಳೆದ ಹೊಸರಾಗಿಯನ್ನು ಮೊದಲೇ ತಾವು ಹರಕೆ ಹೊತ್ತಿರುವಷ್ಟು ಅಥವಾ ಸಭೆಯ ತೀರ್ಮಾನದಂತೆ ಕೋಲುಕಾರನ ಮುಖಾಂತರ ಪೋಡಿನ ಯಜಮಾನರಿಗೆ ತಲುಪಿಸುತ್ತಾರೆ. ಹೀಗೆ ಸಂಗ್ರಹಿಸಿದ ರಾಗಿಯನ್ನು ರೊಟ್ಟಿ ಹಬ್ಬದ ದಿನದಂದು ಮಡಿಯಿಂದ ಕಲ್ಲಿನಲ್ಲಿ ಬೀಸಿ ರೊಟ್ಟಿ ಮಾಡಿ ಅಡವಿ ದೇವರ ಹತ್ತಿರ ಹೋಗಿ ದೇವರಿಗೆ ನೈವೇಧ್ಯವಿಟ್ಟು ಪೂಜೆ ಮಾಡುತ್ತಾರೆ. ಇದಕ್ಕೆ **'ಅಡವಿ ದೇವರ ರೊಟ್ಟಿ ಹಬ್ಬ'** ಎಂದು ಕರೆಯುತ್ತಾರೆ. ಇಲ್ಲಿ ಕಿಚ್ಚಿನ ಕೊಂಡವನ್ನು ಹಾಕಿರುತ್ತಾರೆ. ಅದರ ಮೇಲೆ ತಮ್ಮಡಿಗೆ ದೇವರು ಬಂದು ಬೆಂಕಿಯ ಕೊಂಡವನ್ನು ಹಾಯುತ್ತಾರೆ. ಜನರ ಕಷ್ಟಗಳನ್ನು ವಿಚಾರಿಸಿ ಸಮುದಾಯದ ಜನರಿಗೆ ಪರಿಹಾರವನ್ನು ನೀಡುವರು. ಅಲ್ಲದೆ ಮಳೆ ಬೆಳೆ ಹೇಗಾಗುವುದು 'ಎಲ್ಲರನ್ನು ನೀನು ಕಾತು ಕಾಪಾಡಿ ಮಡುಗುನಯ್ಯ' ಎಂದು ಸಮುದಾಯದ ಪರವಾಗಿ ಬೇಡಿಕೊಳ್ಳುತ್ತಾರೆ. ಕುಟುಂಬದ ಕೆಲವು ವೈಯಕ್ತಿಕ ವಿಷಯಗಳಿಗೂ ಸಹ ಪರಿಹಾರವನ್ನು ಸೂಚಿಸುತ್ತಾರೆ. ಹೀಗೆ ಹಲವಾರು ಹಿರಿಯರು, ಮಕ್ಕಳು ಸಹ ಕೊಂಡದಲ್ಲಿ ನುಗ್ಗಿ ದೇವರಿಗೆ ಹರಕೆ ಸಲ್ಲಿಸುತ್ತಾರೆ. ತಮ್ಮಡಿ ದೇವರ ಮುಂದೆ ನಿಂತು ಕಗ್ಗ ಪ್ರಾರಂಭಿಸಿದ ನಂತರದಲ್ಲಿ ಪ್ರಾರಂಭ ಮಾಡುತ್ತಾರೆ. ಯಾವುದೇ ಬಗೆಯ ಪ್ರೇತ–ಪಿಶಾಚಿಗಳು, ಕಾಡು ಪ್ರಾಣಿಗಳು, ರೊಟ್ಟಿ ಹಬ್ಬಕ್ಕೆ ಯಾವುದೇ ರೀತಿಯಲ್ಲಿ ತೊಂದರೆ ಮಾಡದಿರಲೆಂದು ಐದು ಕಗ್ಗಗಳನ್ನು ಹಾಕುತ್ತಾರೆ. ರೊಟ್ಟಿ ಹಬ್ಬದಲ್ಲಿ ವಿಶೇಷವಾಗಿ ಐದು ಕಗ್ಗಗಳನ್ನು ಹಾಕುವುದರ ಮೂಲಕ(ಹೇಳುವುದರ ಮೂಲಕ) ಪ್ರಾರಂಭ ಮಾಡುತ್ತಾರೆ. ಅಂತಹ ಕಗ್ಗಗಳಲ್ಲಿ ಒಂದನ್ನು ಇಲ್ಲಿ ತಿಳಿಸಲಾಗಿದೆ.

**ಕಗ್ಗ:** ಹಬ್ಬ ಪ್ರಾರಂಭಿಸುವಾಗ ಒಬ್ಬ ವ್ಯಕ್ತಿ ದೇವರ ಮುಂದೆ ನಿಂತು ಐದು ಕಗ್ಗಗಳನ್ನು ಹಾಕುತ್ತಾನೆ. ಇದರ ಅರ್ಥವೆಂದರೆ ಇಡೀ ರಾತ್ರಿ ಹಬ್ಬವು ನಿಶ್ಚಿಂತೆಯಿಂದ ಯಾವುದೇ ಪ್ರೇತ–ಪಿಶಾಚಿಗಳು ಬಾರದಂತೆ ಎಂದು ಪ್ರಾರ್ಥಿಸುವರು.

ಎಲೆಲೆಲೊ ಬಾರ ಬಾರೆಲೊ ವೀರನ ಅರಲಂಗಿರುವುದು ದೇವೇಂದ್ರ ಪಟ್ಟಣ ಅಂದಾಕ್ಷಣಕ್ಕೆ ದೇವೇಂದ್ರನ ಮಗಳನ್ನೇ ಕರೆತಂದು, ಹೋಮದ ಬಿಳಿ ಆನೆಯ ಮಾಡಿ, ದೇವೇಂದ್ರನ ಪಟ್ಟಾಣಕಾ ಹೋಗಿ, ಎಲುಗದ ಬಿದಿರು, ನೀಲಿ ಮಾದ, ಕೊಟ್ಟಾಣ್ಣ ಬಾಯಿ ಮೇಲೆ ಪರವಾದಿ ಹಾಲು, ಬಾಡಲಾಗಿ ನೋಡಿದರೆ, ಬಾಳೆ ಆನೆ ಕಂಬ, ತೆಂಕಾಲಾಗಿ ನೋಡಿದರೆ ತೇಕಿನಾನೆ ಕಂಬ, ಮೂಡಲಾಗಿ ನೋಡಿದರೆ ಮುತ್ತಿನಾನೆ ಕಂಬ, ಪಡುಗಲಾಗಿ ನೋಡಿದರೆ ಸಜ್ಜೆ ಆಸೆ ಕಂಬ, ನೆಟ್ಟ ನಡುವಣ ಚಿನ್ನಾದಾನೆ ಕಂಬ, ಚಿನ್ನದಾನೆ ಮೇಲೆ ಎಳು ಮಂದಿ ಮಾದೇಶ್ವರು, ಕಟ್ಟೆ ಕಟ್ಟೆ ದೇವರು, ಕಟ್ಟೆಗಾಣ್ಣ ದೇವರು, ಈಗೆರಮರ ಇನ್ನು ಹೊಡೆದು ಮೂಡಿದ ಮಾದೇಶ್ವರ ಬರ್ತಾನೆ ಆಲು ಎಲೆಲೆಲೂ ಬಾರ ಬಾರೆಲೊ.... ಬಸವಣ್ಣ, ಬಸವಣ್ಣನಿಗ ಮೈ ಜೋಡು, ನಿಸದಲ್ಲಿ ತೊಳು ಪಾಪದಲ್ಲಿ ಕೋಟೆ, ಪರ್ಸದಲ್ಲಿ ತೆನೆ, ರಚ್ಚಚಿಚರ ಗದ್ದಿಗೆಲಿ ಕತ್ತಿ ಹಿಡಿದವನು ಮೈಲಾರ, ಹಳ್ಳದ ನೀರ, ಹರವಿಕ ತಳ್ಳಿ ಮಾಗೆಯ ನೀರ ಮೊಕ ಮೊಜ್ಜನ ಮಾಡಿ, ಏಳು ಮಂದಿ ಮಾದೇಶ್ವರರು ಕಟ್ಟೆ ಕಟ್ಟೆ ದೇವರು, ಕಟ್ಟೆಗಣ್ಣ ದೇವರು ಮೂರು ಮುತ್ತಿನಾ ಕುಮಾರಸಾಮಿ ಬರ್ತಾವನೆ ಹಾಲು ಎಲೆಲೆಲೊ ಬಾರೆ

ಬಾರೆಲೊ.... ಮಟ ಮಟ ಮಹೇಶ್ವರನ ಮಟ, ಕರ್ನಾಟಕ, ನಂಜನಗೂಡು, ಹತ್ತು ಬಾಗಿಲು, ಹದಿನಾರು ಹಿಕ್ಕಿರಿ ಹುಲಿ ಚರ್ಮ ತೆಗೆದು, ಕರಡಿ ಪೊಕ್ಕೆಯನ್ನು ಮಾಡಿ ಬಂಡಿಗುಡಿಸಲು, ಕೆಂಡದ ವೀರಭದ್ರಯ್ಯ ಬರ್ತ್ತಾನೆ ಅಲ್ಲಿ......

**ಸಾರಾಂಶ:** ಅಂದರೆ ಈಶ್ವರನ ಐದು ಅವತಾರದ ಹೆಸರುಗಳನ್ನು ಹೇಳುತ್ತ ಕಾಡಿನ ಮರ, ಪ್ರಾಣಿ, ಪಕ್ಷಿಗಳ, ಪರಿಸರದ ಮೂಲಕ, ಅರಮನೆಯ ವರ್ಣನೆಯನ್ನು ವರ್ಣಿಸುವ ಹಾಗೆ ಅದರಲ್ಲಿ ಮಹಾದೇಶ್ವರ, ಬಸವೇಶ್ವರ, ಕೆಂಡದ ವೀರಭದ್ರೇಶ್ವರ, ಕುಮಾರಸ್ವಾಮಿ ಹೀಗೆ ತಮ್ಮ ದೇವರಿಗೆ ಹೆಸರುಗಳನ್ನು ಕೊಟ್ಟು ಆದ ಮೌಖಿಕ ಸಾಲುಗಳನ್ನು ಪರಿಸರದೊಟ್ಟಿಗೆ ಹೆಣೆದುಕೊಂಡು ಕಗ್ಗವನ್ನು ಹೇಳುತ್ತಾರೆ. ಯಾರಿಗೂ ಯಾವ ಸಂದರ್ಭದಲ್ಲಿಯೂ ಸಹ ತೊಂದರೆಯಾಗಬಾರದು ಎಂದು ದೇವರನ್ನು ನೆನೆದು ಅವನಿಗೆ ತಿಳಿಸುತ್ತ, ನಾವು ಹಬ್ಬ ಮಾಡುತ್ತೇವೆ ನೀನು ಎಲ್ಲಿದ್ದೀಯಾ ಬಾ ನಮ್ಮ ಹತ್ತಿರ ನಮಗೆ ತೊಂದರೆಯಾಗದ ಹಾಗೆ ನೀನು ಕಾವಲಿರು ಎಂದು ನೇರವಾಗಿ ದೇವರನ್ನು ಬೇಡಿಕೊಳ್ಳುತ್ತಾ ಪ್ರಾರ್ಥಿಸುವ ಸಾಲೇ ಕಗ್ಗ.

**ಹಾಡುಕೆ:** ಸೋಲಿಗರಲ್ಲಿ ರೊಟ್ಟಿ ಹಬ್ಬವನ್ನು ಆಚರಿಸುವಾಗ ರಾತ್ರಿ ಇಡೀ ಮಹಿಳೆಯರು ದೇವರ ಮುಂದೆ ಕುಳಿತು ಹಾಡುಕೆಯನ್ನು ಹಾಡುತ್ತಾರೆ. ಇದನ್ನು ಹಾಡುಕೆ ಎಂದು ಕರೆಯುತ್ತಾರೆ. ಸೋಲಿಗರು ತಮ್ಮ ಹಾಡುಕೆಯಲ್ಲಿ ಸಮುದಾಯದ ಜೀವನ ಸಾರವನ್ನು ಎಳೆ ಎಳೆಯಾಗಿ ಪ್ರಾಣಿ ಪಕ್ಷಿಗಳನ್ನು ಅನುಕರಣೆ ಮಾಡುತ್ತ ಹಾಡುತ್ತಾರೆ. ಹಾಡುಕೆಗಳಲ್ಲಿ ಮುಖ್ಯವಾಗಿ ದೊಡ್ಡಸಂಪಿಗೆ ದೇವರ ಬಗ್ಗೆ, ತಾವು ಎಷ್ಟು ಕಷ್ಟಪಟ್ಟು ರಾಗಿಯನ್ನು ಬೆಳೆದಿರುವ ಬಗ್ಗೆ, ಶೇಖರಿಸಿಟ್ಟಿರುವ ಬಗ್ಗೆ, ಗೆಣಸಿನ ಬಗ್ಗೆ ಹಾಡುಕೆ, ಕಾಡಿನಲ್ಲಿರುವ ಮರ, ಗಿಡ, ಪ್ರಾಣಿ–ಪಕ್ಷಿಗಳ ಬಗ್ಗೆ, ತಾವು ಯಾವ ಮರದ ಸೌದೆಯನ್ನು ಉಪಯೋಗಿಸಿ ದೇವರಿಗೆ ರೊಟ್ಟಿ ಮಾಡಿದ್ದಿವೆ ಎಂಬುದರ ಬಗ್ಗೆ ಹಾಡುಗಳನ್ನು ಸಂದರ್ಭಕ್ಕೆ ತಕ್ಕ ಹಾಗೆ ರಚಿಸಿ ಹಾಡುತ್ತಾರೆ. ಬೆಳಗಿನ ಜಾವದಲ್ಲಿ ತಮ್ಮ ತಮ್ಮ ಪೋಡು ಕಾಲೋನಿಗಳಿಗೆ ಹಿಂದಿರುಗುವ ಸಂದರ್ಭದಲ್ಲಿ ಎಲ್ಲರಿಗೂ ದುಃಖವಾಗುವುದು. ತಮ್ಮ ದುಃಖವನ್ನು ಹಾಡಿನಲ್ಲಿಯೇ ವ್ಯಕ್ತಪಡಿಸುತ್ತಾರೆ. ಈ ದುಃಖದ ಹಾಡಿಗೆ **'ಸೊಡ್ಡು ಹಾಕುವುದು'** ಎಂದು ಕರೆಯುತ್ತಾರೆ.

ಸೋಲಿಗರು ರೊಟ್ಟಿ ಹಬ್ಬವನ್ನು ಆಚರಣೆ ಮಾಡುವಾಗ ಕೆಲವು ಪವಿತ್ರ ವೃಕ್ಷಗಳನ್ನು ಗೊತ್ತುಮಾಡಿ ಅಂತಹ ಸ್ಥಳಗಳಲ್ಲಿ ಹಬ್ಬ ಆಚರಣೆ ಮಾಡುತ್ತಾರೆ. 'ದೊಡ್ಡ ಸಂಪಿಗೆ ಮರ' ಸೋಲಿಗರ ದೃಷ್ಟಿಯಲ್ಲಿ ಅತ್ಯಂತ ಮಹತ್ವವಾದದ್ದು. ಈ ಮರವು ಸಾಕಷ್ಟು ದೊಡ್ಡದಾಗಿದ್ದು ಅದು ಸುಮಾರು ೨೩೦೦ ವರ್ಷಗಳಷ್ಟು ಹಿಂದಿನದೆಂದು ನಂಬಲಾಗಿದೆ'. ರೊಟ್ಟಿ ಹಬ್ಬವನ್ನು ಆಚರಿಸುವ ದಿನವನ್ನು ಯಜಮಾನ, ಕೋಲುಕಾರ, ಚಲವಾದಿ ಹಾಗೂ ಪೋಡಿನ ಹಿರಿಯರು ಎಲ್ಲರ ಸಮ್ಮುಖದಲ್ಲಿ ಸಭೆ ಸೇರಿ ನಿರ್ಧರಿಸುತ್ತಾರೆ. ಪ್ರತಿ ಪೋಡಿನ ಕುಟುಂಬವು ಹಬ್ಬದ ಖರ್ಚಿಗಾಗಿ ಇಂತಿಷ್ಟು ಹಣವನ್ನು ತಾವು ಬೆಳೆದ ರಾಗಿಯನ್ನು ಕೊಡಬೇಕೆಂದು ನಿರ್ಧರಿಸುತ್ತಾರೆ. ಮುಗಿದ ನಂತರ ರೊಟ್ಟಿ ಹಬ್ಬದ ಆಚರಣೆಗೆ ಸಂಬಂಧಿಸಿದ ಸಿದ್ಧತೆಗಳು ಆ ಪೋಡಿನಲ್ಲಿ ನಡೆಯುತ್ತದೆ. ಯಾವ ಪೋಡಿನಲ್ಲಿ ರೊಟ್ಟಿ ಹಬ್ಬ ನಡೆಯಲು ಸಿದ್ಧತೆ ಆಗಿರುತ್ತದೆಯೋ ಆ ಪೋಡಿನವರು ತಮ್ಮ ಸಂಬಂಧಿಕರ ಅಕ್ಕ–ಪಕ್ಕದ ಪೋಡಿನವರಿಗೆ ವಿಷಯ ತಿಳಿಸಿ ಆಮಂತ್ರಿಸುತ್ತಾರೆ.

ಈ ಹಬ್ಬವನ್ನು ಸಂಕ್ರಾಂತಿ ಹಾಗೂ ಸಂಕ್ರಾಂತಿ ನಂತರ ಆಚರಿಸುತ್ತಾರೆ. ಸೋಲಿಗರಿಗೆ ಇದೇ ಸುಗ್ಗಿಯ ಕಾಲ ಆಗಿರುತ್ತದೆ. ಹೊಲದಲ್ಲಿ ಕೆಲಸ ಇರುವುದಿಲ್ಲ. ಇದು **ವಿಶ್ರಾಂತಿಯ ಕಾಲ**. ಈ ಸಮಯದಲ್ಲಿ ಒಂದು ಪೋಡಿನಿಂದ ಮತ್ತೊಂದು ಪೋಡಿಗೆ ಅಡ್ಡಾಡುತ್ತಿರುತ್ತಾರೆ (ಸುತ್ತುತ್ತಿರುವುದು). ಸೋಲಿಗರು ತಾವು ಬೆಳೆದ ಬೆಳೆ ತಮ್ಮ ಕೈಸೇರಿರುತ್ತದೆ. ಮುಂದಿನ ಮಾರ್ಚ್ ಮಳೆ ಬೀಳುವವರೆಗೂ ಸೋಲಿಗರಿಗೆ ವಿಶ್ರಾಂತಿಯ ಕಾಲ. ಹಬ್ಬದ ದಿನದಂದು **'ತಮ್ಮಡಿ'** (ಪೂಜಾರಿ) ಉಪವಾಸವಿರುತ್ತಾರೆ. ತಮ್ಮಡಿ ಆ ದಿನ ಸ್ನಾನ ಮಾಡಿ ಮಡಿ ಮಾಡಿಕೊಂಡು **ಖಾವಿ** ಬಟ್ಟೆ ತೊಟ್ಟು ಹಬ್ಬ ಮಾಡಲು ನಿರ್ಧರಿಸಿರುವ ಸ್ಥಳೀಯ ದೇವತೆಯ ಗುಡಿಗೆ ಬಂದು ದೇವರಿಗೆ ಪೂಜೆ ಸಲ್ಲಿಸಿ ನಮಸ್ಕರಿಸಿ ದೇವರಿಗೆ ಧೂಪ, ದೀಪ ಹಚ್ಚಿ ಎಲ್ಲರನ್ನೂ ಕಾಪಾಡು ಎಂದು ಹೊಸದಾಗಿ ಮಾಡಿರುವ ಅಡುಗೆಯ ಒಲೆಗೆ ಪೂಜೆ ಸಲ್ಲಿಸುತ್ತಾರೆ. ಆನಂತರದಲ್ಲಿ ಹಾಕಿದ ಒಲೆಯು ರೊಟ್ಟಿ ದೇವರ ಹಬ್ಬಕ್ಕೆ ಅಡುಗೆ ತಯಾರಿಸಲು ಪವಿತ್ರವಾಗಿದೆ ಎಂದು ಸೋಲಿಗರು ನಂಬುತ್ತಾರೆ. "**ರೊಟ್ಟಿ ಹಬ್ಬ** ಎಂದರೆ ಕೆಂಡದ ಮೇಲೆ ಮೊದಲು ತಂಪು ದೇವರು ನುಗ್ಗುತ್ತದೆ. ಕೊಳ್ಳೇಗಾಲ, ಗುಂಡ್ಲುಪೇಟೆ, ಚಾಮರಾಜನಗರ, ಸುತ್ತಮುತ್ತಲ ಪ್ರದೇಶಗಳಲ್ಲಿ ತಮ್ಮಡಿಯ ಮೈಮೇಲೆ ಬಂದಿರುವ ದೇವರುಗಳು ಕೊಂಡದ ಮೇಲೆ ನುಗ್ಗುತ್ತವೆ, ನುಗ್ಗಿದ ಮೇಲೆ ಆಹಾರ ಊಟದ ವ್ಯವಸ್ಥೆ"

ಈ ಹಿಂದೆ ರೊಟ್ಟಿ ಹಬ್ಬದಲ್ಲಿ ಕುಂಬಳಕಾಯಿ ತಾಳದ, ಕಾಡುಬಾಳೆ ಇವುಗಳನ್ನು ತಂದು ಅಡುಗೆ ಮಾಡಿ ದೇವರಿಗೆ ಎಡೆ ಇಟ್ಟು ಎಲ್ಲರೂ ಊಟ ಮಾಡುತ್ತಿದ್ದರು. ಇತ್ತೀಚೆಗೆ ಅನ್ನ-ಸಾಂಬಾರು, ಪಾಯಸ, ಕುಂಬಳತಾಳದ ಹೀಗೆ ಹಲವಾರು ಆಹಾರ ಪದಾರ್ಥಗಳನ್ನು ಮಾಡುತ್ತಾರೆ. ಮಳೆ, ಬೆಳೆ ಬಂದು ಕಾಡು ಚೆನ್ನಾಗಿರಬೇಕು ಎಂದು ಮಾಡುವ ಹಬ್ಬವೇ ರೊಟ್ಟಿ ಹಬ್ಬ. ಸಾಮೂಹಿಕವಾಗಿ ಆಯಾಯ ಸುತ್ತಮುತ್ತಲಿನ ಪೋಡುಗಳ ಜನರು ಸೇರಿಕೊಂಡು ವಿಶೇಷವಾಗಿ ರೊಟ್ಟಿ ಹಬ್ಬವನ್ನು ಆಚರಿಸುತ್ತಾರೆ.

ಸೋಲಿಗರಿಗೆ ಇದೊಂದು ಮುಖ್ಯವಾದ ಹಾಗೂ **ಸಾಮೂಹಿಕವಾದ ಹಬ್ಬ**. ಇದನ್ನು **'ರೊಟ್ಟಿ ಪೊರ'** ಎಂದೂ ಕರೆಯುತ್ತಾರೆ. ಈ ಹಬ್ಬವು ಸೋಲಿಗರಲ್ಲಿ ಮಾತ್ರ ವಿಶೇಷವಾಗಿ ಕಂಡುಬರುತ್ತದೆ. **'ಸೋಲಿಗರೆಂದರೆ ರೊಟ್ಟಿ ಹಬ್ಬ' 'ಸೋಲಿಗರೆಂದರೆ ಗೋರುಕನ ಕುಣಿತ** ಎಂದು ಪ್ರಸಿದ್ಧಿಯನ್ನು ಪಡೆದಿದೆ. ಚಾಮರಾಜನಗರ ಜಿಲ್ಲೆಯ ಸೋಲಿಗರು ಅದರಲ್ಲೂ ಯಳಂದೂರು, ಕೊಳ್ಳೇಗಾಲ, ಚಾಮರಾಜನಗರ ಈ ತಾಲ್ಲೂಕುಗಳ ಮಾತ್ರ ವಿಶಿಷ್ಟವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಸಾಮೂಹಿಕವಾಗಿ ಆಚರಿಸುವ ಹಬ್ಬವೇ ರೊಟ್ಟಿಹಬ್ಬ; ಈ ಸಮಯಕ್ಕೋಸ್ಕರ ಎಲ್ಲರೂ ಕಾಯುತ್ತಿರುತ್ತಾರೆ. ಗಂಡಸರು-ಹೆಂಗಸರು ವಿಶೇಷವಾಗಿ ಹೆಣ್ಣುಮಕ್ಕಳು, ಹುಡುಗಿಯರು, ಹುಡುಗರು ಬಹಳ ಸಂಭ್ರಮದಿಂದ ಆಚರಿಸುವ ಹಬ್ಬ ರೊಟ್ಟಿಹಬ್ಬ. ರೊಟ್ಟಿಯನ್ನು ಕೆಂಡದ ಮೇಲೆ ಸುಡುವ ಪದ್ಧತಿಯು ಪ್ರಾಚೀನ ಕಾಲದಿಂದಲೂ ಸೋಲಿಗ ಸಮುದಾಯದಲ್ಲಿ ಕಾಣಬಹುದು. ಹಿಂದೆ ಕಾಡಿನಲ್ಲಿಯೇ ವಾಸಿಸುತ್ತಿದ್ದ ಸೋಲಿಗರಿಗೆ ರೊಟ್ಟಿ ಸುಡಲು ಪರಿಕರಗಳು(ರೊಟ್ಟಿ ತವೆ) ಆಧುನಿಕ ವಸ್ತುಗಳ ಪರಿಚಯ ಇಲ್ಲದ ಕಾರಣ ಅವರು ಪ್ರಕೃತಿದತ್ತವಾಗಿ ಕಾಡಿನಲ್ಲಿ ಸಿಗುವ ಮುತ್ತುಗದ ಎಲೆಯನ್ನು ಉಪಯೋಗಿಸುತ್ತಾರೆ. ಕಾರಣ ಪ್ರಕೃತಿಯಲ್ಲಿ ಸಿಗುವ ಮುತ್ತುಗದ ಎಲೆ, ಕೂಗೆಲೆ, ತೇಗದೆಲೆ ಇವುಗಳಲ್ಲಿ ಔಷಧೀಯ ಗುಣಗಳಿರುತ್ತದೆ. ಯಾವುದೇ ಖರ್ಚಿಲ್ಲದೆ ಎಲೆಯು ಪ್ರತಿಯೊಬ್ಬರಿಗೂ ಸಿಗುವಂತಿರುತ್ತದೆ. ಈ ಎಲೆಯು ದುಂಡಾಗಿ ತಟ್ಟೆಯಾಕಾರದಲ್ಲಿ

ಇರುತ್ತದೆ. ಅದಕಾರಣ ಸೋಲಿಗರು ಇಂದಿಗೂ ರೊಟ್ಟಿಯನ್ನು ಮುತ್ತುಗದ ಎಲೆ, ಕೂಗೆಲೆ, ತೇಗದೆಲೆಯಿಂದ ತಟ್ಟಿ ಎರಡೂ ಎಲೆಗಳ ಮಧ್ಯದಲ್ಲಿರಿಸಿ ಬೆಂಕಿಯಲ್ಲಿ ಸುಡುವುದು ನಡೆದುಕೊಂಡು ಬಂದಿದೆ.

ಅಡುಗೆ ಎಲ್ಲ ಮುಗಿದ ನಂತರ ತಮ್ಮಡಿ ಬರುತ್ತಾರೆ. ಸ್ಥಳ ದೇವತೆಯ ಗುಡಿಯೊಳಗೆ ದೇವರ ಪೀಠ ಅಥವಾ ದೇವರ ಕಲ್ಲಿನ ಮುಂದೆ ಐದು ಬಾಳೆ ಎಲೆಯನ್ನು ಹಾಕಿ ಅದಕ್ಕೆ ತಯಾರಿಸಿದಂತಹ ರೊಟ್ಟಿ, ಪಲ್ಯ, ಹುಳಿ, ಕುಂಬಳಕಾಯಿ ಗೊಜ್ಜು, ಹಲಸಿನ, ಅವರೆಕಾಯಿ ತಾಳದ ಎಲ್ಲವನ್ನೂ ಎಡೆಗೆ ಇಟ್ಟು ಪೂಜೆ ಮಾಡುತ್ತಾರೆ. ಆನಂತರದಲ್ಲಿ ದೇವರು ಎಡೆಯನ್ನು ಸ್ವೀಕರಿಸಲೆಂದು ಸ್ವಲ್ಪ ಸಮಯ ಎಲ್ಲರೂ ಬೇರೆ ಬೇರೆ ಕಡೆಗೆ ತಮ್ಮ ಮುಖವನ್ನು ತಿರುಗಿಸಿ ನಿಲ್ಲುತ್ತಾರೆ. ಕಾರಣ ದೇವರು ಆ ಪ್ರಸಾದ ವನ್ನೂ ಯಾರಿಗೂ ಕಾಣದಂತೆ ಸ್ವೀಕರಿಸಬೇಕು. ನಂತರ ಪೂಜೆ ಸಲ್ಲಿಸಿ ಹೂವನ್ನು ಒಡ್ಡಿ ತಮ್ಮ ಕಷ್ಟ ಸುಖಗಳನ್ನು ಕುರಿತು ಕೇಳುವರು. ದೇವರನ್ನು ಯಾರ ಮೇಲಾದರೂ ಬರುವಂತೆ ಎಲ್ಲರೂ ಸಾಮೂಹಿಕವಾಗಿ ಕೇಳುತ್ತಾರೆ. ದೇವರು ಕೇಳುವಾಗ ಹೀಗೆ ಸಂಬೋಧಿಸುತ್ತಾರೆ. "ಕಿಲಲಯೋ ಕಿಲಲಯೋ..... ಬರಾಕು, ನೀ ಬರಾಕು... ನೀನು ಯಾರ ಮೇಲಾದರೂ ಮೈದುಂಬಿ ಬಂದು ಮೂರು ಮಾತಾಕಿ ಹೋಗು" ಎಂದು ಬೇಡುತ್ತಾರೆ.

ದೇವರು ಅಲ್ಲಿರುವ ಒಬ್ಬರಲ್ಲಿ ಮೈದುಂಬಿ(ಮೈಮೇಲೆ) ಬರುತ್ತದೆ. ಆಗ ಜನರ ನಡುವೆ ಸಂಭಾಷಣೆ ನಡೆಯುತ್ತದೆ. ದೇವರನ್ನು ಮಾತಿನ ಧಾಟಿಯಿಂದ ಭೇದಿಸುತ್ತಾರೆ. ದೇವರನ್ನು ಸಹ ಬೈಯುತ್ತಾರೆ. ನಂತರ ನಮ್ಮನ್ನು ನೀನೇ ಕಾಪಾಡಬೇಕು ಎಂದು ಕೇಳಿಕೊಂಡು 'ಮುಂದಿನ ಮಳೆ- ಬೆಳೆ'ಯ ಬಗ್ಗೆ ವಿಚಾರಿಸುತ್ತಾರೆ. ಸಂಭಾಷಣೆ ಮುಗಿದ ನಂತರ ಮೈಮೇಲೆ ದೇವರು ಬಂದ ವ್ಯಕ್ತಿಯು ಮೈ ಇಳಿದ ಮೇಲೆ ನೆಲಕ್ಕುರುಳಿ ಬೀಳುತ್ತಾನೆ. ಆ ನಂತರ ಅವನ ಮುಖಕ್ಕೆ ನೀರು ಚಿಮುಕಿಸಿದ ನಂತರ ಅವನು ಯಥಾಸ್ಥಿತಿಗೆ ಬರುತ್ತಾನೆ.

ಸೋಲಿಗರು ಹಬ್ಬದ ದಿವಸ ದೇವಾಲಯದ ಮುಂಭಾಗ ಮರದ ಕೊರಟುಗಳನ್ನು ಹಾಕಿ ಕಿಚ್ಚಿನ (ಬೆಂಕಿಯ ಕೆಂಡದ) ಗುಡ್ಡೆಯನ್ನು ನಿರ್ಮಿಸಿಕೊಳ್ಳುತ್ತಾರೆ. ಬಳಿಕ ರೊಟ್ಟಿಯನ್ನು ಸುಡಲು ಬೀಸಿಟ್ಟಿರುವ ರಾಗಿ ಹಿಟ್ಟನ್ನು ನೀರಿನಲ್ಲಿ ಗಟ್ಟಿಯಾಗಿ ಕಲಸಿಕೊಂಡು ಎರಡೆರಡು ಮುತ್ತುಗ, ತೇಗದ ಎಲೆಗಳಿಗೆ ಅದನ್ನು ಉಂಡೆ-ಉಂಡೆ ಮಾಡಿ ಹಾಕಿ ಎಲೆಯ ಅಗಲದಷ್ಟು ಗಾತ್ರ ರೊಟ್ಟಿಯನ್ನು ತಟ್ಟಿ ಆ ಎಲೆಗಳನ್ನು ಕೆಂಡದಲ್ಲಿಟ್ಟು ಬೇಯಿಸಿ ರೊಟ್ಟಿಗಳನ್ನು ತಯಾರಿಸಿಕೊಳ್ಳುತ್ತಾರೆ. ರೊಟ್ಟಿಯ ಜೊತೆಗೆ ತಿನ್ನಲು ಕುಂಬಳಕಾಯಿ ಮತ್ತು ಅವರೆಕಾಳನ್ನು ಬೇಯಿಸಿ ಗೊಜ್ಜನ್ನು ಸಿದ್ಧಪಡಿಸುತ್ತಾರೆ. ಇದನ್ನು ತಾಳದ ಎಂದು ಕರೆಯುತ್ತಾರೆ. ಹಬ್ಬದ ದಿನ ಸಾಯಂಕಾಲ ದೇವರಿಗೆ ಸುಟ್ಟಿರುವ ರೊಟ್ಟಿ ಮತ್ತು ತಾಳದ ಜೊತೆಗೆ ಬಾಳೆಹಣ್ಣಿನ ಪಂಚಾಮೃತವನ್ನು ಎಡೆಯಿಟ್ಟು ಪೂಜೆ ಸಲ್ಲಿಸುತ್ತಾರೆ. ಪೂಜೆ ಮಾಡಿದ ತರುವಾಯ ಹಬ್ಬಕ್ಕಾಗಿ ಆಗಮಿಸಿರುವ ಜನರೆಲ್ಲರಿಗೂ ರೊಟ್ಟಿಯ ಊಟವನ್ನು ನೀಡುತ್ತಾರೆ.

ಪ್ರಸ್ತುತ ದಿನಗಳಲ್ಲಿ ಅನ್ನ ಸಾಂಬಾರನ್ನು ಸಹ ನೀಡುವುದು ರೂಢಿಯಾಗಿದೆ. ರೊಟ್ಟಿ ಹಬ್ಬದ ಊಟ ಮುಗಿದ ಮೇಲೆ ಜನರೆಲ್ಲರೂ ದೇವರನ್ನು ಆರಾಧಿಸುವ ಹಾಗೂ ತಮ್ಮದೇ ಆದ ಸಾಂಸ್ಕೃತಿಕ ನೃತ್ಯ ಮನರಂಜನೆಯನ್ನು ನೀಡುವ ಮತ್ತು ನೋಡುವ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಗುಡಿಯ ಒಳಗೆ ಗುರುಕಾರ ಮತ್ತು ಹಾಡುಕೆ ಹಾಡುವ ಮಹಿಳೆಯರು ಕುಳಿತು ಹಾಡುಕೆಯನ್ನು ಹೇಳುತ್ತ

ದೇವರನ್ನು ಆರಾಧಿಸಿದರೆ, ಗುಡಿಯ ಹೊರಗೆ ಸೋಲಿಗರ ಯುವಕರು ಗೋರುಕನ ಕುಣಿತಕ್ಕೆ ಹೆಜ್ಜೆ ಹಾಕುತ್ತ ತಮ್ಮನ್ನು ನೋಡುತ್ತ ಕುಳಿತ ಹೆಣ್ಣುಮಕ್ಕಳಿಗೆ ಮನರಂಜನೆಯನ್ನು ನೀಡುತ್ತಾರೆ. ಈ ಮಧ್ಯ ಸೋಲಿಗ ಯುವತಿಯರು ತಮಗೆ ಪ್ರಿಯವಾದ ಹುಡುಗರನ್ನು ಆರಿಸಿಕೊಳ್ಳಲು ಸಣ್ಣದೊಂದು ಕಲ್ಲಿನಿಂದ ಅವರಿಗೆ ಹೊಡೆದು ತಮ್ಮ ಪ್ರೇಮವನ್ನು ನಿವೇದಿಸಿಕೊಳ್ಳುತ್ತಾರೆ. ಆ ನಂತರದಲ್ಲಿ ಹುಡುಗ ಹುಡುಗಿ ಇಬ್ಬರಿಗೂ ಇಷ್ಟವಾಗಿದೆ ಎಂದು ಗೊತ್ತಾದಾಗ ಇಬ್ಬರು ದಾಂಪತ್ಯದ ಮುನ್ನುಡಿಯನ್ನು ಬರೆಯಲು ಪ್ರಕೃತಿದತ್ತವಾಗಿಯೇ ಸೇರಿಕೊಳ್ಳುತ್ತಾರೆ.

ಸೋಲಿಗರ ರೊಟ್ಟಿ ಹಬ್ಬ ಆಚರಣೆಯನ್ನು ಸೋಲಿಗರು ವಾಸಿಸುವ ಎಲ್ಲ ಪೋಡು-ಕಾಲೋನಿಗಳಲ್ಲಿಯೂ ಆಚರಿಸುವಂತಾಗಬೇಕು. ಅವರ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಯುವ ಪೀಳಿಗೆಯವರಿಗೆ ಮಾರ್ಗದರ್ಶನ, ತರಬೇತಿ ನೀಡಬೇಕು. ಈ ರೀತಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಸಮುದಾಯ ಹಾಗೂ ಸರಕಾರದ ಮೂಲಕ ಮಾಡಿ ಆಚರಣೆಗಳನ್ನು ಉಳಿಸಿ ಬೆಳೆಸುವ ಪ್ರಯತ್ನ ಆಗಬೇಕಾದದ್ದು ಆದ್ಯ ಕರ್ತವ್ಯವಾಗಿದೆ. ಹಾಗಾದಾಗ ಮಾತ್ರ ಮುಂದಿನ ಪೀಳಿಗೆಗೆ ಇಂತಹ ಒಳ್ಳೆಯ ಆಚರಣೆಯ ಸಂಸ್ಕೃತಿಯನ್ನು ಕೊಂಡೊಯ್ಯಲು ಸಹಾಯಕವಾಗುತ್ತದೆ.

- ಸೋಲಿಗರ ಬದುಕು ಕಾಡು ಗುಡ್ಡಗಳಲ್ಲಿನ ಸಾಹಸಮಯ ಅದರಿಂದ ಅವರು ಪರಸ್ಪರರು ಒಟ್ಟುಗೂಡುವುದಕ್ಕೆ ಒಂದು ಸನ್ನಿವೇಶ ಬೇಕಾಗಿರುತ್ತದೆ.
- ಪೋಡು-ಪೋಡುಗಳ ನಡುವೆ, ಬಂಧು-ಬಾಂಧವರ ನಡುವೆ ಸಂಬಂಧಗಳು ಒಟ್ಟುಗೂಡಿ ವಿಚಾರ ವಿನಿಮಯಕ್ಕೆ ಕಷ್ಟ-ಸುಖ ಹಂಚಿಕೊಳ್ಳಲು ಸಹಾಯಕವಾಗುತ್ತದೆ.
- ಎಲ್ಲರಿಗೂ ಮನರಂಜನೆಯನ್ನು ಕೊಡುತ್ತದೆ.
- ಎಲ್ಲರೂ ಒಟ್ಟಾಗಿ ಒಂದೆರಡು ದಿನ ಸೇರಿ ಸಂತೋಷದಿಂದ ಕಾಲ ಕಳೆಯುತ್ತಾರೆ.
- ಈ ರೊಟ್ಟಿ ಹಬ್ಬ ವಯಸ್ಸಿಗೆ ಬಂದ ಯುವಕರು ಯುವತಿಯರು ತಮ್ಮ ದಾಂಪತ್ಯದ ಬದುಕನ್ನು ಕಟ್ಟಿಕೊಳ್ಳಲು ಅವಕಾಶ ಮಾಡಿಕೊಡುತ್ತದೆ.
- ಸೋಲಿಗ ಸಾಂಸ್ಕೃತಿಕ ಮನರಂಜನೆಯೆಂದರೆ ತುಂಬಾ ಸಂತೋಷದಿಂದ ಆಚರಿಸಿ ಖುಷಿ ಪಡುತ್ತಾರೆ.
- ಸಾಹಿತ್ಯ ಜ್ಞಾನ ವೃದ್ಧಿಸುತ್ತದೆ. ಈ ಜ್ಞಾನ ಮುಂದಿನ ಪೀಳಿಗೆಗೆ ವರ್ಗಾವಣೆಯಾಗುತ್ತದೆ.

**ಧಾರ್ಮಿಕ ದೃಷ್ಟಿ**

- ಸೋಲಿಗರು ಭೂಮಿತಾಯಿ ಹಾಗೂ ಪ್ರಕೃತಿಮಾತೆಯನ್ನು ಭಯ ಭಕ್ತಿಯಿಂದ ಗೌರವಿಸುತ್ತಾರೆ, ಆರಾಧಿಸುತ್ತಾರೆ.
- ಸೋಲಿಗರ ಬದುಕು ವ್ಯವಸಾಯಕ್ಕೆ ಅಂಟಿಕೊಂಡಿದ್ದು 'ರಾಗಿಯ' ಬೆಳೆಯು ಪ್ರಿಯವಾದ ಆಹಾರ. ಬೆಳೆ ಬಂದ ಫಸಲನ್ನು ಮೊದಲು ದೇವರಿಗೆ ಅರ್ಪಿಸುವ ನಂಬಿಕೆ ಸೋಲಿಗರಲ್ಲಿದೆ.
- ಬಂದ ಬೆಳೆಯನ್ನು ಎಲ್ಲರೂ ಸಮವಾಗಿ ಹಂಚಿ ತಿನ್ನುವ ಪದ್ಧತಿಯು ಸೋಲಿಗರಲ್ಲಿದೆ.

ಇತ್ತೀಚೆಗೆ ಸೋಲಿಗರಲ್ಲಿ ರೊಟ್ಟಿ ಹಬ್ಬವು ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೂಕಿನ ೯ ಪೋಡುಗಳಲ್ಲಿ ಆಚರಣೆಯಲ್ಲಿದೆ. ಸೋಲಿಗರು ರಾಗಿ ಬೆಳೆಯನ್ನು ಕಡಿಮೆ ಮಾಡಿರುವ ಪರಿಣಾಮವಾಗಿ ರೊಟ್ಟಿ ಹಬ್ಬದ ಆಚರಣೆಯು ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗುತ್ತಿದೆ.

**೬.೧.೪. ಸೋಲಿಗರ ಸಂಕ್ರಾಂತಿ ಹಬ್ಬ**

ಸೋಲಿಗರಲ್ಲಿ ಸಂಕ್ರಾಂತಿ ಬಿಳಿಗಿರಿರಂಗನ ಚಿಕ್ಕ ತೇರಿನ ಜಾತ್ರೆಯ ಹಬ್ಬದ ಆಚರಣೆಯು ವಿಶೇಷವಾದುದು. ಈ ಹಬ್ಬದ ಆಚರಣೆಯನ್ನು ಸೋಲಿಗರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಆಚರಣೆ ಮಾಡುತ್ತಾರೆ. ಈ ಆಚರಣೆಯ ಪದ್ಧತಿಗಳನ್ನು ಅನಾದಿಕಾಲದಿಂದಲೂ ರೂಢಿಸಿಕೊಂಡು ಬಂದಿದ್ದಾರೆ. ಸೋಲಿಗರಿಗೆ ಸಂಕ್ರಾಂತಿ ಹಬ್ಬ ಎಂದರೆ ಅದುವೇ ಬಿಳಿಗಿರಿ ರಂಗನ ಜಾತ್ರೆಯ ಚಿಕ್ಕ ತೇರಿನ ಜಾತ್ರೆ. ಚಿಕ್ಕ ಜಾತ್ರೆಯ ಮೂರು ದಿನಗಳಲ್ಲಿಯೂ ಅನೇಕ ಆಚರಣೆಗಳನ್ನು ಮಾಡುತ್ತಾರೆ.

**೬.೧.೫. ಬಿಳಿಗಿರಿ ರಂಗಪ್ಪನಿಗೆ ಬಿಟ್ಟಿ ಮಾಡುವುದು**

ಚಾಮರಾಜನಗರ, ಹಾಗೂ ಯಳಂದೂರು ತಾಲ್ಲೂಕುಗಳ ಒಂಬತ್ತು ಪೋಡುಗಳಲ್ಲಿ ಸೋಲಿಗರು ಬಿಳಿಗಿರಿ ರಂಗಪ್ಪನ ಜಾತ್ರೆಗೆ ಸಂಬಂಧಿಸಿದ ಕೆಲಸವನ್ನು ಮಾಡಬೇಕು. ಇದಕ್ಕೆ ಸೋಲಿಗರ ಭಾಷೆಯಲ್ಲಿ **'ಬಿಟ್ಟಿ ಸೇವೆ'** ಎಂದು ಕರೆಯುತ್ತಾರೆ. ಈ ಬಿಟ್ಟಿ ಸೇವೆಯು ಜಾತ್ರೆ ನಡೆಯುವ ಮುನ್ನ ಹದಿನೈದು ದಿನಗಳಿಂದಲೂ ನಡೆಯುತ್ತದೆ. ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಪುಕ್ಕಟ್ಟೆಯಾಗಿ ಕೆಲಸ ಮಾಡುವುದು, ತೇರು ಕಟ್ಟುವುದು, ತೇರು ಎಳೆಯುವುದು, ದೇವರನ್ನು ಮೆರವಣಿಗೆಯಲ್ಲಿ ಹೊತ್ತೊಯ್ಯುವುದು ಎಲ್ಲಾ ಕೆಲಸವನ್ನು ಮಾಡುವುದನ್ನು ಅನಾದಿ ಕಾಲದಿಂದ ಇಂದಿನವರೆಗೂ ಮಾಡಿಕೊಂಡು ಬಂದಿದ್ದಾರೆ. ಆದರೆ ಇವರಿಗೆ ಒಂದೊತ್ತು ಪಡಿ ಅಂದರೆ, ಒಂದೊತ್ತು ಊಟದ ವ್ಯವಸ್ಥೆ ಇರುತ್ತದೆ. ಇದನ್ನು ಪ್ರಸಾದವಾಗಿ ಕೊಡುತ್ತಾರೆ. ಹಣ ತೆಗೆದುಕೊಳ್ಳದೆ, ಪುಕ್ಕಟೆಯಾಗಿ ಕೆಲಸ ಮಾಡಿ ವಾಪಾಸ್ ಮನೆಗೆ ಬಂದು ಬಿಡುತ್ತಾರೆ. ಇದಕ್ಕೆ **'ಬಿಟ್ಟಿ' ಸೇವೆ** ಮಾಡುವುದು ಎನ್ನುತ್ತಾರೆ.

ಸೋಲಿಗರು ರಂಗಪ್ಪನಿಗೆ ಬಿಟ್ಟಿ ಸೇವೆಯನ್ನು ಈ ರೀತಿಯಾಗಿ ಮಾಡುತ್ತಾರೆ. ಮೊಲವನ್ನು ಬಿಡುವುದು, ತೇರು ಕಟ್ಟಲು ಬಿದಿರಿನ ಗಳುಗಳನ್ನು ತಂದು ಶೇಖರಿಸುವುದು, ಚಪ್ಪರ ಹಾಕುವುದು, ಚಪ್ಪರಕ್ಕೆ ಕಂಬ ನಿಲ್ಲಿಸುವುದನ್ನು ಆಯಕಾಲು ಹಾಕುವುದು,(ಚಪ್ಪರದ ಮೇಲೆ ಹಾಸುವ ಗಳಗಳನ್ನು ಆಯಕಾಲು ಪಟ್ಟಿ ಎಂದು ಕರೆಯುತ್ತಾರೆ) ಸ್ವಾಮಿಯ ಉತ್ಸವಗಳನ್ನು ಆಯಾಯ ಪೋಡುಗಳ ಜನರು ಹಂಚಿಕೊಂಡು ಮಾಡುತ್ತಾರೆ. ಪೋಡುಗಳಲ್ಲಿ ೫ರಿಂದ ೧೦ ಜನ ಈ ರೀತಿಯಾಗಿ ಬಿಟ್ಟಿ ಕೆಲಸ ಮಾಡುತ್ತಾರೆ. ತೇರು ಕಟ್ಟಿ ತೇರು ನಿಲ್ಲುವವರೆಗೂ ಉತ್ಸವದಲ್ಲಿ ಸೋಲಿಗರು ಭಾಗವಹಿಸುತ್ತಾರೆ. ಇದನ್ನು ಸೋಲಿಗರು ಹರಸೇವೆ, ಗುರುಸೇವೆ ಎಂದು ಕರೆಯುತ್ತಾರೆ. ಸ್ವಾಮಿಯ ಆಚರಣೆಯನ್ನು ಈಗಲೂ ಸಹ ಬಿಟ್ಟಿ ಸೇವೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಸಂಕ್ರಾಂತಿ ಹಬ್ಬಕ್ಕೆ ಮೊದಲೇ ಸೋಲಿಗರು ಪದ್ಧತಿಯ ಪ್ರಕಾರ ಗೆಡ್ಡೆಗೆಣಸನ್ನು **ಕಾಪಿನ** ದಿನವೇ ದೇವರಿಗೆ ಎಡೆ ಮಾಡುತ್ತಾರೆ. ಅಂದರೆ ಹಬ್ಬದ ಹಿಂದಿನ ದಿನವೇ ತೋಟಂಬನ್ನು ಕಿತ್ತು ಮನೆಯಲ್ಲಿಯೇ **ಸೋಲಗಿತ್ತಿ ಪುಸುಮಾಲೆ ಕಾಡಿನಿಂದ ತಂದ ಪ್ರಕಾರವಾಗಿ** ಆ ದಿನ ಮನೆಯಲ್ಲಿ ಗೆಣಸಿನ ಹಬ್ಬ ಮಾಡುತ್ತಾರೆ. ಅದಾದ ಎರಡು ದಿನಕ್ಕೆ ಅನ್ನ ಸಾಂಬಾರು ಪಾಯಸ ಮಾಡಿ, ಮನೆಯವರು ಎಲ್ಲರಿಗೂ ಉಣಬಡಿಸುತ್ತಾರೆ.

ಮೂರನೇ ದಿನಕ್ಕೆ ಜಾತ್ರೆ ಪ್ರಾರಂಭವಾಗುತ್ತದೆ. "ಈ ಜಾತ್ರೆಯಲ್ಲಿ ೯ ಪೋಡು ಸೋಲಿಗರದು ಮುಖ್ಯ ಪಾತ್ರ ಹಾಗೂ ಜವಾಬ್ದಾರಿಯಾಗಿ ಕೆಲಸ ಮಾಡುತ್ತಾರೆ. "ಸ್ವಾಮಿ, ಬಿಳಿಗಿರಿ ರಂಗಪ್ಪನೇ ಬಿಟ್ಟ ಸೇವೆ ಮಾಡಿ ಎಂದು ಹೇಳಿದ್ದಾರೆ. ನೀವು ನನ್ನ ಬಾಮೈಕ ಆಗಬೇಕು ಎಂದು ಹೇಳಿದ್ದಾರೆ. ಸರ್ವರೂ ಜಾತ್ರೆಗೆ ಬಂದು ಹೋದರೂ ಸೋಲಿಗರ ಪಾತ್ರ ಈ ಆಚರಣೆಯಲ್ಲಿ ಬಹು ಮುಖ್ಯವಾದುದು.

ಬಿಳಿಗಿರಿರಂಗನ ಬೆಟ್ಟದ ಸೋಲಿಗರಿಗೆ ಒಂದು 'ಮುದ್ರೆ' (ಉಂಗುರ) ಇದೆ. ಸೋಲಿಗರ ಯಜಮಾನರ ಮನೆಯಲ್ಲಿ ಈ ಮುದ್ರೆ ಉಂಗುರವನ್ನು ಇಟ್ಟಿರುತ್ತಾರೆ. ಈ ಮುದ್ದಾ ಉಂಗುರವನ್ನು ಹಬ್ಬಗಳದ ರಂಗಪ್ಪನ ಚಿಕ್ಕ ಜಾತ್ರೆ ಮತ್ತು ದೊಡ್ಡ ಜಾತ್ರೆಯ ದಿನದಂದು ಮಾತ್ರ ಹೊರತೆಗೆಯುತ್ತಾರೆ. ಈ ಪದ್ಧತಿಯು ಸೋಲಿಗ ಸಮುದಾಯದವರಿಗೆ ಬಂದಿರುವ ಪದ್ಧತಿಯಾಗಿರುತ್ತದೆ. ಪೂಜೆ ಮಾಡಿದ ನಂತರ ಉತ್ಸವ ಮೂರ್ತಿಯನ್ನು ಬೆಟ್ಟದ ಮೇಲಿಂದ ಕೆಳಗೆ ಸೋಲಿಗರೇ ಹೊತ್ತು ತರುತ್ತಾರೆ. ನಂತರ ಮೂರ್ತಿಯನ್ನು ತೇರಿನಲ್ಲಿರಿಸಿದ ಕೂಡಲೇ ತೇರು ನಿಂತಿರುವ ಜಾಗದಲ್ಲಿ ಮೇಲೆ ಗರುಡ ಪಕ್ಷಿಯು ಬಂದು ಸುತ್ತಿದ ನಂತರ ತೇರನ್ನು ಎಳೆಯಲಾಗುತ್ತದೆ. ಚಿಕ್ಕ ತೇರು ಎಳೆದ ಮೇಲೆ ಪೂಜೆ ಪುನಸ್ಕಾರ ನಡೆಯುತ್ತದೆ. ಬಂದಿರುವ ಭಕ್ತಾದಿಗಳು ಭಕ್ತಿಯಿಂದ ಸ್ವಾಮಿಯ ದರ್ಶನ ಪಡೆಯುತ್ತಾರೆ. ಅದೇ ರೀತಿಯಲ್ಲಿ ಸೋಲಿಗರೂ ಸಹ ಜಾತ್ರೆಯ ಹಿಂದಿನ ದಿನಗಳಿಂದ ಹಿಡಿದು ತೇರು ಎಳೆಯುವುದು ಹಾಗೂ ತೇರು ಆದ ಎಂಟು ದಿನದವರೆಗೂ ಅಂದರೆ ತೇರು ಬಿಚ್ಚುವವರೆಗೂ ಬಹಳ ಭಕ್ತಿಯಿಂದ ಭಾಗವಹಿಸುತ್ತಾರೆ.

**೬.೧.೬. ಸಂಕ್ರಾಂತಿ ಹಬ್ಬದ ಆಚರಣೆಯಲ್ಲಿ ಚಿಕ್ಕ ತೇರಿನ ಉತ್ಸವ**

ಮೊದಲಿಗೆ ಸ್ವರ್ಗದ ಬಾಗಿಲು ನುಗ್ಗುವುದು(ಸಂಕ್ರಾಂತಿ ಹಬ್ಬದ ಹಿಂದಿನ ದಿನ), ಕಾಪು ಹಾಕುವುದು, ಗರುಡ ದರ್ಶನ, ವಾಹನ ವೀಕ್ಷಣೆ, ತೇರು ಎಳೆಯುವುದು, ಪೂಜೆ-ಪುನಸ್ಕಾರ ಮಾಡಿಸುವುದು, ಮೊಲ ಬಿಡುವ ಪದ್ಧತಿ, ರಂಗಪ್ಪ ದೇವರಿಗೆ ಕಲ್ಯಾಣಿ ಕೊಳದಲ್ಲಿ ಸ್ನಾನ ಮಾಡಿಸುವುದು, ೮ನೇ ದಿನಕ್ಕೆ ತೇರು ಬಿಚ್ಚುವುದು ಹೀಗೆ ಹಿಂದಿನ ಕಾಲದಿಂದಲೂ ಈ ಜಾತ್ರೆಗೆ ಸೋಲಿಗರಲ್ಲದೆ ನಾಡಿನವರೂ ಸಹ ಬಹಳ ಭಕ್ತಿಯಿಂದ ರಂಗನಾಥಪುರದಲ್ಲಿ ತಂಗಿ, ದೇವರ ಹಾದಿಯಲ್ಲಿ ಕಾಡಿನ ಮಾರ್ಗವಾಗಿ ನಡೆದೇ ಸ್ವಾಮಿಯ ದರ್ಶನ ಪಡೆಯಲು ಬರುತ್ತಾರೆ. ಆದುದರಿಂದ ಕಾಡು-ಗುಡ್ಡ, ಮೇಡು ಹತ್ತಿ, ಬುತ್ತಿ ಕಟ್ಟಿಕೊಂಡು ಹಬ್ಬವನ್ನು ಎಂಟು ದಿನ ಇರುವಾಗಲೇ ನಡೆದು ಅಲ್ಲಲ್ಲಿ ತಂಗಿ ಸ್ವಾಮಿ ದರ್ಶನ ಪಡೆಯಲು ಬರುತ್ತಾರೆ.

ಉತ್ಸವ ಮೂರ್ತಿಯನ್ನು ಬೆಳ್ಳಿ ಪಲ್ಲಕ್ಕಿಯಲ್ಲಿ ಸೋಲಿಗರೇ ಹೊತ್ತುತಂದು ರಥದಲ್ಲಿಡುತ್ತಾರೆ. ಎಂಟು ಜನರಿಗೆ ಮಾತ್ರ ಉತ್ಸವ ಮೂರ್ತಿಯನ್ನು ಹೊರುವ ಅವಕಾಶ ಇರುತ್ತದೆ. ಬೇರೆ ಯಾರ ಹೆಗಲಿಗೂ ಸಹ ಕೊಡುವುದಿಲ್ಲ. ಏಕೆಂದರೆ ಹೆಗಲು ಹೆಚ್ಚು ಕಡಿಮೆ ಆಗಿ ಅದು ಉರ್ಕಾಗಿ(ಡೊಂಕಾಗಿ) ಒಂದೇ ಕಡೇ ವಾಲಿ, ದೇವರಿಗೆ ಹಾಕಿರುವ ಶೃಂಗಾರ, ಚಿನ್ನಾಭರಣ ಬಿದ್ದರೆ ಹಾಗೂ ಅಪಶಕುನ ಎಂಬುದೊಂದು ವಾಡಿಕೆ ಇದೆ. ಅದನ್ನು ಹೊತ್ರೋಗಿ(ಎತ್ತಿಕೊಂಡು ಹೋಗಿ) ದೇವಸ್ಥಾನದ ಸುತ್ತ ಸುತ್ತಿಸಿ, ದೇವಸ್ಥಾನದ ಒಳಗೆ ಸಾಗಿಸುವವರೆಗೂ ಅದು ಸೋಲಿಗರ ಜವಾಬ್ದಾರಿ. ಸೋಲಿಗರಿಗೆ ಸಮಯದ ನಿಗದಿ ಇಲ್ಲ. ಆದರೆ ಭಕ್ತಾದಿಗಳು ನೋಡಿ, ಪೂಜೆ ಸಲ್ಲಿಸಿದ ನಂತರ ಎಲ್ಲಾ ಸಮಯ

ನೋಡಿ ಕಾರ್ಯವನ್ನು ಸರಿಯಾಗಿ ನಿರ್ವಹಿಸಿ ರಾತ್ರಿ ೬-೭ ಗಂಟೆಯ ವೇಳೆಗೆ ದೇವರನ್ನು ದೇವಸ್ಥಾನಕ್ಕೆ ಸೇರಿಸುತ್ತಾರೆ. ಮುಂದೆ ಪೂಜಾರಪ್ಪನ ಜವಾಬ್ದಾರಿಯಾಗಿರುತ್ತದೆ. ದೇವರನ್ನು ಹೊರುವಾಗ ಸೋಲಿಗರು ತಮ್ಮ ಹೊರುವ ಹೆಗಲನ್ನು ಬದಲಾವಣೆ ಮಾಡಿಕೊಳ್ಳುತ್ತಾರೆ. ಆದರೆ ಆ ಹೆಗಲು ಸಮವಾಗಿರಬೇಕು. ದಣಿವಾದಾಗ ಮತ್ತೆ ೪ ಜನ ಸೇರಬಹುದು. ಆದರೆ ಹೊರುವವರ ಹೆಗಲು ಒಂದೇ ಮಟ್ಟದವರಾಗಿರಬೇಕು.

**೬.೧.೭. ಕಾಪು ಬಿಡುವ ಪದ್ಧತಿ**

ಇಡೀ ದಿನ, ಇಡೀ ತಿಂಗಳು, ಇಡೀ ವರ್ಷ ನಾವು ದಾರಿಯಲ್ಲಿ, ರಸ್ತೆಯಲ್ಲಿ ನಡೆದಾಡುತ್ತೇವೆ. ಆ ಜಾಗವನ್ನು ತುಳಿದು, ತುಳಿದು ಸವೆಸಿರುತ್ತೇವೆ. ಅದಕ್ಕಾಗಿ ವರ್ಷಕ್ಕೆ ಒಂದು ಬಾರಿ ಆ ದಾರಿಗೆ ಕಾಡಿನ ಹೂವುಗಳನ್ನು ತಂದು ಶೃಂಗರಿಸುತ್ತ ಆ ದಾರಿಗೆ ನಮಸ್ಕಾರ ಮಾಡುತ್ತ ಧೂಪ, ದೀಪ ಹಚ್ಚುತ್ತಾ ನಮಗೆ ನಮ್ಮ ಸಂಕ್ರಾಂತಿ ಹಬ್ಬದ ಆಚರಣೆ ಯಾವುದೇ ರೀತಿಯ ಅಡೆ ತಡೆ ಗಾಳಿ ಸೋಂಕಿ, ಶಕುನ ಯಾವುದೂ ಕೂಡ ಬಾರದೇ ನೀ ನೋಡಿಕೋ ಎಂದು ಪೂಜೆ ಮಾಡಿ ಕಾಪು ಹಾಕುವ ಪದ್ಧತಿಯನ್ನು ಸೋಲಿಗರು ರೂಢಿಸಿಕೊಂಡಿದ್ದಾರೆ. ಇನ್ನೊಮ್ಮೆ ನೋಡಿದಾಗ ಪುಸುಮಾಲೆ ಕಾಡಿನಿಂದ ಗೆಡ್ಡೆ ಗೆಣನ್ನು ಕಿತ್ತುಕೊಂಡು ಹಬ್ಬ ಮಾಡಲು ಸೋಲಿಗರ ಬೊಮ್ಮೇಗೌಡನ ಅವಳ ಅಪ್ಪನ ಮನೆಗೆ ಕರೆತರುವಾಗ ಪುಸುಮಾಲೆ ದಾರಿಯಲ್ಲಿ ಬರುವಾಗ ಯಾವುದೇ ರೀತಿಯ ಅಡೆ-ತಡೆ, ಯಾರ ಕಣ್ಣು ನಮ್ಮ ಪುಸುಮಾಲೆಗೆ ಆಗದಿರಲಿ ಎನ್ನುವಂತೆ ಈ ಕಾಪನ್ನು ಸೋಲಿಗರು ಮನೆಯ ಮುಂದೆ, ದಾರಿಯ ಅಲ್ಲಲ್ಲಿ, ಕಾಡಿನ ದಾರಿಗಳಲ್ಲಿ ಬೂದಿಯಿಂದ ಪಟ್ಟೆ ಹಾಕುತ್ತಾರೆ ಎಂದು ಹೇಳಲಾಗುತ್ತದೆ.

ಈ ಎಲ್ಲಾ ಅಂಶಗಳನ್ನು ನೋಡಿದಾಗ ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಂದು ಜೀವರಾಶಿಗಳಿಗೂ ಮನುಷ್ಯನು ತನ್ನ ದಿನ ಬಳಕೆಯಲ್ಲಿ ಉಪಯೋಗಿಸುವ ಯಾವುದೇ ವಸ್ತು ಅದು ಜೀವವಿರಲಿ, ಇಲ್ಲದಿರಲಿ, ಜಡ ರೂಪದಲ್ಲಿರಲಿ ಪ್ರತಿಯೊಂದಕ್ಕೂ ಗೌರವಿಸಬೇಕು, ನೆನೆಯಬೇಕು, ಪ್ರೀತಿಸಬೇಕು, ನಮಸ್ಕರಿಸಬೇಕು. ಕುವೆಂಪು ಹೇಳುವ ಪ್ರಕಾರ 'ವಿಶ್ವ ಮಾನವತಾ ಗುಣ' ಪ್ರಕೃತಿಯಲ್ಲಿಯೇ ವಿಶ್ವ, ಎಲ್ಲವನ್ನು ಕಾಣುವ ಸರಳ ಸುಂದರ ಗುಣವನ್ನು ಸೋಲಿಗ ಸಮುದಾಯವು ಪ್ರಸ್ತುತದಲ್ಲಿಯೂ ಉಳಿಸಿ ಬೆಳೆಸಿಕೊಂಡು ಬರುತ್ತಿರುವುದನ್ನು ಗಮನಿಸಬಹುದು.

**ಗೆಡ್ಡೆ ಗೆಣಸು ತೋಟಂಬು ಗೆಣಸು:** ಹಬ್ಬಗಳಲ್ಲಿ ಸಾಮಾನ್ಯವಾಗಿ ಸೋಲಿಗರು ಕಾಡಿನ ಗೆಡ್ಡೆ ಗೆಣಸು ಅದರಲ್ಲೂ ನಾರೆಗೆಣಸು, ನೂರೆಗೆಣಸು, ಬೆಲ್ಲರೆ ಗೆಣಸು, ಮುಳ್ಳುಗೆಣಸು, ನವರೇಕಾಲು ಗೆಣಸು ಹಾಗೂ ತೋಟಂಬು ಗೆಣಸು ಇಂತಹ ಹಲವಾರು ಗೆಣಸುಗಳನ್ನು ತಂದು ಕೆಲವನ್ನು ಸುಟ್ಟು, ಕೆಲವನ್ನು ಬೇಯಿಸಿ, ದೇವರಿಗೆ ಎಡೆ ಇಟ್ಟು, ತಾವೂ ತಿನ್ನುತ್ತಿದ್ದರು. ಇದರಲ್ಲಿ ಜೇನುತುಪ್ಪವನ್ನೂ ಸಹ ಉಪಯೋಗಿಸುತ್ತಿದ್ದರು. ಈ ರೀತಿಯ ಆಹಾರ ಸೋಲಿಗರಿಗೆ ಪೌಷ್ಟಿಕ ಆಹಾರ ಇದರಲ್ಲಿ ಅನೇಕ ಕಾಯಿಲೆಗಳನ್ನು ವಾಸಿಮಾಡುವ ಗುಣವಿದೆ. ಅದರಲ್ಲೂ **ನೂರೆ ಗೆಣಸಿನ ಸೇವನೆಯಿಂದ ಸಕ್ಕರೆ ಖಾಯಿಲೆಯನ್ನು** ಹೋಗಲಾಡಿಸಬಹುದು. ಮುಖ್ಯವಾಗಿ ಈ ಯಾವುದೇ ಆಹಾರ ಪದಾರ್ಥವನ್ನು ಸೋಲಿಗರು ಪುಕ್ಕಟೆಯಾಗಿ ಹಣವಿಲ್ಲದೆ ತರುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ರೀತಿಯ ಗೆಣಸನ್ನು ತಿನ್ನುವ, ಬೆಳೆಸುವ ಪದ್ಧತಿಯು ಕಡಿಮೆಯಾಗಿದೆ. ಏಕೆಂದರೆ ಅರಣ್ಯ ಇಲಾಖೆಯವರು

ಸೋಲಿಗರನ್ನು ಹೆಚ್ಚಾಗಿ ಕಾಡಿನ ಒಳಗೆ ಬಿಡುವುದಿಲ್ಲ. ಇಲಾಖೆಯವರ ಭಯದಿಂದ ಸೋಲಿಗರ ಆಹಾರ ಕ್ರಮದಲ್ಲಿ ಬದಲಾವಣೆಯಾಗಿ, ಅವರ ಆರೋಗ್ಯದ ಮೇಲೂ ಪರಿಣಾಮಬೀರಿದೆ. ಹೆಣ್ಣುಮಕ್ಕಳು, ಮಹಿಳೆಯರು ಹೆಚ್ಚು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಹಿಂದೆ ಸೋಲಿಗರು, ಕಾಡಿನಲ್ಲಿ ನೂರೊಂದು ತರಹದ ಸೊಪ್ಪು, ಗೆಡ್ಡೆ ಗೆಣಸು, ಅಣಬೆ, ಬಿದಿರು, ಕಾಡಿನ ಹಣ್ಣುಗಳು ಎಲ್ಲವನ್ನು ತಮ್ಮ ಹಬ್ಬಗಳ ಆಚರಣೆಗಳ ಜೊತೆ ಜೊತೆಯಲ್ಲಿಯೇ ಉಪಯೋಗಿಸುವುದರ ಮೂಲಕ ಒಳ್ಳೆಯ ಆರೋಗ್ಯವನ್ನು ಪಡೆಯುತ್ತಿದ್ದರು.

ಇವತ್ತಿನ ದಿನಗಳಲ್ಲಿ ಕಾಡಿನ ಸಾಂಸ್ಕೃತಿಕ ಆಹಾರ ಪದ್ಧತಿ ಕಡಿಮೆಯಾಗಿದೆ. ಜೊತೆಗೆ ನಾಡಿನ ಆಹಾರ ಪದ್ಧತಿ, ಮಿಶ್ರಿತ ಆಹಾರ, ಮದ್ಯಪಾನ ಸೇವನೆ ಇನ್ನೂ ಮುಂತಾದ ಆಹಾರ ಸೇವನೆಯಿಂದ ಆಚರಣೆ ಜೊತೆಗೆ ಆರೋಗ್ಯದ ವಿಷಯದಲ್ಲಿ ಕೆಟ್ಟ ಪರಿಣಾಮ ಬೀರುತ್ತಿದೆ. ಇದರಿಂದ ಸೋಲಿಗರ ಸರಾಸರಿ ಆಯಸ್ಸು ಸಹ ಕಡಿಮೆಯಾಗುತ್ತಿದೆ. ಹಿಂದೆ ಸುಮಾರು ೯೫ ರಿಂದ ೧೦೫ ವರ್ಷ ಬದುಕು ಸಾಗಿಸುತ್ತಿದ್ದ ಸೋಲಿಗರು ಇವತ್ತು ಅತೀ ಕಡಿಮೆ ವಯಸ್ಸಿಗೆ ಮರಣ ಹೊಂದುತ್ತಿದ್ದಾರೆ. ಮತ್ತೊಂದು ಕಡೆ ಸೋಲಿಗರಿಗೆ ಕೊಡುವ ಪೌಷ್ಟಿಕ ಆಹಾರ ನಾಡ ರೀತಿಯ ಆಚರಣೆಯು ಇನ್ನೂ ಹಲವಾರು ಸೋಲಿಗರಿಗೆ ಹೆಚ್ಚು ಹಾಡಿ–ಪೋಡು, ಕಾಲೋನಿಗಳಲ್ಲಿ ಕೆಲವರಿಗೆ ಅದನ್ನು ಯಾವ ರೀತಿ ಯಾವ ವಿಧ ವಿಧವಾಗಿ ಬಳಸಬೇಕು ಎಂಬುದು ತಿಳಿದಿರುವುದಿಲ್ಲ. ಒಟ್ಟಿನಲ್ಲಿ ಕಾಡಿನ ಗೆಡ್ಡೆ–ಗೆಣಸಿನ ಸಂಸ್ಕೃತಿಯು ನಶಿಸಿ ಹೋಗುತ್ತಿರುವುದು ವಿಷಾದನೀಯ.

**೬.೧.೮. ಜಡೆಸ್ವಾಮಿ ಹಬ್ಬ**

ಸೋಲಿಗರಿಗೆ ಇದೊಂದು ಮುಖ್ಯವಾದ ಸಾಮೂಹಿಕವಾದ ಹಬ್ಬ. ಇದನ್ನು ಜಡೆಸ್ವಾಮಿ ಉತ್ಸವ, ಜಡೆಸ್ವಾಮಿ ಕೊಂಡ, ಜಡೆಸ್ವಾಮಿ ಹಬ್ಬ ಎಂದೂ ಕರೆಯುತ್ತಾರೆ. ಇದು ಸೋಲಿಗರಲ್ಲಿ ಕಂಡುಬರುವ ವಿಶಿಷ್ಟ ಹಬ್ಬವಾಗಿದೆ. ಹಿಂದೆ ಈ ಹಬ್ಬವನ್ನು ಕಾಡಿನ ಮಧ್ಯೆ, ತಮ್ಮ ಇಡೀ ಸಮುದಾಯ ಸೇರಿಕೊಂಡು ಆಚರಿಸುತ್ತಿದ್ದರು. ಇತ್ತೀಚೆಗೆ ಇತರೆ ಸ್ಥಳೀಯರೂ ಸಹ ಸೇರಿಕೊಂಡು ಈ ಹಬ್ಬವನ್ನು ಬಹಳ ಭಯ ಭಕ್ತಿಯಿಂದ ಆಚರಿಸುತ್ತಿದ್ದಾರೆ. ಸಾಮಾನ್ಯವಾಗಿ ಈ ಹಬ್ಬವನ್ನು ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ಆಚರಿಸುತ್ತಾರೆ. ಇದಕ್ಕೆ ಮುಖ್ಯ ಕಾರಣ ಸಾಮೂಹಿಕವಾಗಿ ಒಂದುಗೂಡಲು ಅನುಕೂಲಕರವಾದ ಕಾಲ. ಜೊತೆಗೆ ವ್ಯವಸಾಯಕ್ಕೆ ತಯಾರಿ ಮಾಡಿಕೊಂಡು ದೇವರನ್ನು ಕರೆದು, ಪ್ರಾರ್ಥಿಸಿ, ಒಳ್ಳೆಯ ಮಳೆ ಬೆಳೆ ಬರಲೆಂದು ಹರಕೆ ಹೊತ್ತುಕೊಂಡು ಎಲ್ಲರಿಗೂ ಅನುಕೂಲವಾಗಲೆಂದು ದೇವರಿಂದ ಅಪ್ಪಣೆ ಪಡೆದು ವ್ಯವಸಾಯದ ಕೆಲಸ ಕಾರ್ಯದಲ್ಲಿ ತೊಡಗುತ್ತಾರೆ.

ಸೋಲಿಗರಲ್ಲಿ ಜಡೆಸ್ವಾಮಿ ಹಬ್ಬವನ್ನು ತಮ್ಮಡಿ ಮನೆಯವರು ನಿರ್ಧರಿಸುತ್ತಾರೆ. ಆ ಪೋಡಿನಲ್ಲಿರುವ ಯಜಮಾನನ ಮನೆಯಲ್ಲಿ ಹಿರಿಯರಾದ ತಮ್ಮಡಿಗಳ ಜೊತೆ ಚರ್ಚಿಸಿ ದಿನಾಂಕ, ಆಚರಣೆ ಬಗ್ಗೆ ನಿರ್ಧರಿಸಲಾಗುತ್ತದೆ. ನಂತರ ಊರಿನ ಯಜಮಾನ, ಕೋಲುಕಾರ, ಚಲವಾದಿ ಹಾಗೂ ಪೋಡಿನ ಜನರು, ಜಡೆಸ್ವಾಮಿದೊಡ್ಡಿಯ ಸುತ್ತಮುತ್ತಲಿನ ಪೋಡು, ಹಳ್ಳಿಯ ಜನರು ಹಬ್ಬಕ್ಕೆ ಸಹಕಾರವನ್ನು ಕೊಡುತ್ತಾರೆ. ಹಿಂದಿನ ದಿನಗಳಲ್ಲಿ ಜಡೆಸ್ವಾಮಿ ಹಬ್ಬವನ್ನು ಕಾಡಿನ ಮಧ್ಯದಲ್ಲಿಯೇ ಸೋಲಿಗರು ಮಾತ್ರ ಕಡಿಮೆ ಸಂಖ್ಯೆಯಲ್ಲಿ ಸೇರಿಕೊಂಡು ಆಚರಿಸುತ್ತಿದ್ದರು. ದೇವರ ಎಡೆಗೆ ರೊಟ್ಟಿ, ಕುಂಬಳಕಾಯಿ, ತಾಳದ, ಕಾಡಿನ ಗೆಡ್ಡೆ–ಗೆಣಸು, ಕಾಡುಬಾಳೆ, ಕಾಡಿನ ಸೊಪ್ಪು ಇವುಗಳನ್ನು ಅಡಿಗೆ ಮಾಡಿ ದೇವರ

ಪೂಜೆಗೆ ಎಡೆ ಇಡುತ್ತಿದ್ದರು. ಆದರೆ ಇತ್ತೀಚೆಗೆ ಬದಲಾವಣೆಯಾಗಿದೆ. ಅನ್ನ, ಸಾರು, ಫಲ್ಯ, ಸಿಹಿ ತಿನಿಸು ಇತ್ಯಾದಿಗಳನ್ನು ಬಳಸಲಾಗುತ್ತಿದೆ. ನಾಡಿನವರೂ ಸಹ ಜಡೆಸ್ವಾಮಿ ಹಬ್ಬವನ್ನು ಭಯ, ಭಕ್ತಿಯಿಂದ ಆಚರಿಸುತ್ತಾರೆ ಎಂದು ತಿಳಿಸಿದ್ದಾರೆ.

ಜಡೆಸ್ವಾಮಿ ಉತ್ಸವವು ಹಿಂದೆ ಪ್ರತೀ ವರ್ಷವೂ ನಡೆಯುತ್ತಿತ್ತು. ಆದರೆ ಇತ್ತೀಚೆಗೆ ಮೂರು ವರ್ಷಕ್ಕೊಮ್ಮೆ ಆಚರಿಸುತ್ತಾರೆ. ತಮ್ಮಡಿಗಳು ತಿಳಿಸುವಂತೆ ಖರ್ಚುವೆಚ್ಚದ ಸಮಸ್ಯೆ. ಅಲ್ಲದೆ ಜಡೆಯಪ್ಪ, ತಮ್ಮಡಿಯ ಮನೆಯಲ್ಲಿ ಯಾರಾದರೂ ಮರಣ ಹೊಂದಿದರೆ ಅದು ಸೂತಕ. ಹೀಗಿದ್ದಾಗ ಮೂರು ವರ್ಷ ಹಬ್ಬವನ್ನು ಆಚರಿಸುವುದಿಲ್ಲ. ಜಡೆಸ್ವಾಮಿ ಕೊಂಡ ಉತ್ಸವದ ತಯಾರಿ ದಿನಾಂಕ ಗೊತ್ತುಪಡಿಸಿದ ನಂತರದಲ್ಲಿ ಊರಿನವರು, ಸುತ್ತಮುತ್ತಲಿನ ಪೋಡಿನವರು, ದಾನಿಗಳು ಎಲ್ಲರೂ ದೇವರ ಹೆಸರಿನಲ್ಲಿ ದವಸ ಧಾನ್ಯ, ಹಣದ ರೂಪದ ಕಾಣಿಕೆ ಎಲ್ಲವನ್ನು ಕೊಡುತ್ತಾರೆ. ಅದೆಲ್ಲವನ್ನು ಒಟ್ಟುಗೂಡಿಸಿಕೊಂಡು ಹೆಚ್ಚಾಗಲಿ ಅಥವಾ ಕಡಿಮೆಯಾಗಲಿ ಆ ಊರಿನ ತಮ್ಮಡಿ ಮನೆಯವರೇ ಎಲ್ಲಾ ಜವಾಬ್ದಾರಿಯನ್ನು ತೆಗೆದುಕೊಂಡು ಹಬ್ಬವನ್ನು ಮಾಡುತ್ತಾರೆ. ಹಬ್ಬದ ತಯಾರಿ ಮಾಡಿಕೊಂಡ ನಂತರ ಕಾಡಿನಲ್ಲಿರುವ ಸೋಲಿಗರ ದೇವರಾದ ಕಾರಯ್ಯನನ್ನು ಪೂಜಿಸಿ ಅಲ್ಲಿಂದ ತೀರ್ಥ, ಪ್ರಸಾದವನ್ನು ತಂದು ಊರಿನಲ್ಲಿರುವ ದೇವರುಗಳಿಗೆ ತೀರ್ಥವಿಟ್ಟು ನಂತರದ ಹಬ್ಬದ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಗ್ರಾಮದಲ್ಲಿರುವ ಮುಖ್ಯ ದೇವರುಗಳಾದ ಜಡೆಸ್ವಾಮಿ, ಮಾದೇಶ್ವರ, ಗದ್ದೆ ಮಾರಮ್ಮ, ಶನಿಮಹಾತ್ಮ. ಜಡೆಸ್ವಾಮಿ ಮಕ್ಕಳು ಕಾಡಿನಿಂದ ತಮ್ಮಡಿ ಜೊತೆಯಲ್ಲಿ ಕಾರಯ್ಯನಿಗೆ ಪೂಜೆ ಮಾಡಿಕೊಂಡು ಮಡಿಯಿಂದ ತೀರ್ಥವನ್ನು, ಕಳಸವನ್ನು ಹೊತ್ತುಕೊಂಡು ದೇವರ ಗುಡಿಗೆ ಬರುತ್ತಾರೆ. ನಂತರ ತೀರ್ಥಪ್ರಸಾದವನ್ನು ಬೆಂಕಿಕೊಂಡ, ಸೌದೆ ಹಾಗೂ ಎಲ್ಲಾ ದೇವಸ್ಥಾನಗಳಿಗೂ ಹಾಕಿ ಮಡಿ ಮಾಡುತ್ತಾರೆ. ನಂತರ ಪೂಜೆ ಕಾರ್ಯ ನಡೆಯುತ್ತದೆ.

ತಂಪು ತರುವುದಕ್ಕೆ ಗಂಗೆಯ ಸ್ಥಳಕ್ಕೆ ಹೋಗುತ್ತಾರೆ. ಸೋಲಿಗರಲ್ಲಿ ಗಂಗೆ ಹುಟ್ಟುವ ಸ್ಥಳವು ಪವಿತ್ರವಾದದ್ದು. ಉಗಮ ಸ್ಥಾನ ಬಹಳ ಮುಖ್ಯ. ಎಲ್ಲರ ಪಾಪಗಳನ್ನು ಗಂಗೆಯು ತೊಳೆಯುತ್ತಾಳೆ, ಶುಭ್ರಗೊಳಿಸುತ್ತಾಳೆ ಎಂಬ ನಂಬಿಕೆಯು ಸೋಲಿಗರಲ್ಲಿದೆ. ಗಂಗೆಯಿಂದ ತಂಪು ತರುವಾಗ ಹುಲಿವಾಹನ, ಛತ್ರಿ, ಬಾವುಟ, ಛತ್ರಿ ಚಾಮರ ಇವುಗಳನ್ನು ತೆಗೆದುಕೊಂಡು ಸುಮಾರು ಅರ್ಧ ಕಿ.ಮೀ ದೂರದಿಂದ ನಿಧಾನವಾಗಿ ದೇವರನ್ನು ಹೊತ್ತಿರುವ ತಮ್ಮಡಿ ಕಾಲಿಗೆ ಸೀರೆಯನ್ನು ಹಾಕಿಕೊಂಡು ಮಡಿ ದೇವರನ್ನು ಕರೆತರುತ್ತಾರೆ. ದಾರಿಯಲ್ಲಿ ದೇವರಿಗೆ ಕಗ್ಗದ ಸಾಲುಗಳನ್ನು ಹಾಡುತ್ತಾ ಮಾದೇಶ್ವರ, ಜಡೆಸ್ವಾಮಿ ಇವರನ್ನು ಕೂಗಿ ಕರೆದು ತರುತ್ತಾರೆ. ತಂಪು ತೆಗೆದುಕೊಂಡು ಬಂದು ಪೋಡಿನ ದೇವಸ್ಥಾನಗಳನ್ನು ಸುತ್ತುವರೆದು ಬಂದು ದೇವಾಲಯದ ಮುಂದೆ ಹೊಲದ ಮಧ್ಯದಲ್ಲಿ ಹಾಕಿರುವ ಕೊಂಡದ ಹತ್ತಿರ ಬರುತ್ತಾರೆ. ಕೊಂಡದಲ್ಲಿನ ಬೆಂಕಿಯನ್ನು ಬೂದಿ ಕೆಂಡವನ್ನು ಮುಚ್ಚದ ಹಾಗೆ ಹಸಿಸೊಪ್ಪಿನಿಂದ ಹಾಯಿಸಿತ್ತಾ ಕೆಲ ಪುರುಷರು ಕೊಂಡದ ಎರಡೂ ಬದಿಗಳಲ್ಲಿ ನಿಂತಿರುತ್ತಾರೆ. ತಮ್ಮಡಿಗಳು ಹಿಂದಿನ ದಿನದಂದೇ ಉಪವಾಸವಿದ್ದು ಬಾಯಿಗೆ ನೂಲಿನ ಬಟ್ಟೆ ಕಟ್ಟಿರುತ್ತಾರೆ ಹಾಗೂ ಕೊಂಡ ಹಾಯುವುದನ್ನು ನೋಡಲು ಕೊಂಡ ಹಾಕಿರುವ ಎರಡು ಬದಿಯಲ್ಲೂ ಜನರು ನಿಂತಿರುತ್ತಾರೆ. ನಂತರ ಕೊಂಡಕ್ಕೆ ಪೂಜೆ ಸಲ್ಲಿಸಿ ತಮ್ಮಡಿಗಳು ಒಬ್ಬೊಬ್ಬರಾಗಿ ಕೊಂಡ ಹಾಯ್ದು ದೇವಾಲಯದ ಒಳಗೆ ಪ್ರವೇಶ ಮಾಡುತ್ತಾರೆ. ಈ ಸಂದರ್ಭದಲ್ಲಿ ಇವರ ಮೈಮೇಲೆ ದೇವರು ಬಂದಿರುತ್ತದೆ. ಆವೇಶದಿಂದ ಕೊಂಡ

ಹಾಯ್ದು ಬರುವಾಗ ಜನ ಭಕ್ತಿಯಿಂದ ನಮಸ್ಕರಿಸುತ್ತಾರೆ. ಕೊಂಡದಲ್ಲಿರುವ ಬೂದಿಯನ್ನು ವಿಭೂತಿ ರೀತಿಯಲ್ಲಿ ಹಣೆಗೆ ಹಚ್ಚಿಕೊಂಡು ಡಬ್ಬ, ಕಾಗದದಲ್ಲಿ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಜನರು ತಮ್ಮ ಕಷ್ಟ–ಸುಖಗಳ ಬಗ್ಗೆ ದೇವರ ಬಳಿ ನಿವೇದಿಸಿಕೊಳ್ಳುತ್ತಾರೆ. ಮಳೆ–ಬೆಳೆ, ಜನರ ಕಷ್ಟ–ಸುಖಗಳ ಬಗ್ಗೆ ಮಾತನಾಡುತ್ತಾರೆ. ದೇವರು ಇವರ ಕೇಳಿಕೆಗೆ ಭರವಸೆ ನೀಡುತ್ತದೆ. ಕೊನೆಗೆ 'ಹೋಗು ಮಗನೆ ನಾನಿದ್ದೇನೆ ಹೆದರಬೇಡ ನಿನ್ನ ಕೆಲಸವನ್ನು ನೀನು ಅಚ್ಚುಕಟ್ಟಾಗಿ ಮಾಡು, ಯಾವುದೇ ಗಂಡಾಂತರ ಬಂದರೂ ಅದನ್ನು ನಾನು ಮೆಟ್ಟಿ ನಿಲ್ಲುತ್ತೇನೆ ಹೋಗು ನರುಳೇ' ಎಂದು ಧೈರ್ಯ ನೀಡಿ ಮಾತನಾಡಿ ಬಂದಿರುವ ಎಲ್ಲಾ ಜನರಿಗೆ ಸಮಾಧಾನಪಡಿಸಿ ಹೋಗುತ್ತದೆ. ಇದರಿಂದ ಸೋಲಿಗರಿಗೆ ಒಂದು ಬಗೆಯ ನೆಮ್ಮದಿ, ಮಾನಸಿಕವಾಗಿ ಎಲ್ಲಾ ರೀತಿಯ ತೊಂದರೆಗಳಿಂದಲೂ ದೂರ ಸರಿಯುತ್ತಾರೆ. ನಮ್ಮ ಎಲ್ಲಾ ಕೆಲಸ ಕಾರ್ಯಗಳಲ್ಲೂ ನಮ್ಮ ದೇವರು ಕಾಪಾಡುತ್ತಾನೆ. ನಮ್ಮನ್ನು ಕೈ ಬಿಡುವುದಿಲ್ಲ ಎಂಬ ನಂಬಿಕೆ ಕೊಂಡ ಮುಗಿದ ನಂತರ ದೇವಸ್ಥಾನದ ಮೈದಾನದಲ್ಲಿ ಪ್ರಸಾದ ವಿನಿಯೋಗ ನಡೆಯುತ್ತದೆ. ಬಂದಿರುವ ಸುತ್ತಮುತ್ತಲಿನ ಭಕ್ತಾಧಿಗಳೆಲ್ಲ ಪ್ರಸಾದವನ್ನು ತೆಗೆದುಕೊಂಡು ದೇವರಿಗೆ ನಮಸ್ಕರಿಸಿ ಅಕ್ಕ–ಪಕ್ಕದ ಊರಿನವರು ತಮ್ಮ ಪೋಡು, ಹಾಡಿ, ಹಳ್ಳಿಗಳಿಗೆ ತೆರಳುತ್ತಾರೆ.

ರಾತ್ರಿ ಸುಮಾರು ಎಂಟರಿಂದ ಒಂಬತ್ತು ಸುಮಾರಿಗೆ ಪಂಜಿನ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ತಮ್ಮಡಿಯೂ ಸೇರಿದಂತೆ ಪುರುಷರು ಕಾಡಿನಿಂದ ತಂದ ಬಿದಿರಿನ ಕಡ್ಡಿಯ ಮುಂದಿನ ತುದಿಯನ್ನು ಮಚ್ಚಿನಿಂದ ಅಚ್ಚೆಯಾಗಿಸಿ ಅದಕ್ಕೆ ಬಳಿಯ ಬಟ್ಟೆಯನ್ನು ಸುತ್ತಿಕೊಂಡು ಅದರ ಸುತ್ತಲು ಹರಳೆಣ್ಣೆ ಹಾಕಿ ಬೆಂಕಿಯಿಂದ ಹತ್ತಿಸಿಕೊಂಡು ಎಲ್ಲಾ ದೇವರ ಸುತ್ತ ಬರುವರು. ಹೀಗೆ ಪಂಜಿನ ಸೇವೆಯನ್ನು ಮಾಡುತ್ತಾ ಕತ್ತಲೆಯಿಂದ ಬೆಳಕಿನೆಡೆಗೆ ಎಂಬ ಹಾಗೆ. ದೇವರು ಕತ್ತಲೆಯಲ್ಲಿ ಉಳಿಯಬಾರದು ಅವನಿಗೆ ಬೆಳಕನ್ನು ತೋರಿಸಿ ಅದರ ಮೂಲಕ ಸೋಲಿಗರು ಕತ್ತಲೆಯಲ್ಲಿಯೂ ದೇವರ ದರ್ಶನ ಪಡೆಯುವಂಥವರಾಗುತ್ತಾರೆ. ಮತ್ತೊಂದು ಕಡೆ ಈ ಪಂಜಿನ ಸೇವೆಯು ಮನರಂಜನೆಯನ್ನು ಕೊಡುತ್ತದೆ. ತಮಗಿಷ್ಟವಾದ ದೇವರು, ಹೆಸರು, ಹಾಡುಗಳನ್ನು ಕೂಗುತ್ತಾ, ಕರೆಯುತ್ತಾ ಸಂತೋಷದಿಂದ ಎಲ್ಲರೂ ಸೇರಿ ಸಂಭ್ರಮದಿಂದ ಪಂಜಿನ ಕಡ್ಡಿಯನ್ನು ಹಿಡಿದು ದೇವಸ್ಥಾನದ ಸುತ್ತ ಪ್ರದಕ್ಷಿಣೆ ಮಾಡುತ್ತಾರೆ.

**ಪೂಜೆಕಾರ್ಯ:** ಪೋಡಿನ ಎಲ್ಲರೂ ಸೇರಿ ರಾತ್ರಿಯ ಪೂಜೆ ಮಾಡುತ್ತಾರೆ. ಪೋಡಿನ ಎಲ್ಲಾ ಜನರು ಅದರಲ್ಲೂ ಹದಿಹರೆಯದವರು ಈ ಹಬ್ಬದಲ್ಲಿ ತುಂಬಾ ಸಂಭ್ರಮಿಸುತ್ತಾರೆ. ಹೊಸ ಉಡುಗೆ–ತೊಡುಗೆ, ಅಲಂಕಾರಿಕ ಆಭರಣಗಳನ್ನು ತೊಟ್ಟುಕೊಂಡು ಮನೆಯಿಂದ ಮನೆಗೆ, ದೇವಸ್ಥಾನದಿಂದ ಮನೆಗೆ, ಮನೆ ಮನೆಗೆ ಹೋಗಿ ಬರುತ್ತಾ ಸಂಭ್ರಮಿಸುತ್ತಾರೆ. ಹುಡುಗರೂ ತಮಗಿಷ್ಟವಾದ ಉಡುಗೆಗಳನ್ನು ಹಾಕಿಕೊಂಡು ಹುಡುಗಿಯರ ಮನಸ್ಸನ್ನು ಸೆಳೆಯಲು ಪ್ರಯತ್ನಿಸುತ್ತಿರುತ್ತಾರೆ.

**ಓಲಗ (ಸೋಲಿಗರ ಪ್ರಾರ್ಥನೆ):** ಸೋಲಿಗರಲ್ಲಿ ಗಂಡಸರು ಪೂಜೆಯಾದ ನಂತರ ಜಡೆಸ್ವಾಮಿ, ಮಾದೇಶ್ವರ, ಕೇತಪ್ಪ ಮುಂತಾದ ದೇವರುಗಳಿಗೆ ಪ್ರಾರ್ಥಿಸುತ್ತಾರೆ. ದೇವರೆ ನಾನು ಪ್ರಾರ್ಥನೆಯ ಮೂಲಕ ನಿನ್ನನ್ನು ಕೂಗಿ ಕೂಗಿ ಕರೆಯುತ್ತಿದ್ದೇನೆ. ನೀನು ಬಾ ನನ್ನ ಪ್ರಾರ್ಥನೆಗೆ ಓಗೊಟ್ಟು ನನಗೆ ದಯೆ ತೋರಿಸು. "ಕೂಗೋ ಕೂಗೋ ಮಾದೇವನ ನಿಂದು ಕೂಗೋ ದುಂಡು ಮಾದೇವನ" ಎಂದು ಕೋಲುಕಾರ ಈ ಓಲಗದ ಪ್ರಾರ್ಥನೆಯನ್ನು ಮಾಡುತ್ತಾನೆ. ಮಾದಪ್ಪ ನಾನು ಕೂಗಿ ಕೂಗಿ

ಕರೆಯುತ್ತಿದ್ದೇನೆ. ನೀನು ಸ್ವಲ್ಪ ನಿಂತು ನನ್ನ ಕರೆಗೆ ಓಗೊಡೆಂದು ಕೇಳಿಸಿಕೊ ಎಂದು ಕರೆಯುವುದೇ ಓಲಗ. ಕೋಲುಕಾರ ಓಲಗದ ಪ್ರಾರ್ಥನೆಯನ್ನು ಮಾಡುವಾಗ ತನ್ನ ಕೈಯಲ್ಲಿ ಬಿದಿರಿನ ಕೋಲನ್ನು ಹಿಡಿದುಕೊಂಡಿರುತ್ತಾನೆ. ಇದನ್ನು ಸೋಲಿಗರ ಭಾಷೆಯಲ್ಲಿ **'ಜೋಗಿದೊಣ್ಣೆ'** ಎಂದು ಕರೆಯುತ್ತಾರೆ.

**ಹಾಡಿಕೆ ಅಥವಾ ಹಾಡುಕೆ:** ಸೋಲಿಗ ಸಮುದಾಯದಲ್ಲಿ ಮಹಿಳೆಯರು ಹಾಡುಕೆಯನ್ನು ಹಾಡುತ್ತಾರೆ. ಹಾಡುಕೆ ಅಂದರೆ ದೇವರ ಪದಗಳು. ಈ ಆಡುಕೆಯಲ್ಲಿ ಒಬ್ಬ ಗಂಡಸು ಇರುತ್ತಾನೆ. ಇವರನ್ನು **'ಗುರು'** ಎಂದು ಕರೆಯುತ್ತಾರೆ. ಇವರು ಹಾಡುಕೆಯನ್ನು ಹೇಳುವಾಗ ಮೊದಲಿನ ಪದವನ್ನು ಹೇಳುತ್ತಾರೆ. ನಂತರ ಮುಂದುವರಿದ ಭಾಗದ ಪದವನ್ನು ಮಹಿಳೆಯರು ಹೇಳುತ್ತಾರೆ. ಒಟ್ಟಾರೆಯಾಗಿ ಗುರು ಸೊಲ್ಲನ್ನು ಹೇಳಿದರೆ ಮಹಿಳೆಯರು ಮುಂದಿನ ಪೂರ್ತಿ ಹಾಡುಕೆಯನ್ನು ಹಾಡುತ್ತಾರೆ. ಈ ಹಾಡುಕೆಯು ದೇವರ ಬಗ್ಗೆ, ಕಾಡಿನ ಬಗ್ಗೆ, ಪ್ರಾಣಿಗಳ ಬಗ್ಗೆ, ಪರಿಸರದ ಬಗ್ಗೆ, ಕಾರಯ್ಯ ಬಿಲ್ಲಯ್ಯನ ಬಗ್ಗೆ ಇರುತ್ತದೆ. ಈ ಹಾಡುಕೆಯು ರಾತ್ರಿಯಿಂದ ಬೆಳಗಿನ ಆರು ಗಂಟೆಯವರೆಗೂ ಜರುಗುತ್ತದೆ.

**ಗೋರುಕಾನ ಕುಣಿತ:** ಸಪ್ಪರ(ಚಪ್ಪರ) ಹನ್ನೆರಡು ಕವೆಯನ್ನು ತಂದು ಚಪ್ಪರವನ್ನು ಕಟ್ಟುತ್ತಾರೆ. ಕಾಡಿನ ಸೊಪ್ಪು ಮತ್ತು ಬಿದಿರನ್ನು ತಂದು ಸರಬು(ಉದ್ದನೆಯ ಸರ) ನೇರಿಸೊಪ್ಪು(ನೇರಳೆ ಸೊಪ್ಪು) ಹೂವುಗಳನ್ನು ಕಟ್ಟಿ ಶೃಂಗಾರ ಮಾಡಿ ಚಪ್ಪರವನ್ನು ದೇವಸ್ಥಾನದ ಮುಂದೆ ಕಟ್ಟುತ್ತಾರೆ. ಚಪ್ಪರದ ಕೆಳಗೆ ಗಂಡಸರು, ಹುಡುಗರು, ಗೋರುಕಾನ ಕುಣಿತ ಕುಣಿಯುತ್ತಾರೆ. ದೇವರುಗಳ ಮೇಲೆ, ಪ್ರಾಣಿ-ಪಕ್ಷಿಗಳ ಮೇಲೆ, ಬೆಟ್ಟ-ಗುಡ್ಡಗಳ ಮೇಲೆ, ಹೂವು-ಹಣ್ಣುಗಳ ಮೇಲೆ ಹೀಗೆ ಹಲವಾರು ರೀತಿಯಲ್ಲಿ ಗೋರುಕಾನ ಕುಣಿತವನ್ನು ತಾಳಕ್ಕೆ ತಕ್ಕ ಹಾಗೆ ಕುಣಿದು ನರ್ತಿಸುತ್ತಾರೆ.

**ಕೋಡಂಗಿ:** ರಾತ್ರಿ ಸಮಯದಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಕೋಡಂಗಿಯ ಪಾತ್ರವೂ ಪ್ರಮುಖವಾದದ್ದು. ಕೋಡಂಗಿ ಪಾತ್ರಧಾರಿಯು ಹುಡುಗರಾಗಿದ್ದು ಇವನು ಸಾಮಾನ್ಯವಾಗಿ ಇಪ್ಪತ್ತು ವರ್ಷಕ್ಕಿಂತ ಮೇಲ್ಪಟ್ಟವರಾಗಿರುತ್ತಾನೆ. ಕಟ್ಟಿಗೆಯ ಇದ್ದಿಲಿನಿಂದ ಮಾಡಿದ ಮಸಿಯಿಂದ ದೇಹಕ್ಕೆ ಬಣ್ಣದ ರೀತಿಯಲ್ಲಿ ಬಳಿದುಕೊಂಡು ವಿಕಾರವಾಗಿ ಕಾಣಿಸುತ್ತಾ ನೋಡುವವರಿಗೆ ನಗೆ ಮೂಡಿಸುತ್ತಾನೆ. ಕೋಡಂಗಿಯು ಎಲ್ಲರನ್ನೂ ಚುಡಾಯಿಸುತ್ತಾನೆ. ಅದರಲ್ಲೂ ಹುಡುಗಿಯರನ್ನು ಚುಡಾಯಿಸುತ್ತಾನೆ. ಇವರು ರಾತ್ರಿಯಿಂದ ಬೆಳಗಿನವರೆಗೂ ಈ ರೀತಿಯ ವೇಷ ಮರೆಸಿಕೊಂಡು ತಮಾಷೆ ಮಾಡುತ್ತಾ ಕುಣಿಯುತ್ತಾ, ಮಧ್ಯ, ಮಧ್ಯದಲ್ಲಿ ಮಹಿಳೆಯರು, ಮಕ್ಕಳು ಕುಳಿತಿರುವ ಕಡೆಗಳಿಗೆ ಹೋಗಿ ಚುಡಾಯಿಸಿ ಬರುತ್ತಾರೆ.

**ವಾದ್ಯಗಳು:** ರಾತ್ರಿ ಇಡೀ ಗೋರುಕಾನ ನೃತ್ಯ ಮಾಡುವಾಗ ಸೋಲಿಗರು ತಮ್ಮದೇ ಆದ ವಾದ್ಯ ಪರಿಕರಗಳನ್ನು ಬಳಸುತ್ತಾರೆ. ಹಿಂದೆ ಬಿದಿರಿನ ಕಡ್ಡಿ, ಪ್ರಾಣಿಗಳ ಚರ್ಮಗಳನ್ನು ಉಪಯೋಗಿಸಿಕೊಂಡು ವಾದ್ಯಗಳನ್ನಾಗಿ ಮಾಡಿಕೊಂಡು ನುಡಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಆಧುನಿಕ ವಾದ್ಯ ಪರಿಕರಗಳು ಸೋಲಿಗರ ಹಬ್ಬಗಳ ಹಾಡು-ಕುಣಿತಗಳಲ್ಲಿ ಸೇರಿಕೊಂಡಿವೆ. ಅಂದರೆ ತಮಟೆ, ತಾಳ, ಮದ್ದಳೆ, ಡೋಲು, ಗೆಜ್ಜೆ, ಧಮಡಿ ಅಲ್ಲದೆ ಧ್ವನಿವರ್ಧಕಗಳನ್ನೂ ಹಬ್ಬದಲ್ಲಿ ಬಳಸುತ್ತಾರೆ. ಜೊತೆಗೆ ದೇವಸ್ಥಾನ ಮತ್ತು ಊರಿನ ಬೀದಿಯ ಅಲಂಕಾರಕ್ಕಾಗಿ ಆಧುನಿಕ ವಿದ್ಯುತ್ ದೀಪಗಳ ಜೋಡಣೆಯೂ ಸಹ ಸೇರಿಕೊಂಡಿದೆ.

ವಿಶೇಷವಾಗಿ ಈ ಹಬ್ಬದಲ್ಲಿ ಹೆಣ್ಣು-ಗಂಡು ಇಷ್ಟಪಟ್ಟರೆ ಪರಸ್ಪರ ಒಂದಾಗಿ ಪ್ರೀತಿಸಿ ಕಾಡಿಗೆ ಅಥವಾ ಅಕ್ಕ-ಪಕ್ಕದ ಪೋಡುಗಳಿಗೆ ಹೋಗಿ ಮದುವೆಯಾಗಬಹುದು ಅಥವಾ ಪರಸ್ಪರ ಮದುವೆಗೆ ಒಪ್ಪಿಗೆ ಸೂಚಿಸಬಹುದು. ಎಷ್ಟೋ ಸೋಲಿಗರ ಗಂಡು-ಹೆಣ್ಣುಗಳು ಇಂತಹ ಹಬ್ಬ, ಜಾತ್ರೆ, ಉತ್ಸವ, ರೊಟ್ಟಿಹಬ್ಬ ಇತ್ಯಾದಿ ವಿಶೇಷ ದಿನಗಳಲ್ಲಿಯೇ ಮದುವೆ ಮಾಡಿಕೊಂಡಿದ್ದಾರೆ.

**ತಾಮರೆದೊಡ್ಡು:** ಗೋರುಕಾನ, ಹಾಡುಕೆ, ಹಬ್ಬ, ಮಧ್ಯ-ಮಧ್ಯ ನಡೆಯುತ್ತದೆ. ಆದರೆ ಜೊತೆಯಲ್ಲಿಯೇ ತಮ್ಮಡಿಯ ಮೈಮೇಲೆ ದೇವರುಗಳು ಆವೇಶ ಬಂದು ಕಷ್ಟ-ಸುಖಗಳ ಬಗ್ಗೆ ಮಾತನಾಡುತ್ತದೆ. ಕೊನೆಯಲ್ಲಿ ಬೆಳಗಿನ ಜಾವ **'ತಾಮರೆದೊಡು'** ಕುಣಿತ ಜರುಗುತ್ತದೆ. ಅಂದರೆ **'ಭಿಕ್ಷೆ ಕೇಳುವುದು'** ಕುಳಿತಿರುವ ಎಲ್ಲರ ಬಳಿ ತಟ್ಟೆ ಹಿಡಿದುಕೊಂಡು ಅವರ ಮಾರಿದ ತಾಮರೆ ದುಡ್ಡನ್ನು ಕೇಳಿ ಪಡೆದುಕೊಂಡು ಕಡೆಯಲ್ಲಿ ಎಲ್ಲರೂ ಬಂದ ಹಣವನ್ನು ಹಂಚಿಕೊಂಡು ಬೆಳಗಿನ ಪೂಜೆಯನ್ನು ಮಾಡುತ್ತಾರೆ. ಆನಂತರ ದೇವರ ಪ್ರಸಾದವನ್ನು ತೆಗೆದುಕೊಂಡು ತಮ್ಮ ಮನೆಗಳಿಗೆ ತೆರಳುತ್ತಾರೆ. ಕೊನೆಯಲ್ಲಿ ಜಡೆಸ್ವಾಮಿ ಕೊಂಡ ಉತ್ಸವ ಆದ ಒಂದು ವಾರ ಬಿಟ್ಟು ಮುಂದಿನ ಸೋಮವಾರ 'ಶಾಂತಿ ಕಳೆಯುವ' ಕೆಲಸ ನಡೆಸುತ್ತಾರೆ. ಅಂದರೆ ಮಡಿ, ಮೈಲಿಗೆ ಆಗಿರಬಹುದು ಹಾಗೂ ದೇವರುಗಳಿಗೆ ಶಾಂತಿ ಸಮಾಧಾನಪಡಿಸುವುದು ಬಹಳ ಮುಖ್ಯ. ದೇವರುಗಳನ್ನು ಬೀದಿ, ಬೀದಿಗಳಲ್ಲಿ ತಂದು ಮೆರವಣಿಗೆ ಮಾಡಿಕೊಂಡು ಬಂದಿರುವುದರಿಂದ ದೇವರಿಗೆ ಹಾಕಿರುವ ತೇರನ್ನು ತೆಗೆದು ಎಲ್ಲರಿಗೂ ಕಾಣಿಸುವಂತೆ ಪ್ರದರ್ಶನ ನಡೆಯುತ್ತದೆ. ತಮ್ಮಡಿಯವರು ಹೇಳುವ ಪ್ರಕಾರ ಕೊಂಡ, ಉತ್ಸವ ಎಲ್ಲಾ ಮುಗಿದ ಮೇಲೆ ಒಂದು ವಾರ ಬಿಟ್ಟು ಸೋಲಿಗರೇ ಸೇರಿಕೊಂಡು 'ಶಾಂತಿ ಕಳೆಯುವ' ಕಾರ್ಯ ಮಾಡುತ್ತಾರೆ. ಶಾಂತಿ ಪೂಜೆಯಲ್ಲಿ ಎಲ್ಲಾ ಹೆಂಗಸರು ಸೇರಿಕೊಂಡು ರಾತ್ರಿಪೂರ್ತಿ ಹಾಡುಕೆಯನ್ನು ಹಾಡುತ್ತಾರೆ. ಶಾಂತಿ ಕೆಲಸದಲ್ಲಿ ಮಹಿಳೆಯರು, ತಮ್ಮಡಿ, ಗುರು ಇವರುಗಳು ಈ ಭಾಗಿಯಾಗುತ್ತಾರೆ. ಇಲ್ಲಿಗೆ ಸೋಲಿಗರ ಜಡೆಸ್ವಾಮಿ ಕೊಂಡ ಮುಗಿಯುತ್ತದೆ. ನಂತರ ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿಕೊಳ್ಳುತ್ತಾರೆ. ಮಳೆ-ಬೆಳೆ ವ್ಯವಸಾಯ ಕೆಲಸದಲ್ಲಿ ಹೆಚ್ಚು ಭಾಗಿಗಳಾಗಿ ಬೀಜ ಬಿತ್ತುವ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆ.

ಸೋಲಿಗರಲ್ಲಿ ಮೂಲತಃ ವೃತ್ತಿಗಾಯಕರಿಲ್ಲ. ಆದರೆ ಇತ್ತೀಚೆಗೆ ಬೆರಳೆಣಿಕೆಯಷ್ಟು ವೃತ್ತಿಗಾಯಕರು ಅಲ್ಲಲ್ಲಿ ಕಾಣಸಿಗುತ್ತಾರೆ. ಸಂಕಮ್ಮನ ಕಥೆಯಲ್ಲಿ ಕುಲದ ದೇವತೆಯಾದ ಸಂಕಮ್ಮನಿಗೆ ವಿಶೇಷವಾದ ಸ್ಥಾನಮಾನಗಳು ಆಕೆಯ ಗಂಡನಿಗಿಲ್ಲ ಎಂಬುದನ್ನು ಅವರ ಪುರಾಣಗಳಿಂದ ನಾವು ತಿಳಿಯಬಹುದು. ಇತರ ದ್ರಾವಿಡ ವರ್ಗಗಳಂತೆ ಮಾರಿಹಬ್ಬದ ಆಚರಣೆಯನ್ನು ಕಾಣಬಹುದು. ಸೋಲಿಗರು ಆಚರಿಸುವ ರೊಟ್ಟಿಹಬ್ಬ, ಹೊಸರಾಗಿ ಹಬ್ಬಗಳು ಇವರಿಗೆ ವಿಶಿಷ್ಟವಾಗಿವೆ. ಸೋಲಿಗರ ಆಚರಣೆ ವಿಧಿಗಳಲ್ಲಿ ಯಾವುದೇ ಹೊರಗಿನ ಗುರುಗಳ ಅವಕಾಶವಿಲ್ಲ. ಅವರ ಗುಂಪಿನಲ್ಲಿಯೇ 'ತಮ್ಮಡಿ' ಆ ಕೆಲಸವನ್ನು ಮಾಡುತ್ತಾನೆ. ಆದರೆ ಇತ್ತೀಚೆಗೆ ಕಾಲಕ್ರಮೇಣ ಸೋಲಿಗರಲ್ಲಿಯೂ ಸಹ ತಮ್ಮಡಿ ಕೆಲಸವನ್ನು ಹೊರಗಿನ ಮುಂದುವರಿದ ಸಮುದಾಯದ, ಪೂಜಾರಿಯ ಹೆಸರಿನಲ್ಲಿ, ಮದುವೆ, ದೇವಸ್ಥಾನ, ಪೂಜೆ, ವಿಶೇಷ ಹಬ್ಬದ ಪೂಜೆ ಇನ್ನೂ ಮುಂತಾದ ಆಚರಣೆಗಳನ್ನು ಮಾಡುತ್ತಿರುವುದನ್ನು ಕಾಣಬಹುದು.

ಸೋಲಿಗ ಸಮುದಾಯದಲ್ಲಿ ಹಲವಾರು ಬಗೆಯ ಹಬ್ಬದ ಆಚರಣೆಗಳು, ಕಲೆ, ಸಂಸ್ಕೃತಿ ತಮ್ಮದೇ ಆದ ಜೀವನಶೈಲಿ ಕಾಡಿನ ಪರಿಸರದೊಂದಿಗಿನ ಅನ್ಯೋನ್ಯ ಜೀವನದೊಂದಿಗೆ ಹೆಣೆದುಕೊಂಡು

ಬಂದಿರುವ ಜೀವನಶೈಲಿ ಪ್ರತಿಯೊಂದು ಸೋಲಿಗ ಕುಟುಂಬವು ತಮ್ಮದೇ ಶೈಲಿ, ವಿಧಾನಗಳ ಮೂಲಕ ಹಬ್ಬಗಳ ಆಚರಣೆಯನ್ನು ಮಾಡುತ್ತಿದ್ದಾರೆ. ಇವುಗಳ ಜೊತೆಗೆ ಇಂದಿನ ಹೊರ ಸಮಾಜದ ಸಂಪರ್ಕದೊಂದಿಗೆ ಬೆರೆತು ಮೂಲ ಹಬ್ಬಗಳ ಆಚರಣೆಯ ರೀತಿ, ನೀತಿ, ವಿಧಾನಗಳನ್ನು ಮರೆತುಹೋಗುತ್ತಿರುವುದನ್ನು ಸಹ ಗಮನಿಸಬಹುದಾಗಿದೆ. ಸೋಲಿಗರ ಸಂಸ್ಕೃತಿಯನ್ನು ಹಬ್ಬಗಳ ಆಚರಣೆಯನ್ನು ಬರವಣಿಗೆಯ ರೂಪದಲ್ಲಿ ತರಲು ಅವರಲ್ಲಿ ಶಿಕ್ಷಿತರ ಕೊರತೆ ಹಾಗೂ ಆಸಕ್ತಿಯೂ ಸಹ ಕಡಿಮೆ. ಆದುದರಿಂದ ಇವುಗಳ ಸಂರಕ್ಷಣೆಗೆ ಎಲ್ಲರ ಸಹಮತ ಸಹಕಾರ ಬೇಕು. ಅಲ್ಲದೆ ಸರಕಾರ ಇತ್ತ ಕಡೆ ಗಮನಹರಿಸಿ ಸೋಲಿಗರ ಕಲೆ, ಸಂಸ್ಕೃತಿ, ಹಬ್ಬಗಳ ಆಚರಣೆಯನ್ನು ಉಳಿಸಿ, ಬೆಳೆಸಿ ಮುಂದಿನ ಪೀಳಿಗೆಗೂ ಅದರಲ್ಲಿರುವ ಒಳ್ಳೆಯ ಅಂಶಗಳನ್ನು ತೆಗೆದುಕೊಂಡು ಹೋಗಲು ಸಹಕರಿಸಬೇಕು. ಆಗ ಮಾತ್ರ ಸೋಲಿಗರ ಹಬ್ಬದ ಆಚರಣೆಗಳು ಮುಂದಿನ ಪೀಳಿಗೆಗೆ ಉಳಿಯುತ್ತದೆ.

### ೬.೨. ಸೋಲಿಗರ ವೈದ್ಯ ಪದ್ಧತಿ

ಸೋಲಿಗ ಬುಡಕಟ್ಟು ಸಮುದಾಯವು ಬಹಳ ಹಿಂದಿನಿಂದಲೂ ತಮ್ಮದೇ ಆದ ಪಾರಂಪರಿಕ ವೈದ್ಯ ಪದ್ಧತಿಯನ್ನು ಅಳವಡಿಸಿಕೊಂಡು ಬಂದಿದೆ. ಸೋಲಿಗರು ನಾಡವರನ್ನು ಕಂಡರೆ ವಿಪರೀತ ಭಯವಿದುದ್ದರಿಂದ ಇವರು ನಾಡ ಜನರ ಸಂಪರ್ಕಕ್ಕೆ ಬಾರದೆ ಕಾಡು–ಮೇಡುಗಳಲ್ಲಿ ಜೀವನ ಸಾಗಿಸಲಾರಂಭಿಸಿದ್ದು ಇಂತಹ ಸಂದರ್ಭದಲ್ಲಿ ಅವರಿಗೆ ಅನಾರೋಗ್ಯ ಸಂಭವಿಸಿದಾಗ, ಕಾಡುಪ್ರಾಣಿಗಳು ದಾಳಿ ಮಾಡಿದಾಗ, ಮರದಿಂದ ಆಕಸ್ಮಿಕವಾಗಿ ಕೆಳಗೆ ಬಿದ್ದು ಗಾಯವಾದಾಗ, ಇನ್ನಿತರೇ ಯಾವುದೇ ಸಮಸ್ಯೆಗಳಿಗೂ ಬೇರೆ ಯಾವ ದಾರಿಯನ್ನು ಕಾಣದೆ ಕೊನೆಗೆ ಕಾಡಿನಲ್ಲಿ ಸಿಗುವ ನಾರು–ಬೇರು, ಹುಲ್ಲು–ಸೊಪ್ಪು, ಹಣ್ಣು–ಕಾಯಿ, ಮರದ ಚೆಕ್ಕೆಗಳನ್ನು ಔಷಧಿಯನ್ನಾಗಿ ಉಪಯೋಗಿಸಿಕೊಂಡು ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಿದ್ದರು. ಖಾಯಿಲೆಗಳು ಮನುಷ್ಯನಷ್ಟೇ ಪುರಾತನವಾದುದು. ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ? ಎಂದು ಗಾದೆ ಇರುವಂತೆಯೇ ಮನುಷ್ಯನಿಗೆ ಬರುವ ಖಾಯಿಲೆಗಳ ಸಂಖ್ಯೆಯೇ ಹೆಚ್ಚು. ಆಧುನಿಕ ನಗರವಾಸಿಗಳಿಗಿಂತಲೂ ಆದಿಮಾನವನಿಗೆ ರೋಗನಿರೋಧಕ ಶಕ್ತಿ ಹೆಚ್ಚಾಗಿರುವುದು ಸಹಜ. ಆದರೂ ಸಹ ಆದಿವಾಸಿಗಳ ಜೀವನ ಕ್ರಮ ಬದಲಾದಂತೆ ಅವರನ್ನು ಬೆನ್ನುಹತ್ತಿದ ಖಾಯಿಲೆಗಳ ಸಂಖ್ಯೆ ಕಡಿಮೆ ಏನಿಲ್ಲ.

"ಭಾರತೀಯ ವೈದ್ಯಪದ್ಧತಿ ಎಷ್ಟು ಪ್ರಾಚೀನ ಎಂಬುದಕ್ಕೆ ಇಂತಹ ವೈದ್ಯ ಗ್ರಂಥಗಳು ಮುಖ್ಯ ಸಾಕ್ಷಿಯಾಗುತ್ತವೆ. ಚರಕ, ಸುಶ್ರುತ ಮೊದಲಾದ ತಜ್ಞ ವೈದ್ಯರ ಅಥರ್ವಣ ವೇದದ ಕಾಲವನ್ನು ಖಚಿತವಾಗಿ ಹೇಳುವುದು ಕಷ್ಟವಾಗಿದೆ. ಆದರೂ ಆದಿಮಾನವನ 'ಗುಹಾ' ಚಿತ್ರಗಳಲ್ಲಿ ಬೇಟೆ–ಮಾಟಕ್ಕೆ ಸಂಬಂಧಿಸಿದ ಚಿತ್ರಗಳಿವೆ ಎಂದು ಅಧ್ಯಯನಕಾರರು ಅಂದಾಜಿಸಿರುವ ಹಿನ್ನೆಲೆಯಲ್ಲಿ ಕೆಲವೊಂದು 'ವೈದ್ಯವು' ಅಷ್ಟು ಪ್ರಮುಖವಾದುದಾಗಿದೆ. ಆಯುರ್ವೇದಕ್ಕಿಂತಲೂ ಪ್ರಾಚೀನವಾದುದು ಜಾನಪದ ವೈದ್ಯ ಪದ್ಧತಿ. ಜಾನಪದಕ್ಕೆ ಹೋಲಿಸಿದರೆ ಆಯುರ್ವೇದವು ಹೆಚ್ಚು ಸಾಧಿತವಾದ ವೈಜ್ಞಾನಿಕ ಅಂಶಗಳನ್ನು ಒಳಗೊಂಡ ವೈದ್ಯ ಮೂಲವೇ? ಎಂದು ಕೆಲವರು ಹೇಳುವುದುಂಟು ಆದರೆ, ಅಷ್ಟೇ ಪುರಾತನವಾದ ಪಾರಂಪರಿಕವಾದ ವೈದ್ಯ ಪದ್ಧತಿಯನ್ನು ಸೋಲಿಗರು ಅನಾದಿಕಾಲದಿಂದಲೂ ಮಾಡಿಕೊಂಡು ಬರುತ್ತಿದ್ದಾರೆ.

"ಆದಿವಾಸಿಗಳಲ್ಲಿನ (Tribel Folk Medicine) ವೈದ್ಯಪದ್ಧತಿಯ ಉಲ್ಲೇಖಗಳೆಷ್ಟೋ ಅಥವಾ ವಲಸೆಯೇ ಪ್ರಧಾನವಾಗಿಟ್ಟುಕೊಂಡು ಬಂದ ಅಲೆಮಾರಿಗಳ ಬುಡಕಟ್ಟುಗಳ ವೈದ್ಯಕೀಯ ಪದ್ಧತಿಯೇ?

(Nomadic Tribal Folk Medicine) ಅಥವಾ ಇತ್ತ ಆದಿವಾಸಿಯೂ ಅಲ್ಲದ ಅತ್ತ ನಗರವಾಸಿಗಳೂ ಅಲ್ಲದ ಸರಳ ಜೀವನವನ್ನು ಬದುಕುತ್ತಿರುವ ಹಳ್ಳಿವಾಸಿಗಳ ವೈದ್ಯಪದ್ಧತಿಯೇ(Village Folk Medicine) ಮನೆ ಎಂದಾಗ ಒಂದು ನಿರ್ದಿಷ್ಟ ವ್ಯವಸ್ಥೆಯಲ್ಲಿ ಶಿಸ್ತಿನಿಂದ ಕ್ರಮವಾಗಿ ವೈದ್ಯವನ್ನು ಅಭ್ಯಾಸ ಮಾಡಿರಬಹುದಾದ ಶಿಷ್ಯರೆಂದು, ಆದಿವಾಸಿಗಳಲ್ಲಿ ಈ ವೈದ್ಯರನ್ನು **'ಷಾಮನ್ನ'**ರೆಂದು ಅಥವಾ **'ಮಾಂತ್ರಿಕ ವೈದ್ಯ'**ರೆಂದು ಕರೆಯುತ್ತಾರೆ. ಶಿಕ್ಷಣದ ಬಗ್ಗೆ ಹೇಳುವಾಗ ಆದಿವಾಸಿಗಳಲ್ಲಿ ಇವರು **'ಷಾಮನ್ನ'**ರಾಗಿಯೇ ಇಲ್ಲವೇ **'ಮಾಂತ್ರಿಕ ವೈದ್ಯ'**ರಾಗಿಯೇ ಅರ್ಹತೆಯನ್ನು ಪಡೆಯುವುದನ್ನು ಕಾಣಬಹುದು. ಕೆಲವು ಆದಿವಾಸಿಗಳಲ್ಲಿ Scarification incision Ceremonie ಆಚಾರ–ವಿಚಾರ, ವಿಧಿ, ಕ್ರಿಯೆಗಳು ಈ ಸ್ಥಾನವನ್ನು ಮತ್ತು ಗೌರವವನ್ನು ತಂದುಕೊಡುತ್ತವೆ. ಉದಾಹರಣೆಗೆ ಎಸ್ಕಿಮೊ ಜನಾಂಗದಲ್ಲಿ ಮತ್ತು ಆಫ್ರಿಕಾದ ಕೆಲವು ಆದಿವಾಸಿಗಳಲ್ಲಿ ಈ ಆಚರಣೆಗಳು ಕಂಡುಬರುತ್ತವೆ."[೨]

'ಪಾರಂಪರಿಕ ವೈದ್ಯ ಜ್ಞಾನ ಒಬ್ಬ ವ್ಯಕ್ತಿಯಿಂದಾಗಲೀ, ಒಂದು ಸಮುದಾಯದಿಂದಾಗಲೀ ಬೆಳೆದು ಬಂದಿರುವಂತಹದ್ದಲ್ಲ. ಈ ಜ್ಞಾನಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ವೈದ್ಯಕೀಯ ಪರಂಪರೆಗೆ ಆದಿವಾಸಿಗಳ ವೈದ್ಯ ಪದ್ಧತಿ ವಿಶೇಷವಾದ ಕೊಡುಗೆ ನೀಡಿದೆ. ವೈದ್ಯ ವಿದ್ಯೆ ಸಿಂಧೂ ಸಂಸ್ಕೃತಿ, ವೇದ ಸಂಸ್ಕೃತಿಗಳಲ್ಲಿ ರೂಪ ಪಡೆಯುವುದಕ್ಕಿಂತ ಮೊದಲೇ ಆದಿವಾಸಿ ಸಮುದಾಯಗಳಲ್ಲಿ ವೈದ್ಯ ಪದ್ಧತಿಯನ್ನೇ ಅಧ್ಯಯನಕ್ಕೊಳಪಡಿಸಿ ಪರಿಷ್ಕರಿಸಿ ಅದಕ್ಕೆ 'ಆಯುರ್ವೇದ' ಎಂದು ಹೆಸರಿಸಿದರು. ಇದನ್ನು ಗಮನಿಸಿದಾಗ ಭಾರತ ದೇಶದಲ್ಲಿನ ಬುಡಕಟ್ಟು ಸಮುದಾಯಗಳು ವೈದ್ಯ ಪದ್ಧತಿಯಲ್ಲಿ ಮೊದಲಿಗರು ಎಂಬುದನ್ನು ತಿಳಿಯಬಹುದು. ಅದರಲ್ಲಿಯೂ ಕಾಡಿನ ಮಧ್ಯದಲ್ಲಿ ವಾಸಿಸುತ್ತಿರುವ ಸೋಲಿಗರು ಅದೆಷ್ಟೋ ಬಗೆಯ ವೈದ್ಯಕೀಯ ಪದ್ಧತಿಯ ಆಚರಣೆಗಳನ್ನು ಇಂದಿಗೂ ರೂಢಿಸಿಕೊಂಡು ಬರುತ್ತಿದ್ದಾರೆ. ಸೋಲಿಗರು ತಮ್ಮದೇ ಆದ ವೈದ್ಯ ಪದ್ಧತಿಯನ್ನು ಪ್ರಸ್ತುತದಲ್ಲಿಯೂ ಮಾಡುತ್ತಾರೆ. ಹಲವಾರು ಖಾಯಿಲೆಗಳಿಗೆ ಕಾಡಿನ ಪರಿಸರದಲ್ಲಿಯೇ ಔಷಧಿಯನ್ನು ಕೊಡುತ್ತಾರೆ.

**೬.೨.೧. ಸೋಲಿಗರ ವೈದ್ಯ ಪದ್ಧತಿಯ ವರ್ಗೀಕಣ**

**ದೇವರು ಕೇಳುವುದು:** ಸೋಲಿಗರು ತಮ್ಮ ಕುಟುಂಬದಲ್ಲಿ ಅಥವಾ ಸಮುದಾಯದಲ್ಲಿ ಯಾರಿಗಾದರೂ ಆರೋಗ್ಯ ಸರಿ ಇಲ್ಲದಿದ್ದಾಗ ಮೊದಲು ಹೋಗುವುದು ತಮ್ಮ ದೇವರುಗಳ ಹತ್ತಿರ. ದೇವರಿಗೆ ಧೂಪ–ದೀಪ ಹಚ್ಚಿ ತಮ್ಮ ಕಷ್ಟ–ಸುಖಗಳ ಬಗ್ಗೆ ದೇವರನ್ನು ಮೈಮೇಲೆ ಆಹ್ವಾನಿಸಿಕೊಂಡು ಮಾತನಾಡಿ ಸಮಾಧಾನಪಟ್ಟುಕೊಳ್ಳುತ್ತಾರೆ. ನಂತರ ದೇವರ ಅಪ್ಪಣೆ ಪಡೆದು ತಮ್ಮದೇ ಆದ ನಾರು–ಬೇರು ಔಷಧಿಗೆ ಮೊರೆಹೋಗುತ್ತಾರೆ.

"ಒಂದು ಜನವರ್ಗದ(ಬುಡಕಟ್ಟಿನ) ಮತ್ತು ಪರಂಪರಾಗತ ವೈದ್ಯರನ್ನು, 'ಜನಪದ ವೈದ್ಯ' ಎಂಬುದಾಗಿ ವ್ಯಾಪಕ ಅರ್ಥಲ್ಲಿ ಹೇಳಬಹುದು. ಜನಪದ ವೈದ್ಯದಲ್ಲಿ ಬಳಕೆಯಾಗುವ ಕಚ್ಚಾಮದ್ದುಗಳು ಸಾಮಾನ್ಯವಾಗಿ(ಸುಲಭವಾಗಿ) ದೊರೆಯುವಂತಹವುಗಳಾಗಿರುತ್ತದೆ. ಅವುಗಳ ವಿಧಾನ ಮತ್ತು ಉಪಯೋಗಿಸುವ ಕ್ರಮವು ಬಹಳ ಸರಳವಾಗಿರುತ್ತದೆ. ಹಾಗೂ ಅದರ ಫಲಿತಾಂಶವು ಅತೀ ಫಲಕಾರಿಯಾಗಿರುತ್ತದೆ."[೩]

ಕಾಡಿನ ನಾರು-ಬೇರು ಹಸಿರು ಸೊಪ್ಪಿನ ತೇರಣ(ತಿಕ್ಕಿ) ಹೊಟ್ಟೆನೋವಿಗೆ, ನೆಗಡಿ, ಜ್ವರ, ತಲೆ-ಇರಿತ, ಹೊಟ್ಟೆಕಳೆ(ಬೇಧಿ), ಮೈಕೈ ನೋವಿಗೆ, ಕಾಡಿನಲ್ಲಿ ಸಿಗುವ ಗಿಡಮೂಲಿಕೆಗಳಿಂದ ಔಷಧಿ ತಯಾರಿಸಿ, ಕುಡಿಸುತ್ತಾರೆ. ಹೀಗೆ ದೇವರು ಕೇಳುವುದು ಮತ್ತು ನಾರು-ಬೇರು ಔಷಧಿ ಈ ಎರಡರ ಮೂಲಕವೇ ಸೋಲಿಗರು ಆರೋಗ್ಯ ಕಾಪಾಡಿಕೊಳ್ಳುತ್ತಾರೆ. ಈ ಎರಡರಲ್ಲೂ ಮುಖ್ಯವಾಗಿ ತಮ್ಮ ದೇವರುಗಳ ಮೇಲೆಯೇ ಹೆಚ್ಚು ನಂಬಿಕೆ ಇಟ್ಟುಕೊಂಡು ಬದುಕುತ್ತಾರೆ.

**ಕಾಯಿಲೆ ಬಂದಾಗ ಸೋಲಿಗರು ದೇವರ ಕೇಳುವುದು ಅಥವಾ ಬೇಡುವುದು:** ಇವುಗಳಲ್ಲಿ ಹಲವಾರು ಅಂಶಗಳನ್ನು ಗಮನಿಸಬಹುದಾಗಿದೆ. ಸೋಲಿಗರು ತಮ್ಮ ಸಮುದಾಯಕ್ಕೆ ತಕ್ಕಹಾಗೆ ಹಲವಾರು ವಿಧಾನಗಳನ್ನು ಅನುಸರಣೆ ಮಾಡುತ್ತಾರೆ. ಅವುಗಳೆಂದರೆ, ಕಣಿಬುಡದು. ಮಾಟಣೆ ಬುಡಸದ, ಗುಂಜಿಹೊಡೆಯದು, ಸಾರಾಗೊಡೆಯಶದು ಅಥವಾ ದೂರ ಮಾಡುವುದು, ಮೈಮೆಲೆ ದೇವರು ಅವತಾರಿಸದು, ಮಾರಿಮಸಣಿ ಬಂದಾಗ ಬೇವಿನಸೊಪ್ಪು ಮತ್ತು ಅರಿಶಿಣದಲ್ಲಿ ತೊಳೆದು, ಕೋಳಿ ಹರಕೆ ಬೀಡಾದು, ಪಿಲ್ಲಿ ಎತ್ತದು(ಭೂಮಿ ಪೂಜೆ), ದೈಯಾ ಬಿಡಿಸಾದು, ಮನೆದೇವರಿಗೆ ಪೂಜೆ, ಧೂಪ ಹಾಕುವುದು, ಎಡೆ ಹಾಕುವುದು, ಹರಣಶಾಸ್ತ್ರ(ಕಂಚಿನ ತಟ್ಟೆ) ಹರಿಯುವ ಹಳ್ಳದಲ್ಲಿ ಪೂಜೆ ಮಾಡಿ ಕಷ್ಟ ನಿವಾರಣೆ ಮಾಡುವಂತೆ ದೇವರಲ್ಲಿ ಬೇಡುವುದು.

**ಕಣಿ ಬಿಡುವುದು:** ಸೋಲಿಗರು ತಮ್ಮ ಕುಟುಂಬದಲ್ಲಿ ಯಾರಿಗಾದರೂ ಹುಷಾರು ಇಲ್ಲದಿದ್ದಾಗ ಆರೋಗ್ಯ ಕೆಟ್ಟಾಗ ತಮ್ಮಡಿ ಹತ್ತಿರ ಹೋಗುತ್ತಾರೆ. ಹೋಗಿ ೩೦ ಬೆಣಚುಕಲ್ಲು ತಂದು ತಮ್ಮಡಿ ಬಳಿ ಬಿಡಿಸಿ ಆ ಲೆಕ್ಕ ದೆವ್ವದಿಂದ ಬಂದದ್ದೋ ಅಥವಾ ಬೇರೆ ಕಡೆಯಿಂದ ಬಂದಿರುವುದೋ ಎಂದು ತಿಳಿಯುತ್ತಾರೆ.

**ಮಾಟಣೆ:** ಯಾರೊಬ್ಬರು ಖಾಯಿಲೆ ಬಂದಾಗ(ಬರಲಿ ಎಂದು) ಮಾಡಿಸಿನರೆ(ಮಾಡಿಸಿದರೆ) ಕಾಯಿ, ಕಳ್ಳೆ, ಬೆಲ್ಲ, ೭ ತರಹದ ಹೂವು, ೭ ಬಣ್ಣದ ಪೂಜೆ ಎತ್ರೋಗಿ ದೇವರು ಬಂದಾಗ ತಮ್ಮಡಿ ಹತ್ತಿರ ಕಳುಹಿಸಿ ಪೂಜೆ ಮಾಡಿಸಿ ಹೋಗಲಾಡಿಸುವುದು.

**ಗುಂಜಿ ಹೊಡೆಯುವುದು:** ಮೊರ ತುಂಬ ಗುಲಗಂಜಿ ತುಂಬಿ ತಮ್ಮಡಿ ಗುಂಜಿ ಹೊಡೆದು ಕಾಯಿಲೆ ಖಸಾಲೆ ಹುಷಾರು ತಪ್ಪಿದವರ ಗುಂಜಿ ಹೊಡೆದು ದೇವರು ಬಂದಾಗ ಕಣಪ (ಕಳಪ್ಪು) ಹಾಕಿ ಕೇಳುವುದಕ್ಕೆ ಗುಂಜಿ ಹೊಡೆಯೋದು ಎಂದು ಕರೆಯುತ್ತಾರೆ.

**ಸಾರಾಗೊಡೆಯದ(ದೂರ ಮಾಡುವುದು):** ದೆವ್ವ-ಪ್ರೇತ ಹಿಡಿದಾಗ ಪೊರಕೆ ಕಕ್ಕೆ ಸೊಪ್ಪು, ಎಕ್ಕದಸೊಪ್ಪು ಇವೆಲ್ಲಾ ಸೇರಿಸಿ ಮಂತ್ರಿಸಿ (ಗಾಳಿ ಮಂತ್ರ) ಇಳಿತೊಡೆದು ಸೆರಗನ್ನು ಹೊಡೆದು ಬಿಡುವುದು.

**ಮೈಮೇಲೆ ದೇವರು ಬರುವುದು:** ವಾರದ ಪೂಜೆ(ಸೋಮವಾರ- ಇದನ್ನು ದೊಡ್ಡವಾರ ಎಂದು ಶುಕ್ರವಾರ ಚಿಕ್ಕವಾರ ಎಂದು) ಪೂಜೆ ಮಾಡಾಗ ದೇವರ ಕರಸಿ ಕಷ್ಟ-ಸುಖ ಎಲ್ಲವನ್ನೂ ಕೇಳುವುದು.

**ಮಾರಿ ಮಸಣಿ ಬಂದಾಗ:** ಬೇವಿನ ಸೊಪ್ಪು, ಅರಿಶಿಣ, ಕುಂಕುಮ ತೆಗೆದುಕೊಂದು ತಮ್ಮಡಿ ಬಳಿ ತೆರಳಿ ಹೋಗಿ, ಹಿರಿಯರು, ಅಯ್ಯಂದಿರು, ಸಗ್ಗದವರ ಮಾತು ಕೇಳಿ ಕೋಳಿ ಕಾಲ ತೊಳೆದು ಮಾರಿಗೆ ಕಾಣಿಕೆ ಕಟ್ಟೋದು.

**ಪಿಲ್ಲಿ ಎತ್ತುವುದು:** ಮಣ್ಣಿನಿಂದ ಗೊಂಬೆ ಮಾಡಿ ಹಾಕಿದಾಗ ದೇವರು ಬಂದು ಪಿಲ್ಲಿ ಎಲ್ಲಿ ಎಂದು ನಾಗಬೆತ್ತ ಗಂಡು ಗತ್ತರಿ ಧರಿಸುರು ಪಿಲ್ಲಿ ಇರ(ಇರುವ) ತಾನದಲ್ಲಿ(ಸ್ಥಳ) ನಾಗಬೆತ್ತದಲ್ಲಿ ತೋರಿಸಿ ಎತ್ತುವುದು.

**ದೆವ್ವ ಬಿಡಿಸುವುದು:** ಮಸಾಣ ಹಾಗೂ ಗಾಳಿ ಹಿಡಿದಾಗ ಕೂಗುತ್ತಾ ದೇವರು ಬಂದು ಗುಂಡು ಎತ್ತಿಸುವುದು, ಕೆಂಡ ತುಳಿಸುವುದು ಬುರುಡೆ ಕರೆದು ಗಾಳಿಯನ್ನು ಕಟ್ಟುಹಾಕಿ ಗೊಂಬೆಗೆ ತೂರಿಸಿ ಮೈಮೇಲೆ ಹಿಡಿದಿರುವ ದೆವ್ವವನ್ನು ಬಿಡಿಸುವುದು(ಓಡಿಸುವುದು).

ಜಡೆಸ್ವಾಮಿ, ಕಾರಪ್ಪ(ಕಾರಯ್ಯ) ಕೇತಪ್ಪ, ಕುಂಟೇಶ್ವರ, ಕುರಿಜುಂಜನಮ್ಮ, ಏಳುಕೇರಿ ಮಾರಮ್ಮ, ನಡುವಾಲದವ್ವಾ, ಹುಲಿಮಾರಮ್ಮ, ಸೀಗನಮುಂಟಿ ಮಾರಮ್ಮ ಇನ್ನೂ ಮುಂತಾದ ದೇವರುಗಳಿಗೆ ಪಂಚಾಂಮೃತ ಅವುಶೇಖ(ಅಭಿಷೇಕ) ಗಂಡುದೇವರಿಗೆ, ಹೆಣ್ಣುದೇವರಿಗೆ ಅಂದರೆ ಮಾರಿಗೆ; ಕುರಿ, ಕೋಳಿ, ಕೊಯ್ದಿ ಪೂಜೆ ಮಾಡುವುದು. ಸಣ್ಣ ಮರಿ ತೆಗೆದು ಗಂಡು ದೇವರಿಗೆ ಬಿಡುವುದು ೨-೩ ವರ್ಷಕ್ಕೊಮ್ಮೆ ಕೆಲವೊಂದು ಹಬ್ಬಗಳನ್ನು ಆಚರಿಸುತ್ತಾರೆ. ಕೆಲವು ಹಬ್ಬಗಳನ್ನು ಮನೆ, ಮನೆಗೆ ಸರದಿ ಎತ್ತಿ (ಹಣ ವಸೂಲಿ ಮಾಡ) ಎತ್ತಿ ಮರಿಹೊಡೆದು ಪೂಜೆ ಮಾಡುತ್ತಾರೆ. ಕೂಳೆ ಮಾರಿ ಹಬ್ಬವನ್ನು ಪ್ರತೀ ವರ್ಷವೂ ಆಚರಿಸುತ್ತಾರೆ.

**ಹಳ್ಳದಲ್ಲಿ ಪೂಜೆ:** ಹೂವು, ಪತ್ರೆ, ಅರಿಶಿಣ, ಕುಂಕುಮ, ಉಬಾತಿ(ವಿಭೂತಿ) ಹಚ್ಚಿ ಗಂಗೆ ಪೂಜೆ ಮಾಡಿ ಮಾರಿ ಬಂದಿರಾವ ಗಾಳಿ ಪಿಚಾಚಿ, ದ್ಯೆಯ ಎಲ್ಲಾ ನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತದೆ. ಎಂದು ನಂಬಿ ಪೂಜೆ ಮಾಡುವುದು.

**ಧೂಪ ಹಾಕುವುದು:** ಹುಷಾರು ಇಲ್ಲದಿರುವಾಗ ಅಥವಾ ಗಡು ಆದಲೆ(ತುಂಬಾ ಸೀರಿಯಸ್) ದೇವರಿಗೆ, ಮುನಿಯಪ್ಪ, ಮೀಸಲು ಮಾಡದೆ(Without Food Even Water) ಮಡಿಯಿಂದ ಪೂಜೆ ಮಾಡಿ ಧೂಪ ಹಾಕಿ (ಅದರಲ್ಲಿ ಅನೇಕ ವಿಧದ ಧೂಪಗಳಾದ ಕಾನಧೂಪ, ಚಲುವಧೂಪ, ನಾಡ ಧೂಪ, ಜಾಲಧೂಪ, ಇತ್ಯಾದಿ) "ನಾನು ಹುಷಾರಾದಲೆ ನಿನಗೆ ಹರಕೆ ಹಾಕಿಸ್ತಿನಿ ಎಂದು ಹೇಳಿ ಧೂಪಹಾಕಿ ಕಾಣಿಕೆಯನ್ನು ಹಳ್ಳದ ಹತ್ತಿರ ನೀರು ಹರಿಯುವ ಜಾಗದಲ್ಲಿ ತೆಗೆದುಕೊಂಡು ಹೋಗಿ ಕಟ್ಟುವುದು.

**ಎಡೆ ಹಾಕೋದು:** ರೊಟ್ಟಿ, ಕುಂಬಳಕಾಯಿ, ಗೆಣಸು, ಬಾಳೆಹಣ್ಣು ಎಲ್ಲಾ ರೀತಿಯ ಪೂಜೆ ಸಾಮಾನುಗಳನ್ನು ಇಟ್ಟು ದೇವರನ್ನು(ಕಲ್ಲನ್ನು) (ಇತ್ತೀಚೆಗೆ ಕಂಚು ಇತ್ಯಾದಿ) ಹಾಲು ಅಥವಾ ನೀರಿನಲ್ಲಿ ತೊಳೆದುಹಾಲು ಮೊಜ್ಜನ ಮಾಡಗಿ ಪೂಜೆ ಮಾಡೋದು. ದೇವರೇ ನನ್ನ ಖಾಯಿಲೆಯನ್ನು ವಾಸಿ ಮಾಡು ಎಂದು ಕೇಳಿಕೊಳ್ಳುವುದು.

ಹೀಗೆ ಸೋಲಿಗರು ಕುಟುಂಬದಲ್ಲಿ ಯಾರಿಗಾದರೂ ಹುಷಾರಿಲ್ಲದಿರುವಾಗ, ಖಾಯಿಲೆ ಬಂದಾಗ ಅವರು ಮೊದಲು ಮೊರೆಹೋಗುವುದು ತಮ್ಮ ತಮ್ಮ ದೇವರುಗಳ ಹತ್ತಿರ. ಮೊದಲು ಅವರಿಗೆ ಪೂಜೆ ಸಲ್ಲಿಸಿ, ವರ ತೆಗೆದುಕೊಂಡು ನಂತರ ಅವರ ಸಗ್ಗದ ಮನೆಯವರ ಹತ್ತಿರ ಹೋಗುತ್ತಾರೆ.

**ಸಗ್ಗದ ಮನೆಯವರು**

ಸಗ್ಗದ ಮನೆಯವರು ಅಂದರೆ, ಮರಣ ಹೊಂದಿದವರು. ಸ್ವರ್ಗದ ತಮ್ಮ ಮನೆಯಲ್ಲಿರುತ್ತಾರೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಕುಟುಂಬದಲ್ಲಿ ಮರಣ ಹೊಂದಿದ ಹಿರಿಯರಾದ ತಾತ, ಮುತ್ತಾತ, ಅಪ್ಪ ಇತ್ಯಾದಿ ಅವರಲ್ಲರನ್ನೂ ಗುಂಜಿ, ಬುರುಡೆ ಕರೆದು ಗುಡ್ಡಪ್ಪ ಅಥವಾ ಪ್ರೀತಿಪಾತ್ರರಾದ ಮನೆಯ ಇತರೇ ಸದಸ್ಯರ ಮೈಮೇಲೆ ಮೈದುಂಬಿಸಿ ಮಾತನಾಡುತ್ತಾ ಸಂಭಾಷಣೆ ಮಾಡುತ್ತಾರೆ. ಅವರಿಗೆ ಇಷ್ಟವಾದ ತಿಂಡಿ, ಬೀಡಿ, ಬಂಗಿ, ಎಲೆ–ಅಡಿಕೆ ಹೊಗೆಸೊಪ್ಪು ಕೊಟ್ಟು ತಮ್ಮ ಮನೆಯವರಿಗೆ ಬಂದಿರುವ ಖಾಯಿಲೆಯ ಬಗ್ಗೆ ವಾಸಿ ಮಾಡುವಂತೆ ಕೇಳಿಕೊಳ್ಳುತ್ತಾರೆ. ಹೀಗೆ ಸಗ್ಗದ ಮನೆಯವರನ್ನು ಕರೆದು ಮಾತನಾಡಿ ತಮ್ಮ ಕಷ್ಟ ಸುಖವನ್ನು ಹಂಚಿಕೊಳ್ಳುತ್ತಾರೆ.

ಬುರುಡೆ ಕರೆಯುವಾಗ ಸೋಲಿಗರಿಗೆ **'ಮೊರ'** ಮುಖ್ಯವಾದುದು. ಮೊರದ ಮೇಲೆಯೇ ಬುರುಡೆಯನ್ನು ಇಡುತ್ತಾರೆ. **ಮೊರ ದೇವರ ಸಂಬಂಧ, ಮೊರದಲ್ಲಿ ತೆಂಗಿನಕಾಯಿ, ಬಾಳೆಹಣ್ಣು, ಗಂಧದ ಕಡ್ಡಿ, ಎಲೆ ಅಡಿಕೆ** ಪಕ್ಕದಲ್ಲಿ **ಬೀಡಿ, ಹೊಗೆಸೊಪ್ಪು, ಸುಣ್ಣ** ಇವುಗಳನ್ನು ಇಟ್ಟಿರುತ್ತಾರೆ.

ತಮ್ಮಡಿಯು ಆ ಮೊರಕ್ಕೆ ಪೂಜೆ ಸಲ್ಲಿಸಿ ಬುರುಡೆಗೆ ನಮಸ್ಕರಿಸಿ ಎರಡು ಕೈಗಳಿಂದ ಬುರುಡೆಯನ್ನು ತೆಗೆದುಕೊಂಡು ನೇರವಾಗಿ ಕೈಗಳನ್ನು ಕುಲುಕುತ್ತಾ ಅನಂತರ ಬಲದ ಕೈ ಎಡಭುಜಕ್ಕೆ ಎಡದ ಕೈ ಬಲಭುಜಕ್ಕೆ ತಾಗಿಸುವಂತೆ ಜೋರಾಗಿ ಗುದ್ದಿ, ಗುದ್ದಿ, ಬುರುಡೆ ಕರೆದು ದೇವರು ಕರೆದು ಮೈಮೇಲೆ ಆಹ್ವಾನಿಸಿಕೊಳ್ಳುತ್ತಾನೆ. ಪಕ್ಕದಲ್ಲಿ ಕುಳಿತಿರುವ ಗಂಡಸರು, ಹೆಂಗಸರು ದೇವರ ಜೊತೆ ಮಾತನಾಡುತ್ತಾರೆ. ಸಂಭಾಷಣೆ ನಡೆಸುತ್ತಾರೆ. ತಮ್ಮ ಕಷ್ಟ ಸುಖ ಹೇಳಿ, ಪರಿಹಾರ ಪಡೆದುಕೊಳ್ಳುತ್ತಾರೆ. ತಮಗೆ ಇಷ್ಟವಾದ ಹಾಗೂ ತಮ್ಮ ತಮ್ಮ ಮನೆದೇವರುಗಳನ್ನು ಕರೆಯುತ್ತಾರೆ.

ಆ ನಂತರ ಕೊನೆಯಲ್ಲಿ ತಮ್ಮ ಕುಟುಂಬದಲ್ಲಿ ಮರಣ ಹೊಂದಿರುವ ವ್ಯಕ್ತಿಗಳ ಸಗ್ಗದ ಮನೆಯವರನ್ನು ಕರೆದು ಮಾತನಾಡಿಸಿ, ಅತ್ತು ಕರೆದು, ಯೋಗಕ್ಷೇಮ ತಿಳಿದುಕೊಂಡು ಮೈ ಬಿಡುತ್ತಾರೆ.

ಈ ರೀತಿಯಲ್ಲಿ ಮಂತ್ರ ಧಾರ್ಮಿಕ ವಿಧಿಗಳಿಂದ ವಾಸಿಯಾಗುವ ಖಾಯಿಲೆಗಳು ಮುಖ್ಯವಾಗಿ ಮನಸ್ಸಿನ ಮೇಲೆ ಸಂಪೂರ್ಣವಾಗಿ ಪ್ರಭಾವ ಬೀರುವಂತಹವು. ಇಲ್ಲಿ ಮುಖ್ಯವಾಗಿ ನೋಡಿದಾಗ ಮಂತ್ರವಾದಿಯಾಗಲಿ, ಶಾಸ್ತ್ರವಾದಿಯಾಗಲಿ, ಮೈದುಂಬಿ ಬಂದ ದೇವತೆಯಾಗಲಿ ಮೊದಲು ನಡೆಸುವ ಮುಖ್ಯ ಕೆಲಸ ಎಂದರೆ **ರೋಗಿಯ ಮನಸ್ಸನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವುದು.** ಇದರಿಂದ ರೋಗಿಯ ಮನಸ್ಸಿಗೆ ತನ್ನ ಖಾಯಿಲೆ ಬೇಗ ವಾಸಿಯಾಯಿತು ಎಂಬ ನಂಬಿಕೆ ಮೂಡುತ್ತದೆ." ಹೀಗೆ ಜನಪದ ವೈದ್ಯದ ವಿವರಗಳನ್ನು ಪರಿಶೀಲಿಸಿದಾಗ ರೋಗಿಗಳಿಗೆ ಪ್ರೇರಣೆಯೇ ಮೂಲವಾಗಿದ್ದು ಮನಸ್ಸಿನ ಪರಿಣಾಮ ದೇಹದ ಮೇಲೆ ಆಗಿರುವುದರಿಂದ ಮನೋದೈಹಿಕ ರೋಗಗಳು ಸಾಕಷ್ಟಿದ್ದು ಇಂತಹ ರೋಗಗಳನ್ನು ಸೋಲಿಗರು ಬುರುಡೆ ಕರೆಯುವ ಆಚರಣೆಯ ಮೂಲಕ ಬಗೆಹರಿಸಿಕೊಳ್ಳುತ್ತಾರೆ.

ಸಗ್ಗದ ಕಲ್ಪನೆ, ಅವರಿಗೂ ಸಗ್ಗದಲ್ಲಿ ನಮ್ಮ ಹಾಗೆ ಜೀವಿಸುತ್ತಾರೆ ಎಂಬ ನಂಬಿಕೆಯು ಸೋಲಿಗರಲ್ಲಿ ಬದುಕಿರುವವರು ಮತ್ತೆ ಸತ್ತ ವ್ಯಕ್ತಿಗಳ ನಡುವಿನ ಒಂದು ಒಳ್ಳೆಯ ಭಾವನೆಯನ್ನು ಮೂಡಿಸುತ್ತದೆ.

✓ ಎಷ್ಟೋ ಮಾನಸಿಕ ಖಾಯಿಲೆಗಳಿಗೆ ಔಷಧಿಯನ್ನು ಕೊಡುವ ಜಾಗವಾಗಿದೆ.

✓ ಯಾರೇ ಆಗಲಿ ತಪ್ಪು ಮಾಡಿದರೆ, ಇಲ್ಲಿ ಕ್ಷಮೆ ಕೇಳಿ, ತಪ್ಪನ್ನು ಒಪ್ಪಿಕೊಂಡು ನಡೆಯುವ ಧೈರ್ಯ ಇಲ್ಲಿ ಬರುತ್ತದೆ.

✓ ಕುಟುಂಬ ಕುಟುಂಬಗಳ ನಡುವೆ ಅವಿನಾಭಾವ ಸಂಬಂಧವಿರುತ್ತದೆ.

ಆದರೆ ಇವುಗಳ ಜೊತೆಗೆ ಕೆಲವೊಂದು ಕೆಟ್ಟ ಪರಿಣಾಮಗಳನ್ನು ಗುರುತಿಸಬಹುದು.

▪ ಯಾರಾದರೂ ವ್ಯಕ್ತಿಗಳಿಗೆ ಖಾಯಿಲೆಯಿಂದಿದ್ದರೆ ಆತ ಅಥವಾ ಆಕೆಯನ್ನು ಬಹು ಬೇಗ ಆಸ್ಪತ್ರೆಗೆ ಕರೆದುಕೊಂಡು ಹೋಗುವುದಿಲ್ಲ. ಮೊದಮೊದಲು ದೇವರು ಕರೆದು, ಕೇಳಿ ಗಾಳಿ, ಗ್ರಹಚಾರ ಕರೆದು ವಿಚಾರಿಸಿ ಮನೆಯಲ್ಲಿಯೇ ಇರುತ್ತಾರೆ.

▪ ಒಂದು ವೇಳೆ ಖಾಯಿಲೆಯು ಉಲ್ಬಣಗೊಂಡು ಆ ವ್ಯಕ್ತಿಯು ತೀರಿಕೊಂಡರೆ, ಆತ ಏನೋ ದೇವರಿಗೆ ತಪ್ಪು ಮಾಡಿದ, ಅಲ್ಲದೆ ಯಾರೋ ಮಾಟ ಮಾಡಿಸಿದ್ದಾರೆ ಎಂದು ತಿಳಿಯುತ್ತಾರೆ.

ಅದೇನೇ ಆದರೂ ಸಹ ಸೋಲಿಗರ ಜನಪದ ವೈದ್ಯರನ್ನು ಗುರುತಿಸಿ ಗೌರವಿಸುವುದು ಮುಖ್ಯವಾಗಿರುತ್ತದೆ. ಸೋಲಿಗರು ನೇರವಾಗಿ ತಮ್ಮ ಔಷಧಿಯ ಗುಟ್ಟನ್ನು ಬೇರೆಯವರಿಗೆ ಬಿಟ್ಟು ಕೊಡುವುದಿಲ್ಲ. "ಶಿಷ್ಟ ವೈದ್ಯ ಜನಪದ ವೈದ್ಯರಿಂದ ಇಂದಿಗೂ ಸಹ ಸೋಲಿಗ ಹಿರಿಯರಲ್ಲಿ ಕಲಿಯಬೇಕಾದ ವಿಷಯ ಅಗಾಧವಾಗಿದೆ. ಹಾಗಾಗಿ ಜನಪದ ಜನಪದ ವೈದ್ಯದ ಸಂಗ್ರಹ ಮತ್ತು ಸಂಶೋಧನೆ ಅನಿವಾರ್ಯವಾಗುತ್ತದೆ. ಈ ಕಾರಣಕ್ಕಾಗಿಯಾದರೂ ಸೋಲಿಗರ ವೈದ್ಯ ಹಾಗು ಬುರುಡೆ ಕರೆಯು ಗುಣಗಳಲ್ಲಿ ಒಳ್ಳೆಯ ಅಂಶಗಳನ್ನು ಉಳಿಸಿ ಬೆಳೆಸುವುದು ಎಲ್ಲರ ಆದ್ಯ ಕರ್ತವ್ಯವಾಗಿದೆ.

**೬.೨.೨. ನಾರು ಬೇರು ಔಷಧಿ ಅಥವಾ ನಾಟಿ ಔಷಧಿ**

ಸೋಲಿಗ ಬುಡಕಟ್ಟು ಸಮುದಾಯವು ಪಾರಂಪರಿಕ ಆರೋಗ್ಯ ಸಂಬಂಧಿ ಆಚರಣೆಗಳನ್ನು ತಲೆ-ತಲಾಂತರದಿಂದ ರೂಢಿಸಿಕೊಂಡು ಬರುತ್ತಿದೆ. ಈಗಲೂ ಸಹ ಅದೆಷ್ಟೋ ಸೋಲಿಗ ಮಹಿಳೆಯರು, ಮಕ್ಕಳು, ಪುರುಷರು ಆಸ್ಪತ್ರೆಗೆ ಹೋಗದೇ ಇರುವುದನ್ನು ಕಾಣಬಹುದು. ಅವರು ಕಾಡಿನಲ್ಲಿಯೇ ಸಿಗುವ ನಾರು-ಬೇರು ಔಷಧಿಯನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ಪ್ರಕೃತಿಯನ್ನೇ ತಮ್ಮ ದೇವರೆಂದು ನಂಬಿ ಬದುಕುತ್ತಿದ್ದಾರೆ. "ವೈದ್ಯ ವಿದ್ಯೆ ಮಾನವನಷ್ಟೇ ಪ್ರಾಚೀನವಾದದ್ದು ಮತ್ತು ಮಾನವನೊಂದಿಗೆ ಹುಟ್ಟಿ ಬಂದಿರುವಂತಹದ್ದು. ಈ ವೈದ್ಯಕೀಯ ಜ್ಞಾನ ಒಬ್ಬ ವ್ಯಕ್ತಿಯಿಂದಾಗಲಿ, ಒಂದು ಸಮುದಾಯದಿಂದಾಗಲಿ ಬೆಳೆದು ಬಂದಿರುವಂತಹದಲ್ಲ. ಈ ಜ್ಞಾನಶಾಖೆಯ ಹಿಂದೆ ಹಲವಾರು ಆದಿವಾಸಿ ಸಮುದಾಯಗಳ ವಿಶಿಷ್ಟವಾದ ಅನುಭವಗಳು ಇವೆ. ಜಗತ್ತಿನ ವೈದ್ಯಕೀಯ ಪರಂಪರೆಗೆ ಆದಿವಾಸಿಗಳ ವೈದ್ಯ ಪದ್ಧತಿ ವಿಶೇಷವಾದ ಕೊಡುಗೆ ನೀಡಿದೆ."[೪]

ಕೆಲವು ರೂಢಿಬದ್ಧ ಆರೋಗ್ಯ ಸಂಬಂಧಿ ಆಚರಣೆಗಳನ್ನು ಸೋಲಿಗರೂ ರೂಢಿಸಿಕೊಂಡು ಬಂದಿದ್ದಾರೆ. ಔಷಧೀಯ ಸಸ್ಯಗಳ ಬಗ್ಗೆ ಸೋಲಿಗರಿಗೆ ಆಳವಾದ ಜ್ಞಾನವಿದೆ. ವಿವಿಧ ಖಾಯಿಲೆಗಳಿಗೆ ಸಂಬಂಧಿಸಿದಂತೆ ಅವರು ೩೦೦ ಕ್ಕೂ ಹೆಚ್ಚು ಗಿಡಮೂಲಿಕೆಗಳನ್ನು ಬಳಸುತ್ತಾರೆ. ರೋಗ ಬರುವುದಕ್ಕೆ ಮತ್ತು ರೋಗ ಗುಣವಾಗುವುದಕ್ಕೆ ಬೇರೆ ಬೇರೆ ದೈವಗಳ ಪ್ರಭಾವ ಇದೆಯೆಂದು ಅವರು ನಂಬುತ್ತಾರೆ.

ಅಷ್ಟೇನೂ ಮಾರಕವಲ್ಲದ ಕಡಿತ(ಕೆರೆತ), ಕುಟುಕು, ಅಲರ್ಜಿ, ಶಿಲೀಂಧ್ರ ಸೋಂಕು ಮತ್ತು ಚರ್ಮದ ಸಮಸ್ಯೆಗಳಿಗೆ ಉಪಯುಕ್ತ ಮೂಲಿಕೆಗಳನ್ನು ಬಳಸುತ್ತಾರೆ. "ಆದಿವಾಸಿಗಳು ಹೆಚ್ಚು ಆರೋಗ್ಯವಂತರಾಗಿರಲು ಅವರು ಸೇವಿಸು ಆಹಾರವೇ ಮೂಲ ಕಾರಣ."

ಸೋಲಿಗರಲ್ಲಿ ಮನೆಮಾತಾದ ಮುದ್ದಿನ ಅಜ್ಜಿ **ಯೆರಕನ ಗದ್ದೆ ಪೋಡು.** ಜಲ್ಲೆ ಸಿದ್ದಮ್ಮ ಅವರ ಪಾರಂಪರಿಕ ಆರೋಗ್ಯ ಸೇವೆ ಅನುಪಮವಾಗಿತ್ತು. ಮೂಲತಃ ಸೂಲಗಿತ್ತಿಯಾದರೂ ಆಕೆಯ ಸಲಹೆ ಮತ್ತು ಸೇವೆ ಅನೇಕ ರಂಗಗಳಿಗೆ ವ್ಯಾಪಿಸಿತು. ಅವರಿಗೆ ಅರಣ್ಯಗಳ ಬಗ್ಗೆ ಅಲ್ಲಿನ ಔಷಧಿಯ ಸಸ್ಯಗಳ ಬಗ್ಗೆ ಹಾಗೂ ಸಸ್ಯಗಳಿಂದ ಔಷಧಿ ಸಿದ್ಧಗೊಳಿಸುವ ಬಗ್ಗೆ ಅಪಾರ ಜ್ಞಾನವಿತ್ತು. ವಿಶೇಷವಾಗಿ ಜಲ್ಲೆ ಸಿದ್ದಮ್ಮ ಹೆರಿಗೆ ಮಾಡಿಸುವುದರಲ್ಲಿ ಪ್ರವೀಣತೆಯನ್ನು ಪಡೆದುಕೊಂಡಿದ್ದರು. ಅವರಿಗೆ ರಾಜ್ಯೋತ್ಸವ ಪ್ರಶಸ್ತಿಯನ್ನೂ ನೀಡಲಾಗಿತ್ತು. ೨೦೦೪ರಲ್ಲಿ ಜಲ್ಲೆಸಿದ್ದಮ್ಮ ನಿಧನಳಾದ ನಂತರ ಅವರ ಮಗಳು ಜಡೆಮಾದಮ್ಮ ಈಗ ಸೂಲಗಿತ್ತಿಯ ಕೆಲಸವನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ.

"ನಾಟಿ ವೈದ್ಯರಿಗೆ ಸಂತರ ಗುಣ ಇರುತ್ತದೆ. ಅವರು ಶ್ರೀಮಂತರನ್ನು ಮತ್ತು ಬಡವರನ್ನು ಒಂದೇ ರೀತಿಯಲ್ಲಿ ನೋಡುತ್ತಾರೆ"

ಸೋಲಿಗರ ಸಾಮಾಜಿಕ ವ್ಯವಸ್ಥೆಯಲ್ಲಿ ವೈದ್ಯಪದ್ಧತಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ. ಅದರಲ್ಲೂ ಪುರುಷರಿಗಿಂತ ಮಹಿಳೆಯರು ಹೆಚ್ಚಿನ ರೀತಿಯಲ್ಲಿ ಪಾರಂಪರಿಕ ಆರೋಗ್ಯ ನಾರು-ಬೇರು ಪದ್ಧತಿಯ ಮೂಲಕ ಕುಟುಂಬದ, ಸಮುದಾಯದ ಆರೋಗ್ಯವನ್ನು ಕಾಪಾಡಿಕೊಂಡು ಬರುತ್ತಾರೆ. ಇದನ್ನು ನೋಡಿದಾಗ ಜಲ್ಲೆ ಸಿದ್ಧಮ್ಮನಂತಹ ಅದೆಷ್ಟೋ ಮಹಿಳೆಯರು ಸಮುದಾಯದಲ್ಲಿ ಎಲೆಮರೆ ಕಾಯಿಯಂತೆ ಈಗಲೂ ಸಹ ಯಾವುದೇ ಧನಸಹಾಯವಿಲ್ಲದೆ ಸಮುದಾಯದ ಪ್ರೀತಿ ಗೌರವಗಳಿಗೋಸ್ಕರ ನಿಸ್ವಾರ್ಥವಾಗಿ ತಮ್ಮ ಕೆಲಸವನ್ನು ಸದ್ದಿಲ್ಲದೆ ಯಾವುದೇ ಪ್ರಚಾರವಿಲ್ಲದೆ ಮಾಡಿಕೊಂಡು ಬರುತ್ತಿದ್ದಾರೆ. ಸೋಲಿಗರ ಗಿಡಮೂಲಿಕಾ ವೈದ್ಯಪದ್ಧತಿಗಳನ್ನು ಗಮನಿಸಿದಾಗ ಅವುಗಳನ್ನು ಈ ರೀತಿಯಲ್ಲಿ ವರ್ಗೀಕರಿಸಬಹುದಾಗಿದೆ.

**೬.೨.೩. ಸಾಮಾನ್ಯ ನಾರು-ಬೇರು ಔಷಧಿ**

ಪ್ರತಿಯೊಂದು ಸೋಲಿಗ ಕುಟುಂಬವು ತನ್ನದೇಯಾದ ಆಯಾ ಪರಿಸರಕ್ಕೆ ತಕ್ಕಹಾಗೆ ಒಂದಲ್ಲ ಒಂದು ಬಗೆಯ ಗಿಡಮೂಲಿಕೆ, ನಾರು-ಬೇರು, ವನೌಷಧಿಯ ರೀತಿಗಳನ್ನು ಗೊತ್ತುಮಾಡಿಕೊಂಡಿರುತ್ತಾರೆ. ಸಾಮಾನ್ಯವಾಗಿ ದಿನನಿತ್ಯದಲ್ಲಿ ಕಾಣಿಸಿಕೊಳ್ಳುವ ಜ್ವರ, ಕೆಮ್ಮು, ನೆಗಡಿ, ತಲೆನೋವು, ಹೊಟ್ಟೆನೋವು, ಶೀತ, ಬೇಧಿ, ಹೊಟ್ಟೆ ಉಬ್ಬರ, ತಲೆಸುತ್ತು ಸಮಸ್ಯೆಗಳ ಬಗ್ಗೆ ಸರಳವಾದ ಚಿಕಿತ್ಸೆಯನ್ನು ಪಡೆದು ಗುಣಪಡಿಸಿಕೊಳ್ಳುತ್ತಾರೆ. ಇಂತಹ ವೈದ್ಯ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ದೈಹಿಕ ಸಮಸ್ಯೆಗಳು ಸಾಮಾನ್ಯವಾಗಿ ಪುರುಷರು, ಮಹಿಳೆಯರು, ಮಕ್ಕಳು ಎಲ್ಲರಲ್ಲಿಯೂ ಕಾಣಿಸಿಕೊಳ್ಳುತ್ತದೆ. ಇವುಗಳಿಗೆ ಸ್ತ್ರೀ-ಪುರುಷರೆಂಬ ಭೇದ-ಭಾವವಿಲ್ಲ.

"ಪ್ರತಿ ಹಳ್ಳಿಯಲ್ಲಿ ಒಬ್ಬಿಬ್ಬರು ನಾಟಿ ವೈದ್ಯರು ಇದ್ದೇ ಇರುತ್ತಾರೆ. ಭಾರತದಲ್ಲಿ ಕನಿಷ್ಠ ೮ ಲಕ್ಷ ಮಂದಿ ನಾಟಿ ವೈದ್ಯರು ಇದ್ದಾರೆ. ಈ ನಾಟಿ ಔಷಧಿಗಳನ್ನು ತಯಾರಿಸುವುದಕ್ಕಾಗಿ ಬಳಸುವ ಔಷಧಿ ಗಿಡಗಳು ಏಳು ಸಾವಿರಕ್ಕೂ ಹೆಚ್ಚು ಇದೆ. ಇವರು ದೇಶದಲ್ಲಿ ನೂರಕ್ಕೆ ಎಪ್ಪತ್ತರಷ್ಟು ಜನರ ಆರೋಗ್ಯ

ಕಾಪಾಡುತ್ತಾರೆ. ಈ ನಾಟಿ ವೈದ್ಯರು ಎಲ್ಲಾ ಜನಾಂಗಗಳಲ್ಲೂ ಇದ್ದಾರೆ. ಹಲವಾರು ರೋಗಗಳನ್ನು ಗುಣಪಡಿಸುತ್ತಾ ಬಂದಿದ್ದಾರೆ. ಇವರಲ್ಲಿ ಬಹಳಷ್ಟು ಮಂದಿಗೆ ಓದು-ಬರಹ ಬರುವುದಿಲ್ಲ. ನಾಟಿ ವೈದ್ಯ ಪದ್ಧತಿಯು ಅತೀ ಕಡಿಮೆ ವೆಚ್ಚದ ಆರೋಗ್ಯ ಪದ್ಧತಿ. ಇದರಿಂದ ದೇಹದ ಮೇಲೆ ಕೆಟ್ಟ ಪರಿಣಾಮ ಆಗುವುದಿಲ್ಲ. ನಾಟಿ ವೈದ್ಯಪದ್ಧತಿ ನಮ್ಮ ಸಂಸ್ಕೃತಿಯಲ್ಲಿ ಬೆರತು ಹೋಗಿದೆ. ಅದು ದೇಶದ ತುಂಬೆಲ್ಲಾ ಹರಡಿದೆ. ಈ ಪದ್ಧತಿಯು ಬಹಳ ಹಿಂದಿನಿಂದಲೂ ಬಂದಿದೆ. ನಾಟಿ ವೈದ್ಯರು ರೋಗಿಗಳ ಮುಂದೆಯೇ ಮದ್ದನ್ನು ತಯಾರಿಸುತ್ತಾರೆ. ಈ ಪದ್ಧತಿಯು ಹಿಂದಿನ ನಾಗರಿಕತೆಯ ಆರೋಗ್ಯ ಪದ್ಧತಿಯಾಗಿದೆ. ಇದಕ್ಕೆ ಜನಪದ ಅಥವಾ ದೇಶೀಯ ಆರೋಗ್ಯ ಪದ್ಧತಿಯೆಂದೂ ಕರೆಯುತ್ತಾರೆ. ಇವರು ಕೊಡುವ ಮದ್ದಿಗೆ ಕೆಲವರು 'ಗಾವಂಟಿ ಔಷಧಿ' ಎಂದು ಕರೆಯುತ್ತಾರೆ."[೭]

**ಸೋಲಿಗರ ಗಿಡಮೂಲಿಕಾ ಔಷಧ ಪದ್ಧತಿಯಲ್ಲಿ ಕಂಡುಬರುವ ಖಾಯಿಲೆಗಳ ಪಟ್ಟಿ ಹಾಗೂ ಗಿಡಮೂಲಿಕಾ ಹೆಸರುಗಳು ಗಿಡಮೂಲಿಕಾ ವೈದ್ಯಪದ್ಧತಿಗಳ ಔಷಧಿಗಳ ಪಟ್ಟಿ:**

ಜ್ವರ, ತಲೆನೋವು, ನೆಗಡಿ, ಕೆಮ್ಮು, ಗಂಟಲು ನೋವು, ಶೀತ, ಹೊಟ್ಟೆನೋವು, ಕಜ್ಜಿ, ಮೈಕೈ ನೋವು ಇತ್ಯಾದಿ ಸೋಲಿಗರಿಗೆ ಬರುವಂತಹ ಸಾಮಾನ್ಯ ಖಾಯಿಲೆಗಳು. ಸೋಲಿಗರಿಗೆ ರಾಗಿಯು ಮುಖ್ಯವಾದ ಆಹಾರವಾಗಿದೆ. ಸೋಲಿಗರು ರಾಗಿಯನ್ನು ಆಹಾರವಾಗಿ ಉಪಯೋಗಿಸುವುದರ ಜೊತೆಗೆ ಇದನ್ನು ಔಷಧಿಯಾಗಿಯೂ ಬಳಸುತ್ತಾರೆ.

**ಕೋಷ್ಟಕ: ೬.೨.೧. ಖಾಯಿಲೆಯ ಹೆಸರು ಸಾಮಾನ್ಯ ಗಿಡಮೂಲಿಕೆ ತಯಾರಿಸುವ ವಿಧಾನ ಬಳಕೆ**

| ಕ್ರಸಂ. | ಖಾಯಿಲೆ | ಔಷಧಿ ಗಿಡಮೂಲಿಕೆ | ತಯಾರಿಸುವ ವಿಧಾನ |
|---|---|---|---|
| ೧ | ಜ್ವರ | ಸುರಾಣಿ ಸೊಪ್ಪು, ನಾಗದಳ್ಳಿ ಸೊಪ್ಪು, ಗುಮಟೆ ಸೊಪ್ಪು | ಎಲ್ಲ ರೀತಿಯ ಸೊಪ್ಪನ್ನು ಅರೆದು ಮೈ, ಕೈಗೆ ಲೇಪನ ಮಾಡಿಕೊಳ್ಳುವುದು. |
| ೨ | ಕೆಮ್ಮು | ಕೆಂದಮರದ ಚೆಕ್ಕೆ, | ಚೆನ್ನಾಗಿ ಗುದ್ದಿ ಬಿಸಿನೀರಿನಲ್ಲಿ ಹಾಕಿ ಸೋಸಿ ಕುಡಿಯುವುದು. |
| ೩ | ನೆಗಡಿ | ಉತ್ತರಾಣಿ ಬೇರು, ಗೊಟ್ಟಿ ಮರದ ಚೆಕ್ಕೆ, ಹಂದಿಬಾಣೆಗೆಡ್ಡೆ, ಪೆಲೆಮರದ ಚೆಕ್ಕೆ | ಒಟ್ಟಾಗಿ ಸೇರಿಸಿ ಕಲ್ಲಿನಲ್ಲಿ ಅರೆದು ರಸ ತೆಗೆದು ಸ್ವಲ್ಪ ರಾಗಿ ಹಿಟ್ಟನ್ನು ಸೇರಿಸಿ, ಶೋಧಿಸಿ ಅದನ್ನು ಮೈ ಕೈಗೆ ಲೇಪಿಸುವುದು ಹಾಗೂ ಸ್ವಲ್ಪ ಕುಡಿಯುವುದು. |
| ೪ | ಹೊಟ್ಟೆ ನೋವು | ಕೈಗಕ್ಕಿ ಸೊಪ್ಪು, ಹೊನಗನೆ ಸೊಪ್ಪು, ಮೆಣಸು, ಬೆಳ್ಳುಳ್ಳಿ ಖಾರ | ಕಲ್ಲಿನಲ್ಲಿ ನುಣ್ಣಗೆ ಅರೆದು ಹೆಬ್ಬೆರಳು ಗಾತ್ರದಲ್ಲಿ ಉಂಡೆ ಮಾಡಿ, ನುಂಗುವುದು. |
| ೫ | ತಲೆನೋವು | ಅರಿಶಿಣ ಮತ್ತು ಸುಣ್ಣ, ಸಾಸುವೆ, ಕಹಿಸುಂಡೆ, ಎಡ್ಡನ | ಎಲ್ಲವನ್ನು ಕಲ್ಲಿನಲ್ಲಿ ಚೆನ್ನಾಗಿ ಅರೆದು ಸ್ವಲ್ಪ ನೀರು ಸೇರಿಸಿ, ಹಣೆಗೆ ಕತ್ತಿಗೆ, |

| ಕ್ರ.ಸಂ. | ಖಾಯಿಲೆ | ಔಷಧಿ ಗಿಡಮೂಲಿಕೆ | ತಯಾರಿಸುವ ವಿಧಾನ |
|---|---|---|---|
| | | ಕೀರೆ ಬಿತ್ತ ಕೊಂಟಿಗೆ ಗಿಡದ ಹಾಲು ಚೆಲ್ಲಬಿತ್ತ ಕೂರೆತಂದಿ ಗೆಡ್ಡೆ, ಎಳೆಸು ಹಿಂಬೆ ಸೊಪ್ಪು, ಸಣ್ಣ ಈರುಳ್ಳಿ, ಕಕ್ಕೆ ಮರದ ಬೇರು, ಕರಿಕಡ್ಡಿ ಬೇರು | ಕಿವಿಯ ಹಿಂಭಾಗ ಇವುಗಳಿಗೆ ಲೇಪನ ಹಾಕುವುದು ಉಗುರು ಸಂದು, ಕಲಿನ ಉಗುರು ಸಂದುಗಳಿಗೆ ಲೇಪನ ಹಾಕುವುದು. |
| ೬ | ಅರೆತಲೆ ನೋವು | ತಂಬೆ ಸೊಪ್ಪು, ಬೆಳ್ಳುಳ್ಳಿ, ಶುಂಠಿ ಮರಳಿಗಿಡದ ಹಾಲು, ನುಗ್ಗೆ ಸೊಪ್ಪು | ಚೆನ್ನಾಗಿ ಅರೆದು ಬಂದ ರಸವನ್ನು ಎರಡು ಮೂಗಿನ ಹೊಳ್ಳೆಗಳಿಗೆ ಬಿಟ್ಟುಕೊಳ್ಳುವುದು |
| | ಶೀತ | ಅರೆನೆಲ್ಲಿ | ಚೆನ್ನಾಗಿ ಅರೆದು ಹಣೆಗೆ ಪಟ್ಟಿ ಹಾಕುವುದು |
| ೭ | | ಕಾಡವರೆ | ಕಾಡವರೆ ಹಂಬನ್ನು ಕಿತ್ತು ಕತ್ತಿಗೆ ಕಟ್ಟಿಕೊಳ್ಳುವುದು. |
| ೮ | ನೆಗಡಿ | ರಾಮತೊಳಸಿ ಎಸಗಲೆಗಿಡ, ಎಲೆ ಬೇರು | ಅರೆದು ಕಷಾಯ ಮಾಡಿ ಕುಡಿಯುವುದು. |
| ೯ | | ಹುರುಳಿಕಾಳು, ಬೆಳ್ಳುಳ್ಳಿ, ಜೀರಿಗೆ, ಕಾಡು ಮೆಣಸು, ನಳ್ಳಿ(ಏಡಿ) | ರಸ ಮಾಡಿ ಕುಡಿಯುವುದು. |
| ೧೦ | | ಆಲೆ ಸೊಪ್ಪು | ಎಲೆಯನ್ನು ಕೈಯಲ್ಲಿ ಚೆನ್ನಾಗಿ ತೀಡಿ ರಸವನ್ನು ಮೂಗಿನ ಹೊಳ್ಳೆಗಳಿಗೆ ಹಾಕುವುದು. |
| ೧೧ | | ರಾಗಿ | ರಾಗಿಯನ್ನು ಬೆಂಕಿಕೆಂಡಕ್ಕೆ ಹಾಕಿ ಅದರ ಹೊಗೆಯನ್ನು ತೆಗೆದುಕೊಳ್ಳುವುದು. |
| ೧೧ | | ಕಿರುಜೇನು/ಕೋಲುಜೇನು, ನೆಲ್ಲಿಕಾಯಿ, ಮೆಣಸು, ಶುಂಠಿ | ಒಟ್ಟಾಗಿ ಸೇರಿಸಿ ಜಜ್ಜಿ ಮಿಶ್ರಣ ಮಾಡಿ ಅದನ್ನು ಜೇನು ತುಪ್ಪದಲ್ಲಿ ತೆಗೆದುಕೊಳ್ಳುವುದು. |
| ೧೨ | ಗಂಟಲು ನೋವು | ಶ್ರೀಗಂಧ | ಚೆನ್ನಾಗಿ ಅರೆದು ಗಂಟಲಿನ ಸುತ್ತು ಹಚ್ಚುವುದು. |
| ೧೩ | | ಒಲೆ ಬೂದಿ | ಸ್ವಲ್ಪ ಬಿಸಿ ಇರುವ ಬೂದಿಯನ್ನು ತೆಗೆದು ಗಂಟಲಿಗೆ ಲೇಪನ ಮಾಡುವುದು |
| ೧೪ | | ಕಿರುಜೇನು, ಬೆಳ್ಳುಳ್ಳಿ, ಅರಿಶಿಣ, ಶುಂಠಿ, ತುಳಸಿ | ಜೇನು ಸೇರಿಸಿ ರಸ ಮಾಡಿ ಕುಡಿಯುವುದು. |
| ೧೫ | | ಸುಣ್ಣ, ಕೆಮ್ಮಣ್ಣು | ಲೇಪನ ಮಾಡಿ ಗಂಟಲಿಗೆ ಹಚ್ಚಿಕೊಳ್ಳುವುದು. |

| ಕ್ರಸಂ. | ಖಾಯಿಲೆ | ಔಷಧಿ ಗಿಡಮೂಲಿಕೆ | ತಯಾರಿಸುವ ವಿಧಾನ |
|---|---|---|---|
| ೧೬ | ಹೊಟ್ಟೆನೋವು | ಕಡದೇಕನ ಗಿಡದ ಬೇರು, ಕೋಲು ಮುರುಕಿ ಬೇರು ಆಗುಳಿ, ಶುಂಠಿ,ಇಟ್ಟೆ ಬರದ ಚೆಕ್ಕೆ, ಪುಡುಮಾವಿನ ಚೆಕ್ಕೆ ಬಟ್ಟುರುಪೆಗಿಡದ ಬೇರು | ಎಲ್ಲವನ್ನು ಅರೆದು ಬಿಸಿ ನೀರಿನಲ್ಲಿ ಸ್ವಲ್ಪ ಕುದಿಸಿ ಕುಡಿಯುವುದು. |
| ೧೭ | | ಬಸಳೆ ಸೊಪ್ಪು ಬಟ್ಟಲು ಹಂಬಿನ ಬೇರು, ಕೂಗೆ ಗಿಡದ ಬೇರು | ಅಗಿದು ರಸ ಕುಡಿಯುವುದು. |
| ೧೮ | ಹುಳಕಲ್ಲು | ಸೀಬೆ ಮರದ ಚೆಕ್ಕೆ, ನೇರಳೆ ಚೆಕ್ಕೆ | ಬೇಯಿಸಿ ಅದನ್ನು ಬಾಯಿಗೆ ಹಾಕಿಕೊಂಡು ಉಗುಳಬೇಕು. |
| ೧೯ | | ಪರಂಗಿ ಗಿಡದ ಹಾಲು(ಪಪ್ಪಾಯಿ), ಮರಳೆಗಿಡ | ಹಾಲನ್ನು ಹುಳಕಲ್ಲು ಇರುವ ಜಾಗಕ್ಕೆ ಹಾಕಿ ಸ್ವಲ್ಪ ಸಮಯ ಆದ ಮೇಲೆ ಉಗುಳಬೇಕು. |
| ೨೦ | | ಈಸಂಗಿ ಬೇರು | ತೇಯ್ದು ಹಲ್ಲಿನ ಜಾಗಕ್ಕೆ ಹಾಕುವುದು. |
| ೨೧ | | ಸಿಪ್ರಾಣಿಗೆ ಐಸಿನನಾರು | ಚೆನ್ನಾಗಿ ಅಗಿದು ಉಗಿಯುವುದು. |
| ೨೨ | | ಕಹಿ ಸುಂಡೆ | ಕಿವುಚಿ ನೋವಿನ ಜಾಗಕ್ಕೆ ಹಾಕುವುದು. |
| ೨೩ | | ಹೊಗೆಸೊಪ್ಪು, ಸುಣ್ಣ | ಕೈಯ್ಯಲ್ಲಿ ಚೆನ್ನಾಗಿ ತೀಡಿ ಹಲ್ಲಿನ ಜಾಗಕ್ಕೆ ಹಾಕುವುದು |
| ೨೪ | | ಲವಂಗ ಮೊಗ್ಗು, ಜೀರಿಗೆ, ಮೆಣಸಿನಕಾಯಿ, ಪಚ್ಚ ಕರ್ಪೂರ | ನುಣ್ಣಗೆ ಅರೆದು ನೋವಿನ ಜಾಗಕ್ಕೆ ಇಟ್ಟು ನೀರನ್ನು ಸುರಿಸುವುದು. |
| ೨೫ | ಬೇಧಿ (ತಡೆಯುವುದಕ್ಕೆ) | ಬೋನಗಾರ ಕಾಯಿ | ಬೆಂಕಿಯಲ್ಲಿ ಸುಟ್ಟು ಒಳಗಿನ ಬೀಜವನ್ನು ತೆಗೆದುಹಾಕಿ ಉಳಿದ ಭಾಗವನ್ನು ತಿನ್ನುವುದು |
| ೨೬ | | ನೇರಳೆ ಚೆಕ್ಕೆ | ಚೆಕ್ಕೆಯನ್ನು ನೀರಿನಲ್ಲಿ ಚಚ್ಚಿ ರಸ ಮಾಡಿ ಕುಡಿಯುವುದು |
| ೨೭ | | ಬಿಜ್ಜಲು ಮೇಣ | ಮೇಣವನ್ನು ಸ್ವಲ್ಪ ತಿನ್ನುವುದು |
| ೨೮ | | ಸೀಬೆ ಕಾಯಿ | ಎಳಸು ಸೀಬೆಕಾಯಿ, ಸೀಬೆ ಎಲೆ ಚಿಗುರು ಅಗಿದು ತಿನ್ನುವುದು |
| ೨೯ | | ಅರಳೆ ಕಾಯಿ | ನೀರಿನಲ್ಲಿ ತೇಯ್ದು ಸ್ವಲ್ಪ ಕುಡಿಯುವುದು |

| ಕ್ರಸಂ. | ಖಾಯಿಲೆ | ಔಷಧಿ ಗಿಡಮೂಲಿಕೆ | ತಯಾರಿಸುವ ವಿಧಾನ |
|---|---|---|---|
| ೩೦ | | ಮಾವಿನ ಮರದ ಚೆಕ್ಕೆ | ಚೆಕ್ಕೆಯನ್ನು ಪುಡಿ ಮಾಡಿಟ್ಟು ಸ್ವಲ್ಪ ನೀರಿನಲ್ಲಿ ಹಾಕಿ ಕುದಿಸಿ ಕುಡಿಯುವುದು |
| ೩೧ | | ದಾಳಿಂಬೆ ಗಿಡ | ಎಳಸು ಮೊಗ್ಗನ್ನು ಅಗಿದು ತಿನ್ನುವುದು |
| ೩೨ | | ರಾಗಿ ಹಿಟ್ಟು | ಅಂಬಲಿ ಮಾಡಿ ಕುಡಿಯುವುದು |
| ೩೩ | | ಕುಡಗೋಲು | ಬೆಂಕಿಯ ಕೆಂಡಕ್ಕೆ ಕುಡಗೋಲು ಹಾಕಿ ಲೋಟಕ್ಕೆ ಸ್ವಲ್ಪ ಉಪ್ಪು ಹಾಕಿ ಕಾಯ್ದ ಕುಡುಗೋಲನ್ನು ಎರಡು ಪಾದದ ಕೆಳಭಾಗಕ್ಕೆ ಬರೆ ಹಾಕಿ ಕುಡುಗೋಲನ್ನು ಉಪ್ಪು ನೀರಿನಲ್ಲಿ ಅದ್ದಿ ಆ ನೀರನ್ನು ಕುಡಿಯುವುದು |

ಹೀಗೆ ಸೋಲಿಗರು ಸಾಮಾನ್ಯವಾಗಿ ದಿನನಿತ್ಯದಲ್ಲಿ ಬರುವ ಖಾಯಿಲೆಗಳಿಗೆ ತಮ್ಮದೇ ಆದ ಪಾರಂಪರಿಕವಾದ ನಾರು ಬೇರಿನ ಔಷಧಿಯನ್ನು ತೆಗೆದುಕೊಳ್ಳುವುದರ ಮೂಲಕ ಇನ್ನೂ ಹಲವಾರು ಖಾಯಿಲೆಗಳನ್ನು ತಾವೇ ಗುಣಪಡಿಸಿಕೊಳ್ಳುತ್ತಾರೆ.

**೬.೨.೪. ಸೋಲಿಗರ ಮಾಂತ್ರಿಕ (ಮಂತ್ರದ) ವೈದ್ಯ ಪದ್ಧತಿಗಳು**

ಸೋಲಿಗರ ಗಿಡಮೂಲಿಕೆ ವೈದ್ಯ ಪದ್ಧತಿ ದೇವರು ಕೇಳುವ ವೈದ್ಯ ಪದ್ಧತಿ, ಸಗ್ಗದವರ ಮೂಲಕ ವೈದ್ಯ ಪದ್ಧತಿ ಇವುಗಳ ಜೊತೆ ಇನ್ನೊಂದು ಮುಖ್ಯವಾದ ವೈದ್ಯ ಪದ್ಧತಿ ಇದೆ. ಅದೇ ಸೋಲಿಗರ ಮಾಂತ್ರಿಕ ವೈದ್ಯ ಪದ್ಧತಿ. ಸೋಲಿಗರು ಮುಖ್ಯವಾಗಿ ಅವರ ಭಾಷೆಯಲ್ಲಿಯೇ ಹೇಳುವುದಾದರೆ ಮಾಟಣೆ ಗೀಟಣೆ ಮಾಡುವುದರಲ್ಲಿ ಎತ್ತಿದ ಕೈ ಎಂದು ಸಾಮಾನ್ಯವಾಗಿ ಎಲ್ಲರೂ ತಿಳಿದುಕೊಂಡಿದ್ದಾರೆ. ಮಾಹಿತಿ ಸಂಗ್ರಹ ಮಾಡಲು ಭೇಟಿ ನೀಡಿದಾಗ "ಬಿಳಿಗಿರಿರಂಗನ ಬೆಟ್ಟದ ಹಾಗೂ ಚಾಮರಾಜನಗರ ಸುತ್ತಮುತ್ತಲಲ್ಲಿ ವಾಸವಾಡುವ ಸೋಲಿಗರು ಹೆಚ್ಚು ಮಾಟ-ಮಂತ್ರ ಮಾಡುತ್ತಾರೆ."[೮] ಎಂಬ ವಿಷಯವನ್ನು ತಿಳಿಸಿದರು.

ಪುರಾತನ ಸಂಸ್ಕೃತಿಯನ್ನು ಕೆದಕಿ ನೋಡಿದಾಗ ಅತಿಮಾನುಷ ಶಕ್ತಿಯ ಬಗೆಗೆ ಅದ್ಭುತ ಕಲ್ಪನೆಗಳು ಬೆಳೆದು ಆಳಕ್ಕೆ ಬೇರು ಬಿಟ್ಟಿರುವುದನ್ನು ಕಾಣುತ್ತೇವೆ. ಈ ಅದ್ಭುತ ಕಲ್ಪನೆ ಎರಡು ವಿಭಿನ್ನ ರೀತಿಯಲ್ಲಿ ಮೈಚಾಚಿಕೊಂಡು ಇಡೀ ಮಾನವ ವರ್ಗದಲ್ಲಿ ರಕ್ತಗತವಾಗಿ ಹೋಗಿದೆ. ಈ ಅತಿಮಾನುಷ ಶಕ್ತಿಗಳು ಒಂದು ಕಡೆ ತಮ್ಮ ತಳಹದಿಯ ಮೇಲೆ ನಿಂತರೆ ಇನ್ನೊದು ಕಡೆ 'ಮಾಟ'ದ ತಳಹದಿಯ ಮೇಲೆ ನಿಂತಿದೆ. ಇದು ಆದಿಮಾನವನಿಗೆ ಭಯಭೀತಿಯನ್ನು ಹಿಂದಿನಿಂದಿಲೂ ಹುಟ್ಟಿಸುತ್ತಾ ಬಂದಿದೆ. ಪುರಾತನ ಮಾನವ ಪ್ರಕೃತಿಯ ಸಹಜ ಶಕ್ತಿಯ ಬಗೆಗೆ ಗೌರವ ಹೊಂದಿದವನಾಗಿ ಅದನ್ನು

ಆರಾಧಿಸುತ್ತಿದ್ದ. ಇದರ ಹಿನ್ನೆಲೆಯಲ್ಲಿಯೇ 'ಧರ್ಮ' ಹಾಗೂ 'ಮಂತ್ರವಿದ್ಯೆಗಳನ್ನು' ರೂಢಿಸಿಕೊಂಡ. ಈ ತನಕ ಭೂಗರ್ಭಶಾಸ್ತ್ರಜ್ಞರು, ಇತಿಹಾಸಜ್ಞರು, ವಿಜ್ಞಾನಿಗಳು, 'ಧರ್ಮ' ಹಾಗೂ ಮಂತ್ರವಿದ್ಯೆಗಳನ್ನು ತಮ್ಮದೇ ಆದ ದೃಷ್ಟಿಕೋನಗಳ ಮೂಲಕ ವ್ಯಾಖ್ಯಾನಿಸಿದ್ದಾರೆ. ಸಮಾಜಶಾಸ್ತ್ರಜ್ಞರು, ಸಾಂಸ್ಕೃತಿಕ ಹಾಗೂ ಸಾಮಾಜಿಕ ಮಾನವಶಾಸ್ತ್ರಜ್ಞರು ಆದಿವಾಸಿ ಸಮಾಜಗಳಲ್ಲಿನ ಧರ್ಮ ಹಾಗೂ ಮಂತ್ರವಿದ್ಯೆಗಳ ಬಗೆಗೆ ಅಧ್ಯಯನ ನಡೆಸಿದ್ದಾರೆ. ಇಂದು ವಿಶ್ವದಾದ್ಯಂತ ಆದಿವಾಸಿ, ಜನಪದ ಮತ್ತು ನಾಗರಿಕ ಧರ್ಮಗಳು ಐದು ಸಾವಿರಕ್ಕೂ ಮೀರಿವೆ. ಪ್ರತಿಯೊಂದು ಗುಂಪೂ ತನ್ನದೇ ಆದ ನಂಬಿಕೆ, ನಡಾವಳಿಗಳನ್ನು, ಆಹಾರ ವಿಧಗಳನ್ನೂ ರೂಢಿಸಿಕೊಂಡು ಬರುತ್ತಿವೆ

ಅದೇ ರೀತಿಯಲ್ಲಿ ಇಲ್ಲಿ ಮುಖ್ಯವಾಗಿ ಸೋಲಿಗರಲ್ಲಿ ವೈದ್ಯ ಪದ್ಧತಿಯಲ್ಲಿ ಮಾಂತ್ರಿಕ ವೈದ್ಯ ಪದ್ಧತಿಯು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಗಿಡಮೂಲಿಕಾ ಔಷಧಿಗಳನ್ನು ಬಳಸುವಾಗ ಅವುಗಳನ್ನು ಮಂತ್ರದ ಮೂಲಕ ಮಂತ್ರಿಸಿ ಬಳಸಿದರೆ ಅದರ ಫಲ ತುಂಬಾ ಪ್ರಯೋಜನಕಾರಿಯಾಗಿರುತ್ತದೆ ಹಾಗೂ ಖಾಯಿಲೆ ಬೇಗ ವಾಸಿಯಾಗುತ್ತದೆ ಎಂಬ ನಂಬಿಕೆ ಸೋಲಿಗರಲ್ಲಿದೆ. ಸೋಲಿಗರಲ್ಲಿ ಮಂತ್ರವಿದ್ಯೆಯನ್ನು ಯಾರೂ ಬೇಕಾದರೂ ಕಲಿಯಬಹುದು. ಅದಕ್ಕೆ ವಯಸ್ಸಿನ ಅಂತರವಾಗಲೀ ಅಥವಾ ಲಿಂಗದ ಅಂತರವಾಗಲೀ ಇರುವುದಿಲ್ಲ. ಅದರೆ ಸಾಮಾನ್ಯವಾಗಿ ನಾನು ಕಂಡುಕೊಂಡ ಹಾಗೆ ತಾಯಿ ಮಂತ್ರವಿದ್ಯೆ ಗೊತ್ತಿದ್ದರೆ ಅದನ್ನು ತನ್ನ ಮಗಳಿಗೆ ಅಥವಾ ತನ್ನ ತಂಗಿಗೆ ಹೆಚ್ಚು ಗೊತ್ತಿರುತ್ತದೆ. ತಂದೆ ಮಂತ್ರವಿದ್ಯೆ ಕಲಿತಿದ್ದರೆ ತನ್ನ ಮಗಳು, ಮಗ, ತನ್ನ ತಮ್ಮ, ಹೆಂಡತಿ ಇವರುಗಳಿಗೆ ಹೆಚ್ಚು ಮಂತ್ರವಿದ್ಯೆಯನ್ನು ಬಲು ಬೇಗ ಹೇಳಿಕೊಟ್ಟಿರುತ್ತಾರೆ.

"ವೈದ್ಯ ಪದ್ಧತಿಯ ಮಂತ್ರಗಳನ್ನು ರಾತ್ರಿಯ ವೇಳೆ ಮಂತ್ರಗಳನ್ನು ಹೇಳಿಕೊಂಡು ಕಲಿಯಬೇಕು. ಆಗ ಮಾತ್ರ ಮಂತ್ರದ ಫಲ ಲಭಿಸುತ್ತದೆ." ಸೋಲಿಗರು ಸಾಮಾನ್ಯವಾಗಿ ದೆವ್ವ, ಭೂತ, ಪಿಶಾಚಿ, ಹಾಗೂ ದೇವರುಗಳನ್ನು ಅದರಲ್ಲೂ ಕಾಡಿನ ದೇವರು ಕುಟುಂಬದಲ್ಲಿ ಮರಣ ಹೊಂದಿದ ಹಿರಿಯರು ಇವರುಗಳನ್ನು ತುಂಬಾ ನಂಬುತ್ತಾರೆ. ಭಯಭಕ್ತಿಯಿಂದ ಪೂಜಿಸುತ್ತಾರೆ.

**ಮಾಂತ್ರಿಕ ವೈದ್ಯಪದ್ಧತಿಯ ಚಿಕಿತ್ಸೆಗಳ ಪಟ್ಟಿ**

**ಕೋಷ್ಟಕ: ೬.೨.೨. ಸೋಲಿಗರ ಮಾಂತ್ರಿಕ ಚಿಕಿತ್ಸೆಗಳ ಹೆಸರುಗಳ ಪಟ್ಟಿ**

| ಕ್ರಸಂ. | **ಮಾಂತ್ರಿಕ ಚಿಕಿತ್ಸೆಗಳ ಹೆಸರು** |
|---|---|
| ೧ | ಬಸುರಿ ಮಂತ್ರ |
| ೨ | ಹೆರಿಗೆ ಮಂತ್ರ |
| ೩ | ಕಳ್ಳು ಬಳ್ಳಿಯ ಮಂತ್ರ |
| ೪ | ನಾಯಿ ಕಡಿತದ ಮಂತ್ರ |
| ೫ | ಹಾವಿನ ಮಂತ್ರ |
| ೬ | ಉಳಿಕಿನ ಮಂತ್ರ |
| ೭ | ದೆವ್ವ, ಭೂತ, ಪಿಶಾಚಿ ಸಂಬಂಧಿಸಿದ ಮಂತ್ರ |

| | |
|---|---|
| ೮ | ಬುರುಡೆ ಕರೆಯುವುದು/ ಗುಂಜಿ ಉಯ್ಯುವುದು |
| ೯ | ಹರಳು ಬಿಡುವುದು |
| ೧೦ | ಬಿದ್ದುಬೀಳು ಎತ್ತುವುದು( ರಂಗು ಹಾಕಿ ಕಳೆದು ಹೊರಗಡೆ ನೀರು ಹಾಕಿ ಗುಂಡಿ ತೋಡಿ ರಂಗೋಲಿ ಹಿಟ್ಟಿಗೆ ಪುಡಿ ಹಾತುಹುಳ ಹಾಕಿ ಗುಂಡಿ ಮುಚ್ಚುವುದು) |
| ೧೧ | ರಂಜು ಮಾಡುವುದು ಐದು ಬಗೆಯ ಹೂವು ಅರಿಶಿಣ, ಕುಂಕುಮ, ಆರತಿ ಎತ್ತಿ, ತಲೆಯಿಂದ ಕಾಲಿನವರೆಗೂ ಇಳಿತೊಡೆದು, ಒಂದು ಚೊಂಬಿಗೆ ಹಾಕಿ ಮುಚ್ಚುವುದು. ಹಣೆಗೆ ರಂಜು ಮಾಡಿದ ನೀರನ್ನು ಎಡ ಹೆಬ್ಬೆಟ್ಟಿನಿಂದ ಹಾಕುವುದು. |

**ಹೆರಿಗೆ ಮಂತ್ರ:** ಬಸುರಿ ಹೆಂಗಸರಿಗೆ ಹೊಟ್ಟೆನೋವು ಕಾಣಿಸಿಕೊಂಡರೆ ಅಂಗೈಗೆ ಸ್ವಲ್ಪ ಹರಳೆಣ್ಣೆಯನ್ನು ಹಾಕಿಕೊಂಡು, ಅಂಗೈಯನ್ನು ತಮ್ಮ ಬಾಯಿಯ ಹತ್ತಿರದಲ್ಲಿ ಹಿಡಿದುಕೊಂಡು ಬಾಯಿಯೊಳಗಡೆಯೇ

ತುಟಿಯನ್ನು ಕುಣಿಸುತ್ತಾ,
ಚೆಂದ್ರದೇವಿ ಮಗ
ನಿತ್ತು ನೀರ ಮೀದು
ಕೂಸು ಮಾಸುಕೆಳೇಕ
ಕೂಸಿನತೊಟ್ಟು
ಮೇಲೆಕೊಗುರು ಬಾಳಿಗೆ

ಹಾಗೂ ಬಸುರಿ ಹೆಂಗಸನ್ನು ಮೇಲೆ ಎದ್ದು ನಿಲ್ಲಿಸಿ ಮನೆಯ ಅಥವಾ ಗುಡಿಸಲಿನ ಮೇಲಿನ ಒಂದು ದೊಡ್ಡ ತೀರಿಗೆ ಅಥವಾ ಮರದ ಕವೆಗೆ ಒಂದು ಹಗ್ಗವನ್ನು ಕಟ್ಟಿ (ಹಿಂದೆ ಕಾಡಿನ ನಾರಂಬನ್ನು ಕಟ್ಟುತ್ತಿದ್ದರು) ಬಸುರಿ ಹೆಂಗಸು ಎದ್ದು ನಿಂತು ಆ ಹಗ್ಗವನ್ನು ಗಟ್ಟಿಯಾಗಿ ಸ್ವಲ್ಪ ಹೊತ್ತು ಹಿಡಿದುಕೊಂಡಿರಬೇಕು. ಅವಳ ಪಕ್ಕದಲ್ಲಿಯೇ ಮತ್ತೊಬ್ಬ ಹೆರಿಗೆ ಮಾಡಿಸುವ ಹೆಂಗಸು ಕುಳಿತಿರುತ್ತಾಳೆ. ಬಸುರಿ ಹೆಂಗಸಿನ ಹೊಟ್ಟೆಗೆ ಹರಳೆಣ್ಣೆಯನ್ನು ಸ್ವಲ್ಪ ಬಿಸಿ ಮಾಡಿಕೊಂಡು ಎರಡೂ ಕೈಯಿಂದ ಹೊಟ್ಟೆಯ ಮೇಲಿಂದ ಕೆಳಗೆ ನೀವುತ್ತಾ ಎಣ್ಣೆಯನ್ನು ಮಂತ್ರಿಸಿ, ಶೂ. . . . . ಶೂ. .. . .ಶೂ. . . . ಎಂದು ಹೇಳುತ್ತಾರೆ. ಇದಾದ ನಂತರ ಬಸುರಿ ಹೆಂಗಸನ್ನು ಒಂದು ಮೂಲೆಯಲ್ಲಿ ನೂಲಿನ ಬಟ್ಟೆಯಿಂದ ಒಂದು ಸಿಂಬಿಯನ್ನು ಮಾಡಿ ಅದರ ಮೇಲೆ ಕುಕ್ಕರಗಾಲಿನಲ್ಲಿ ಕುಳ್ಳಿರಿಸಿ ಹೆರಿಗೆ ಮಾಡಿಸುತ್ತಾರೆ.

**ಕಸದ ಮಂತ್ರ:** ಹೆರಿಗೆಯಾದ ಬಳಿಕ(ಪ್ಲಾಸೆಂಟ) ಸೆತ್ತೆಯು ಹೊಟ್ಟೆಯಲ್ಲಿ ನಿಂತುಬಿಟ್ಟರೆ ಅದನ್ನು ಗಿಡಮೂಲಿಕೆ ಔಷಧಿಯನ್ನು ಮಂತ್ರದ ಮೂಲಕ ಹೇಳಿ ಕೊಡುತ್ತಾರೆ.

ಕೆಬ್ಬೆ ಹೊಲಕ ಎಳ್ಳಬಿತ್ತಿ
ಕುಡುಗಿನ ಕೊಯ್ದು
ಕರಾಕ ಬಸ್ತು
ಕೂಸು ಮಾಸು ಕೆಳೇಕ

ಕೂಸಿನ ತೊಟ್ಟು

ಮೇಲೆಕೊಗುರು ಬಾಳಿಗ

ಎಂಬುದಾಗಿ ಒಂದು ಲೋಟದಲ್ಲಿ ಸ್ವಲ್ಪ ಬಿಸಿ ನೀರನ್ನು ತೆಗೆದುಕೊಂಡು ಅದಕ್ಕೆ ಬೆಜ್ಜಲು ಮರದ ಇದ್ದಿಲನ್ನು ಪುಡಿ ಮಾಡಿ ಹಾಕಿ ಬೆರೆಸಿ ಹೆರಿಗೆಯಾದ ಹೆಂಗಸಿನ ಹತ್ತಿರ ಬಂದು ಸ್ವಲ್ಪ ಮಿಶ್ರಣವಾದ ನೀರನ್ನು ಕುಡಿಸಿ, ಮಂತ್ರಿಸುವವರು. ತಮ್ಮ ಕೂದಲಿನ ಹಿಡಿಯನ್ನು ಎಡಗೈಯಲ್ಲಿ ಹಿಡಿದು ಥೂ. . . . . ಥೂ. .. . . ಎಂದು ಮೇಲಿಂದ ಕೆಳಕ್ಕೆ ಇಳಿ ತೆಗೆದು ಹೆಂಗಸಿನ ಬಾಯಿಗೆ ಕೂದಲಿನ ಹಿಡಿಯನ್ನು ಒಂದು ಕ್ಷಣ ಬಾಯಿಯ ಒಳಗೆ ಹಾಕಿ ತೆಗೆಯುತ್ತಾರೆ. ಕ್ಷಣಾರ್ಧದಲ್ಲಿ ಹೆರಿಗೆಯಾದ ಹೆಂಗಸು ವಾಕರಿಗೆ(ವಾಂತಿ) ಬಂದ ಹಾಗೆ ಜೋರಾಗಿ ಮಾಡುತ್ತಾಳೆ. ತಕ್ಷಣ ಸೆತ್ತೆ ಹೊಟ್ಟೆಯಿಂದ ಹೊರಕ್ಕೆ ಬಂದು ಬೀಳುತ್ತದೆ.

**ಕಳ್ಳುಬಳ್ಳಿಯ ಮಂತ್ರ:** ಎಳೆ ಕೂಸುಗಳನ್ನು ಎತ್ತಿಕೊಂದು ಆಟವಾಡಿಸುವಾಗ ಮೇಲಕ್ಕೆತ್ತಿ ಕೆಳಗೆ ಬಿಡುವಾಗ ಒಮ್ಮೊಮ್ಮೆ ಮಗುವಿನ ಹೊಟ್ಟೆಯೊಳಗಿರುವ ಕಳ್ಳು ಜಾರಿಕೊಂಡು ಹೊಟ್ಟೆ ಊದಿಕೊಳ್ಳುತ್ತದೆ. ಇದನ್ನು ಸೋಲಿಗರು 'ಮಕ್ಕಳಿಗೆ ಕರುಳು ಸಿಕ್ಕಾಕಿಕೊಂಡಿದೆ' ಎಂದು ಕರೆಯುತ್ತಾರೆ. ಹೀಗಾದಾಗ ಮಗು ತುಂಬಾ ಅಳುತ್ತದೆ. ರಚ್ಚೆ ಹಿಡಿಯುತ್ತದೆ. ಅಂದರೆ ಚಂಡಿಹಿಡಿಯುತ್ತದೆ ಎನ್ನುತ್ತಾರೆ. ಇದಕ್ಕೆ ಸೋಲಿಗರು ಸ್ವಲ್ಪ ಹರಳೆಣ್ಣೆಯನ್ನು ಬಿಸಿ ಮಾಡಿ ಅಂಗೈಗೆ ಹಾಕಿಕೊಂಡು ಮಗುವಿನ ಹೊಟ್ಟೆಗೆ ಚೆನ್ನಾಗಿ ಮೇಲಿಂದ ಕೆಳಕ್ಕೆ ನೀವುತ್ತಾರೆ. ಕೆಲವರು ಚಿಟ್ಟ ಹರಳಿ ಎಲೆ(ಸಣ್ಣ ಹರಳೆಲೆ)ಗೆ ಸ್ವಲ್ಪ ಬಿಸಿ ಮಾಡಿದ ಎಣ್ಣೆಯನ್ನು ಹಾಕಿ ನೀವುತ್ತಾ ಎಲೆಯನ್ನು ಹೊಟ್ಟೆಗೆ ನೂಲಿನ ಬಟ್ಟೆ ಹಾಕಿ ಒಳಗೆ ಕಟ್ಟುತ್ತಾರೆ. ಹೀಗೆ ಕಟ್ಟುವಾಗ ಮಂತ್ರ ವಿದ್ಯೆ ಮಾಡುವವರು ಮೇಲ್ಭಾಗದಿಂದ ಕೆಳಭಾಗದವರೆಗೆ ಮಂತ್ರ ಹೇಳುತ್ತಾರೆ.

ಗುರು ಗುರು ಬಾಳಿಗ
ಗುರು ಸುರು ಪಾದ
ಗುರು ಬಾಳಿಗ
ಎದ್ದಕಳ್ಳು, ಬಿದ್ದಕಳ್ಳು
ಹಾಸುಕಳ್ಳು, ಬೀಸುಕಳ್ಳು
ಪಾರ್ವತಿ ಮಾಡಿದ
ಪಾದ ಕೆಳಗೆ
ನೇರವಾಗಿಳಿದೋಗು
ಬಾ ಊರು ಬಾಳಿಗ ।

**ಅಥವಾ**

ಗುರು ಗುರು ಬಾಳಿಗ
ಗುರು ಸುರು ಪಾದ
ಗುರು ಬಾಳಿಗ

ಕರಿಕಳ್ಳು, ಬೆಳ್ಳನ ಕರು
ಸಜ್ಜನಕರು ಗಂಬಾಕಿರದೆಲ್ಲ
ಹೊಡೆದೋಗಲಿ ಉರುಬಾಳಿಗ

ಹೀಗೆ ಹೊಟ್ಟೆಗೆ ಎಣ್ಣೆ, ವೀಳ್ಯೆದೆಲೆ, ಹರಳೆಲೆ ಮಂತ್ರಿಸುವವರು. ಯಾರ ಮಕ್ಕಳಿಗಾದರೂ ಈ ರೀತಿಯ ತೊಂದರೆಯಾದರೆ ಅಂತಹ ಮಹಿಳೆಯ ಮನೆಗೆ ಹೋಗಿ ಕರೆದುಕೊಂಡು ಬರುತ್ತಾರೆ. ಈ ಮಂತ್ರವನ್ನು ಸಾಮಾನ್ಯವಾಗಿ ಬೆಳಿಗ್ಗೆ ಅಥವಾ ಸಾಯಂಕಾಲದ ಸಮಯದಲ್ಲಿ ಮಾಡುತ್ತಾರೆ. ಕಾರಣ ಅವರು ನೀರನ್ನು ಮುಟ್ಟಿರಬಾರದು ಹಾಗಾದರೆ ಮಂತ್ರ ಚೆನ್ನಾಗಿ ಹಿಡಿಯುತ್ತದೆ ಎಂಬ ನಂಬಿಕೆ.

**ನಾಯಿ ಕಡಿತದ ಮಂತ್ರ:** ನಾಯಿ ಕಡಿತದ ಜಾಗಕ್ಕೆ ಕೆಲವರು ಹಿತ್ತಾಳೆಯ ಪೈಸೆಯನ್ನು ಸ್ವಲ್ಪ ನೀರಿನಲ್ಲಿ ತೇಯ್ದು ಹಾಕಿ ಕಟ್ಟುತ್ತಾರೆ.

ಗುರು ಗುರು ಬಾಳಿಗ
ಗುರು ಸುರು ಪಾದ
ಗುರು ಮೂಕನ
ಗಜುಗತ ಗಣ್ಣನ
ಸೊಟ್ಟು ಕಿಮಿಯವನ
ಬುರುಡೆ ತಲೆಯವನ
ಹರಟೆ ಕಿಮಿಯವನ
ಪರಟೆ ಕಿಮಿಯವನ
ಬೌ ಬೌ ಎನ್ನವನ
ಬೀದಿ ಬೀದಿ ತಿರುಗವನ
ಮೂರು ಬಳ್ಸ ಬಳಸವನ
ಡೊಂಕು ಬಾಲದವನ
ಡೊಳರು ಬಾಲದವನ
ಶಂಕಿನ ದನಿಯವನ
ಶಂಕು ಬಾರದಕ
ಮುನ್ನ ಮಾದೋಗು
ಮುಂದೆ ಇಷ ಕಳ್ದೋಗುರು
ಬಾ ಗುರು ಬಾಳಿಗ

ಎಂದು ಮಂತ್ರವನ್ನು ಬಾಯಲ್ಲಿ ಗೊಣಗಿಕೊಳ್ಳುತ್ತಾ ನಾಯಿ ಕಚ್ಚಿರುವ ಜಾಗದ ಹತ್ತಿರ ಮಂತ್ರಿಸುವವರು ತಮ್ಮ ಬಾಯನ್ನಿಟ್ಟು ಮೂರು ಸಲ ಶೂ. . . . ಶೂ. . . . .ಶೂ. . ಎಂದು ಊದುತ್ತಾರೆ.

**ಹಾವಿನ ಮಂತ್ರ:** ಸಾಮಾನ್ಯವಾಗಿ ಸೋಲಿಗರು ಹಾವು ಕಚ್ಚಿದಾಗ ಅದರಲ್ಲಿ ನಾಗರಹಾವು, ಕರಿನಾಗ, ಗೋಧಿನಾಗ, ಹೆಬ್ಬಾವು, ಮಂಡಲಹಾವು, ಕರಿಮಂಡಲ, ಕೊಳಕಮಂಡಲ ಇತ್ಯಾದಿ ಇನ್ನೂ

ಮುಂತಾದ ಹಾವು ಕಡಿತಕ್ಕೆ ಕಾಡಿನಲ್ಲಿಯೇ ಸಿಗುವ ನಾರು-ಬೇರು, ಚೆಕ್ಕೆ ಔಷಧಿಯನ್ನು ಮಂತ್ರ ಹೇಳಿಕೊಂಡು ಕೊಡುತ್ತಾರೆ. ಸಾಮಾನ್ಯವಾಗಿ ಯಾವುದೇ ಹಾವು ಕಚ್ಚಿದರೂ ಸಹ ಮೊದಲು ಕಾಡಿನಲ್ಲಿ ಸಿಗುವ ಹಂಬು ಅಥವಾ ದಾರ, ಅಥವಾ ಬಟ್ಟೆಯಿಂದ ಕಚ್ಚಿದ ಮೇಲ್ಭಾಗದಲ್ಲಿ ಗಟ್ಟಿಯಾಗಿ ಕಟ್ಟುತ್ತಾರೆ. ಔಷಧಿ- ಹಾಗಲಕಾಯಿ ಬೇರು ಮತ್ತು ತುರ್ಕ್‌ಮೆಣಸಿಕಾಯಿ(ಕಾಡ ಮೆಣಸು ಸಣ್ಣದು) ಇವೆರಡನ್ನೂ ಅರೆದು ಹೊಟ್ಟೆಗೆ ಸ್ವಲ್ಪ ಕುಡಿಸುವುದು ಹಾಗೂ ಕಚ್ಚಿದ ಗಾಯಕ್ಕೆ ಹಾಕುವುದು. ಕಚ್ಚಿದ ಗಾಯಕ್ಕೆ ಸುಣ್ಣ ಹಾಕುವುದು. ಬೆಂಕಿಯಿಂದ ಸುಡುವುದು ಮತ್ತು ಕಚ್ಚಿದ ಗಾಯವನ್ನು ಬ್ಲೇಡ್‌ನಿಂದ ಸ್ವಲ್ಪ ಕಟ್‌ಮಾಡಿ ತೆಗೆದು ಹಸಿರು ಔಷಧಿ ಹಾಕುವುದು.

**ಪಥ್ಯ:** ಆಹಾರದಲ್ಲಿ ಹುರುಳಿ ಸಾರು, ಬೇಳೆಸಾರು, ರಾಗಿ ಮುದ್ದೆ, ಕುಸುಬಲಕ್ಕಿ ಅನ್ನ ಮಾಡಿಕೊಡುವುದು.

ಮೂರು ಬೇವಿನ ಸೀಳನ್ನು ತೆಗೆದುಕೊಂಡು ಹಾವು ಕಚ್ಚಿರುವ ಜಾಗದ ಹತ್ತಿರ ಹಿಡಿದುಕೊಂಡು ಬೇವಿನ ಸೊಪ್ಪಿನ ಮಂತ್ರವನ್ನು ಮಂತ್ರಿಸುತ್ತಾರೆ.

ಗುರು ಗುರು ಬಾಳಿಗ
ಗುರು ಸುರು ಪಾದ
ಗುರು ಬಾಳಿಗ
ಕಕ್ಕೆ ತಾಳಿನ ಕರಿನಾಗ
ಎಕ್ಕದ ತಾಳಿನ ಎಳೆನಾಗ
ಮುತ್ತಿಗದ ತಾಳಿನ ಮುದುನಾಗ
ನನ್ನ ಮಂತುರ ಮೇಲಾಗಿ
ನಿನ್ನ ಸಂಗಿ ಕಿತ್ತು
ಶಿವನ ಲೋಕಕೋ ಗುರು
ಬಾ ಗುರು ಬಾಳಿಗ

ಅಂದರೆ ಕಕ್ಕೆ ಮರ ಬಲು ಗಟ್ಟಿ; ಇದು ಕರಿನಾಗನ ಹಾಗೆ ಬಲು ವಿಷ ಎಕ್ಕದ ತಾಳಿನ ಎಳೆನಾಗ ಎಂದರೆ ಎಕ್ಕದ ಗಿಡ ಚಿಕ್ಕದು, ಮುತ್ತುಗದ ಮರ ಗಂಟು ಗಂಟಾಗಿ ಸುತ್ತಿಕೊಂಡು ಇರುತ್ತದೆ. ಹಾಗೆ ಮುದುನಾಗನ ಹಾಗೆ ಎಂದು ನೀವೆಲ್ಲರೂ ನನ್ನ ಮಂತ್ರದಿಂದ ಶಿವನ ಲೋಕಕ್ಕೆ ಶಿವನ ಪಾದಕ್ಕೆ ಹೊರಟು ಹೋಗಿ ಎಂದು ಹೇಳುವ ಮಂತ್ರ.

**ಹುಳುಕಿನ ಮಂತ್ರ:** ಕೈ, ಕಾಲು, ಸೊಂಟ, ಕುತ್ತಿಗೆ ಉಳುಕಿಕೊಂಡು ತುಂಬಾ ಊದಿಕೊಂಡು ನೋವುಂಟಾದಾಗ ಸೋಲಿಗರು ಸ್ವಲ್ಪ ಹರಳೆಣ್ಣೆಯನ್ನು ಅಂಗೈಯಲ್ಲಿ ಇಟ್ಟುಕೊಂಡು ಮಂತ್ರಿಸಿ ಉಳುಕಿದ ಭಾಗದಿಂದ ಮೇಲಿನಿಂದ ಕೆಳಕ್ಕೆ ನೀವುತ್ತಾರೆ. ಅದಾದ ನಂತರ ಕುಡುಗೋಲನ್ನು ತೆಗೆದುಕೊಂಡು ಮಂತ್ರಿಸಿ ಮೇಲಿಂದ ಕೆಳಕ್ಕೆ ಉಳುಕಿದ ಭಾಗಕ್ಕೆ ಮುಟ್ಟಿಸಿ, ಮುಟ್ಟಿಸಿ ತೆಗೆಯುತ್ತಾರೆ.

ಗುರು ಗುರು ಬಾಳಿಗ
ಗುರು ಸುರು ಪಾದ

ಗುರು ಬಾಳಿಗ
ಉಳುಕು ಸಳಕು
ಏತರ ಮೇಲೆ ಬಂದೆ
ಕಾಳೆತ್ತಿನ ಮೇಲೆ ಬಿಂದು

ಕೆಂದಗುದುರೆ ಮೇಲೆ
ಇಳಿದೋ ಗುರು
ವಾ ಉರು ಬಾಳಿಗ
ಗುರು ಗುರು ಬಾಳಿಗ
ಗುರು ಸುರು ಪಾದ
ಗುರು ಬಾಳಿಗ
ಅಂಗೈ ಮೇಲೆ ಆಡ್ತಾ ಬಾ ಮುಂಗೈ ಮೇಲೆ ಓಡ್ತಾ ಬಾ
ಹಗ್ಗದುರಿ ಮೇಲೆ ಸೆಂಡಾಡ್ತಾ ಬಾ

ಈ ಮಂತ್ರ ವೈದ್ಯಯನ್ನು ಸಾಮಾನ್ಯವಾಗಿ ಬೆಳಗಿನ ಜಾವದಲ್ಲಿ ಮಾಡಬೇಕು. ರಾತ್ರಿಯೇ ಮಂತ್ರಿಸುವವರ ಮನೆಗೆ ಹೋಗಿ ಹೇಳಿರುತ್ತಾರೆ. ಯಾರನ್ನೂ ಮಾತನಾಡಿಸದೆ, ಸ್ವಲ್ಪವೂ ಸಹ ನೀರನ್ನು ಮುಟ್ಟದೆ ಹೊಟ್ಟೆಗೆ ಆಹಾರ ತೆಗೆದುಕೊಳ್ಳದೆ ಇದ್ದು, ಬೆಳಗಿನ ಸಮಯದಲ್ಲಿ ಉಳುಕಿನ ಮಂತ್ರವಿದ್ಯೆಯನ್ನು ಮಾಡುತ್ತಾರೆ. ಹೀಗೆ ಮಾಡದಿದ್ದರೆ ಮಂತ್ರ ಹಿಡಿಯುವುದಿಲ್ಲ ಎಂಬ ನಂಬಿಕೆ ಸೋಲಿಗರಲ್ಲಿದೆ.

**ಸಾರ್ವಜನಿಕ ಮಂತ್ರವಿದ್ಯೆ:** ಮಂತ್ರವಿದ್ಯೆಯನ್ನು ವ್ಯಕ್ತಿಯ ಇಷ್ಟಕ್ಕೆ ಸೀಮಿತವಾಗಿರದೆ ಇದನ್ನು ಗುಂಪಿನ, ಸಮುದಾಯದ ಎಲ್ಲರಿಗೂ ಒಳ್ಳೆಯದಾಗಲೀ ಎಂದು ಮಾಡುತ್ತಾರೆ. ವಿಧದ ಮಾಂತ್ರಿಕ ವಿದ್ಯೆಯನ್ನು ಸೋಲಿಗ ಸಮುದಾಯದಲ್ಲಿ ತಮ್ಮ ದಿನನಿತ್ಯದಲ್ಲಿ ಮಾಡುತ್ತಾರೆ. ಕುಟುಂಬದಲ್ಲಿ, ವೈಯಕ್ತಿಕವಾಗಿ, ಸಮುದಾಯದಲ್ಲಿ ಹೀಗೆ ಮೂರು ಭಾಗಗಳಲ್ಲಿಯೂ ಹಲವಾರು ರೀತಿಯಾಗಿ ತಮ್ಮ ಆರೋಗ್ಯ ಕಾಪಾಡಿಕೊಳ್ಳಲು, ಎಲ್ಲರೂ ಸಂತೋಷದಿಂದ ಸುಖವಾಗಿರಲೆಂದು ಮಂತ್ರವಿದ್ಯೆಯ ಮೊರೆಹೋಗುತ್ತಾರೆ. ಸೃಷ್ಟಿಯಲ್ಲಿ ನಡೆಯುವ ಎಲ್ಲವೂ ದೇವರ ಲೀಲೆಗಳು ಎಂಬುದಾಗಿ ಭಾವಿಸುತ್ತಾರೆ. ಈ ಸಮುದಾಯದವರು ದೇವರುಗಳು ದೆವ್ವ ತಮ್ಮ ಕುಟುಂಬದಲ್ಲಿ ಮರಣ ಹೊಂದಿದ ಹಿರಿಯರು (ಸಗ್ಗದ ಮನೆಯರು) ಇವರೇ ನಮಗೆ ರೋಗ ನೀಡಿ ಆರೋಗ್ಯ ಹಾಳು ಮಾಡುವವರು, ಇವರೇ ಅವುಗಳನ್ನು ಗುಣಪಡಿಸುವವರು ಎಂದು ಬಲವಾಗಿ ನಂಬಿದ್ದಾರೆ. ಸೋಲಿಗರು ಮಂತ್ರವನ್ನು ಹೇಳುವಾಗ ಆರಂಭದಲ್ಲಿ ಗುರುದೇವನನ್ನು ಮಂತ್ರದಲ್ಲಿ ಸ್ತುತಿಸಿ ಆನಂತರ ಆಯಾಯ ಖಾಯಿಲೆಗೆ ಸಂಬಂಧಿಸಿದ ಮಂತ್ರವನ್ನು ಹೇಳುತ್ತಾರೆ.

**ದೆವ್ವ, ಭೂತ, ಪಿಶಾಚಿ ಹಿಡಿದುಕೊಂಡರೆ ಮಾಡುವ ವೈದ್ಯಮಂತ್ರಗಳು:** ದೆವ್ವ, ಭೂತ, ಪಿಶಾಚಿ ಇವುಗಳು ನಮ್ಮ ಸುತ್ತ ಇರುತ್ತದೆ. ಕಾಡಿನಲ್ಲಿ ಸುತ್ತಾಡುವಾಗ ಕೆರೆ, ಕೊಂಬೆ, ಬಾವಿ ಹಾಗೂ ರಾತ್ರಿಯ ಸಮಯ ಅಮವಾಸ್ಯೆ, ಹುಣ್ಣಿಮೆ ಹಾಗೂ ಸತ್ತ ವ್ಯಕ್ತಿಗೆ ಅನ್ನ-ನೀರು ಹಾಕದೆ ಇದ್ದಾಗ ಅವರು ಆಗಾಗ್ಗೆ ತಿರುಗಾಡುತ್ತಾರೆ. ತಮಗೆ ಇಷ್ಟವಾದವರ ಮೇಲೆ ಬಂದು ಸೇರಿಬಿಡುತ್ತಾರೆ. ಅಲ್ಲದೆ ಮಾಟಣೆ,

ಜಾಟಣೆಯನ್ನು ನಮಗೆ ಆಗದವರು ಮಾಡಿಸುತ್ತಾರೆ ಎಂಬ ನಂಬಿಕೆ ಇಂದಿಗೂ ಸೋಲಿಗರಲ್ಲಿದೆ. ಇವುಗಳನ್ನು ಕಳೆಯಲು ಅಂದರೆ ದೂರ ಮಾಡಲು ಹಲವಾರು ವಿಧಾನಗಳನ್ನು ಅನುಸರಿಸುತ್ತಾರೆ. ಅವುಗಳೆಂದರೆ,

ಸೋಲಿಗರ ಉಪಪಂಗಡಗಳಿವೆ. ಆ ಉಪಪಂಗಡಗಳಲ್ಲಿ ಮಲೆ ಸೋಲಿಗರು, ಬುರುಡೆ ಸೋಲಿಗರು, ಕಾಡು ಸೋಲಿಗರು, ದೇವಸೋಲಿಗರು, ಇವರುಗಳಲ್ಲಿ ಆಯಾಯ ಉಪಪಂಗಡಗಳು ತಮ್ಮದೇ ಆದ ವಿಶಿಷ್ಟವಾದ ಆಚರಣೆಗಳ ಮೂಲಕ ದೆವ್ವ, ಭೂತ, ಪಿಶಾಚಿ ಹಿಡಿದ್ದರೆ ಬಿಡಿಸುವ ಪದ್ಧತಿಗಳಿವೆ.

✓ ಗುಂಜಿ ಉಯ್ಯುವುದು.

✓ ಬುರುಡೆ ಕರೆಯುವುದು.

✓ ದೇವರಿಗೆ ಹರಕೆ ಹೊತ್ತು ಗಾಳಿ ಬಿಡಿಸುವುದು.

**ಗಾಳಿ ಸೋಂಕಿನ ಮಾಂತ್ರಿಕ ವೈದ್ಯ ಪದ್ಧತಿ:** ಯಾರಿಗಾದರೂ ಗಾಳಿ ಸೋಂಕು, ಸುಂಟರಗಾಳಿಯ ಮೂಲಕ ಭೂತ ಅಥವಾ ದೆವ್ವ ಸೋಂಕು ಆಗಿದ್ದರೆ ಸೋಂಕು ಬಿಡಿಸುವವರು ಸಾಮಾನ್ಯವಾಗಿ ಸಾಯಂಕಾಲದ ಸಮಯದಲ್ಲಿ ಸೋಂಕು ಹಿಡಿದಿರುವವರನ್ನು ಮನೆಯಿಂದ ದೂರ ಕರೆದುಕೊಂಡು ಹೊಲದ ಹತ್ತಿರ ಅಥವಾ ಕಾಡಿನ ಹತ್ತಿರ ಕರೆದುಕೊಂಡು ಹೋಗಿ ಒಂದು ಕಡೆ ಸೋಂಕಿರುವವರನ್ನು ಕುಳ್ಳಿರಿಸಿ, ಬಿಡಿಸುವವರು ಕೈಯಲ್ಲಿ ಬೇವಿನ ಸೊಪ್ಪನ್ನು ಹಿಡಿದುಕೊಂಡು ದೂರದಿಂದ ಓಡಿಬಂದು ಮಂತ್ರ ಹೇಳುತ್ತಾ ಆತ ಅಥವಾ ಆಕೆ ಅಥವಾ ಮಕ್ಕಳು ಕುಳಿತಿರುವವರಿಗೆ ತಲೆ, ಮೈಗೆ ಬೇವಿನ ಸೊಪ್ಪಿನಿಂದ ಹೊಡೆಯುತ್ತಾರೆ. ಆಗ ಹೋಯ್ತು, ಹೋಯ್ತು, ಥೂ... ಥೂ... ಥೂ.... ಎಂದು ಹೇಳಿ ಹಿಂದಕ್ಕೆ ತಿರುಗಿ ನೋಡದೆ ಮನೆಗೆ ಕರೆತರುತ್ತಾರೆ. ಹೀಗೆ ಸೋಂಕಿನ ಮೂಲಕ ಗಾಳಿಸೋಂಕನ್ನು ಬಿಡಿಸುತ್ತಾರೆ.

**ಹರಳು ಬಿಡುವುದು:** ಸೋಲಿಗರಲ್ಲಿ ಹರಳು ಶಾಸ್ತ್ರ(ಹಳ್‌ಶಾಸ್ತ್ರ) ಎಂದು ಮಾಡುತ್ತಾರೆ. ಕೆಲವರು ಮಾತ್ರ ತಮ್ಮ ಮನೆಯಲ್ಲಿ ಹರಳನ್ನು ತಂದು ಇಟ್ಟುಕೊಂಡಿರುತ್ತಾರೆ. ಕೆಲವರು ಆಗತಾನೇ ಕಲ್ಲನ್ನು ಆಯ್ದು ತಂದು ಮಂತ್ರಿಸಿ ಹರಳು ಬಿಡುತ್ತಾರೆ. ಸಾಮಾನ್ಯವಾಗಿ ಪುರುಷರು ಮಾತ್ರ ಹರಳನ್ನು ಬಿಡಿಸುತ್ತಾರೆ. ಸೋಲಿಗರಲ್ಲಿ ಯಾವುದಾದರೂ ಶುಭಕಾರ್ಯ ಮಾಡುವಾಗ ತಮ್ಮ ಕೆಲಸ ಕಾರ್ಯ ಸುಗಮವಾಗಿ ಆಗುತ್ತದೆಯೆ ಅಥವಾ ತಮಗೇನಾದರೂ ಕಷ್ಟ ಬಂದಿದ್ದರೂ ಸಹ ಎಲ್ಲಿಂದ? ಯಾರಿಂದ? ಹೇಗೆ? ಇದರ ಪರಿಹಾರ ಇತ್ಯಾದಿ ವಿಷಯಗಳನ್ನು ಹರಳು ಶಾಸ್ತ್ರದ ಮೂಲಕ ಪರಿಹರಿಸಿಕೊಳ್ಳುತ್ತಾರೆ. ೧೨ ಹರಳು, ೯ ಹರಳು, ೧೫ ಹರಳು ಹೀಗೆ ಹರಳನ್ನು ಈಗಲೂ ಬಿಡುವ ಪದ್ಧತಿ ಸೋಲಿಗರಲ್ಲಿದೆ.

**ಬಿದ್ದುಬೀಳು ಎತ್ತುವುದು:** ಸಾಮಾನ್ಯವಾಗಿ ಬಿದ್ದುಬೀಳು ಎತ್ತುವುದು ಹೆಚ್ಚು ಮಕ್ಕಳಲ್ಲಿ ಕಂಡುಬರುತ್ತದೆ. ಸೋಲಿಗರಲ್ಲಿ ಮಕ್ಕಳು ಆಟವಾಡುವಾಗ, ಹೊಲದಲ್ಲಿ, ಹಿತ್ತಲಿನಲ್ಲಿ ಮಧ್ಯಾಹ್ನದ ಸಮಯ, ಅಮವಾಸ್ಯೆ, ಹುಣ್ಣಿಮೆ, ಹೊತ್ತು ಮುಳುಗುವಾಗ ಹೀಗೆ ಹಲವಾರು ಸಂದರ್ಭದಲ್ಲಿ ಬಿದ್ದ ಪರಿಣಾಮ ಗಾಯವಾಗಿ ಹುಷಾರಿಲ್ಲದೆ ಚಂಡಿಹಿಡಿದು ಹಾಸಿಗೆ ಹಿಡಿದಿದ್ದರೆ ಅಂತಹ ಮಕ್ಕಳಿಗೆ ಬಿದ್ದುಬೀಳನ್ನು ಎತ್ತಿಸುತ್ತಾರೆ. ಹಳ್ಳದ ಬದಿಗೆ(ಗಂಗೆಯ ಸ್ಥಾನ) ಕರೆದುಕೊಂಡು ಹೋಗಿ ರಂಗುಹಾಕಿ, ಸುಣ್ಣ, ಇಟ್ಟಿಗೆ ಪುಡಿಯಿಂದ

ಹಿಜ್ಜಲು(ಮನೆ) ಪುಡಿಯಿಂದ ರಂಗೋಲಿ ಹಾಕಿ, ಗುಂಡಿ ತೋಡಿ, ಪೂಜೆ ಮಾಡಿ ವಿವಿಧ ರೀತಿಯ ಹೂವು ಹಾಕಿ, ಆ ಗುಂಡಿಗೆ ಒಂದು ಜಿರಳೆಹುಳವನ್ನು(ಕಾಕ್ರೋಚ್) ಹಾಕಿ ಮಣ್ಣಿನಿಂದ ಗುಂಡಿಯನ್ನು ಮುಚ್ಚಿ ಪೂಜೆ ಮಾಡಿ ಕಳೆದು ಹಿಂದಕ್ಕೆ ತಿರುಗಿ ನೋಡದೆ, ಸೀದಾ ಮನೆಗೆ ಕರದುಕೊಂಡು ಬರುತ್ತಾರೆ. ಈ ಬಿದ್ದುಬೀಳು ಎತ್ತುವುದನ್ನು ಹೆಚ್ಚು ಪುರುಷರು ಮಾಡುತ್ತಾರೆ ಆದರೂ ಸಹ ಕೆಲವು ಕಡೆ ಮಹಿಳೆಯರೂ ಸಹ ಮಾಡುವುದು ಉಂಟು.

ಜಿರಳೆಯನ್ನು(ಕಾಕ್ರೋಚ್) ಗುಂಡಿಗೆ ಹಾಕಿ ಮುಚ್ಚಿ ಪೂಜೆ ಮಾಡುವುದರಿಂದ ಆ ಮಗುವಿಗೆ ಬಿದ್ದ ಜಾಗದಲ್ಲಿ ನೆಟ್ಟಿರುವ(ಹಿಡಿದಿರುವ) ಎಲ್ಲಾ ಪಿಶಾಚಿ ಹೊರಟುಹೋಗಿ ಅದನ್ನು ಹೂತಾಕಿದ್ದೇವೆ. ಸಾಯಿಸಿದ್ದೇವೆ. ಹೊರಗಡೆ ಬಿಡುವುದಕ್ಕೆ ಆಗುವುದಿಲ್ಲ. ಅದು ಸತ್ತೋಯ್ತು ಎಂಬ ಕಲ್ಪನೆ ಸೋಲಿಗರಲ್ಲಿದೆ. ಈಗಲೂ ಸಹ ಈ ರೀತಿಯ ಪದ್ಧತಿಯು ಆಚರಣೆ ಇದೆ. ಉದಾ: ಚಾಮರಾಜನಗರ, ಮೈಸೂರು ಜಿಲ್ಲೆಗಳಲ್ಲಿ ಈಗಲೂ ಮಾಡುತ್ತಾರೆ. 'ಮದ್ದೂರು ಕಾಲೋನಿಯಲ್ಲಿ' ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇಲ್ಲಿ ಸೋಲಿಗರ ಮಾದಮ್ಮ ತುಂಬ ಪ್ರಸಿದ್ಧಿ ಪಡೆದಿದ್ದಾರೆ. ಹಾಗೆಯೇ ಮಹದೇವಮ್ಮ, ಸಣ್ಣಮ್ಮ, ಮತ್ತು ಪುರುಷರಲ್ಲಿ ಶ್ರೀ ಈರಯ್ಯ, ಎತ್ತಯ್ಯ(ದನಗಾರ ಮಾದಯ್ಯ), ಭೋಜಯ್ಯ, ಮಾದರಾಜು, ದೊಡ್ಡಣ್ಣ ಮುಂತಾದವರು ಈಗಲೂ ಸಹ ಈ ರೀತಿಯ ಮಾಂತ್ರಿಕ ವೈದ್ಯಪದ್ಧತಿಯನ್ನು ಮಾಡುತ್ತಾರೆ.

**ರಂಜು ಮಾಡುವುದು:** ಸಣ್ಣಮಕ್ಕಳು ಹೆಣ್ಣು ಮತ್ತು ಗಂಡು ಮಕ್ಕಳ ಭಯಪಟ್ಟಿದ್ದರೆ ರಚ್ಚೆ, ಹಠ ಹಿಡಿಯುತ್ತಿದ್ದರೆ, ಹುಬ್ಬು ಹಾಗೂ ಹಠ ಹಿಡಿಯುತ್ತಿದ್ದರೆ, ಹುಬ್ಬು ಹಾಗೂ ಉಬ್ಬಿನ ಕೂದಲು ನೆಟ್ಟಗೆ ನಿಂತುಕೊಂಡಿದ್ದರೆ ಆಗಾಗ ಹುಷಾರಿಲ್ಲದೆ ಆಗುತ್ತಿದ್ದರೆ, ಮಕ್ಕಳು ಸರಿಯಾಗಿ ಊಟ ಮಾಡಲು ಕಷ್ಟಪಡುತ್ತಿದ್ದರೆ, ಹಾಗೂ ಯಾಕೋ ಮಕ್ಕಳು ಬೆಳವಣಿಗೆ ಆಗದೇ ಇರುತ್ತಿದ್ದರೆ, ಈ ಎಲ್ಲಾ ಕಾರಣಗಳಿಗೆ ಅಂತಹ ಮಕ್ಕಳಿಗೆ 'ರಂಜನ್ನು' ಮಾಡುತ್ತಾರೆ. ಇದನ್ನೂ ಸಹ ಹೆಂಗಸರು ಮತ್ತು ಪುರುಷರು ಮಾಡುತ್ತಾರೆ. ಹುಷಾರಿಲ್ಲದ ಮಕ್ಕಳ ಮನೆಯ ಮುಂದೆಯೇ ಈ ರಂಜಿನ ಮಾಂತ್ರಿಕ ವೈದ್ಯ ನಡೆಯುತ್ತದೆ.

**ರಂಜು ಮಾಡುವ ವಿಧಾನ :** ಅರುವಾಣ(ತಟ್ಟೆ) ಒಂದು ಚೊಂಬು ಕೈಯ್ಯಣ್ಣೆ ಬತ್ತಿ, ಸೀಮೆ ಎಣ್ಣೆ ದೀಪ, ಅರಿಶಿಣ, ಕುಂಕುಮ, ೫ ತರಹದ ಹೂವು ಎಲ್ಲವನ್ನೂ ನೀರಿನಲ್ಲಿ ಬೆರಸಿ ಅರಿಶಿಣ ನೀರು ಮಾಡಿ, ಕರ್ಪೂರ ಹಚ್ಚಿ ಪೂಜೆ ಮಾಡಿ, ಗಂಧದ ಕಡ್ಡಿ ಹಿಡಿದು ಮೂರು ಸಲ ಎಡ ಕಾಲಿನ ಹೆಬ್ಬೆರಳಿನಿಂದ ತಲೆಯ ಮೇಲಿಂದ ಕೆಳಕ್ಕೆ ಇಳಿತೆಗೆದು ಮತ್ತು ಎಡ ಕೈಯ್ಯ ಹೆಬ್ಬೆರಳಿನಿಂದ ಇಳಿತೆಗೆದು ಕೈಯಿಂದ ಹಣೆಗೆ ಕುಂಕುಮ ಅರಿಶಿಣದ ರಸ ಹಚ್ಚಿ ಥೂ. . . ಥೂ. . . ಥೂ. . . ಎಂದು ಉಗುಳಿ, ಹೋಯ್ತು. . .. ಹೋಯ್ತು. .. .. ಹೋಯ್ತು. .. ಎಂದು ತಟ್ಟೆಯಿಂದ ೩ ಸಲ ತಲೆ ಬಳಸಿ, ಇಳಿತೆಗೆದು ಆನಂತರ ಒಂದು ಬಿಳಿಯ ಹತ್ತಿ ಬಟ್ಟೆಗೆ ಹರಳೆಣ್ಣೆ ಹಚ್ಚಿಕೊಂಡು ಅದಕ್ಕೆ ಬೆಂಕಿ ಹಚ್ಚಿದರೆ ಆ ಬಟ್ಟೆ ಧಿಗಧಿಗನೇ ಜೋರಾಗಿ ಉರಿಯುತ್ತದೆ. ಅದನ್ನು ಮುಗುವಿಗೆ ಆಕಡೆ–ಈಕಡೆ ಇಳಿತೆಗೆದು ತೋರಿಸಿ, ಚೊಂಬಿಗೆ ಹಾಕಿ ದಬ್ಬಾಕಿ(ಕೆಳಗೆ ಮಾಡಿ) ಮುಚ್ಚುವುದು. ತಕ್ಷಣ ತಟ್ಟೆಯಲ್ಲಿರುವ ನೀರು ಸರ್ರನೇ ಎಳೆದುಕೊಂಡರೆ ಏನೋ ತೊಂದರೆ ಇತ್ತು ಎಂದು ತಿಳಿಯುತ್ತದೆ.

ಚೊಂಬು ಒಂದು ದಿನದವರೆಗೆ ತಟ್ಟೆಯನ್ನು ಕಚ್ಚಿ ಹಿಡಿದಿರುತ್ತದೆ. ನಂತರ ಹೋಯಿತು ಎಲ್ಲಾ ಎಂದು ತಿಳಿದು, ಬೆಳಿಗ್ಗೆ ಆ ನೀರನ್ನು ಮೂರು ಕೂಡುವ ದಾರಿಗೆ ಬಿಟ್ಟು ಬಿಡುತ್ತಾರೆ. ಅಲ್ಲಿಗೆ ಕಾಟ ತೊಲಗಿತು ಎಂದು ಸೋಲಿಗರಲ್ಲಿ ನಂಬಿಕೆಯಿಂದ ಈ ರೀತಿಯ ಆಚರಣೆಯನ್ನು ಮಾಡುತ್ತಾರೆ.

ಹೀಗೆ ಆದಿಮಾನವ ತನ್ನ ರೋಗವನ್ನು ಗುಣಪಡಿಸುವ ಸಲುವಾಗಿ ಧರ್ಮವನ್ನು ಮೊರೆ ಹೊಕ್ಕಂತೆಯೇ, ಸೋಲಿಗರು ಮಂತ್ರವಿದ್ಯೆಯನ್ನು ಬಳಸಿಕೊಂಡು ತಮಗೆ ಕುಟಂಬಕ್ಕೆ ಬಂದೊದಗುವ ಸಮಸ್ಯೆಗಳನ್ನು, ಖಾಯಿಲೆ ಗಂಡಾಂತರಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು.

ಈ ಮಾಂತ್ರಿಕ ವಿದ್ಯೆಯಲ್ಲಿ ರೋಗವನ್ನು ಉಂಟುಮಾಡುವ ಹಾಗೂ ಅದನ್ನು ಇಲ್ಲವಾಗಿಸುವ ಎರಡೂ ಶಕ್ತಿಗಳೂ ಮಂತ್ರವಿದ್ಯೆಗಿದೆ. ಚಂದ್ರು ಕಾಳೇನಹಳ್ಳಿಯವರು ತಮ್ಮ ಪುಸ್ತಕವಾದ 'ಸೋಲಿಗರ ಸಂಸ್ಕೃತಿ'ಯಲ್ಲಿ ಹೀಗೆ ಹೇಳಿದ್ದಾರೆ. "ಸಮಾನತತ್ವ ಮಂತ್ರವಿದ್ಯೆ(Home Opathic Magic)ಗೂ ಜನಪದ ವೈದ್ಯಕ್ಕೂ ಹತ್ತಿರದ ಸಂಬಂಧವಿದೆ. Another beneficient use of Home Opathic Magic is to heal or prevent sickness"[೯] ಎಂದು ಜೆಮ್ಸ್ ಜೆ. ಪ್ರೇಜರ್ ಹೇಳಿರುವ ಮಾತನ್ನು ಇಲ್ಲಿ ತಿಳಿಸಿದ್ದಾರೆ. ಅದೇ ತೀತಿಯಲ್ಲಿ ಸೋಲಿಗರು ತಮ್ಮಲ್ಲಿ ಯಾರಿಗಾದರೂ ಸೋಂಕಿಗೆ ಒಳಗಾಗಿದ್ದರೆ, ಗಿಡಮೂಲಿಕಾ ಬಲ್ಲ ಬ್ಯಕ್ತಿ, ಸೋಂಕಿನ ಸೊಪ್ಪು, ಬೆಳ್ಳುಳ್ಳಿ, ಮೆಣಸು ಅರೆದು ರೋಗಿಯ ತೋಳಿಗೆ ಕಟ್ಟುತ್ತಾರೆ. ಆನಂತರ ಆ ಕಟ್ಟಿದ ಔಷಧಿಯನ್ನು ಬಿಚ್ಚಿ ಒಂದು ಹಸಿರು ಗಿಡ, ಅಥವಾ ಮರಕ್ಕೆ ಕಟ್ಟುತ್ತಾರೆ. ಹೀಗೆ ಕಟ್ಟುವ ಉದ್ದೇಶವೇನೆಂದರೆ ರೋಗವನ್ನು ರೋಗಿಯಿಂದ ಗಿಡಕ್ಕೆ ವರ್ಗಾಯಿಸುವುದು, ರೋಗವನ್ನು ರೋಗಿಯಿಂದ ಬೇರೆ ಪ್ರಾಣಿಗೆ, ಸಸ್ಯಕ್ಕೆ, ಅಚೇತನ ವಸ್ತುವಿಗೆ ವರ್ಗಾಯಿಸುವುದು; ಇದನ್ನು ಸೋಲಿಗರೂ ಸಹ ಸಂಪೂರ್ಣವಾಗಿ ನಂಬುತ್ತಾರೆ.

ಹೀಗೆ ಸೋಲಿಗರು ತಮ್ಮ ರೋಗವನ್ನು ಗುಣಪಡಿಸಿಕೊಳ್ಳುವ ಸಲುವಾಗಿ ಮಾಂತ್ರಿಕ ವಿದ್ಯೆಯನ್ನು ಬಳಸಿಕೊಳ್ಳುವುದನ್ನು ಇಂದಿಗೂ ಸಹ ಕಾಣುತ್ತೇವೆ. ಈ ರೀತಿಯಲ್ಲಿ ಮಂತ್ರ ಧಾರ್ಮಿಕ ವಿಧಿಗಳಿಂದ ವಾಸಿಯಾಗುವ ಖಾಯಿಲೆಗಳು ಮುಖ್ಯವಾಗಿ ಮನುಷ್ಯನ ಮನಸ್ಸಿನ ಮೇಲೆ ಸಂಪೂರ್ಣವಾಗಿ ಪ್ರಭಾವ ಬೀರುತ್ತವೆ. ಸೋಲಿಗರಲ್ಲಿ ಮೊದಲು ಯಾವುದೇ ಧಾರ್ಮಿಕ, ವೈದ್ಯ ಮಾಡುವಾಗಲೂ ಮೊದಲು ಮಾಂತ್ರಿಕನು ರೋಗಿಯ ಮನಸ್ಸನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುವುದಲ್ಲದೇ ಸೋಲಿಗರಲ್ಲಿ ಯಾರೂ ತಮ್ಮಡಿ,. ಮಾಂತ್ರಿಕ ವಿದ್ಯೆ ಮಾಡುವವರು, ದೇವರು, ದೆವ್ವ, ಭೂತ ಇತರೇ ಯಾವುದೇ ಮಾಂತ್ರಿಕ ವಿದ್ಯೆಯಿಂದ ರೋಗಿಯನ್ನು ಗುಣಪಡಿಸುವ ಅಥವಾ ಮಾಟಾಣೆ–ಜಾಟಣೆ ಮಾಡುವ ವ್ಯಕ್ತಿಗಳನ್ನು ಕಂಡರೆ ಭಯ–ಭಕ್ತಿ ಇರುತ್ತದೆ. ಇವರುಗಳಿಗೆ ಹೆದರುತ್ತಾರೆ. ನಮಗೇನಾದರೂ ಮಾಡಿಬಿಡುತ್ತಾರೆ ಎಂಬ ಭಯವಿರುತ್ತದೆ."[೧೦]

ಈ ಎಲ್ಲಾ ಕಾರಣಗಳಿಂದ ಮಾಂತ್ರಿಕನು ಏನು ಹೇಳುತ್ತಾನೆಯೇ ಹಾಗೆಯೇ ರೋಗಿಯು ಕೇಳುತ್ತಾ ಹೋಗುತ್ತಾನೆ. ಈ ಕಾರಣದಿಂದಾಗಿಯೇ ರೋಗಿಯ ಮನಸ್ಸಿಗೆ ತನ್ನ ರೋಗ ನಿಜವಾಗಿ/ಣ ಗುಣವಾಗುತ್ತದೆ ಎಂಬ ಭರವಸೆ ಹೊಂದಿದವನಾಗಿರುತ್ತಾನೆ. ಈ ರೀತಿಯಲ್ಲಿ ಸೋಲಿಗರಲ್ಲಿ ಮಾಂತ್ರಿಕ ವಿದ್ಯೆಯನ್ನು ಗಮನಿಸಿದಾಗ ರೋಗಿಗಳಿಗೆ ಪ್ರೇರಣೆಯೇ ಮೂಲವಾಗಿದ್ದು, ಮನಸ್ಸಿನ ಪರಿಣಾಮ ದೇಹದ ಮೇಲೆ ಆಗಿ ಈ ರೀತಿಯ ಮನೋದೈಹಿಕ ರೋಗಗಳು ಸಾಕಷ್ಟು ಕಾಣಿಸಿಕೊಳ್ಳುತ್ತವೆ.

ಆಧುನಿಕ ವೈದ್ಯಕೀಯ ಸೌಕರ್ಯ ಸೋಲಿಗರಿಗೆ ಕಡಿಮೆ ಎಂದೇ ಹೇಳಬಹುದು. ಆಸ್ಪತ್ರೆ ಎಂಬ ವೈದ್ಯಕೀಯ ವ್ಯವಸ್ಥೆಯ ಮೂಲಕ ವ್ಯಕ್ತಿಯು ರೋಗಿಯನ್ನು ಗುಣಪಡಿಸಬಹುದು ಎಂಬ ಪರಿಕಲ್ಪನೆಯನ್ನು ತಿಳಿದುಕೊಂಡಿದ್ದು, ಬಿಳಿಗಿರಿರಂಗನ ಬೆಟ್ಟದಲ್ಲಿ ಡಾ॥ ಸುದರ್ಶನ್ ಅವರು ಪೋಡು, ಪೋಡುಗಳಲ್ಲಿ ವೈದ್ಯಕೀಯ ಸೇವೆ ಮಾಡುತ್ತಾ, ತದನಂತರ ಬಿಳಿಗಿರಿರಂಗನ ಬೆಟ್ಟದಲ್ಲಿ ಆಸ್ಪತ್ರೆ ತೆರೆದು ಚಿಕಿತ್ಸೆ ಕೊಡಲು ಪ್ರಾರಂಭಿಸಿದ ಮೇಲೆ ಸೋಲಿಗರು ಆಧುನಿಕ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಕಾಡಿನ ಮಧ್ಯದಲ್ಲಿ ವಾಸವಾಗಿದ್ದ ಸೋಲಿಗರಿಗೆ ಹೇರಳವಾಗಿ ಕಾಡಿನ ಗಿಡಮೂಲಿಕೆ, ನಾರು–ಬೇರು ಔಷಧಿ ಸಿಗುತ್ತಿತ್ತು. ಆದರೆ ಅರಣ್ಯ ನೀತಿಯಿಂದಾಗಿ ಸೋಲಿಗರನ್ನು ಕಾಡಿನಿಂದ ನಾಡಿನತ್ತ, ಕಾಡಿನ ಅಂಚಿಗೆ ಸ್ಥಳಾಂತರಿಸಲಾಗಿದೆ. ಇದರಿಂದ ಅವರಿಗೆ ಔಷಧಿಗಳು ಸರಿಯಾಗಿ ಸಿಗುತ್ತಿಲ್ಲ. ಕೆಲವೊಂದು ಔಷಧಿಗಳು ಕಾಡಿನ ಮಧ್ಯದಲ್ಲಿರುತ್ತವೆ. ಅವುಗಳನ್ನು ತರಲು ಅರಣ್ಯ ಇಲಾಖೆಯವರ ಭಯ, ಆತಂಕ ಇದೆ. ಅಲ್ಲದೇ ಎಷ್ಟೋ ಕಾಡಿನ ಔಷಧಿಗಳನ್ನು ಮರೆಯುತ್ತಾ ಬರುತ್ತಿದ್ದಾರೆ. ಸೋಲಿಗರಲ್ಲಿ ವೈದ್ಯಪದ್ಧತಿಯಲ್ಲಿ ರೋಗಿಯನ್ನು ಗುಣಪಡಿಸುವಲ್ಲಿ ದೇವರನ್ನು ಕೇಳುವುದು, ಸಗ್ಗದ ಮನೆಯವರು, ನಾಟಿ ವೈದ್ಯಪದ್ಧತಿ ಹಾಗೂ ಮಾಂತ್ರಿಕ, ಮಂತ್ರ–ತಂತ್ರಗಳ ಮೂಲಕ ಮಾಡುವ ವೈದ್ಯಪದ್ಧತಿ ಈ ಎಲ್ಲ ವಿಧಾನಗಳ ವೈದ್ಯಪದ್ಧತಿಯನ್ನು ನೋಡಿದಾಗ ಹಿಂದಿಗಿಂತ ಇತ್ತೀಚೆಗೆ ಕೆಲವು ಬದಲಾವಣೆಗಳು ಆಗಿರುವುದನ್ನು ಕಾಣುತ್ತೇವೆ.

ಸೋಲಿಗ ಬುಡಕಟ್ಟು ಸಮುದಾಯದ ಜನರಲ್ಲಿ ನಾಟಿ ವೈದ್ಯಪದ್ಧತಿಯ ಕ್ರಮಗಳನ್ನು ಕಲಿಯುವವರ ಸಂಖ್ಯೆಯಲ್ಲಿ ಕಡಿಮೆಯಾಗುತ್ತಾ ಬರುತ್ತಿದೆ. ಅವರು ಹಲವಾರು ಕಾರಣಗಳಿಂದ ಔಷಧಿಯ ಗುಟ್ಟನ್ನು ಬೇರೆಯವರಿಗೆ ಹೇಳಿಕೊಡುವುದಿಲ್ಲ. ಔಷಧಿ ಕೊಡುತ್ತಾರೆ; ಆದರೆ ಆ ಔಷಧಿಯ ಗಿಡಮೂಲಿಕೆಯನ್ನು ತೋರಿಸುವುದಿಲ್ಲ. ತಮ್ಮಲ್ಲಿ ಯಾರಿಗಾದರೂ ಗಿಡಮೂಲಿಕಾ ಔಷಧಿಯನ್ನು ತೋರಿಸಬೇಕಾದರೆ, ಕಾಡಿಗೆ ಕರೆದುಕೊಂಡು ಹೋಗಿ, **ಹೋಗುತ್ತಲೇ ತಮ್ಮ ಕಾಲಿನಿಂದ ಆ ಗಿಡವನ್ನು 'ಒದ್ದು'** ಮುಂದೆ ಹೋಗುತ್ತಾರೆ. ತಿಳಿದುಕೊಳ್ಳುವ ವ್ಯಕ್ತಿ ಸೂಕ್ಷ್ಮವಾಗಿ ಆ ಗಿಡವನ್ನು ಪತ್ತೆ ಹಚ್ಚಬೇಕು. ಆದುದರಿಂದ ಕೆಲವು ಖಾಯಿಲೆಗೆ ಔಷಧಿ ಕೊಡುವವರು ಗತಿಸಿರುವುದರಿಂದ ಹಲವಾರು ಬಗೆಯ ನಾಟಿ ಔಷಧಿಗಳು ಈಗಾಗಲೇ ನಾಶ ಹೊಂದಿದೆ. ಹಿಂದೆ ಯಾರೂ ಸಹ ಅಕ್ಷರ, ಬರವಣಿಗೆ ಜ್ಞಾನ ಇಲ್ಲದ ಕಾರಣ ಯಾವುದೇ ರೀತಿಯ ಬರವಣಿಗೆಯ ಪುಸ್ತಕ ಕಾಣುವುದಿಲ್ಲ. ಇತ್ತೀಚೆಗೆ ಸೋಲಿಗ ಯುವಜನರಿಗೆ ಕಾಡುಗಳಲ್ಲಿ ಅಲೆದಾಡುವುದು ತಪ್ಪುತ್ತಿರುವುದರಿಂದ ಅವರು ಅರಣ್ಯದೊಳಗೆ ಹೋಗಿ ಗಿಡಮೂಲಿಕಾ ಔಷಧಿಗಳನ್ನು ತಯಾರಿಸಿ ಬಳಸುವ ವಿಧಾನಗಳು ಕಷ್ಟವಾಗಿ ಪರಿಣಮಿಸುತ್ತಿವೆ. ಆದರೆ ಹಿಂದೆ ಸೋಲಿಗರು ಕೆಲವು ಕಾಡುಪ್ರಾಣಿಗಳನ್ನು ಬೇಟೆಯಾಡಿ ತಂದು ಅವುಗಳ ಮಾಂಸವನ್ನು ತಂದು ಬಳಸುವುದು ಇಂದು ಶಿಕ್ಷಾರ್ಹ ಅಪರಾಧವಾಗಿದೆ. ಅಂತಹ ವೈದ್ಯಪದ್ಧತಿಯ ಚಿಕಿತ್ಸಾ ಕ್ರಮಗಳು ಸಂಪೂರ್ಣವಾಗಿ ನಾಶವಾಗಿದೆ. ಅಲ್ಲದೆ ಆಧುನಿಕ ಆಸ್ಪತ್ರೆ, ಸಮೂಹ ಮಾಧ್ಯಮದ ಮೂಲಕ ಬಿತ್ತರವಾಗುವ ಜಾಹೀರಾತುಗಳನ್ನು ಆಲಿಸುವ ಅಥವಾ ನೋಡುವ ಸೋಲಿಗ ಸಮುದಾಯ ಯುವಕ–ಯುವತಿಯರು ಹೆಚ್ಚಾಗಿ ಮಾತ್ರೆಗಳು, ಕೆಮ್ಮಿನ ಔಷಧಿ, ಜ್ವರದ ಔಷಧಿಗಳನ್ನು ಬಳಸುವುದು ಕಂಡುಬರುತ್ತಿದೆ.

ಸೋಲಿಗರ ಮನೆ–ಮನೆಗೆ ತೆರಳಿ ವೈದ್ಯಕೀಯ ಸೇವೆ ಮಾಡುವ ದಾದಿಯರು, ನರ್ಸ್‌ಗಳು, ಆಶಾಗಳು, ಆಸ್ಪತ್ರೆಯ ಡಾಕ್ಟರ್‌ಗಳು, ಗುಳಿಗೆ ಸೂಚಿ(Injection) ಕೊಡುವುದರ ಮೂಲಕ

ಬದಲಾವಣೆಯನ್ನು ತರುವುದರ ಜೊತೆಗೆ ಸೋಲಿಗರ ಮೂಲ ಸಂಸ್ಕೃತಿಯ ಜೊತೆಗೆ ಮೂಲ ನಾಟಿ ವೈದ್ಯಪದ್ಧತಿಯಲ್ಲೂ ಸಡಿಲಿಕೆ ಉಂಟಾಗುತ್ತಿದೆ. ಇದಕ್ಕೆ ಪರ್ಯಾಯ ಮಾರ್ಗವನ್ನು ಕಂಡುಕೊಳ್ಳಲು ಸಾಧ್ಯವಾಗದ ಸೋಲಿಗರು ಸಹಜವಾಗಿಯೇ ಶಿಷ್ಟ ವೈದ್ಯ ಪದ್ಧತಿಯನ್ನು ಅವಲಂಬಿಸಲು ಪ್ರಾರಂಭಿಸುತ್ತಿದ್ದಾರೆ. ಇದು ನಾಟಿ ಔಷಧ ಪದ್ಧತಿಯ ಹಿನ್ನಡೆಗೆ ಕಾರಣವಾಗುತ್ತಿದೆ.

**ಸರಕಾರದ ಕೆಲವು ಯೋಜನೆಗಳಿಂದ ನಾಟಿ ವೈದ್ಯಪದ್ಧತಿಯು ಕ್ಷೀಣಿಸುತ್ತಿವೆ**

ಸರಕಾರದಿಂದ ಸೋಲಿಗರಿಗೆ ಸಿಗುವ ಯೋಜನೆಗಳೂ ಸಹ ನಾಟಿವೈದ್ಯ ಪದ್ಧತಿಯು ಕ್ಷೀಣಿಸುವಿಕೆಯಲ್ಲಿ ಪ್ರಭಾವ ಬೀರಿದೆ. ಇಂದು ಗರ್ಭಿಣಿ ಮಹಿಳೆಯರಿಗೆ, ಬಾಣಂತಿ ಮಹಿಳೆಯರಿಗೆ, ಮಕ್ಕಳಿಗೆ ಸರಕಾರದಿಂದ ಸಿಗುವ ವಿಶೇಷ ಸವಲತ್ತುಗಳಿಗೆ ಜನರು ಆಕರ್ಷಿತರಾಗುತ್ತಿದ್ದಾರೆ. ಹೆರಿಗೆ ಭತ್ಯೆ, ಮಡಿಲು ಯೋಜನೆ ಯಡಿಯಲ್ಲಿ ಮಗುವಿನ ಆರೈಕೆಗಾಗಿ ಒದಗಿಸಲಾಗುವ ವಸ್ತುಗಳನ್ನು ಪಡೆಯುವ ಸಲುವಾಗಿಯೇ ಹತ್ತಿರದ ಅಂಗನವಾಡಿಯಲ್ಲಿ ತಮ್ಮ ಹೆಸರನ್ನು ಬರೆಯಿಸಿ, ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸುವ ಮೂಲಕ ಅನೇಕ ವಸ್ತುಗಳನ್ನು ಪಡೆಯುತ್ತಾರೆ. ಅಲ್ಲದೆ ಮುಖ್ಯವಾಗಿ ಪ್ರಸ್ತುತ ದಿನಗಳಲ್ಲಿ ಮಗುವಿನ ಹುಟ್ಟಿದ ದಿನಾಂಕ ತಾಯಿಯ ರೆಕಾರ್ಡ್ ಇವುಗಳು ಬಹಳ ಮುಖ್ಯ. ತನಗೆ ಇಷ್ಟವಿಲ್ಲದಿದ್ದರೂ ಬಲವಂತವಾಗಿ ಯಾದರೂ ಮತ್ತು ಕೆಲವು ಸರಕಾರಿ ಸೌಲಭ್ಯ ಪಡೆಯುವುದಕ್ಕೋಸ್ಕರವಾದರೂ ಆಸ್ಪತ್ರೆಗೆ ತೆರಳಿ ಹೆರಿಗೆ ಮಾಡಿಸಿಕೊಳ್ಳುತ್ತಾರೆ. ಇದರ ಪರಿಣಾಮವಾಗಿ ಪೋಡುಗಳಲ್ಲಿ, ಕಾಲೋನಿಗಳಲ್ಲಿ ಸೂಲಗಿತ್ತಿಯಿಂದ ಮಾಡಿಸುತ್ತಿದ್ದ ಅದೆಷ್ಟೋ ಹೆರಿಗೆ ಪದ್ಧತಿಯು ಕಡಿಮೆಯಾಗತೊಡಗಿದೆ. ಹಿಂದೆ ಬಿಳಿಗಿರಿರಂಗನ ಬೆಟ್ಟದ ಯರಕನಗದ್ದೆ ಪೋಡಿನಲ್ಲಿ ವಾಸಿಸುತ್ತಿದ್ದ ಪ್ರಸಿದ್ಧ ಹೆರಿಗೆ ತಜ್ಞೆ ಪ್ರಶಸ್ತಿ ಪುರಸ್ಕೃತ ಜೆಲ್ಲೆ ಸಿದ್ದಮ್ಮ ಆಸ್ಪತ್ರೆಯನ್ನೇ ಕಾಣದ ಸಮಯದಲ್ಲಿ ಸುಮಾರು ೩೦೦೦ಕ್ಕೂ ಹೆಚ್ಚು ಹೆರಿಗೆಯನ್ನು B.R.T. ಹಾಗೂ ಚಾಮರಾಜನಗರ ಸುತ್ತಮುತ್ತ ಮಾಡಿಸಿದ್ದಾರೆ ಹಾಗೂ ಪ್ರಸಿದ್ಧಿಯನ್ನು ಪಡೆದಿದ್ದರು. ಇದೇ ರೀತಿಯಲ್ಲಿ ಅದೆಷ್ಟೋ ಮಂದಿ ಸೋಲಿಗರಲ್ಲಿ ಹೆರಿಗೆ ಮಾಡಿಸುವವರಿದ್ದಾರೆ. ಆದರೆ ಈಗ ಆಧುನಿಕ ಹೆರಿಗೆ ಆಸ್ಪತ್ರೆ ಪದ್ಧತಿಯಿಂದ ಸೂಲಗಿತ್ತಿಯರಲ್ಲಿ ಹೆರಿಗೆಯನ್ನು ಮಾಡಿಸಿಕೊಳ್ಳುತ್ತಿರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಹಾಗಾಗಿ ಹೆರಿಗೆ ಮಾಡಿಸುವುದನ್ನು ಕಲಿಯುವವರ ಸಂಖ್ಯೆಯು ಕಡಿಮೆಯಾಗುತ್ತಿದೆ. ಇದರ ಪರಿಣಾಮವಾಗಿ ಸೂಲಗಿತ್ತಿಯರು ಹೆರಿಗೆ ಮಾಡುವ ವಿಚಾರದಲ್ಲಿ ನಿರಾಸಕ್ತಿಯನ್ನು ತಾಳುತ್ತಿದ್ದಾರೆ. ಅಲ್ಲದೆ ಪೋಡುಗಳಲ್ಲಿ ಕಾಲೋನಿಗಳಲ್ಲಿ ಅವರುಗಳ ಸಂಖ್ಯೆಯೂ ಕಡಿಮೆಯಾಗುತ್ತಿದೆ. ಮುಖ್ಯವಾಗಿ ಹೆರಿಗೆಯ ಸಮಯದಲ್ಲಿ ಕೊಡುತ್ತಿದ್ದ ನಾರು-ಬೇರು ಔಷಧಿ ಹಾಗೂ ಅವುಗಳಿಗೆ ಸಂಬಂಧಿಸಿದ ಮಾಂತ್ರಿಕ ವಿದ್ಯೆಯೂ ಸಹ ನಶಿಸಿಹೋಗುತ್ತಿದೆ. ಸೋಲಿಗರ ವೈದ್ಯಪದ್ಧತಿಯಲ್ಲಿ ಅನೇಕ ಬಗೆಯ ಉತ್ತಮ ಅಂಶಗಳಿವೆ. ಸರಳವಾಗಿ ನೈಸರ್ಗಿಕವಾಗಿ, ಪ್ರಕೃತಿದತ್ತವಾಗಿ ತಮ್ಮ ಆರೋಗ್ಯಕ್ಕೆ ಯಾವುದು ಒಗ್ಗುತ್ತದೆಯೋ ಅಂತಹ ಆಹಾರ-ವೈದ್ಯವನ್ನು ಮಾಡಿಕೊಂಡು ಬದುಕುತ್ತಿದ್ದ ಸೋಲಿಗರು ಆಧುನಿಕ ಪದ್ಧತಿಗಳನ್ನು ಅನುಸರಿಸುವುದರ ಜೊತೆಗೆ ಅವರದೇ ಆದ ವೈದ್ಯಪದ್ಧತಿಯನ್ನು ಉಳಿಸಿ ಬೆಳಸುವುದೂ ಸಹ ಅಷ್ಟೇ ಪ್ರಮುಖವಾಗಿದೆ. ಇದು ಮುಂದೆ ಎಲ್ಲಾ ಮಾನವ ಸಮುದಾಯಕ್ಕೂ ಬೇಕಾಗಿರುವ ವೈದ್ಯ ಪದ್ಧತಿಯಾಗಿದೆ.

**ಇವುಗಳ ಪರಿಣಾಮವಾಗಿ**

- ಸೋಲಿಗರ ವೈದ್ಯಪದ್ಧತಿಯ ಬಗ್ಗೆ ವೈಜ್ಞಾನಿಕ ಸಂಶೋಧನೆಯನ್ನು ನಡೆಸಬೇಕಾಗಿದೆ.
- ಸೋಲಿಗ ನುಡಿ ಅವರ ಮಾತೃಭಾಷೆಯಲ್ಲಿ ವೈದ್ಯಪದ್ಧತಿಯನ್ನು ಪಠ್ಯದ ಮೂಲಕ ಕಲಿಸುವುದು. ಸಂಗ್ರಹ ಮಾಡುವುದು.

- ನಾಟಿ ವೈದ್ಯ ಮಾಡುವವರನ್ನು ಸರಕಾರ ಗುರುತಿಸಿ ಕೆಲವು ಮಾನದಂಡಗಳ ಮೂಲಕ ಆಯ್ಕೆ ಮಾಡಿ ಸರಕಾರ ನೌಕರರನ್ನಾಗಿ ಆಯ್ಕೆ ಮಾಡುವುದು.
- ಸೋಲಿಗರು ಅಥವಾ ಬುಡಕಟ್ಟುಗಳು ವಾಸಿಸುವ ಪೋಡು, ಕಾಲೋನಿಗಳನ್ನು ಸರಕಾರದ ವತಿಯಿಂದ ಜರೂರಾಗಿ ನಶಿಸಿ ಹೋಗುತ್ತಿರುವ ವೈದ್ಯಪದ್ಧತಿಯ ಗಿಡ-ಮೂಲಿಕೆಯನ್ನು ಗುರುತಿಸಿ, ಅವುಗಳನ್ನು ತಂದು ಕಾಡಿನಂಚಿನಲ್ಲಿ ಬೆಳೆಸುವ ಪ್ರಯತ್ನ ಸೋಲಿಗರಿಂದಲೇ ಮಾಡಿಸುವುದು. ಇದರಿಂದ ಸೋಲಿಗರಿಗೆ ಉದ್ಯೋಗ ದೊರಕಿದಂತಾಗುತ್ತದೆ. ಜೊತೆಗೆ ಆರ್ಥಿಕ ಅವಲಂಬನೆಯಾದಂತಾಗುತ್ತದೆ.
- ಗಿಡಮೂಲಿಕಾ ಕಲಿಕೆಯೂ ಯುವಕ-ಯುವತಿಯರಿಗೆ ಮಾಡಿದಂತಾಗುತ್ತದೆ.
- ಮುಖ್ಯವಾದ ಕೆಲವು ಕಾಯಿಲೆಗಳಿಗೆ ಕೊಡುವ ವೈದ್ಯಪದ್ಧತಿಯ ಪೇಟೆಂಟ್ ಅನ್ನು ಸೋಲಿಗರಿಗೆ ಸರಕಾರದ ವತಿಯಿಂದ ಕೊಡಿಸುವುದು.
- ಸೋಲಿಗ ಮಹಿಳೆಯರು ಹೆರಿಗೆ ಮಾಡಿಸುವುದರಲ್ಲಿ ನಿಪುಣರು. ಇದರಲ್ಲಿ ತಮ್ಮದೇ ಆದ ಪಾರಂಪರಿಕವಾದ ಜ್ಞಾನ ಹೊಂದಿದ್ದಾರೆ. ಆದುದರಿಂದ ಸಮುದಾಯದಲ್ಲಿ ಎಸ್.ಎಸ್.ಎಲ್.ಸಿ. ಆದ ಯುವತಿಯವರಿಗೆ ಸಮಾಜ ಕಲ್ಯಾಣ ಇಲಾಖಾ ವತಿಯಿಂದ ವಿಶೇಷ ಯೋಜನೆಯಡಿಯಲ್ಲಿ ಉಚಿತವಾಗಿ ನರ್ಸಿಂಗ್ ತರಬೇತಿ ಕೊಟ್ಟು, ಅವರುಗಳನ್ನು ನೇರವಾಗಿ ಆಯ್ಕೆ ಮಾಡಿ ಹೆಚ್ಚು ಬುಡಕಟ್ಟು ಸಮುದಾಯಗಳಿರುವ ಜಿಲ್ಲೆಗಳಲ್ಲಿ ಸೇವೆ ಮಾಡಲು ತೆಗೆದುಕೊಳ್ಳಬೇಕು. ಇದರಿಂದ ಸೋಲಿಗ ಯುವತಿಯರಿಗೆ ಉದ್ಯೋಗ ದೊರಕಿದಂತಾಗುವುದರ ಜೊತೆಗೆ ಆರ್ಥಿಕ ಬಲವರ್ಧನೆಗೆ ಸಹಾಯಕವಾಗುತ್ತದೆ.
- ಹಾಡಿ-ಪೋಡು, ಕಾಲೋನಿಗಳಲ್ಲಿ ಹೆರಿಗೆ ಮಾಡುವುದರಲ್ಲಿ ಪ್ರವೀಣತೆ ಪಡೆದ ವಯಸ್ಸಾದ ಸೂಲಗಿತ್ತಿಯರನ್ನು ಪೋಡುಗಳಲ್ಲಿ ೧ ರಿಂದ ೨ ಜನರನ್ನು ಸಹಾಯಕರಾಗಿ ನೇಮಕ ಮಾಡಿಕೊಂಡು ಅವರುಗಳಿಗೆ ಪ್ರತೀ ತಿಂಗಳು ಇಂತಿಷ್ಟು ಗೌರವಧನ ಕೊಡುವಂತಾಗಬೇಕು.
- ಸರಕಾರ-ಸಂಸ್ಥೆಗಳು ನಡೆಸುವ ಸಭೆ-ಸಮಾರಂಭಗಳಿಗೆ ಜನಪದ ವೈದ್ಯರನ್ನು ಆಹ್ವಾನಿಸಿ ಆ ಮೂಲಕ ಸೋಲಿಗರಿಗೆ ಬಹುಮಾನ ಮತ್ತು ಸನ್ಮಾನ ಕಾರ್ಯಕ್ರಮ ಮಾಡಬೇಕು. ಪ್ರಶಸ್ತಿಗಳನ್ನು ನೀಡಿ ಗೌರವಿಸಬೇಕು.
- ಸೋಲಿಗರ ವೈದ್ಯ ಪದ್ಧತಿಗಳ ಬಗ್ಗೆ ಸಂಬಂಧಿಸಿದ ಪರಿಶಿಷ್ಟ ಪಂಗಡ ಇಲಾಖಾ ವತಿಯಿಂದ ವರ್ಷಕ್ಕೆ ಎರಡು ಬಾರಿಯಾದರೂ ಎಲ್ಲಾ ಸೋಲಿಗ ತಜ್ಞರುಗಳು ಹಾಗೂ ಮುಖಂಡರು, ಪುರುಷ ಮತ್ತು ಮಹಿಳೆಯರನ್ನು ಒಂದೆಡೆ ಸೇರಿಸಿ, ಕಾರ್ಯಾಗಾರ ಮಾಡುವುದು.
- ಕಾಡಿನ ಮಧ್ಯದಲ್ಲಿರುವ ಅದೆಷ್ಟೋ ಗಿಡ-ಮೂಲಿಕೆಯನ್ನು ಅರಣ್ಯ ಇಲಾಖೆಯವರ ಸಹಾಯದಿಂದ ಸಂಗ್ರಹಿಸಿ ಅದನ್ನು ತಂದು ನರ್ಸರಿ ಮಾಡಿ ಎಲ್ಲಾ ಕಡೆ ಬೆಳೆಸಿ, ಅದರ ಉಪಯೋಗ ಪಡೆಯುವುದು.
- ಸೋಲಿಗರ ಎಲ್ಲಾ ವೈದ್ಯ ಪದ್ಧತಿಗಳಿಗೆ ಸಂಬಂಧಿಸಿದ ವಿಷಯಗಳನ್ನು ಬರವಣಿಗೆಯ ಮೂಲಕ

ಪುಸ್ತಕ ರೂಪಕ್ಕೆ ತರುವುದು. ಇದರ ಮೂಲಕ ಗಿಡ-ಮೂಲಿಕೆ, ಮಾಂತ್ರಿಕ ದೇವರು-ದಿಂಡರು ಈ ಎಲ್ಲಾ ವಿಷಯಗಳು ಬರವಣಿಗೆಯ ರೂಪದಲ್ಲಿದ್ದಾಗ ಎಲ್ಲರೂ ತಿಳಿದುಕೊಳ್ಳಲು ಸಹಾಯಕ ವಾಗುತ್ತದೆ.

ಸೋಲಿಗರ ವೈದ್ಯಪದ್ಧತಿಗಳಿಗೆ ಸಂಬಂಧಿಸಿದ ಈ ಎಲ್ಲಾ ವಿಚಾರಗಳನ್ನು ಕಾರ್ಯಗತಗೊಳಿಸಿದ್ದೇ ಆದರೆ ಕಾನನಗಳ ಮಧ್ಯೆ ಕಾನನಗಳ ಅಂಚಿನಲ್ಲಿ, ಬೆಟ್ಟ-ಗುಡ್ಡಗಳಲ್ಲಿ ಎಲೆಮರೆ ಕಾಯಿಗಳಂತೆ ಕಣ್ಮರೆಯಾಗುತ್ತಿರುವ ವಯಸ್ಸಾದ, ನುರಿತ ಸೋಲಿಗ ಜನಪದ ವೈದ್ಯರು ಬೆಳಕಿಗೆ ಬರುವುದರ ಜೊತೆಗೆ ಇಡೀ ಮಾನವ ಸಮುದಾಯಕ್ಕೆ ಸೋಲಿಗರ ವೈದ್ಯಪದ್ಧತಿಯ ಪರಿಚಯವಾಗಿ ಬೆಳೆಯುವುದರಲ್ಲಿ ಯಾವುದೇ ರೀತಿಯ ಸಂದೇಹವಿಲ್ಲ.

### ಕೊನೆಟಿಪ್ಪಣಿ


೧. Srivastava S L, 1974, Folk Culture and Oral Tradition, P. 151

೨. ಕಿಕ್ಕೇರಿ ನಾರಯಣ, ೨೦೧೧, *ಬುಡಕಟ್ಟು ಸಂಸ್ಕೃತಿ*, ಅರುಹು ಕುರುಹು ಪ್ರಕಾಶನ, ಕುವೆಂಪು ನಗರ ಮೈಸೂರು, ಪು. ೭

೩. ಕಾಳೇನಹಳ್ಳಿ ಚಂದ್ರು, ೧೯೯೩, *ಸೋಲಿಗರ ಸಂಸ್ಕೃತಿ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೦೧

೪. ದೈವಜ್ಞ ಗಂಗಾಧರ (ಲೇ), ೨೦೦೬, *ಆದಿವಾಸಿಗಳ ವೈದ್ಯ ಪದ್ಧತಿ*, ಪ್ರಭಾಕರ ಎ ಎಸ್, (ಸಂ), *ಆದಿವಾಸಿ ಆಖ್ಯಾನ*, ಸಿದ್ದಾರ್ಥ ಪ್ರಕಾಶನ, ಹೊಸಪೇಟೆ, ಪು. ೨೧೨

೫. ಅದೇ, ಪು. ೨೧೫

೬. ಗೋವಿಂದರಾಜು ಜೆ (ಲೇ), ೨೦೦೩, '*ಜನಪದ ವೈದ್ಯ*', ರಾಮಚಂದ್ರೇಗೌಡ ಹಿ ಸಿ (ಸಂ), ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಡೆಮಿ, ಬೆಂಗಳೂರು, ಪು ೬೧

೭. ರಂಜಾನ್ ದರ್ಗಾ, ೨೦೦೩, *ನಾಟಿ ವೈದ್ಯ* (ಲೇ), '*ಜನಪದ ವೈದ್ಯ*', (ಸಂ) ಗೋವಿಂದರಾಜು ಜೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಡೆಮಿ, ಬೆಂಗಳೂರು, ಪು. ೧೨೧

೮. ಕೆಂಪೇಗೌಡ ಕೆ, ಭಾಷಾ ವಿಜ್ಞಾನ ಪರಿಚಯ, ನವಭಾರತಿ ಪ್ರಕಾಶನ, ಮೈಸೂರು, ಪು. ೨೨೧

೯. ಕಾಳೇನಹಳ್ಳಿ ಚಂದ್ರು, ೧೯೯೩, ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೬೫

೧೦. ವೀರಣ್ಣ ಎಂ ಡಿ, ೨೦೧೫, *ಗಿರಿಜನ ವೈದ್ಯ ಪದ್ಧತಿ* (ಸೋಲಿಗರ ಬುಟಕಟ್ಟು ಜನಾಂಗಕ್ಕೆ ಸಂಬಂಧಿಸಿದಂತೆ), ಕರ್ನಾಟಕ ಸಾಹಿತ್ಯ ಅಕಾಡೆಮಿ ಫೆಲೋಶಿಫ್‌ಗಾಗಿ ಮಂಡಿಸಿದ ಪ್ರಬಂಧ ಬೆಂಗಳೂರು, ಪು. ೧೩

ಅಧ್ಯಾಯ ಏಳು

# ಸ್ಥಿತ್ಯಂತರಗಳು

೭.೧. ಆರ್ಥಿಕ ಸ್ಥಿತ್ಯಂತರಗಳು

೭.೨. ಶೈಕ್ಷಣಿಕ ಸ್ಥಿತ್ಯಂತರಗಳು

೭.೩. ಜಾಗತೀಕರಣ ಮತ್ತು ಸ್ಥಿತ್ಯಂತರ

ಅಧ್ಯಾಯ ಏಳು

# ಸ್ಥಿತ್ಯಂತರಗಳು

ಪ್ರಕೃತಿಯು ಪ್ರಗತಿಯುತವಾದುದ್ದು ಹಾಗೂ ಕ್ರಿಯಾತ್ಮಕವಾದುದು; ಇದರ ಜೊತೆಯಲ್ಲಿಯೇ ಮಾನವ ತನಗೆ ಅರಿವಿಲ್ಲದಂತೆಯೇ ಬದಲಾವಣೆಗೆ ಒಳಗಾಗುತ್ತಾನೆ. ಬದಲಾವಣೆಯು ವಿವಿಧ ಮುಖ ಉಳ್ಳದ್ದು. ಇಂದಿನ ವಿಚಾರಗಳು ನಾಳೆ ಇದೇ ರೀತಿ ಇರುವುದಿಲ್ಲ. ಹಳೆಯದಾಗಬಹುದು, ಅಥವಾ ಮರೆತುಹೋಗಬಹುದು. ಇಂಗ್ಲೀಷ್ ಕಾದಂಬರಿಕಾರ ಟೆನಿಸನ್ ಅಭಿಪ್ರಾಯದಂತೆ 'ಬದಲಾವಣೆ ಎಂದರೆ ಹಳೆಯ ವಿಷಯಗಳನ್ನು, ಕ್ರಿಯೆಗಳನ್ನು, ಅಂಶಗಳನ್ನು ಬದಲಾಯಿಸಿ ಅವುಗಳ ಸ್ಥಾನದಲ್ಲಿ ಹೊಸದನ್ನು ತರುವುದು' ಎಂದಿದ್ದಾರೆ. ನಿಘಂಟಿನ ಪ್ರಕಾರ ಬದಲಾವಣೆ ಎಂದರೆ ಹೊಸ ವಿನ್ಯಾಸ, ಬಣ್ಣ ಬದಲಾಯಿಸು, ಪರಿವರ್ತನೆ, ವರ್ಗಾಯಿಸು, ಸರಿಪಡಿಸು ಇತ್ಯಾದಿಗಳು. ಕ್ರಾಂತಿಯು ಬದಲಾವಣೆಯ ಮೂಲ ವಿಷಯ. ಬದಲಾವಣೆಯು ಕ್ರಾಂತಿಯ ವಿಭಾಗವಾಗಿದೆ. ಸಾವಿರ ವರ್ಷಗಳ ಹಿಂದೆ ಗ್ರೀಕ್ ತತ್ವಜ್ಞಾನಿಗಳು ಬದಲಾವಣೆಯ ಮುಂದೆ ಯಾವುದೂ ಶಾಶ್ವತವಲ್ಲ ಎಂದು ಹೇಳಿರುವುದನ್ನು ಚಿಂತಿಸಿದಾಗ ಬದಲಾವಣೆಯು ವ್ಯಕ್ತಿ ಹಾಗೂ ಕಾಲವನ್ನು ಅವಲಂಬಿಸಿರುತ್ತದೆ ಎಂಬುದು ಅರ್ಥವಾಗುತ್ತದೆ. ಬದಲಾವಣೆಯು ಸಮಸ್ಯೆಗಳಿಗೆ ಪರಿಹಾರಕ ಎಂದೂ ಕರೆಯಬಹುದು.

ಸಮಾಜ ವಿಶಾಲವಾದುದು ಹಾಗೂ ವಿವಿಧ ಪ್ರಕಾರಗಳನ್ನು ಹೊಂದಿದೆ. ಅದರಲ್ಲಿ ಉಂಟಾಗುವ ಬದಲಾವಣೆಗಳನ್ನು ಗುರುತಿಸುವುದು ಸುಲಭವೇನಲ್ಲ. ಮಾನವ ಸಮಾಜದ ಪ್ರಾರಂಭದಿಂದ ಇಂದಿನವರೆಗೆ ಈ ಬದಲಾವಣೆಯ ಗತಿ ಒಂದೇ ಸಮನಾಗಿಲ್ಲ. ವ್ಯವಸಾಯಪೂರ್ವ ಸಮಾಜಗಳಲ್ಲಿ ಸಾಮಾಜಿಕ ಬದಲಾವಣೆ ಮಂದಗತಿಯಲ್ಲಿ ನಡೆದಿತ್ತು. ಮಾನವ ತನ್ನ ಅಸ್ತಿತ್ವಕ್ಕಾಗಿ ಪ್ರಕೃತಿಯ ಜೊತೆಯಲ್ಲಿ ಹೋರಾಟ ನಡೆಸುತ್ತಿದ್ದ, ಪ್ರಾಣಿಗಳ ಜೊತೆಯಲ್ಲಿ ಹೋರಾಟ ನಡೆಸುತ್ತಿದ್ದ. ಪ್ರಾಣಿಗಳ ಜೊತೆಯಲ್ಲಿ ಆತನ ಜೀವನ ಸಾಗಿತ್ತು. ವ್ಯವಸಾಯವು ಮಾನವನ ಜೀವನಕ್ಕೆ ಹೊಸ ತಿರುವನ್ನು ಕೊಟ್ಟಿತ್ತು. ಅವನ ಬದುಕಿನಲ್ಲಿ ಹೊಸ ಆಸೆ, ಆಕಾಂಕ್ಷೆಗಳು ಮೂಡಿದವು. ಸಾಮಾಜಿಕ ಅವಶ್ಯಕವಾದ ಹಲವಾರು ಸಂಸ್ಥೆಗಳು ಹುಟ್ಟಿಕೊಂಡವು, ವಿವಾಹ, ಕುಟುಂಬ ಮುಂತಾದ ಸಂಸ್ಥೆಗಳಲ್ಲಿ ಮಾನವ ಬಂಧಿಸಲ್ಪಟ್ಟನು. ಈ ಎಲ್ಲಾ ಸಂಸ್ಥೆಗಳು ಮಾನವನ ಸಾಮಾಜಿಕ ಅವಶ್ಯಕತೆಗಳಿಗೆ ಅನುಸಾರವಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದವು. ಕೈಗಾರಿಕಾ ಕ್ರಾಂತಿಯಿಂದ ಸಮಾಜದ ಮೂಲ ಸ್ವರೂಪವೇ ಬದಲಾಯಿತು. ಹೊಸ ಸಾಮಾಜಿಕ ಕ್ರಮ ವ್ಯವಸ್ಥೆ ಹುಟ್ಟಿಕೊಂಡವು.

**ಸಾಮಾಜಿಕ ಬದಲಾವಣೆಯ ಅರ್ಥ ಮತ್ತು ವ್ಯಾಖ್ಯೆ.**

ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ ಸಮಾಜದ ವ್ಯವಸ್ಥೆಯಲ್ಲಿ ಸಮಾಜದ ಪ್ರಗತಿಗೆ ಉಂಟಾದ ಬದಲಾವಣೆಗೆ ಸಾಮಾಜಿಕ ಬದಲಾವಣೆ ಎನ್ನಬಹುದು. ಪ್ರಕೃತಿಯ ನಿಯಮದಂತೆ ಮನುಷ್ಯ

ಬದಲಾವಣೆಗಳನ್ನು ಹೊಂದುವುದರಿಂದ ಸಮಾಜದ ಬದಲಾವಣೆಗಳನ್ನೂ ಕೂಡ ಕಾಣಬೇಕಾಗುತ್ತದೆ. ಇಂದಿನ ವೈಜ್ಞಾನಿಕ ಹಾಗೂ ತಂತ್ರಜ್ಞಾನದ ಪ್ರಗತಿಯಿಂದಾಗಿ ಸಮಾಜ ನಿಧಾನವಾಗಿ, ಸುವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಬದಲಾಗುತ್ತದೆ. ಸಾಮಾಜಿಕ ಬದಲಾವಣೆಯು ಸಮಾಜದಲ್ಲಿನ ಎಲ್ಲಾ ಬದಲಾವಣೆಗಳನ್ನು ತಿಳಿಸುವ ಸಂಕೀರ್ಣ ಅರ್ಥವಾಗಿದೆ. ಸಮಾಜದ ರಚನೆಯಲ್ಲಿ ಜನತೆಯ ಆಲೋಚನೆಯಲ್ಲಿ, ಸಂಸ್ಕೃತಿಯಲ್ಲಿ, ಅಭಿರುಚಿಯಲ್ಲಿ, ಮೌಲ್ಯಗಳಲ್ಲಿ, ಹವ್ಯಾಸಗಳಲ್ಲಿ, ನೀತಿಯಲ್ಲಿ, ಜೀವಿಸುವ ರೀತಿಯಲ್ಲಿ ಹೊಸತನವನ್ನು ತಿಳಿಸುತ್ತದೆ. ನಿರ್ದಿಷ್ಟ ಕಾಲಾವಧಿಯಲ್ಲಿ ಸಮಾಜದ ಕಾರ್ಯಚರಣೆಯಲ್ಲಿ ಉಂಟಾಗುವ ಬದಲಾವಣೆಗೆ ಸಾಮಾಜಿಕ ಬದಲಾವಣೆ ಎನ್ನುತ್ತೇವೆ.

ಸಾಮಾಜಿಕ ಬದಲಾವಣೆ ಎಂದರೇನು? ಎಂದು ಪ್ರಶ್ನಿಸಿದಾಗ ಅನೇಕ ಉತ್ತರಗಳು ವಿವಿಧ ದೃಷ್ಟಿಕೋನಗಳಿಂದ, ಜ್ಞಾನದಿಂದ ಬರುವುದು ಸಹಜ. ನಮ್ಮ ಕೆಲವು ಸಮಾಜಶಾಸ್ತ್ರಜ್ಞರು ತಿಳಿಸಿರುವ ಕೆಲವು ವ್ಯಾಖ್ಯೆಗಳನ್ನು ಇಲ್ಲಿ ತಿಳಿಸಲಾಗಿದೆ.

**ವ್ಯಾಖ್ಯೆಗಳು**

**ಗಿಲಿನ್ ಮತ್ತು ಗಿಲಿನ್** ಅವರ ಪ್ರಕಾರ 'ಜೀವಿತದ ರೀತಿ ನೀತಿಗಳಲ್ಲಿ ಭೌಗೋಳಿಕ ಸನ್ನಿವೇಶದಿಂದ, ಜನಸಂಖ್ಯಾ ಸಂಯೋಜನೆಯಿಂದ, ಸಂಶೋಧನೆಯಿಂದ, ಸಂಸ್ಕೃತಿಯ ಉಪಕರಣಗಳಿಂದ ಸಮಾಜದಲ್ಲಿ ಉಂಟಾಗುವುದೇ ಬದಲಾವಣೆ'

**ಮೂರೆ ಡಬ್ಲ್ಯೂ** ಅವರು 'ಸಾಮಾಜಿಕ ರಚನೆಯ ಕ್ರಿಯೆಯಲ್ಲಿ ಸಂಘರ್ಷಣೆಯಲ್ಲಿ ಮೌಲ್ಯಗಳಿಂದ, ಸಂಸ್ಕೃತಿಯ ಮೊತ್ತದಿಂದ ಉಂಟಾಗುವ ತಿರುವಿಗೆ ಸಾಮಾಜಿಕ ಬದಲಾವಣೆ' ಎನ್ನುತ್ತಾರೆ.

**ಆಗ್ ಬರ್ನ** ಅವರ ಪ್ರಕಾರ 'ಲೌಖಿಕ ಹಾಗೂ ಅಲೌಖಿಕ ವಿಷಯಗಳಲ್ಲಿನ ಬದಲಾವಣೆಯೇ ಸಾಮಾಜಿಕ ಬದಲಾವಣೆ.'

**ಮಜುಂದಾರರ** ಅವರು ಸಮುದಾಯದ ಜನರಲ್ಲಿರುವ ಹಳೆಯ ಜೀವನ ಮಾರ್ಗಗಳು, ಮೌಲ್ಯಗಳು, ಬದಲಿಸಿ ಹೊಸ ಜೀವನ ವ್ಯವಸ್ಥೆಗೆ ಸಿದ್ಧಗೊಳಿಸುವ ರೀತಿಯನ್ನು ಸಾಮಾಜಿಕ ಬದಲಾವಣೆ' ಎಂದು ಕರೆಯುತ್ತಾರೆ

**ಡೇವಿಡ್** ಅವರ ಪ್ರಕಾರ "ಸಮಾಜದ ರಚನೆ, ಕಾರ್ಯ, ವಿಧಾನಗಳಲ್ಲಾಗುವ ಮಾರ್ಪಾಟುಗಳೇ ಸಾಮಾಜಿಕ ಬದಲಾವಣೆ."

ಈ ಮೇಲಿನ ವ್ಯಾಖ್ಯೆಗಳಿಂದ ಸಾಮಾಜಿಕ ಬದಲಾವಣೆ ಎಂದರೆ ಜನಜೀವನದಲ್ಲುಂಟಾಗುವ ಬದಲಾವಣೆ ಎಂದು ಗುರುತಿಸಬಹುದು. ಕಲೆ ಭಾಷೆ, ತಾಂತ್ರಿಕತೆ ಮುಂತಾದ ಅಂಶಗಳ ಮೂಲಕ ಸಾಮಾಜಿಕ ಬದಲಾವಣೆ ಉಂಟಾಗುತ್ತದೆ.

**ಬದಲಾವಣೆಯ ಸ್ವಭಾವ**

- **ನಿರಂತರ ಪ್ರಕ್ರಿಯೆ:** ಹುಟ್ಟನಿಂದ ಸಾಯುವ ತನಕ ಜ್ಞಾನ, ವಿಶ್ವಾಸ, ತತ್ವಗಳು, ವಿಚಾರಗಳು, ರೀತಿ, ನೀತಿಗಳು, ಉಡುಗೆ, ತೊಡುಗೆಗಳು, ಚಟುವಟಿಕೆಗಳು, ನಿರಂತರವಾಗಿ ಬದಲಾಗುತ್ತವೆ.
- **ಜೀವನ ನಿಯಮ:** ಮನುಷ್ಯ ತನ್ನ ಅವಶ್ಯಕತೆಗಳಿಗೆ ಸೂಕ್ತ ಮಾರ್ಗಗಳನ್ನು ಕಂಡುಹಿಡಿದುಕೊಳ್ಳಲು ಬದಲಾವಣೆಯನ್ನು ಅನಿವಾರ್ಯವಾಗಿ ಇಚ್ಛಿಸುತ್ತಾನೆ. ಉದಾ:

**ಸಾಮಾಜಿಕ ಬದಲಾವಣೆಯು ಸಾರ್ವತ್ರಿಕವಾದುದು**

ಎಲ್ಲಾ ಸಮಾಜಗಳಲ್ಲಿಯೂ ಬದಲಾವಣೆ ಉಂಟಾಗುತ್ತದೆ. ಆದಿವಾಸಿ ಸಮುದಾಯಗಳಿಂದ ಹಿಡಿದು, ನಾಗರಿಕ ಸಮಾಜದವರೆಗೆ ಬದಲಾವಣೆ ನಿರಂತರವಾಗಿರುತ್ತದೆ. ಸಾಮಾಜಿಕ ಬದಲಾವಣೆ ಎಂದರೆ ಸಾಮೂದಾಯಿಕ ಬದಲಾವಣೆಯೇ ಆಗಿರುತ್ತದೆ. ಸಮಾಜಿಕ ಬದಲಾವಣೆಯ ಗತಿ ಒಂದೇ ಆಗಿರುವುದಿಲ್ಲ. ಕಾಲ ಸಮಯವನ್ನು ಅನುಸರಿಸಿ ಸಾಮಾಜಿಕ ಬದಲಾವಣೆ ನಡೆಯುತ್ತದೆ.

ಸಾಮಾಜಿಕ ಬದಲಾವಣೆ ಒಂದಕ್ಕೊಂದು ಸಂಬಂಧಿಸಿದಂಥ ಘಟನೆಗಳ ಸರಮಾಲೆಯನ್ನು ನಿರೂಪಿಸುತ್ತದೆ. ಸಮಾಜದಲ್ಲಿ ಬದುಕಲು ಅದರ ವಿವಿಧ ಭಾಗಗಳು ಮನುಷ್ಯನಿಗೆ ನೆರವಾಗುತ್ತದೆ. ಬದಲಾವಣೆಯ ಬಗ್ಗೆ ನಿರ್ದಿಷ್ಟ ಭವಿಷ್ಯ ನುಡಿಯಲು ಸಾಧ್ಯವಿಲ್ಲ.

ಆದಿವಾಸಿಗಳು ಭಾರತದ ಮೂಲನಿವಾಸಿಗಳು; ಅವರುಗಳಲ್ಲಿ ಸೋಲಿಗ ಸಮುದಾಯವೂ ಒಂದು. ಸೋಲಿಗರ ಸಂಸ್ಕೃತಿ ವಿಶಿಷ್ಟವಾದುದು. ಸಾಮಾಜಿಕ ಚಿಂತನೆಯಲ್ಲಿ ಪರಿವರ್ತನೆಗೆ ಬಹಳ ಮಹತ್ವವಿದೆ. ಸಾಮಾಜಿಕ ಸಂಸ್ಥೆಗಳ ಸಮಸ್ಯೆಯಲ್ಲಿ ಉಂಟಾಗುತ್ತಿರುವ ಪರಿವರ್ತನೆಯನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ. ಪರಿವರ್ತನೆ ಎಂಬುದು ನಿಸರ್ಗ ನಿಯಮ. ಮಾನವ ಸಾಮಾಜವು ಈ ನಿಯಮಕ್ಕೆ ಹೊರತಾಗಿಲ್ಲ. ಅದೇ ರೀತಿಯಲ್ಲಿಯೇ ಸೋಲಿಗರ ಸಮುದಾಯವು ಪರಿವರ್ತನೆಯ ದಾರಿಯಲ್ಲಿ ಸಾಗಿರುವುದು ಕಂಡುಬಂದಿದೆ. ಯಾವುದೇ ಸಮಾಜವು ಪರಿವರ್ತನೆಗೆ ಒಳಪಡದೆ ಜಡವಾಗಿರಲು ಸಾಧ್ಯವಿಲ್ಲ. ವ್ಯಕ್ತಿಯ ಜೀವನದಲ್ಲಿ ರಕ್ಷಣೆ ಮತ್ತು ಭದ್ರತೆಗಾಗಿ ಚಡಪಡಿಸುವಂತೆ ಸಮಾಜವೂ ಶಾಶ್ವತವಾದ ಸ್ಥಿರತೆಯನ್ನು ಬಯಸುವುದು, ತನ್ನ ವಿವಿಧ ನಿಯಂತ್ರಣ ಸಾಧನಗಳ ಮೂಲಕ ಸಮಾಜವು ತನ್ನ ಸ್ಥಿರತೆಯನ್ನು ಉಳಿಸಿಕೊಳ್ಳಲು ಹೋರಾಡುವುದು. ಹೀಗಿದ್ದರೂ ಸಹ ಮಾನವ ಸಮಾಜ ಎಂದಿಗೂ ಸ್ಥಿರವಾಗಿರಲು ಸಾಧ್ಯವಿಲ್ಲ. ಸಮಾಜವು ಜೈವಿಕ ಸಂಸ್ಥೆಯಾದ ಕಾರಣ ಅದರಲ್ಲಿ ಬದಲಾವಣೆ ಕಾಣಿಸಿ ಕೊಳ್ಳುವುದು ಸಹಜ.

ಅದೇ ರೀತಿಯಲ್ಲಿ ಸೋಲಿಗರಲ್ಲಿ ಹಳೆಯ ಕೆಲವು ಪದ್ಧತಿಗಳನ್ನು ಕಳಚಿಕೊಂಡು ಅಥವಾ ಅವುಗಳನ್ನು ಮುಂದುವರಿಸಿಕೊಂಡು ಹೊಸ ಹೊಸ ಪದ್ಧತಿಗಳನ್ನು ರೂಪಿಸಿಕೊಂಡು ಹೊಸರೂಪ ತಾಳುತ್ತಿದೆ. ಕಾಲಕಾಲಕ್ಕೆ ತಕ್ಕ ಹಾಗೆ ಸೋಲಿಗರಲ್ಲಿ ಸಮಾಜ ಸಾಮುದಾಯಿಕ ಬದಲಾವಣೆ, ಸಾಂಸ್ಕೃತಿಕ ಬದಲಾವಣೆ ಆಗಿರುತ್ತದೆ. ಜೊತೆಗೆ ಕಾಲಗತಿಯಲ್ಲಿ ಸೋಲಿಗರ ವರ್ತನೆಯಲ್ಲಿ ಆಗುವ ವ್ಯತ್ಯಾಸಗಳು ಹಾಗೂ ಹಳೆಯ ಸಂಸ್ಕೃತಿಗೆ ಪ್ರತಿಯಾಗಿ ಸ್ಥಾಪಿತವಾಗುವ ಹೊಸ ಜೀವನ ವಿಧಾನ, ಸಂಸ್ಕೃತಿ ಬದಲಾವಣೆಗಳು ಹಿಂದೆ ಸೋಲಿಗರು ಕಾನನಗಳ ಮಧ್ಯೆ ಪ್ರಕೃತಿಯ ಒಡಲಲ್ಲಿ ಪ್ರಾಣಿ–ಪಕ್ಷಿಗಳ ಒಡನಾಟದಿಂದ ಬಾಳುತ್ತಿದ್ದು, ಜೀವನ ಕ್ರಮ ಇಂದು ಬದಲಾವಣೆ ಕಂಡಿದೆ. ಕಾಲಗತಿಯಲ್ಲಿ ಸೋಲಿಗರ ವರ್ತನೆಯಲ್ಲಿ ಆಗುವ ವ್ಯತ್ಯಾಸಗಳು ಹಾಗೂ ಹಳೆಯದಕ್ಕೆ ಪ್ರತಿಯಾಗಿ ಸ್ಥಾಪಿತವಾಗುವ ಹೊಸ ಜೀವನ ವಿಧಾನಗಳು ಸೋಲಿಗರ ಬದಲಾವಣೆಗೆ ನಿದರ್ಶನವಾಗಿವೆ.

ಸಾಂಪ್ರದಾಯಿಕವಾದ ಭಾರತೀಯ ಸಮಾಜದ ಅನೇಕ ಸಂಗತಿಗಳಲ್ಲಿ ಪರಿವರ್ತನೆಗಳು ಉಂಟಾಗಿದೆ. ಕರ್ಮಸಿದ್ಧಾಂತ, ಆಚರಣೆಯ ಶುದ್ಧಿ, ಜನಾಂಗ ಸಂಕರ, ವರ್ಣಪದ್ಧತಿ, ಪುರುಷಾರ್ಥಗಳು, ಆಶ್ರಮಗಳು, ಮಡಿ–ಮೈಲಿಗೆ ಸಂಬಂಧಿಸಿದ ವಿಚಾರಗಳಲ್ಲಿ ಇಂದು ಗಣನೀಯ ಸ್ವರೂಪದ ಪರಿವರ್ತನೆ ಉಂಟಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖ ಸಂಸ್ಥೆಗಳಾದ ಕುಟುಂಬ, ವಿವಾಹ, ಮತ, ಮಂದಿರಗಳು ಇಂದು ತಮ್ಮ ರಚನೆ ಮತ್ತು ಕಾರ್ಯಗಳಲ್ಲಿ ಸಾಕಷ್ಟು ಪರಿವರ್ತನೆಯನ್ನೂ ತಂದುಕೊಂಡಿವೆ. ಈ ಬಗೆಯ ಪರಿವರ್ತನೆಗೆ ಆಧುನಿಕ ಶಿಕ್ಷಣ, ನೂತನ ಉದ್ಯೋಗಗಳು, ಭೌಗೋಳಿಕ ಚಲನೆ, ಸಮೂಹ ಮಾಧ್ಯಮಗಳ ಪ್ರಭಾವ ಇವೆಲ್ಲವೂಗಳ ಜೊತೆಯಲ್ಲಿ ಸಂಸ್ಕೃತಾನುಕರಣ, ಆಧುನೀಕರಣ ಮತ್ತು ಪಾಶ್ಚಾತ್ಯೀಕರಣ, ಬಹಳ ಪ್ರಮುಖವಾದವು.

**ದುಬೆಯವರು ಎಸ್ ಸಿ ಹೇಳುವಂತೆ** ಆಗಾಧ ಪರಿವರ್ತನೆಯನ್ನು ಕಾಣುತ್ತಿರುವ ಒಂದು ಪ್ರಾಚೀನ ಸಮಾಜವು ಹಲವು ಹಿನ್ನೆಡೆಗಳನ್ನು ಎದುರಿಸಬೇಕಾಗುವುದು. ಅದು ಸಹಜ ಭಾರತವು ಈಗ ಕುದಿಯುತ್ತಿದ್ದರೂ ಅದರಲ್ಲೂ ಕೆಲವು ಗುಣಾಂಶಗಳು ಇಲ್ಲದಿಲ್ಲ, ಜನರು ಬದಲಾವಣೆಯನ್ನು ಒತ್ತಾಯಿಸುತ್ತಿದ್ದಾರೆ, ಸಮಾಜ ತನ್ನೆದುರಿಗೆ ಇಟ್ಟುಕೊಳ್ಳಬೇಕಾದ ಹೊಸ ಗುರಿಯನ್ನು ತೋರಿಸುತ್ತಿದ್ದಾರೆ ಎಂದು ಹೇಳಿದ್ದಾರೆ.

ಭಾರತದ ಸಾಂಸ್ಕೃತಿಕ ವಲಯದಲ್ಲಿ ಅನೇಕ ಬಗೆಯ ಬದಲಾವಣೆಗಳು ಉಂಟಾಗಿವೆ. ತಾಂತ್ರಿಕ ಬದಲಾವಣೆ, ಸಾರಿಗೆ ಸಂಪರ್ಕಗಳ ವಲಯದಲ್ಲಿ ಬೆಳವಣಿಗೆ, ಇನ್ನಿತರ ಅನೇಕ ಸಂಗತಿಗಳಲ್ಲಿ ಬದಲಾವಣೆ ಜರುಗುತ್ತಿವೆ. **ಡಾ ಎಂ ಎನ್ ಶ್ರೀನಿವಾಸ್ ಅವರು "Religion and Society among the Coorg of South India"** ಎಂಬ ಗ್ರಂಥದಲ್ಲಿ ಸಮಾಜಶಾಸ್ತ್ರದ ವಲಯದಲ್ಲಿ 'ಸಂಸ್ಕೃತಾನುಕರಣ' ಎಂಬ ಕಲ್ಪನೆಯನ್ನು ಪರಿಚಯಿಸಿದ್ದಾರೆ. ಅವುಗಳಲ್ಲಿ ಅತೀ ಮುಖ್ಯವಾದ ಮೂರು ಬದಲಾವಣೆಗಳನ್ನು ಪರಿಚಯಿಸಿದ್ದಾರೆ.

- ಸಂಸ್ಕೃತಾನುಕರಣ
- ಪಾಶ್ಚಾತ್ಯೀಕರಣ
- ಆಧುನೀಕರಣ

ಸಂಸ್ಕೃತಾನುಕರಣವೆಂದರೆ, "ಕೆಳಸ್ತರದವರು ಇಲ್ಲವೇ ಆದಿವಾಸಿಗಳು ಅಥವಾ ಇತರೆ ಯಾವುದೇ ಜಾತಿಯ ಜನತೆ ದ್ವಿಜರ(ಪ್ರಬಲ ಜಾತಿ) ಜೀವನ ವಿಧಾನವನ್ನು ಹೊಂದಿ ಆ ಮೂಲಕ ತಮ್ಮ ಜಾತಿಯಲ್ಲಿಯೇ ಉನ್ನತವಾದ ಸ್ಥಾನಮಾನಗಳನ್ನು ಹೊಂದಲಿಕ್ಕಾಗಿ ಮಾಡುವ ಯತ್ನ ಎಂದಿದ್ದಾರೆ"[7]

ಸಂಸ್ಕೃತಾನುಕರಣ ಪ್ರಕ್ರಿಯೆಯ ಪ್ರಭಾವಕ್ಕೆ ಕೇವಲ ಕೆಳಸಮುದಾಯ ಮಾತ್ರ ಒಳಗಾಗದೇ ಆದಿವಾಸಿಗಳೂ ಕೂಡ ಸಂಸ್ಕೃತಾನುಕರಣ ಪ್ರಕ್ರಿಯೆ ಸಿಲುಕಿದ್ದಾರೆ. ಉದಾಹರಣೆಗೆ ಪಶ್ಚಿಮ ಭಾರತದ ಬಿಲ್ಲರು, ಮಧ್ಯಭಾರತದ ಗೊಂಡರು, ಊರವಾನರು ಹಿಮಾಲಯದ ಪಹಡಿಗಳು ಈ ಪ್ರಕ್ರಿಯೆಗೆ ಸಿಲುಕಿದ್ದು, ಈ ಆದಿವಾಸಿಗಳು ಅನೇಕ ಹಿಂದೂ ಸಮಾಜದ ಕೆಲ ಜಾತಿಗಳ ಆಚಾರ-ವಿಚಾರಗಳನ್ನು ಅನುಕರಿಸಿದ್ದು ಉಂಟು.

ಸಂಸ್ಕೃತಾನುಕರಣ ಪ್ರಕ್ರಿಯೆಯನ್ನು ಹೊಸ-ಹೊಸ ಕ್ಷೇತ್ರಗಳಿಗೆ ಅಥವಾ ಪ್ರದೇಶಗಳಿಗೆ ವಿಸ್ತರಿಸುವ ಕಾಯಕವನ್ನು ಸಮೂಹ ಮಾಧ್ಯಮಗಳು ಮಾಡುತ್ತವೆ. ಇಂದು ಸೋಲಿಗ ಸಮುದಾಯದಲ್ಲಿಯೂ ಸಹ ಮುಕ್ತವಾಗಿ ಸಿಗುತ್ತಿರುವ ಶಿಕ್ಷಣ ಹಾಗೂ ಸಾಮಾಜಿಕ ಸಂಪರ್ಕಗಳ ಸೌಲಭ್ಯದಿಂದಾಗಿ ಸಂಸ್ಕೃತಾನು

ಕರಣಕ್ಕೆ ಸಾಕಷ್ಟು ಉತ್ತೇಜನ ದೊರೆಯುತ್ತಿದೆ. ಮತ್ತೊಂದು ಕಡೆ ಎಂ.ಎನ್. ಶ್ರೀನಿವಾಸ್ ಅವರು ಹೀಗೆ ಹೇಳುತ್ತಾರೆ 'ಒಮ್ಮೊಮ್ಮೆ ತೀರಾ ಅಪರೂಪವೆಂಬಂತೆ ಉಚ್ಚಜಾತಿಗಳು ಆದಿವಾಸಿಗಳು ಕೆಲವೊಂದು ಪದ್ಧತಿಗಳನ್ನು ಅನುಸರಿಸಿದ್ದೂ ಇದೆ' ಇದನ್ನು 'ಆದಿವಾಸೀಕರಣ'(Tribalization) ಎಂದು ಕರೆಯಲಾಗಿದೆ.

**ಸಾಮಾಜಿಕ ಸ್ಥಿತ್ಯಂತರಗಳು:** ಸೋಲಿಗರಲ್ಲಿ ಸಾಮಾಜಿಕ ಬದಲಾವಣೆಯನ್ನು ಇತ್ತೀಚೆಗೆ ಸ್ವಲ್ಪ ಪ್ರಮಾಣದಲ್ಲಿ ಆಗಿರುವುದನ್ನು ಗುರುತಿಸಬಹುದಾಗಿದೆ. ಸೋಲಿಗ ಸಮುದಾಯದಲ್ಲಿ ಕಾಡಿನ ನಿಸರ್ಗದ ಒಡಲಿನಲ್ಲಿ ತಮ್ಮ ಸಾಮಾಜಿಕ ಸಂಸ್ಥೆಗಳು ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಸಾಮಾಜಿಕ ನಮೂನೆ, ಸಾಮಾಜಿಕ ರಚನೆಯಲ್ಲಿ ಉಂಟಾಗುವ ಮಾರ್ಪಾಡು, ಸಾಮಾಜಿಕ ವ್ಯವಸ್ಥೆ, ಉಪವ್ಯವಸ್ಥೆ ಅಥವಾ ಸಂಸ್ಥೆಗಳಲ್ಲಿ ಉಂಟಾಗುವ ಬದಲಾವಣೆ ಹಾಗೂ ಸಾಮಾಜಿಕ ಕಾರ್ಯ, ಪ್ರಕ್ರಿಯೆ, ಅಂತಃಕ್ರಿಯೆ ಮತ್ತು ಆಂತರಿಕ ಸಂಬಂಧಗಳಲ್ಲಿ ಉಂಟಾಗುವ ಬದಲಾವಣೆಯು ಸಾಮಾಜಿಕ ಪರಿವರ್ತನೆ ಎಂದೆನಿಸಿಕೊಳ್ಳುತ್ತದೆ.

ಈ ಎಲ್ಲಾ ವಿಷಯಗಳನ್ನು ನೋಡಿದಾಗ ಸೋಲಿಗರ ಸಾಮಾಜಿಕ ಸ್ಥಿತ್ಯಂತರಗಳ ಬಗ್ಗೆ ತಿಳಿಯುವುದು ಬಹಳ ಪ್ರಮುಖವಾದುದು. ಸೋಲಿಗ ಸಮುದಾಯವೂ ಸಹ ಸಾಮಾಜಿಕ ವ್ಯವಸ್ಥೆಯೊಳಗಿನ ಸ್ಥಿತ್ಯಂತರಗಳು ಯಾವ ರೀತಿಯಲ್ಲಿ ಆಗಿವೆ. ಅವುಗಳ ಸಾಧಕಬಾಧಕಗಳೇನು ಎಂಬುದನ್ನು ತಿಳಿಯುವುದು ಮುಖ್ಯ.

**ಕುಟುಂಬ**

ಕುಟುಂಬ ಎಂಬುದು ಸಮಾಜದ ಒಂದು ಕನಿಷ್ಠ ಘಟಕ. ಈ ಕುಟುಂಬದ ವ್ಯವಸ್ಥೆಯು ಆ ಮನೆಯ ಸದಸ್ಯರುಗಳಿಂದ ರೂಪಿತವಾಗಿರುತ್ತದೆ. ಕುಟುಂಬಗಳಲ್ಲಿ ಆಯಾಯ ಸಮಾಜದ, ಸಂಸ್ಕೃತಿ ಪರಂಪರೆಯಿಂದ ರೂಢಿಸಿಕೊಂಡು ಬಂದಿರುವ ನಿಯಮಗಳು, ನಿಷೇಧ ಮುಖ್ಯವಾಗಿ ಪಾಲಿಸಲ್ಪಡುತ್ತವೆ. ಸೋಲಿಗ ಸಮುದಾಯದವರೂ ಸಹ ಇಂತಹ ವ್ಯವಸ್ಥೆಯೊಳಗೆ ಜೀವನ ನಡೆಸುತ್ತಾರೆ.

ಸಾಮಾಜಿಕ ಪರಿವರ್ತನೆಯ ಹಲವಾರು ಲಕ್ಷಣಗಳನ್ನು ಕಾಣಬಹುದು.

- ಸಾಮಾಜಿಕ ಪರಿವರ್ತನೆಯು ನಿರಂತರವಾದುದು.
- ಸಾಮಾಜಿಕ ಪರಿವರ್ತನೆಯು ಸಾರ್ವತ್ರಿಕವಾದುದು.
- ಸಾಮಾಜಿಕ ಪರಿವರ್ತನೆಯು ಸಾಮೂಹಿಕವಾದುದು.
- ಸಾಮಾಜಿಕ ಪರಿವರ್ತನೆಯು ಪರಿಸರವನ್ನು ಅವಲಂಬಿಸಿದೆ.
- ಸಾಮಾಜಿಕ ಪರಿಸರವೆಂದರೆ ಮಾನವನ ಪರಿವರ್ತನೆ.
- ಸಾಮಾಜಿಕ ಪರಿವರ್ತನೆಯ ರೂಪ ಮತ್ತು ಗತಿ ಒಂದೇ ರೀತಿಯಲ್ಲಿರುವುದಿಲ್ಲ.
- ಸಾಮಾಜಿಕ ಪರಿವರ್ತನೆಯು ಪ್ರಕ್ರಿಯೆಗಳ ಸರಮಾಲೆಯನ್ನು ಸೃಷ್ಟಿಸಬಹುದು.
- ಸಾಮಾಜಿಕ ಪರಿವರ್ತನೆಯು ಒಂದು ಗುರಿಯನ್ನು ಅಥವಾ ದಿಕ್ಕನ್ನು ಹೊಂದಿದೆ.
- ಸಾಮಾಜಿಕ ಪರಿವರ್ತನೆಯು ನಿಯೋಜಿತ ಇಲ್ಲದೇ ಅನಿಯೋಜಿತ ಆಗಿರಬಹುದು.
- ಸಾಮಾಜಿಕ ಪರಿವರ್ತನೆಯು ಒಂದು ವಸ್ತುನಿಷ್ಠ ಕಲ್ಪನೆಯಾಗಿದೆ.
- ಸಾಮಾಜಿಕ ಪರಿವರ್ತನೆಯು ದೀರ್ಘಾವಧಿ ಹಾಗೂ ಪುನರಾವರ್ತಿತವಾಗಬಹುದು.

ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಸಾಮಾಜಿಕ ಪರಿವರ್ತನೆಯ ಗತಿ ಹಾಗೂ ವೇಗವನ್ನು ಅಧ್ಯಯನ ಮಾಡಿ ಸಿದ್ಧಾಂತಗಳ ರೂಪದಲ್ಲಿ ನಿರೂಪಿಸಿದ್ದಾರೆ. ಕಿಂಗ್ಸಲೇ ಡೇವಿಸ್ ಅವರ ಅಭಿಪ್ರಾಯದ ಪ್ರಕಾರ ಸಾಮಾಜಿಕ ಬದಲಾವಣೆಯ ಸಿದ್ಧಾಂತಗಳಲ್ಲಿ ಪ್ರಮುಖವಾದವುಗಳು ಈ ಕೆಳಗಿನಂತಿವೆ.

- ವಿಕಾಸವಾದಿ ಸಿದ್ಧಾಂತ
- ಚಕ್ರೀಯ ಸಿದ್ಧಾಂತ
- ಕಾರ್ಯಾತ್ಮಕ ಸಿದ್ಧಾಂತ
- ಸಂಘರ್ಷ ಸಿದ್ಧಾಂತ

**ವಿಕಾಸವಾದಿ ಸಿದ್ಧಾಂತ:** ವಿಕಾಸವಾದಿ ಸಿದ್ಧಾಂತವು ಡಾರ್ವಿನ್‌ನ ಜೈವಿಕ ವಿಕಾಸವಾದ ಸಿದ್ಧಾಂತದಿಂದ ಪ್ರಭಾವಿತರಾದ ಸ್ಪೆನ್ಸರ್, ವೈಟ್, ಲಿಂಟನ್ ಮುಂತಾದವರಿಂದ ಪ್ರತಿಪಾದಿಸಲ್ಪಟ್ಟಿದೆ. ಇವರುಗಳ ಪ್ರಕಾರ ಬದಲಾವಣೆಯು ಒಂದು ನಿರಂತರ ಪ್ರಕ್ರಿಯೆಯಾಗಿದೆ. ನಿರ್ದಿಷ್ಟ ದಿಕ್ಕಿನೆಡೆಗೆ ಸಾಗುತ್ತದೆ ಮತ್ತು ಅದು ಎಂದಿಗೂ ಪುನರಾವರ್ತನೆಗೊಳ್ಳುವುದಿಲ್ಲ ಎಂದಿದ್ದಾರೆ.

**ಚಕ್ರೀಯ ಸಿದ್ಧಾಂತ:** ವಿಕಾಸವಾಗಿ ಸಿದ್ಧಾಂತದ ವಿರುದ್ಧವಾಗಿ ಚಕ್ರೀಯ ಸಿದ್ಧಾಂತವು ಪ್ರತಿಪಾದಿಸಲ್ಪಟ್ಟಿದೆ. ಈ ಸಿದ್ಧಾಂತವನ್ನು ಸೊರೊಕಿನ್, ಆರ್ನಾಲ್ಡ್, ಟೈರ್ನಾಲ್ಡ್, ಸ್ಪೆಂಗ್ಲರ್ ಮುಂತಾದವರು ಪ್ರತಿಪಾದಿಸಿದ್ದಾರೆ. ಇವರ ಪ್ರಕಾರ ಸಾಮಾಜಿಕ ಬದಲಾವಣೆಗಳ ವಿವಿಧ ಹಂತಗಳು ಸದಾ ಪುನಾರಾವರ್ತನೆ ಆಗುತ್ತಿರುತ್ತದೆ.

**ಕಾರ್ಯಾತ್ಮಕ ಸಿದ್ಧಾಂತ:** ಈ ಸಿದ್ಧಾಂತವನ್ನು ಮರ್ಟನ್, ಪಾರ್ಸನ್ ಮುಂತಾದವರು ಪ್ರತಿಪಾದಿ ಸಿದ್ದಾರೆ. ಇವರುಗಳ ಪ್ರಕಾರ ಸಮಾಜದ ವಿವಿಧ ಭಾಗಗಳು ಪರಸ್ಪರ ಅವಲಂಬಿಯಾಗಿದ್ದು, ಸಮಾಜ, ಆರೋಗ್ಯ ಮತ್ತು ಸಮಷ್ಟಿಯನ್ನು ಕಾಯ್ದುಕೊಳ್ಳುವ ದಿಸೆಯಲ್ಲಿ ಸಾಮಾಜಿಕ ಬದಲಾವಣೆಗಳು ಅನಿವಾರ್ಯ ಎಂದಿದ್ದಾರೆ.

**ಸಂಘರ್ಷ ಸಿದ್ಧಾಂತ:** ಕಾರ್ಲ್‌ಮಾರ್ಕ್ಸ್, ಜಾರ್ಜ್ ಸಿರ್ಮೆಲ್, ರಾಲ್ಫಡೆಹರೆನ್ ಡೋರ್ಫ್ ಮುಂತಾದ ವರಿಂದ ಪ್ರತಿಪಾದಿಸಲ್ಪಟ್ಟಿದ್ದು, ಸಂಘರ್ಷವು ಸಾಮಾಜಿಕ ಬದಲಾವಣೆಯ ಮೂಲಕ ಶಕ್ತಿಯಾಗಿ ಕೆಲಸ ಮಾಡುವುದಲ್ಲದೆ, ಸಂಘರ್ಷವು ನಿರ್ಣಾಯಕ ಮತ್ತು ರಚನಾತ್ಮಕ ಪರಿಣಾಮ ಉಂಟುಮಾಡುತ್ತದೆ ಎಂದಿದ್ದಾರೆ.

ಭಾರತೀಯ ಸಮಾಜದ ಬದಲಾವಣೆಗೆ ಭಾರತೀಯ ಸಾಮಾಜಿಕ ಚಿಂತಕರಲ್ಲಿ ಒಬ್ಬರಾದ ಯೋಗೇಂದ್ರಸಿಂಗ್ ಅವರು ೩ ಬಗೆಯ ದೃಷ್ಟಿಕೋನಗಳ ಬಗ್ಗೆ ತಿಳಿಸಿದ್ದಾರೆ.

- ವಿಕಾಸವಾದಿ ದೃಷ್ಟಿಕೋನ
- ಸಾಂಸ್ಕೃತಿಕ ದೃಷ್ಟಿಕೋನ
- ರಚನಾತ್ಮಕ ದೃಷ್ಟಿಕೋನ

**ವಿಕಾಸವಾದಿ ದೃಷ್ಟಿಕೋನ** ಅಧ್ಯಯನವು ಭಾರತೀಯ ಗ್ರಾಮೀಣ ಸಮಾಜ, ಜಾತಿ ಮತ್ತು ಕುಟುಂಬ ಈ ಮೂರು ಅಂಶಗಳ ಬಗ್ಗೆ ಪ್ರಾಧಾನ್ಯತೆ ನೀಡುತ್ತದೆ.

**ಸಾಂಸ್ಕೃತಿಕ ದೃಷ್ಟಿಕೋನದ** ಪ್ರತಿಪಾದಕ ಎಂ.ಎನ್. ಶ್ರೀನಿವಾಸ ಸಮಾಜದಲ್ಲಿ ಬದಲಾವಣೆಯು ಆಂತರಿಕ, ಬಾಹ್ಯ ಒತ್ತಡಗಳಿಂದ ಉಂಟಾದುದು ಎಂದಿದ್ದಾರೆ. ಇದನ್ನು ಸಂಸ್ಕೃತೀಕರಣ ಮತ್ತು ಪಾಶ್ಚಾತ್ಯೀಕರಣದಲ್ಲಿ ವಿವರಿಸಿದ್ದಾರೆ.

**ರಚನಾತ್ಮಕ ದೃಷ್ಟಿಕೋನ:** ಆರ್.ಕೆ. ಮುಖರ್ಜಿ, ಐ.ಪಿ. ದೇಸಾಯಿ, ಕೆ.ಎಂ. ಕಪಾಡಿಯಾ, ಟಿ.ಎನ್. ಮದನ್, ಪಿ.ಎಂ. ಕೊಲೆಂಡ್ ಮುಂತಾದವರ ಪ್ರಕಾರ ಅವಲಂಬಿತ ಪರಿವರ್ತನೆಗಳಲ್ಲಾದ ಮಾರ್ಪಾಡಿನ ಜೊತೆಗೆ ಸ್ವತಂತ್ರ ಪರಿವರ್ತನೆಗಳ ಮಧ್ಯ ಸಂಬಂಧ ಕಲ್ಪಿಸುವುದು ಆಗಿದೆ ಎಂದು ತಿಳಿಸಿದ್ದಾರೆ

### ಬುಡಕಟ್ಟುಗಳಲ್ಲಿ ಸಾಮಾಜಿಕ ಸ್ಥಿತ್ಯಂತರಗಳು

ಆಧುನೀಕರಣ, ಜಾಗತೀಕರಣದ, ನಗರೀಕರಣ, ಸರಕಾರದ ಹೊಸ ಅರಣ್ಯ ನೀತಿಗಳು, ಕಾನೂನುಗಳು, ಸರಕಾರದ ಅನೇಕ ಸೌಲಭ್ಯ ಕಾರ್ಯಕ್ರಮಗಳ ಮೂಲಕ ಬುಡಕಟ್ಟುಗಳಲ್ಲಿಯೂ ಸಹ ಸಾಮಾಜಿಕ ಬದಲಾವಣೆಯನ್ನು ಕಾಣುತ್ತೇವೆ. ಬುಡಕಟ್ಟು ಎನ್ನುವುದು ಆಧುನಿಕ ಪೂರ್ವಸ್ಥಿತಿ. ಬುಡ ಎಂದರೆ ತಳ, ಮೊದಲು ಎಂದು ಅರ್ಥ. ಆಧುನಿಕ ಸ್ಥಿತಿಗೆ ಬದಲಾವಣೆ ಹೊಂದಲೇ ಬೇಕಾಗುತ್ತದೆ. ಅದೇ ರೀತಿಯಲ್ಲಿ ಸೋಲಿಗ ಸಮುದಾಯವು ಕಾಡಿನ ಪರಿಸರದಲ್ಲಿ ಬಹಳ ಜಾಣ್ಮೆಯಿಂದ ತಮ್ಮದೇ ಆದ ಪಾರಂಪರಿಕ ಜ್ಞಾನದಿಂದ ಸಂಪ್ರದಾಯ, ಆಚಾರ ವಿಚಾರಗಳನ್ನು ಕಾಪಾಡಿಕೊಂಡು ಬರುವಲ್ಲಿ ಪ್ರಯತ್ನಿಸುತ್ತಿದೆ. ಇತಿಹಾಸವನ್ನು ತೆರೆದು ನೋಡಿದಾಗ ಸೋಲಿಗರು ತಮ್ಮ ಮೂಲದಿಂದ ಒಂದಲ್ಲ ಒಂದು ರೀತಿಯಲ್ಲಿ ಕಾಡಿನಲ್ಲಿ ಹುಟ್ಟಿ, ಕಾಡಿನಲ್ಲಿ ಬೆಳೆದು ಅನೇಕ ಬದಲಾವಣೆಗೆ ಒಳಗಾಗಿ, ಸಂಪ್ರದಾಯ, ನಂಬಿಕೆಗಳು, ನಾಗರಿಕತೆ ಹಾಗೂ ಆಧುನಿಕತೆಗೆ ಸ್ವಲ್ಪ ಪ್ರಮಾಣದಲ್ಲಿ ಒಳಗಾಗಿರುವುದು ಕಂಡುಬರುತ್ತದೆ. ಪರಿಣಾಮ, ಸೋಲಿಗರು ತಮ್ಮ ಪೂರ್ವಸ್ಥಿತಿಯಿಂದ ಪ್ರಸ್ತುತದವರೆಗೆ ಸ್ಪಂದಿಸುವ ರೀತಿಯನ್ನು ನಾವು ಸ್ಥಿತ್ಯಂತರ ಎಂದು ಗ್ರಹಿಸಬಹುದು. ಈ ಸ್ಥಿತ್ಯಂತರಕ್ಕೆ ಆಧುನಿಕತೆಗೆ ಸೌಲಭ್ಯಗಳು, ಮನೋಧರ್ಮಗಳ ಬದಲಾವಣೆ, ಸರಕಾರದ ಸೌಲಭ್ಯಗಳು, ಕಾನೂನುಗಳು, ಹೊಸ–ಹೊಸ ಯೋಜನೆಗಳು, ಅರಣ್ಯನೀತಿ, ಸಾರಿಗೆ ಸಂಪರ್ಕ, ಸಮೂಹ ಮಾಧ್ಯಮಗಳು, ನಗರೀಕರಣದ ಆಕರ್ಷಕ ಜೀವನ ಇನ್ನು ಮುಂತಾದವುಗಳು ಪ್ರಮುಖ ಕಾರಣಗಳಾಗಿವೆ.

### ೭.೧. ಆರ್ಥಿಕ ಸ್ಥಿತ್ಯಂತರಗಳು

ಪ್ರಸ್ತುತದಲ್ಲಿಯೂ ಸಹ ಬಹುಸಂಖ್ಯಾತ ಬುಡಕಟ್ಟುಗಳು ಅರಣ್ಯವಾಸಿ ಸಮುದಾಯಗಳಾಗಿವೆ. ಅವರ ಆರ್ಥಿಕ ಚಟುವಟಿಕೆಗಳು ಅವರು ವಾಸಿಸುತ್ತಿರುವ ಅರಣ್ಯದ ಮೇಲೆ ಅವಲಂಬಿತವಾಗಿರುತ್ತದೆ. ಬುಡಕಟ್ಟುಗಳು ಪ್ರತ್ಯೇಕವಾಗಿ ಪರೋಕ್ಷವಾಗಿ ತಮ್ಮ ಜೀವನಕ್ಕೆ ಬೇಕಾಗುವ ಅವಶ್ಯಕತೆಗಳನ್ನು ಅರಣ್ಯದಿಂದ ಪಡೆದುಕೊಳ್ಳುತ್ತಿದ್ದಾರೆ. ಬುಡಕಟ್ಟು ಜನರು ತಮ್ಮದೇ ಆದ ಮನೆಗಳನ್ನು ಮರಗಳಿಂದ, ಹುಲ್ಲು ಹಾಗೂ ಬಿದಿರಿನಿಂದ ಕಟ್ಟಿಕೊಂಡು, ಸ್ಥಳೀಯವಾಗಿ ದೊರೆಯುವ ಕಚ್ಚಾ ಪದಾರ್ಥಗಳನ್ನು ಉಪಯೋಗಿಸಿಕೊಂಡು ಕರಕುಶಲ ಕೆಲಸಗಳಲ್ಲಿ ತೊಡಗಿರುತ್ತಾರೆ. ಇದರ ಜೊತೆಗೆ ಕಾಡಿನಲ್ಲಿ ದೊರೆಯುವಂತಹ ಗಿಡಮೂಲಿಕೆಗಳು, ಔಷಧಿಗಿಡಗಳನ್ನು ಉಪಯೋಗಿಸುವುದರ ಮೂಲಕ ಕೆಲವು ಖಾಯಿಲೆಗಳನ್ನು ತಾವೇ ವಾಸಿ ಮಾಡಿ ಕೊಳ್ಳುತ್ತಾರೆ. ಅವರ ಧರ್ಮ ಮತ್ತು ಜನಪದ ಈ ಕಾಡಿನ ಸುತ್ತ ಹೆಣೆದುಕೊಂಡಿರುತ್ತದೆ. ಬೇಟೆ

ಹಾಗು ಪಶುಪಾಲನೆ ಮೂಲದ ಬುಡಕಟ್ಟುಗಳು ಮೂಲತಃ ಅಲೆಮಾರಿ ಬುಡಕಟ್ಟುಗಳಾಗಿದ್ದವು. ಈ ಬುಡಕಟ್ಟು ಜನರು ಉತ್ಪಾದಕರು ಹಾಗೂ ಭೋಗಕಾರಾಗಿದ್ದು, (Producers and Consumers) ಶೇ. ೮೦ರಷ್ಟು ಬುಡಕಟ್ಟು ಜನರು ಕೃಷಿಯನ್ನೇ ಪ್ರಧಾನ ಕಸುಬಾಗಿ ಅವಂಬಿತರಾಗಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಇವರ ಆರ್ಥಿಕತೆಯು ಅವರ ಜೀವನಾಧಾರ ವನ್ನು ಅವಲಂಬಿಸಿರುವ ಹೊಟ್ಟೆಪಾಡನ್ನು ತುಂಬಿಸಿಕೊಳ್ಳಲು ಇರುವಂತಹ ಆರ್ಥಿಕ ವ್ಯವಸ್ಥೆಯಾಗಿದೆ.

ಪ್ರಪಂಚದ ಯಾವುದೇ ಒಂದು ಬುಡಕಟ್ಟಿನ ಜನರ ಆರ್ಥಿಕ ಜೀವನ ಅವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಮೇಲೆ ಪ್ರತ್ಯೇಕವಾಗಿ ಅಥವಾ ಪರೋಕ್ಷವಾಗಿ ಪ್ರಭಾವ ಬೀರುತ್ತದೆ. ಈ ನಿಟ್ಟಿನಿಂದ ನೋಡುವಾಗ ಆಯಾ ಬುಡಕಟ್ಟುಗಳನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಅವರ ಆರ್ಥಿಕ ಜೀವನವನ್ನೂ ನಾವು ಅಭ್ಯಸಿಸಬೇಕಾಗುತ್ತದೆ. ಕೃಷಿಯು ಆ ಸಮುದಾಯದಲ್ಲಿ ಅವರ ಆರ್ಥಿಕ ಜೀವನಕ್ಕೆ ಯಾವ ರೀತಿಯಲ್ಲಿ ಸಹಕಾರಿ ಎಂಬುದನ್ನು ನಾವು ಅಭ್ಯಸಿಸಬೇಕಾಗುತ್ತದೆ. ಹಲ್ಸ್ ಕೊವಿಟ್ ಅವರು ಹೇಳುವಂತೆ "There is no Society without methods of production, distribution, consumption and some from exchange. There is no group without some expression of value, even though may not be formulated in terms of some commonly accepted monetary symbol."[2] ಮುಂದುವರಿದ ಸಮಾಜದ ಜೀವನಮಟ್ಟವು ಮುಂದುವರಿದ ತಾಂತ್ರಿಕತೆ, ಕೈಗಾರಿಕೆ ಹಾಗೂ ಬೃಹತ್ ಯಂತ್ರೋಪಕರಣಗಳನ್ನು ಯಥೇಚ್ಛವಾಗಿ ಬಳಸಿಕೊಂಡು ವ್ಯವಸಾಯ ಮಾಡುವುದು ಕಂಡುಬರುತ್ತದೆ. ಆದರೆ ಬುಡಕಟ್ಟುಗಳ ಅವಶ್ಯಕತೆಗಳು ಸೀಮಿತವಾಗಿರು ವುದರಿಂದ ಅವರ ಆರ್ಥಿಕತೆ, ವ್ಯವಸಾಯ ಅವರ ಜೀವನ ಎಲ್ಲವೂ ಅವರ ಅವಶ್ಯಕತೆ ಮತ್ತು ಅವುಗಳ ಪೂರೈಕೆಯನ್ನು ಅವಲಂಬಿಸಿದಂತೆ ರೂಪಿತಗೊಂಡಿರುತ್ತದೆ.

ಸೋಲಿಗರು ಹಿಂದಿನ ಕಾಲದ ಇತರ ಅರಣ್ಯವಾಸಿಗಳು ಬದುಕು ಮಾಡುತ್ತಿದ್ದ ಹಾಗೆಯೇ ಬೇಟೆ, ಕಿರು ಅರಣ್ಯ ಸಂಗ್ರಹಣೆ, ವಲಸೆ ಕೃಷಿ ಮಾಡುತ್ತಾ ಜೀವಿಸುತ್ತಿದ್ದರು. ಅವರ ಎಲ್ಲಾ ಅಗತ್ಯಗಳು ಅರಣ್ಯಗಳಿಂದ ಹಾಗೂ ಅಭಯಾರಣ್ಯದಲ್ಲಿ ಅಲ್ಲಲ್ಲಿ ಮಾಡಿಕೊಂಡಿದ್ದ ಕೃಷಿಭೂಮಿಯಿಂದ ಪೂರೈಕೆ ಯಾಗುತ್ತಿದ್ದವು. ೧೯೭೦ರಲ್ಲಿ ಬಿ ಆರ್ ಟಿ ವನ್ಯಧಾಮ(ಹುಲಿ ಸಂರಕ್ಷಣಾ ಪ್ರದೇಶ) ಅಸ್ತಿತ್ವಕ್ಕೆ ಬಂದ ಮೇಲೆ ಸೋಲಿಗರ ಅಲೆಮಾರಿ ಜೀವನ ಶೈಲಿ ಮತ್ತು ಕುಮ್ರಿ ಬೇಸಾಯ ಅಂತ್ಯಗೊಂಡು, ಸರಕಾರವು ಸೋಲಿಗ ಸಮುದಾಯದವರೆಲ್ಲರನ್ನು ಒಟ್ಟುಗೂಡಿಸಿ ಒಂದೇ ಕಡೆ ನೆಲೆಸುವಂತೆ ಅಲ್ಲಲ್ಲಿ ಮನೆ, ಮೂಲಭೂತ ಸೌಲಭ್ಯ ಸಾಧ್ಯವಾದಷ್ಟು ಮಟ್ಟಿಗೆ ದೊರಕಿಸಿಕೊಟ್ಟಿತು. ಅಲ್ಲದೇ ಸೋಲಿಗರನ್ನು ಒಂದೇ ಕಡೆ ಬೇಸಾಯ ಮಾಡಲು ಅವರ ಮನವೊಲಿಸಲಾಯಿತು. ಈಗಲೂ ಕೆಲವು ಕಡೆ ಹಳೆಯ ಕೃಷಿ ಪದ್ಧತಿ ಜಾರಿಯಲ್ಲಿದೆಯಾದರೂ ಬಹುಪಾಲು ಸೋಲಿಗರಲ್ಲಿ ಬದಲಾದ ಪರಿಸರಕ್ಕೆ ಹೊರಜಗತ್ತಿನ ಪ್ರಭಾವಗಳಿಗೆ ಹೊಂದಿಕೊಂಡು ಬೇಸಾಯ ಮಾಡುತ್ತಿದ್ದಾರೆ. ಇದರಿಂದಾಗಿ ಅವರ ಆಹಾರ ವಿಧಾನದಲ್ಲೂ ಅಲ್ಪಸ್ವಲ್ಪ ಬದಲಾವಣೆ ಕಂಡಿದೆ. ಸೋಲಿಗರು ತಮ್ಮದೇ ಆದ ಜ್ಞಾನಪರಂಪರೆಯಿಂದ ತಮ್ಮ ಭೂಮಿಯಲ್ಲಿ ಅದೆಷ್ಟೋ ತರಹದ ವೈವಿಧ್ಯಮಯವಾದ ಬೆಳೆಗಳು ಹಾಗೂ ಅದೆಷ್ಟೋ ತರಹದ ವಿವಿಧ ಜಾತಿಯ ಸಸ್ಯಜಾತಿಗಳನ್ನು ಪೋಷಿಸಿಕೊಂಡು ಬಂದಿದ್ದಾರೆ ಅದೇ ರೀತಿಯಲ್ಲಿ ಸೋಲಿಗರು ಸುಸ್ಥಿರವಾದ ಜೀವನವನ್ನು ನಡೆಸುವುದರ ಜೊತೆಗೆ ಬದುಕುತ್ತಿದ್ದಾರೆ. ಇಂದು ಜಗತ್ತಿನಾದ್ಯಾಂತ ಕೃಷಿ ಪರಿಸರದಲ್ಲಿ ಆಗುತ್ತಿರುವ ಮಹಾ ಬದಲಾವಣೆಯನ್ನು ನಾವು ಕಾಣುತ್ತೇವೆ.

ಪ್ರಪಂಚದ ಯಾವುದೇ ಒಂದು ಬುಡಕಟ್ಟಿನ ಜನರ ಆರ್ಥಿಕ ಜೀವನ ಅವರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದ ಮೇಲೆ ಪ್ರತ್ಯೇಕವಾಗಿ ಅಥವಾ ಪರೋಕ್ಷವಾಗಿ ಪ್ರಭಾವ ಬೀರುತ್ತದೆ. ಈ ನಿಟ್ಟಿನಿಂದ ನೋಡುವಾಗ ಆಯಾ ಬುಡಕಟ್ಟುಗಳನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಅವರ ಆರ್ಥಿಕ ಜೀವನವನ್ನೂ ನಾವು ಅಭ್ಯಸಿಸಬೇಕಾಗುತ್ತದೆ. ಆಂಗ್ಲರು ಭಾರತಕ್ಕೆ ಆಗಮಿಸುವುದಕ್ಕಿಂತ ಪೂರ್ವದಲ್ಲಿ ಬುಡಕಟ್ಟುಗಳು ಕಾಡಿನಲ್ಲಿ ಸ್ವಚ್ಛಂದವಾಗಿ ಬದುಕುತ್ತಿದ್ದರು. ಇಡೀ ಕಾಡೇ ನಮ್ಮದು ಎಂಬ ಪರಿಕಲ್ಪನೆ ಅವರಲ್ಲಿತ್ತು. ಈ ಹಂತದಲ್ಲಿ ಬುಡಕಟ್ಟುಗಳಿಗೆ ಸ್ವಂತ ಆಸ್ತಿಯ ಪರಿಕಲ್ಪನೆ ಇರಲಿಲ್ಲ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಮೂಲಕ ತಮ್ಮ ಜೀವನ ಸಾಗಿಸುತ್ತಿದ್ದರು.

"ವಾಸ್ಕೋಡಿಗಾಮ ಭಾರತದ ಪಶ್ಚಿಮ ಕರಾವಳಿಯ ಕಲ್ಲಿಕೋಟೆಗೆ ಬಂದನೋ ಅಂದಿನಿಂದ ಪಶ್ಚಿಮ ಘಟ್ಟದ ಕಾಡುಗಳಲ್ಲಿ ಅರ್ಥವ್ಯವಸ್ಥೆ ರೂಪಗೊಳ್ಳತೊಡಗಿತು. ಭಾರತದಲ್ಲಿ ಹೇರಳವಾಗಿ ಸಿಗುತ್ತಿದ್ದ ಸಾಂಬಾರ ಪದಾರ್ಥಗಳ ಆಸೆಯಿಂದ ಬರತೊಡಗಿದ ಯೂರೋಪಿಯನ್ನರು ತಮ್ಮ ವಸಾಹತು ಗಳನ್ನು ಸ್ಥಾಪಿಸಿ ಆ ಮೂಲಕ ತಮ್ಮ ಹಿಡಿತವನ್ನು ಸ್ಥಾಪಿಸಿಕೊಳ್ಳತೊಡಗಿದರು. ಈ ವಸಾಹತುಗಳ ತೀವ್ರ ವ್ಯಾಪಾರದ ಚಟುವಟಿಕೆಗಳ ನಡುವೆ ಪಶ್ಚಿಮ ಘಟ್ಟದ ಕಾಡುಗಳು ತೋಟಗಳಾಗಿ ಪರಿವರ್ತನೆಯಾಗ ತೊಡಗಿದವು. ಅಂದಿನ ಆರ್ಥಿಕ ಚಟುವಟಿಕೆಗಳ ಸಂದರ್ಭದಲ್ಲಿ ಮಲೆನಾಡಿನ ಕೆಲವು ಆಯಕಟ್ಟಿನ ಜಾಗಗಳಿಗೆ ಭೂಮಾಲೀಕರು ಬರತೊಡಗಿದರು ಮತ್ತು ಕೆಲವರು ಯುರೋಪಿಯನ್ನರ ಬೆನ್ನುಹತ್ತಿ ಬಂದು ಈ ಪ್ರದೇಶದಲ್ಲಿ ಭೂಮಾಲೀಕರಾದರು. ಬ್ರಿಟಿಷರು ಮಲೆನಾಡುಗಳಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿ ವ್ಯಾಪಾರವನ್ನು ಎಂದು ಪ್ರಾರಂಭಿಸಿದರೋ ಅಂದಿನಿಂದಲೇ ಗಿರಿಜನರ ಸ್ವಚ್ಛಂದವಾದ ಬದುಕು ಅಸ್ಥಿರಗೊಳ್ಳತೊಡಗಿತು."[೩]

ಅಭಿವೃದ್ಧಿ ಎಂಬ ಪರಿಕಲ್ಪನೆಯನ್ನು ಅತ್ಯಂತ ಸಂಕುಚಿತವಾಗಿ ಅರ್ಥೈಸಲಾಗುತ್ತಿದೆ. ನಮ್ಮ ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರ ಪ್ರಕಾರ, ಹಣ ಮಾತ್ರ ಅಭಿವೃದ್ಧಿಯ ಮೂಲವಾಗಿದೆ. ನಮ್ಮ ದೇಶದ ಬುಡಕಟ್ಟು ಸಮುದಾಯಗಳನ್ನು ದುಡಿಯುವವರು ಅಥವಾ ಕೂಲಿಕಾರರು ಎಂದು ಪರಿಗಣಿಸಲಾಯಿತೇ ವಿನಃ ಅವರು ಕೂಡ ಉತ್ಪಾದಕರು ಎಂಬ ದೃಷ್ಟಿಯಿಂದ ನೋಡಲೇ ಇಲ್ಲ ಎಂಬುದು ವಿಪರ್ಯಾಸ. ಅವರ ಉತ್ಪಾದನಾ ಚಟುವಟಿಕೆಗಳನ್ನು ನಿರ್ಲಕ್ಷಿಸಿದ್ದಲ್ಲದೇ ಆಧುನಿಕ ಅಭಿವೃದ್ಧಿ ಪರಂಪರೆಯಲ್ಲಿ ಅವರು ಒಂದು 'ಹೊರೆ'ಯಾಗಿ ಪರಿಣಮಿಸಿದುದು ಇನ್ನೊಂದು ದುರಂತ. ನಮ್ಮ ಸ್ವಾತಂತ್ರ್ಯೋತರ ಆಡಳಿತ ಅರಣ್ಯವನ್ನು ಒಂದು ಉತ್ಪಾದನಾ ಕ್ಷೇತ್ರ ಎಂದು ಪರಿಗಣಿಸಿತು. ಆದರೆ ಅದನ್ನು ಸಾವಿರಾರು ವರ್ಷಗಳಿಂದ ಕಾಪಾಡಿಕೊಂಡು ಬಂದಿದ್ದ ಅದರೊಳಗಿನ ಬುಡಕಟ್ಟು ಸಮುದಾಯಗಳನ್ನು ಅರಣ್ಯಕ್ಕೆ ಮಾರಕ ಎಂದು ಭಾವಿಸಿತ್ತಲ್ಲದೆ, ಅವರನ್ನು ಅರಣ್ಯದಿಂದ ಓಡಿಸುವ ಪ್ರಯತ್ನಗಳನ್ನು ಕೂಡ ಮಾಡಲಾಯಿತು. ಸರಕಾರಿ ಒಡೆತನ ಅರಣ್ಯ ಇಲಾಖೆ ಅದರೊಳಗೆ ನೌಕರಶಾಹಿಗಳನ್ನು ಹುಟ್ಟಿಹಾಕಿತು. ಭೂಮಾಲೀಕರು ಬಂಡವಾಳಶಾಹಿಗಳ ಪರವಾಗಿದ್ದ ಕಾರಣ ಕಳೆದ ಐವತ್ತು ವರ್ಷಗಳಲ್ಲಿ ಶೇಕಡ ಐವತ್ತಕ್ಕಿಂತ ಹೆಚ್ಚು ಅರಣ್ಯವನ್ನು ನಾವು ಕಳೆದುಕೊಂಡೆವು. 'ಅರಣ್ಯದ ಪಾಲಕರೂ, ಅದರ ಉತ್ಪಾದಕರೂ ಆಗಿದ್ದ ಸೋಲಿಗರನ್ನು ಕಡೆಗಣಿಸಿದ್ದೇ ಅರಣ್ಯ ನಾಶಕ್ಕೆ ಕಾರಣ' ಇಂಥ ಅಧಿಕಾರಶಾಹಿ ನೀತಿಗಳಿಂದ ಸೋಲಿಗರು ಕಳೆದುಕೊಂಡಿದ್ದು ಕೇವಲ ಅರಣ್ಯವನ್ನಲ್ಲ, ಅರಣ್ಯವನ್ನು ಕುರಿತಾದ ಇಡೀ ಒಂದು ಜ್ಞಾನ ಪರಂಪರೆಯನ್ನು. ಸೋಲಿಗರು ವಾಸಿಸುತ್ತಿದ್ದ ಬಿಳಿಗಿರಿರಂಗನ ಬೆಟ್ಟ, ಮಲೆಮಹದೇಶ್ವರನ ಬೆಟ್ಟ,

ಗೋಪಾಲಸ್ವಾಮಿ ಬೆಟ್ಟ, ಹೆಗ್ಗಡದೇವನ ಕೋಟೆ ಪ್ರದೇಶಗಳ ಅರಣ್ಯದಲ್ಲಿ ಅದೆಷ್ಟೋ ಜೀವರಾಶಿಗಳಿದ್ದವು. ಅದೆಷ್ಟೋ ಬಗೆಯ ಔಷಧಿಯ ಗಿಡಗಳಿದ್ದವು. ಇಡೀ ಜೀವ ಜಲ ಅರಿವಿದ್ದ ಸೋಲಿಗರನ್ನು ಸಕ್ರಿಯವಾಗಿ ಬಳಸಿಕೊಂಡಿದ್ದರೆ ಅರಣ್ಯವು ಇರುತ್ತಿತ್ತು. ಅರಣ್ಯವನ್ನು ಕಾಪಾಡುವ ಪಾರಂಪರಿಕವಾದ ಜ್ಞಾನ ಸಂಪತ್ತು ಉಳಿಯುತ್ತಿತ್ತು.

ಗಿರಿಜನರ ಅಭಿವೃದ್ಧಿ ಹೇಗಿರಬೇಕು, ಯಾವ ರೀತಿಯಲ್ಲಿ ಅಭಿವೃದ್ಧಿಯ ಮಾರ್ಗಸೂಚಿಗಳಿವೆ ಎಂಬುದನ್ನು ಹಿ.ಚಿ. ಬೋರಲಿಂಗಯ್ಯ ಅವರು ತಮ್ಮ ಲೇಖನವಾದ 'ಅಭಿವೃದ್ಧಿಯ ಬಹುಮುಖತೆಯಲ್ಲಿ' 'ಸೋಲಿಗರ ಅಭಿವೃದ್ಧಿ' ಎಂದರೆ, ಅದು ಕೇವಲ ಆರ್ಥಿಕಾಧಾರಿತ ಯೋಜನೆಗಳನ್ನು ರೂಪಿಸುವುದಲ್ಲ. ಆರ್ಥಿಕ ಸವಲತ್ತುಗಳ ಮೂಲಕವಷ್ಟೇ ಅವರನ್ನು ಸಬಲೀಕರಣಗೊಳಿಸುತ್ತೇವೆ ಎಂಬುದಲ್ಲ. ಆರ್ಥಿಕಾಧಾರಿತ ಯೋಜನೆಗಳ ಜೊತೆಗೆ ಅದಕ್ಕೆ ಪೂರಕವಾಗಿ ಪೂರ್ವದಲ್ಲಿಯೇ ಆ ಜನರನ್ನು ಸಜ್ಜುಗೊಳಿಸುವುದು' ಎಂದಿದ್ದಾರೆ.

ಅಂದರೆ, 'Might is right' ಎಂಬ ಕಾಲವೊಂದಿತ್ತು. ಅಶಕ್ತ ಜೀವಿಗಳಿಗೆ ಉಳಿಗಾಲವಿರಲಿಲ್ಲ. ನ್ಯಾಯ ಅನ್ಯಾಯಗಳ ಪರಿವೆ ಅವುಗಳಿಗೆ ಇರಲಿಲ್ಲ. ಬಲಿಷ್ಠವಾದುವು ಬದುಕುತ್ತಿದ್ದವು."[೪] ಒಂದು ಇನ್ನೊಂದನ್ನು ತಿಂದು ಬದುಕುವುದು ಸಹಜವಾಗಿತ್ತು. ಅದು ಭಯಾನಕವಾದಾಗ ತಮ್ಮ ಸಂತತಿಯ ಉಳಿವಿಗಾಗಿ ನೀತಿ ನಿಯಮಗಳನ್ನು ರೂಪಿಸಿಕೊಂಡು ತಾನು ಬದುಕಿ ಇತರರನ್ನು ಬದುಕುಳಿಯುವಂತೆ ಮಾಡಿಕೊಂಡ ಪ್ರಾಣಿಯಲ್ಲಿ ಮಾನವ ಮೊದಲಿಗ. ಹೀಗಾಗಿ ಮಾನವ ಸಾಮಾಜಿಕ ಪ್ರಾಣಿಯಾದ ಇತರೆ ಜೀವಿಗಳು ಜೀವಿಗಳಾಗಿಯೇ ಪ್ರಾಣಿಗಳು, ಪ್ರಾಣಿಗಳಾಗಿಯೇ ಉಳಿದವು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಸೋಲಿಗರು ತಾವು ತಮ್ಮ ಸಮುದಾಯದ ಉಳಿವಿಗಾಗಿ ನೀತಿ, ನಿಯಮಗಳನ್ನು ರೂಢಿಸಿಕೊಂಡು, ಸಹ ಜೀವನ ನಡೆಸುತ್ತ ತಾನೂ ಬದುಕಿ ತನ್ನ ಸಮುದಾಯದ ಉಳಿವಿಗಾಗಿ ಇಂದಿಗೂ ಸಮುದಾಯದೊಟ್ಟಿಗೆ ಹೋರಾಟ ಮಾಡುತ್ತಿರುವುದು ಕಂಡು ಬಂದಿದೆ. ಸೋಲಿಗ ಸಮುದಾಯದ ಆರ್ಥಿಕ ಅಭಿವೃದ್ಧಿ ಎಂದರೆ ಅದು ಸೋಲಿಗರು ಮತ್ತು ಪ್ರಕೃತಿಯೊಳಗಿನ ಸಂಬಂಧದ ಅಭಿವೃದ್ಧಿಯೇ ಆಗಿದೆ. ಅಂದರೆ ಸೋಲಿಗ ಸಮುದಾಯದಲ್ಲಿ ತಮ್ಮ ಸಮುದಾಯಕ್ಕೆ ಯಾವ ರೀತಿಯಲ್ಲಿ ಸೌಲಭ್ಯಗಳು ಬೇಕು ಬೇಡಗಳನ್ನು ಅವರಿಂದಲೇ ಯೋಜನೆ ತಯಾರಿಸಿ ರೂಪಿಸು ವಂತಾಗಬೇಕು.

ಆರಂಭದಲ್ಲಿ ಸೋಲಿಗರು ಆಹಾರ ಸಂಗ್ರಹಣೆ ಮತ್ತು ಬೇಟೆ ಮಾಡುತ್ತಾ ಆದಿಮಾನವರು ಜೀವನ ಮಾಡುವ ರೀತಿಯಲ್ಲಿ ಸಮುದಾಯದಲ್ಲಿ ಗುರುತಿಸಿಕೊಂಡು ಭೌತಿಕವಾಗಿ ಭಿನ್ನವಾಗಿದ್ದು, ಬೆಂಕಿಯ ಬಳಕೆ, ಗುಂಪು ಜೀವನ, ಧಾರ್ಮಿಕ ನಂಬಿಕೆಗಳ ಮೇಲೆ ಅಪಾರವಾದ ಭಯ ಭಕ್ತಿಯನ್ನು ಹೊಂದಿ ಕಾನನಗಳ ಮಧ್ಯದಲ್ಲಿ ಕುಮರಿ ಬೇಸಾಯ ಪ್ರಾರಂಭವಾಯಿತು. ಸೋಲಿಗರು ಕುಮುರಿ ಬೇಸಾಯವನ್ನು ಮಾಡಲು 'ಕಳಕೊಟ್ಲು' ಎನ್ನವ ಪಾರಂಪರಿಕವಾದ ಹಳೆಯ ಸಾಧನವನ್ನು ಉಪಯೋಗಿ ಸುತ್ತಾರೆ, ಇಂದಿಗೂ ಸೋಲಿಗರು ವ್ಯವಸಾಯ ಮಾಡಲು ಕಳ್‌ಕೊಟ್ಲು ಸಾಧನವನ್ನು ಬಳಸುತ್ತಾರೆ.

ಚಾಮರಾಜನಗರ ಜಿಲ್ಲೆಯ ಬಿಳಿಗಿರಿರಂಗನ ಬೆಟ್ಟದ ಮೈದಾನ ಪ್ರದೇಶವಾದ ಮುತ್ತುಗದ ಗದ್ದೆ, ಕನ್ನೇರಿ ಕಾಲೋನಿ, ಭೂತಾಣಿ ಪೋಡು ಹಾಗೂ ಹೊಸ ಪೋಡಿನ ಸುತ್ತಮುತ್ತಲ ಪ್ರದೇಶಗಳಲ್ಲಿ

ಪುರಾತತ್ವ ಸಂಶೋಧಕರು ಕ್ರಿ.ಶ. ೧೮೬೭ ಮತ್ತು ೧೯೧೭ರ ನಡುವಣ ಅವಧಿಯಲ್ಲಿ ಉತ್ಖನನ ನಡೆಸಿದ ಸಂದರ್ಭದಲ್ಲಿ ಬುಡಕಟ್ಟು ಜನರು ಇಲ್ಲಿ ವಾಸವಿದ್ದರು ಎಂಬ ಅಂಶವು ಬೆಳಕಿಗೆ ಬಂದಿದೆ. ಇದು ಹೆಚ್ಚು ಫಲವತ್ತಾದ ನೆಲ ಮತ್ತು ಸಮೃದ್ಧ ಅರಣ್ಯದಿಂದ ಕೂಡಿದ ಪ್ರದೇಶವಾಗಿದ್ದು, ಇಲ್ಲಿಯ ಸಂಪತ್ತನ್ನು ನೋಡಿಯೇ ಬುಡಕಟ್ಟು ಜನರು ನೆಲೆಯೂರಿದ್ದರು ಎಂಬುದನ್ನು ಗ್ರಹಿಸಬಹುದು.

ಇವರುಗಳು ಬೇಟೆಗೆ ಹಣ್ಣು ಹಂಪಲು, ಗೆಡ್ಡೆ ಗೆಣಸಿನಂತಹ ಆಹಾರ ಪದಾರ್ಥಗಳಿಗೆ, ಕಟ್ಟಿಗೆ ಅಂಟುಗಳಂತಹ ಅಗತ್ಯ ವಸ್ತುಗಳಿಗಾಗಿ ಇಲ್ಲಿನ ಕಾಡುಗಳನ್ನು ಅವಲಂಬಿಸಿದ್ದರು. ಕಾಲಕ್ರಮೇಣ ಸಮತಟ್ಟಾದ ಅರಣ್ಯಗಳನ್ನು ಕಡಿದು ಮೈದಾನ ಪ್ರದೇಶದಲ್ಲಿ ಕೃಷಿ ಭೂಮಿಯನ್ನು ವಿಸ್ತರಿಸಿಕೊಳ್ಳುತ್ತಾ ಬಂದರು. ಬೇಟೆ ಮತ್ತು ಇನ್ನಿತರ ಕಿರುಅರಣ್ಯ ಉತ್ಪನ್ನಗಳು ಅರಣ್ಯ ಪ್ರದೇಶದಿಂದ ದೊರಕಬಹುದಾದ ಕಂದಮೂಲಗಳಿಗಾಗಿ ಕಾನನವನ್ನೇ ಆಧರಿಸಿದ್ದ ಜನರು ಮೈದಾನ ಪ್ರದೇಶವನ್ನು ಬಿಟ್ಟು ಬೆಟ್ಟಗಳತ್ತ ವಲಸೆ ಬಂದು ಇಲ್ಲಿನ ದಟ್ಟ ಅರಣ್ಯದಲ್ಲೇ ವಾಸಿಸತೊಡಗಿದ್ದಾರೆ. ಬುಡಕಟ್ಟು ಸಮುದಾಯ ಕಾಡಿನೊಂದಿಗೆ ತನ್ನದೇ ಆದ ಒಂದು ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ. ಜೀವನ ಅದರೊಂದಿಗೆ ಬೆರೆತು ಹುಟ್ಟು ಸಾವಿನೊಂದಿಗೆ ಎಲ್ಲಾ ಕಡೆ ಕಾಡು ಮುಖ್ಯ ಪಾತ್ರ ವಹಿಸಿದೆ ಹಾಗೂ ಹುಟ್ಟಿದ ಮಗುವಿನ ತೊಟ್ಟಿಲಿನಿಂದ ಹಿಡಿದು ಸಾವಿನ ಚಟ್ಟದವರೆಗೆ ಕಾಡು, ಗಿಡ, ಮರ, ಬಳ್ಳಿ ಇವುಗಳೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ. ಇವರು ಪೂಜಿಸುವ ಎಲ್ಲಾ ದೇವತೆಗಳು, ವಸ್ತುಗಳು ಕಾಡಿಗೆ ಸಂಬಂಧಿಸಿದ್ದವುಗಳಾಗಿವೆ. ಭಾರತದ ಬಹಳಷ್ಟು ಬುಡಕಟ್ಟು ಜನಾಂಗದ ಇತಿಹಾಸವು ಇದೇ ಮಾದರಿಯಲ್ಲಿದ್ದು, ಕೃಷಿಗಾಗಿ ಬಯಲು ಪ್ರದೇಶದಲ್ಲಿರುವ ಅರಣ್ಯವನ್ನು ಕಡಿದು ಕೃಷಿ ಮತ್ತು ವಾಸಕ್ಕೆ ಉಪಯೋಗಿಸುತ್ತಿದ್ದಾರೆ. ಕಿರು ಅರಣ್ಯ ಸಂಪನ್ಮೂಲ ಸಂಗ್ರಹಣೆ, ಅರಣ್ಯ ಇಲಾಖೆಯಲ್ಲಿ ಮಾಡುವ ಕೆಲಸಗಳು, ಜೀತ ಪದ್ಧತಿ, ಲ್ಯಾಂಪ್ಸ್ ವಿವಿದ್ದೋದ್ದೇಶ ಸಹಕಾರ ಸಂಘ, ಗಿರಿಜನ ಉಪಯೋಜನೆಗಳು ಸರ್ಕಾರದ ಕಾರ್ಯಕ್ರಮಗಳು, ಶಿಕ್ಷಣದಲ್ಲಾದ ಬದಲಾವಣೆ ಈ ವಿಷಯಗಳ ಬಗ್ಗೆ ದೀರ್ಘವಾಗಿ ಚರ್ಚಿಸುವುದು ಅಗತ್ಯವೆನಿಸಿದೆ.

"Money is the symbol of prestige as well as the means of acquiring commodities"[5] ಸೋಲಿಗರ ಜೀವನ ಸುಖಕರವಾಗಿ ನಡೆಯಲು ಅವರ ಸುತ್ತಲ ಪ್ರಕೃತಿಯೇ ಮೂಲ ಬಂಡವಾಳ; ಅದಿಲ್ಲದೆ ಏನನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಅದೇ ರೀತಿಯಲ್ಲಿ ಪ್ರಸ್ತುತ ದಿನಗಳಲ್ಲಿ ಸೋಲಿಗರ ಜೀವನವು ಸುಖಕರವಾಗಿ ಸಾಗಲು ಪ್ರಕೃತಿಯ ಸಂಪತ್ತಿನ ಜೊತೆಗೆ ಅವರ ಇತ್ತಿಚಿನ ಹಲವಾರು ವೃತ್ತಿಗಳನ್ನು ಕಾಣಬಹುದು. ಏಕೆಂದರೆ ಇತ್ತೀಚೆಗೆ ಕಾಡಿನಿಂದ ಸ್ಥಳಾಂತರಗೊಂಡ ಸೋಲಿಗರು ಮತ್ತು ಅರಣ್ಯದ ಕಾನೂನುಗಳು ಅವರ ಪರಿಸರದ ಮೇಲೆ ಹಾಗು ಆರ್ಥಿಕ ವ್ಯವಸ್ಥೆಯ ಮೇಲೆ ಪರಿಣಾಮವನ್ನು ಬೀರುತ್ತಿದೆ.

ಸೋಲಿಗರು ಕೊಳ್ಳೇಗಾಲ ಭಾಗ, ಕೊಯಂಬತ್ತೂರು ಹಾಗೂ ದಿಂಭಮ್‌ನ ಭಾಗದ ಕಾಡಿನ ಪ್ರದೇಶಗಳಲ್ಲಿ ವಾಸಿಸುತ್ತಾರೆ ಎಂದು ತಿಳಿಸುತ್ತ ೧೯೦೦ ಸಮಯದಲ್ಲಿ ಇಂಗ್ಲೀಷ್ ಮಾದರಿ ರೀತಿಯಲ್ಲಿ ದೊಡ್ಡ ದೊಡ್ಡ ಕೋಟುಗಳನ್ನು ಧರಿಸುತ್ತಿದ್ದರು ಎಂದು ತಿಳಿಸಿದ್ದಾರೆ. ಇದನ್ನು ಗಮನಿಸಿದಾಗ ಸೋಲಿಗರು ತಮ್ಮ ದೇಹವನ್ನು ಮುಚ್ಚಿಕೊಳ್ಳುವ ಸಲುವಾಗಿ ಆಗಿನ ಸಮಯದಲ್ಲಿ ಹೆಚ್ಚಾಗಿ ಹರಾಜು ಬಟ್ಟೆಗಳನ್ನು ಹಾಗು ಬೇರೆಯವರು ಪ್ರವಾಸಿಗರು ಕೊಡುವ ಉಡುಪುಗಳನ್ನು ಧರಿಸುತ್ತಿದ್ದರು ಎಂಬುದು

ತಿಳಿದು ಬರುತ್ತದೆ. ಪ್ರಸ್ತುತದಲ್ಲಿಯೂ ಸಹ ಕೆಲವು ಮಂದಿ ಸೋಲಿಗರು ಈ ರೀತಿಯಾದ ಹರಾಜು ಕಪ್ಪು ಕೋಟುಗಳನ್ನು ಹರಾಜು ಬಟ್ಟೆಗಳನ್ನು ಸಂತೆಯಿಂದ, ಪೇಟೆಯಿಂದ, ನಗರಗಳ ಕಡೆಗಳಿಂದ ತಂದು ಧರಿಸುತ್ತಾರೆ. ೧೯೮೦ರ ದಶಕದಲ್ಲಿ ಡಾ. ಎಚ್.ಎಮ್. ಸುದರ್ಶನ್ ಅವರು ಶಾಲೆಯ ಮಕ್ಕಳಿಗೆ, ಸೋಲಿಗರಿಗೆ ಬೇರೆ ಬೇರೆ ಕಡೆಯಿಂದ ದಾನವಾಗಿ ಅವರು ಹಾಕಿ ಬಿಟ್ಟಿರುವ ಬಟ್ಟೆಗಳನ್ನು ತಂದು ಕೊಡುತ್ತಿದ್ದರು.

ಸೋಲಿಗರು ಪೋಡು ಕಟ್ಟಿಕೊಂಡು ವಾಸಿಸುತ್ತಿದ್ದ ಗುಡಿಸಲುಗಳನ್ನು ಅರಣ್ಯ ಇಲಾಖೆಯವರು ಆನೆಗಳನ್ನು ಕರ್‍ದ್ರು ಬಂದು ಗುಡಿಸಿಲನ್ನು ನೆಲಗೆಡವಿದರು(ಕೀಳಿಸಿದರು) ಬೆಂಕಿಯಿಂದ ಸುಟ್ಟು ನೆಲಸಮ ಗೊಳಿಸಿದರು. ಈ ಆಘಾತಕಾರಿ ವ್ಯವಸ್ಥೆಯನ್ನು ಕಂಡು ಸೋಲಿಗರಿಗೆ ಬರಸಿಡಿಲು ಬಡಿದಂತಾಗಿ ಏನೂ ತೋಚದಂತಾಗಿ ಅರಣ್ಯ ಇಲಾಖೆಯವರು ಇಲ್ಲಿಯವರೆಗೂ ಯಾವುದೇ ಆರ್ಥಿಕ ತೊಂದರೆ ಇಲ್ಲದೆ ಕಾಡಿನಲ್ಲಿ ಜೀವನ ಸಾಗಿಸುತ್ತಿದ್ದ ಸೋಲಿಗರ ವಸ್ತು ವಿನಿಮಯ, ಪೈಸೆಯ ವ್ಯವಸ್ಥೆ, ಸರಳತೆ, ಸ್ವಚ್ಛಂದ ಬದುಕು, ಪ್ರಕೃತಿಯ ಮಡಿಲು, ಕಾಡೇ ಬಂಡವಾಳದ ಮೂಲ, ಯಾವುದೇ ಚಿಂತೆ, ವ್ಯಥೆ ಇಲ್ಲದೆ ಆರೋಗ್ಯವಾಗಿ, ಕೂಡಿಟ್ಟುಕೊಳ್ಳದೆ ಇರುವ, ಎಲ್ಲರೂ ಸಮನಾಗಿ ಹಂಚಿಕೊಂಡು ತಿನ್ನುವ ಸ್ವಭಾವದಿಂದ ಬದುಕು ಕಟ್ಟಿಕೊಂಡಿದ್ದ ಸೋಲಿಗರ ಬಾಳಿನಲ್ಲಿ ಕತ್ತಲೆ ಕಾರ್ಮೋಡ ಕವಿದಂತಾಯಿತು. ಸೋಲಿಗರಿಗೆ ಒಂದು ಕಡೆ ಅರಣ್ಯ ಇಲಾಖೆಯವರ ಭಯ, ಮತ್ತೊಂದು ಕಡೆ ತಮ್ಮ ಬದುಕಿಗಾಗಿ ಹೋರಾಟ ಸದಾ ನಡೆಯುತ್ತಲೇ ಇತ್ತು. ಏನು ಮಾಡುವುದು ಎಂದು ತೀರ್ಮಾನಕ್ಕೆ ಬಂದು ಕೊನೆಗೆ ಸರಕಾರದ ಅರಣ್ಯ ಇಲಾಖೆಯವರ ತೊಂದರೆಯನ್ನು ತಾಳಲಾರದೆ ಕಾಡನ್ನು ಬಿಟ್ಟು ಹತ್ತಿರದ ಕಾಡಂಚಿನ ಭೂಮಾಲೀಕರ ಹೊಲ, ತೋಟಗಳಿಗೆ ಕೆಲವರು ಹೊನ್ನಮೇಟಿ, ಹತ್ತಿಕಾನು, ಬೇಡಗುಳಿ ಎಸ್ಟೇಟ್‌ಗಳಿಗೆ ಭಯದಿಂದಲೇ ಕೂಲಿ ಅರಸಿಕೊಂಡು ತಮ್ಮ ಹೆಂಗಸು ಮಕ್ಕಳನ್ನು ಕರ್‍ದ್ರು ವಲ್ಲದ ಮನಸ್ಸಿನಿಂದಲೇ ತಮ್ಮ ತಾಯಿ ಕಾಡನ್ನು ಬಿಟ್ಟು ವಲಸೆ ಹೋದರು.

ಈ ರೀತಿಯ ಆರ್ಥಿಕ ಪರಿಸ್ಥಿತಿಯು ಸೋಲಿಗರು ವಾಸಿಸುತ್ತಿದ್ದ ಎಲ್ಲಾ ಕಡೆಯೂ ಸರಕಾರದ ಅರಣ್ಯ ನೀತಿಯಿಂದ ಕಾಡನ್ನು ಉಳಿಸಿ ಬೆಳೆಸಬೇಕು ಎನ್ನುವ ವ್ಯವಸ್ಥೆಯಿಂದ ದೊಡ್ಡ ದೊಡ್ಡ ಎಸ್ಟೇಟು ಮಾಲೀಕರಿಗೆ ಕಾಡಿನೊಳಗೆ ಸಾವಿರಾರು ಎಕರೆ, ಭೂಮಾಲೀಕರಿಗೆ ಜಾಗವನ್ನು ಕೊಟ್ಟು, ಸೋಲಿಗರನ್ನು ಹೊರದೂಡಿ ಸ್ಥಳಾಂತರಿಸಲಾಯಿತು. ಅಲ್ಲಲ್ಲಿ ಕಾಡಿನ ಮಧ್ಯದಲ್ಲಿ ಬಂಗಲೆ, ರೆಸಾರ್ಟ್ ಸಂಸ್ಕೃತಿಯನ್ನು ತರುವುದರ ಮೂಲಕ ಶ್ರೀಮಂತರ ಸಹಾಯಕ್ಕಾಗಿ ಸೋಲಿಗರಲ್ಲಿಯೇ ಪಾರಂಪರಿಕ ಜ್ಞಾನವನ್ನು ಹೊಂದಿದವರನ್ನು ತಮ್ಮ ಕೆಲಸದ ಆಳುಗಳಾಗಿ ನೇಮಿಸಿಕೊಳ್ಳಲಾಯಿತು. ಅಂತಹ ಸ್ಥಳಗಳೆಂದರೆ ಕೆ ಗುಡಿ ಬಂಗಲೆಯ ಕೇತೆದೇವ್ರ ಗುಡಿ, ಬಂಗಲೆ, ಬೂದಿಪಡಗ ಬಂಗಲೆ, ಬಂಗಲೇ ಪೋಡು ಹೀಗೆ ಕರ್ನಾಟಕದ ಹಲವಾರು ಕಡೆ, ಗೋಪಾಲಸ್ವಾಮಿ ಬೆಟ್ಟದ ಬಂಗಲೆ, ಬಂಡೀಪುರ, ಚೆಮ್ಮನಹಳ್ಳಿ ಬಂಗಲೆ, ಮೂಳೆಹೊಳೆ ಬಂಗಲೆ, ಕಾಡಿನ ಕಾಡಿನ ಹಲವಾರು ಕಡೆಗಳಲ್ಲಿ ಬಂಗಲೆ ಕಟ್ಟಿ ಅಲ್ಲಿಗೆ ರಾಜ ಮಹಾರಾಜರು, ಬ್ರಿಟೀಷರು ಪ್ರವಾಸದ ರೀತಿಯಲ್ಲಿ ಹೋಗಿ ಶಿಕಾರಿ, ಬೇಟೆ, ಇತ್ಯಾದಿ ಚಟುವಟಿಕೆಗಳನ್ನು ಮಾಡುತ್ತ ಅಲ್ಲಿಯ ಸ್ಥಳೀಯ ವಾಸಿಗಳಾಗಿದ್ದ ಸೋಲಿಗರನ್ನೇ ತಮ್ಮ ಕೆಲಸದ ಆಳುಗಳಾಗಿ ಉಪಯೋಗಿಸಿಕೊಳ್ಳುವುದು ಪ್ರಾರಂಭವಾಯಿತು. ಹಾಗೂ ಸೋಲಿಗರು ಕಾನನಗಳ ಮಧ್ಯದಲ್ಲಿ ವಾಸಿಸುತ್ತ ತಮ್ಮದೇ ಆದ ಪೋಡು ಕಟ್ಟಿಕೊಂಡು ಕಾಡಿನ ಪರಿಸರದಲ್ಲಿಯೇ ಬಾಳಿ

ಬದುಕುತ್ತಿದ್ದವರನ್ನು ಅರಣ್ಯ ಸಂರಕ್ಷಣೆಯ ಹೆಸರಿನಲ್ಲಿ ಕಾಡಿನಿಂದ ಕಾಡಂಚಿಗೆ ಹಾಗು ಕಾಡಿನ ಹೊರ ಭಾಗಕ್ಕೆ ತಂದು ಬಲವಂತವಾಗಿ ಪುನರ್ವಸತಿಯನ್ನು ಕಲ್ಪಿಸಿಕೊಡಲಾಯಿತು.

ಆಧುನಿಕತೆ, ವಿಜ್ಞಾನ, ತಂತ್ರಜ್ಞಾನಗಳು ಕುಲಕಸುಬುಗಳನ್ನು ಕಸಿದುಕೊಂಡಿವೆ. ಸಂಸ್ಕೃತೀಕರಣ, ಪಾಶ್ಚಾತ್ಯೀಕರಣ, ತಾಂತ್ರಿಕರಣಗಳ ಪ್ರಭಾವದಿಂದ ಮಾನವ ತನ್ನ ದೇಸಿ ಕಸುಬುಗಳನ್ನು ತೊರೆದು ಅತಂತ್ರನಾಗಿ ತನಗೆ ತೋರಿದ ಕೆಲಸಗಳಿಗೆ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಿದ್ದಾನೆ. ಅದರಲ್ಲೂ ಮುಖ್ಯವಾಗಿ ಕರ್ನಾಟಕ ಬುಡಕಟ್ಟುಗಳಲ್ಲಿ ಹಲವಾರು ತಮ್ಮದೇ ಆದ ಕಸುಬುಗಳನ್ನು ಇನ್ನೂ ಉಳಿಸಿ ಕೊಂಡು ಬೆಳೆಸಿಕೊಂಡು ಬರುತ್ತಿರುವುದನ್ನು ಕಾಣಬಹುದು.

**೭.೨. ಶೈಕ್ಷಣಿಕ ಸ್ಥಿತ್ಯಂತರಗಳು**

ಪ್ರಾಚೀನ ಸಮಾಜದಲ್ಲಿ ಮಾನವನ ಅವಶ್ಯಕತೆಗಳು ಸೀಮಿತವಾಗಿದ್ದವು. ಇಂದು ಸಮಾಜದ ಅಭಿವೃದ್ಧಿಗೆ ತಕ್ಕಂತೆ ಮಾನವನ ಅವಶ್ಯಕತೆಗಳು ದ್ವಿಗುಣಗೊಂಡಿದೆ. ಇಂತಹ ಅವಶ್ಯತೆಗಳಲ್ಲಿ ಶಿಕ್ಷಣ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇತರೆ ಅವಶ್ಯಕತೆಗಳಲ್ಲಿ ಶಿಕ್ಷಣ ಹೆಚ್ಚಿನ ಪ್ರಾಮುಖ್ಯತೆ ಹೊಂದಿದೆ. ಕಲಿಕೆಯಿಂದ ಮಾನವ ಇತರೆ ಪ್ರಾಣಿಗಳಿಗಿಂತ ಭಿನ್ನವಾದ ಚಟುವಟಿಕೆಯಿಂದ ಕೂಡಿರುತ್ತಾನೆ ಮತ್ತು ಉತ್ತಮನಾಗಿರುತ್ತಾನೆ. ವಿವೇಚನಾ ಶಕ್ತಿಯಿಂದ ತನ್ನ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಂಡಿದ್ದಾನೆ. ಮಾನವನ ಪ್ರಗತಿಗೆ, ಮನೋವೃದ್ಧಿಗೆ ಶಿಕ್ಷಣ ಸಹಕಾರಿಯಾಗಿದೆ. ವ್ಯಕ್ತಿ ಸನ್ನಿವೇಶಕ್ಕೆ ತಕ್ಕಂತೆ ಸೂಕ್ತ ರೀತಿಯಲ್ಲಿ ಪರಿವರ್ತನೆ ಹೊಂದಬಲ್ಲ. ಇದರಿಂದ ಪರಿವರ್ತಿತ ಅನಭವಗಳಿಗೆ ತಕ್ಕಂತೆ ನೂತನ ಜ್ಞಾನ ವ್ಯಾಪ್ತಿ ಬೆಳೆಯುತ್ತದೆ. ವ್ಯಕ್ತಿಯ ಸತತ ಸ್ವಪ್ರಯತ್ನದಿಂದ ಸಂಶೋಧಿಸಿ ಶೇಖರಿಸುವ ಏಕ ಪ್ರಕಾರವಾಗಿ ಹರಿದು ಬಂದಿರುವ ಜೀವಾನಾನುಭವಗಳ ಪ್ರಜ್ಞೆಯನ್ನೇ ಶಿಕ್ಷಣ ಎನ್ನಬಹುದು.

**೭.೨.೧. ಶಿಕ್ಷಣ ಪದದ ಅರ್ಥ, ಪರಿಭಾಷೆಗಳು ಮತ್ತು ವ್ಯಾಖ್ಯೆಗಳು.**

ಶಿಕ್ಷಣ ಎಂಬ ಪದಕ್ಕೆ ಆಂಗ್ಲ ಭಾಷೆಯಲ್ಲಿ 'ಎಜುಕೇಶನ್' ಎಂಬ ಪದವು 'ಲ್ಯಾಟಿನ್' ಭಾಷೆಯ 'ಎಡುಕೇರ್' ಎಂಬ ಪದದಿಂದ ಉತ್ಪತ್ತಿಯಾಗಿದೆ. 'ಎಡುಕೇರ್' ಎಂಬುದು 'ಇಡುಚಸರೆ' ಎಂಬುದು 'ಟು ನರೇಶ್' ಎಂಬ ಅರ್ಥವನ್ನು ಕೊಡುತ್ತದೆ.

ಕೆಲವರ ಪ್ರಕಾರ ಲ್ಯಾಟಿನ್ 'ಎಡಕೇರ್' ಎಂಬ ಪದಕ್ಕೆ ಆಂಗ್ಲ ಭಾಷೆಯಲ್ಲಿ 'ಟು ಲೀಡ್ ಔಟ್' ಎಂಬ ಅರ್ಥವಿದೆ. 'ಈ' ಮತ್ತು 'ಡೂಕೊ' ಪದಗಳ ಸೇರುವಿಕೆಯಿಂದ 'ಎಜುಕೇಷನ್' ಎಂಬ ಪದ ರಚನೆಯಾಗಿದೆ. 'ಈ' ಎಂದರೆ 'ಔಟ್ ಆಫ್' 'ಡೂಕೊ' ಎಂದರೆ 'ಟು ಎಕ್ಸ್ಟ್ರನಲ್' ಎಂಬ ಅರ್ಥದಲ್ಲಿ, 'ಶಿಕ್ಷಣವು ಮಗುವಿಗೆ ಸುಪ್ತ ಶಕ್ತಿಯನ್ನು ಗುರುತಿಸಿ ಅಭಿವೃದ್ಧಿಪಡಿಸು' ಎಂಬ ಅರ್ಥದಲ್ಲಿ ತಿಳಿಯುತ್ತದೆ. ಇದರಿಂದ ಮುಗ್ಧ ಮಗುವಿನಲ್ಲಿರುವ ಸುಪ್ತ ಶಕ್ತಿಯನ್ನು ಗುರುತಿಸಿ, ಮಾರ್ಗದರ್ಶನ ನೀಡಿ ಮಗುವಿನ ಸ್ವಯಂ ಕಾರ್ಯಚಟುವಟಿಕೆಗೆ ಪ್ರೋತ್ಸಾಹಿಸುವುದೇ 'ಶಿಕ್ಷಣ' ಎನಿಸುತ್ತದೆ.

ಮತ್ತೆ ಕೆಲವರು ಲ್ಯಾಟಿನ್ ಭಾಷೆಯ 'ಎಜುಕೇಷನ್' ಎಂಬ ಪದ 'ಆಕ್ಟ್ ಆಫ್ ಟ್ರೈನಿಂಗ್', 'ಟೀಚಿಂಗ್', ತರಬೇತಿ ಅಥವಾ 'ಬೋಧನಾ ವಿಧಾನ' ಎಂಬ ಅರ್ಥವನ್ನು ಕೊಡುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಭಾರತೀಯರ ಪ್ರಕಾರ 'ಶಿಕ್ಷಣ' ಎಂಬ ಪದ ಸಂಸ್ಕೃತದ 'ವಿದ್ಯಾ' ಎಂಬ ಪದಕ್ಕೆ ಪರ್ಯಾಯವಾಗಿದೆ. 'ವಿದ್ಯಾ' ಎಂಬ ಸಂಸ್ಕೃತ ಧಾತುವಿನಿಂದ ಏರ್ಪಟ್ಟಿದೆ. 'ವಿದ್ಯಾ' ಎಂದರೆ

'ಶಿಸ್ತು' ಎಂಬ ಅರ್ಥವಿದೆ. 'ಶಿಕ್ಷಣ' ಪದಕ್ಕೆ 'ಶಿಕ್ಷಿತುಂ' ಅರ್ಥ 'ಶಿಕ್ಷಣಂ' ಎಂದರೆ 'ಆಜ್ಞಾಪನೆಗೆ ಅರ್ಹವಾದುದ್ದು ಶಿಕ್ಷಣ' ಎಂಬ ವಿವರಣೆ ಇದೆ.

**ಶಿಕ್ಷಣದ ಬಗ್ಗೆ ಕೆಲವು ಪರಿಭಾಷೆಗಳು**

ಶಿಕ್ಷಣ ಜನ ಸಮುದಾಯಕ್ಕೆ ಅನುಗುಣವಾಗಿ ವಿವಿಧ ಕಾಲದಲ್ಲಿ ವಿವಿಧ ಅರ್ಥವನ್ನು ಪಡೆದಿದೆ. ಶಿಕ್ಷಣ ಪದಕ್ಕೆ ಭಾರತೀಯರು ಹಾಗೂ ಪಾಶ್ಚಿಮಾತ್ಯ ಶಿಕ್ಷಣ ತಜ್ಞರು ನೀಡಿರುವ ಕೆಲವು ವ್ಯಾಖ್ಯೆಗಳನ್ನು ತಿಳಿಯಬಹುದಾಗಿದೆ.

**ಭಾರತೀಯ ಶಿಕ್ಷಣ ತಜ್ಞರು ನೀಡಿರುವ ವ್ಯಾಖ್ಯೆಗಳು**

- ಉಪನಿಷತ್ತುಗಳ ಪ್ರಕಾರ – 'ಮೋಕ್ಷದಾಯಕವಾದುದೇ ಶಿಕ್ಷಣ'.
- ಋಗ್ವೇದದ ಪ್ರಕಾರ – ವ್ಯಕ್ತಿಯನ್ನು ಸ್ವಾವಲಂಬಿಯನ್ನಾಗಿ, ನಿಸ್ವಾರ್ಥಿಯಾಗಿ ಮಾಡುವುದೇ ಶಿಕ್ಷಣ.
- ಶಂಕರಾಚಾರ್ಯರು ಹೇಳಿರುವಂತೆ – 'ಆತ್ಮಸಾಕ್ಷಾತ್ಕಾರವೇ ಶಿಕ್ಷಣ.
- ಕೌಟಿಲ್ಯ ಪ್ರಕಾರ – ತಾಯ್ನಾಡಿನ ಬಗ್ಗೆ ಹೆಮ್ಮೆ ಪಡುವಂತಹ ಮಕ್ಕಳನ್ನು ತರಬೇತಿಗೊಳಿಸುವುದೇ ಶಿಕ್ಷಣ.
- ಸ್ವಾಮಿ ವಿವೇಕಾನಂದರ ಪ್ರಕಾರ – ಮಾನವನಲ್ಲಿ ಮೊದಲೇ ಇದ್ದ ಬಹುಮುಖ ಶಕ್ತಿಗಳ ಪ್ರದಾರ್ಭವಾಗಿ ವ್ಯಕ್ತಪಡಿಸುವ ಅವಕಾಶ ಮಾಡಿಕೊಡುವುದೇ ಶಿಕ್ಷಣ.
- ಮಹಾತ್ಮ ಗಾಂಧೀಜಿಯವರ ಪ್ರಕಾರ – ಸತ್ಯ, ಸೌಂದರ್ಯ, ಸಭ್ಯತೆಗಳ ಪ್ರಜ್ಞೆಯೇ ಶಿಕ್ಷಣ.
- ರವೀಂದ್ರನಾಥ್ ಟಾಗೋರರ ಪ್ರಕಾರ – ವಿಶ್ವ ಜೀವನದಲ್ಲಿ ಕಂಡುಬರುವ ಎಲ್ಲಾ ವಸ್ತುಗಳಿಗೆ ಪ್ರಕೃತಿಯ ಸಮಾಜದ ಸಂಪರ್ಕವನ್ನುಂಟುಮಾಡಿ ಮಗುವಿಗೆ ಸತ್ಯ, ಪ್ರಕೃತಿ, ಪ್ರೇಮ ಆತ್ಮ, ಪ್ರಕಾರಗಳ ಅರಿವನ್ನುಂಟುಮಾಡುವುದೇ ಶಿಕ್ಷಣ.
- ಡಾ. ರಾಧಾಕೃಷ್ಣನ್ ಅವರ ಅಭಿಪ್ರಾಯದಲ್ಲಿ – 'ಮಕ್ಕಳು ಮಾನವರಾಗಿ, ನಾಗರಿಕರಾಗಿ ಇನ್ನೊಬ್ಬರೊಡನೆ ಸ್ನೇಹ, ಗೌರವ, ಘನತೆಗಳಿಂದ ವರ್ತಿಸುವಂತೆ ಮಾಡುವುದೇ ಶಿಕ್ಷಣ.
- ಪ್ರೊ. ಹುಮಾಯನ್ ಕಬೀರ್ ಅವರ ಪ್ರಕಾರ – ಪ್ರೇರಕ ಶಕ್ತಿಯೇ ಶಿಕ್ಷಣ.
- ಭಾರತೀಯ ಶಿಕ್ಷಣ ಆಯೋಗದ ಪ್ರಕಾರ – ಜನತೆಯ ಜೀವನದ ಅಗತ್ಯಗಳನ್ನು ಹಾಗೂ ಆಕಾಂಕ್ಷೆಗಳಿಗೆ ಅನುಗುಣವಾಗಿ ಸಾಮಾಜಿಕ, ಆರ್ಥಿಕ ಬದಲಾವಣೆಗಳಿಗೆ ಸಹಾಯ ಮಾಡುವ ಬಲಿಷ್ಠ ಸಾಧನ ಶಿಕ್ಷಣ.

**ಪಾಶ್ಚಿಮಾತ್ಯ ಶಿಕ್ಷಣ ತಜ್ಞರ ಪ್ರಕಾರ**

- **ಸಾಕ್ರಾಟೀಸ್** ವ್ಯಕ್ತಿಗೆ ಸತ್ಯ ರೂಪವನ್ನು ತಿಳಿಸಿ ಆತನಿಗೆ ಅದನ್ನು ಆಚರಣೆಗೆ ತರುವುದೇ ಶಿಕ್ಷಣ.
- **ಅರಿಸ್ಟಾಟಲ್** – ಸದೃಢ ದೇಹದಲ್ಲಿ ಸಬಲ ಮನಸನ್ನುಂಟು ಮಾಡುವುದೇ ಶಿಕ್ಷಣ.
- **ಜಾನ್ ಡ್ಯೂ** ರವರ ಪ್ರಕಾರ – ವ್ಯಕ್ತಿಗಳಿಗೆ ತಮ್ಮ ಪರಿಸರವನ್ನು ನಿಯಂತ್ರಿಸಲು ಮತ್ತು ತನ್ನ ಸಾಧ್ಯತೆಗಳನ್ನು ಪರಿಪೂರ್ಣಗೊಳಿಸಲು ಸಮರ್ಥವಾಗಿ ಮಾಡಲು ಅಗತ್ಯವಾದ ಎಲ್ಲಾ ವಿಧದ ಸಾಮರ್ಥ್ಯ ಶಕ್ತಿಗಳನ್ನು ಅಭಿವೃದ್ಧಿಗೊಳಿಸುವುದೇ ಶಿಕ್ಷಣ.

❖ **ಜಾನ್‌ಅಕ್** – ವ್ಯವಸಾಯದ ಗಿಡಗಳು, ಅಭಿವೃದ್ಧಿ ಹೊಂದುವಂತೆ ಮಾನವರು ಶಿಕ್ಷಣದಿಂದ ಅಭಿವೃದ್ಧಿ ಹೊಂದುತ್ತಾರೆ.

❖ **ಪ್ರೊ ಪ್ರೋಬೆಲ್** – ಆಂತರಿಕವಾದುದನ್ನು ಹೊರತುಪಡಿಸಿ ಬಾಹ್ಯ ಜಗತ್ತಿನ ಸಂಬಂಧ ಪಡೆಯುವಂತೆ ಮಾಡುವುದೇ ಶಿಕ್ಷಣ.

❖ **ಹರ್ಬರ್ಟ ಸ್ಪೆನ್ಸರ್** – ಪರಿಶುದ್ಧವಾದ ನೈತಿಕ ಶೀಲ ಸಂದರ್ಭವೇ ಶಿಕ್ಷಣ.

❖ **ಓ.ಬಿ.ನನ್** – ಪ್ರತಿಯೊಬ್ಬ ವ್ಯಕ್ತಿಯು ತನ್ನ ಅಭಿರುಚಿ, ಆಸಕ್ತಿಗಳನ್ನು ಬೆಳೆಸಿಕೊಂಡು ಅದರ ಮೂಲಕ ಮಾನವ ಕಲ್ಯಾಣ ಸಾಧಿಸುವುದಕ್ಕೆ ಸಹಾಯ ಮಾಡುವುದೇ ಶಿಕ್ಷಣ.

ಈ ಎಲ್ಲಾ ಪರಿಭಾಷೆಗಳನ್ನು ಪರಾಮರ್ಶಿಸಿದಾಗ ಭಾರತೀಯ ಮತ್ತು ಪಾಶ್ಚಿಮಾತ್ಯ ತಜ್ಞರ ಅಭಿಪ್ರಾಯಗಳೆಲ್ಲವೂ ಶಿಕ್ಷಣದ ವಿವಿಧ ಮುಖಗಳನ್ನು ಪ್ರತಿಬಿಂಬಿಸುತ್ತದೆ. ಶಿಕ್ಷಣ ಎಂಬ ಪದ ಅತೀ ವಿಸ್ತಾರವಾದ ವ್ಯಾಪ್ತಿಯನ್ನು ವಿಶಾಲ ಅರ್ಥವನ್ನು ಹೊಂದಿದೆ. ಸಂಕುಚೀತಾರ್ಥದಲ್ಲಿ ಶಾಲಾ ಕಾಲೇಜುಗಳಿಂದ ಪಡೆಯುವ ಶಿಕ್ಷಣ, ವಿಶಾಲಾರ್ಥದಲ್ಲಿ ಜನನದಿಂದ ಮರಣದವರೆಗೂ ದೊರೆಯುವ ಅನುಭವವೇ ಶಿಕ್ಷಣ. ಒಟ್ಟಿನಲ್ಲಿ ಹೇಳುವುದಾದರೆ ಪ್ರತಿ ವ್ಯಕ್ತಿಯು ವಿವಿಧ ಸನ್ನಿವೇಶಗಳನ್ನು ನಿಯಂತ್ರಿಸಿಕೊಂಡು ತನ್ನಷ್ಟಕ್ಕೆ ತಾನೇ ಹೊಂದಾಣಿಕೆಯೊಂದಿಗೆ ಸಮಗ್ರ ಜೀವನ ನಡೆಸುವುದೇ ಶಿಕ್ಷಣ. ಶಿಕ್ಷಣ ಸಹಜ ಪ್ರಕ್ರಿಯೆ.

ಶಿಕ್ಷಣವೆಂಬುದು ಸಂಕೀರ್ಣ ಪರಿಕಲ್ಪನೆ, ಇದು ಔಪಚಾರಿಕ ಶಾಲಾ ವ್ಯವಸ್ಥೆಯ ಶಿಕ್ಷಣ ಕ್ರಮಕ್ಕೆ ಹಾಗೂ ಜೀವನಾದ್ಯಂತ ಪಡೆಯುವ ಕಲಿಕಾ ಅನುಭವಗಳಿಗೆ ಸಂಬಂಧಪಟ್ಟಿದೆ. ಇವು ಬಹುಮುಖಾತ್ಮಕವಾದ ಕ್ರಿಯೆಗಳನ್ನು ಹೊಂದಿದ್ದು ಜ್ಞಾನದ ಸ್ವೀಕಾರಕ್ಕೆ ಸಂಸ್ಕೃತಿಯ ಪ್ರಸಾರಕ್ಕೆ ಉತ್ತಮ ಗುಣಗಳ ಸಂವರ್ಧನೆಗೆ ಶಿಸ್ತಿನ ವ್ಯಕ್ತಿತ್ವ ರೂಪಿಸುವುದಕ್ಕೆ ಮತ್ತು ಅನುಭವಕ್ಕೆ ಸಂಬಂಧಿಸಿದಂತೆ ಕಾರ್ಯ ನಿರ್ವಹಿಸುತ್ತದೆ.

**ಶಿಕ್ಷಣ ಮತ್ತು ಸಾಮಾಜಿಕ ಕ್ರಮ**

ಸಮಾಜವು ಸಮಾನತೆಯನ್ನು ಮಾತ್ರವಲ್ಲದೆ, ಭಿನ್ನತೆಯನ್ನು ಆಧರಿಸಿ ನಿಂತಿದೆ. ಸಮಾಜದ ಸದಸ್ಯರು ಪರಸ್ಪರ ಭಿನ್ನರಾಗಿದ್ದಾರೆ; ಇಂತಹ ಭಿನ್ನತೆಯಿಂದ ಸಮಾಜದಲ್ಲಿ ಅಸಮಾನತೆ ಇದೆ. ಸಮಾನತೆಯ ಆದರ್ಶವನ್ನು ಸಮಾಜವು ಆರಂಭದಿಂದಲೂ ಪೋಷಿಸಿಕೊಂಡು ಬಂದಿದ್ದರೂ, ಅದರ ಸದಸ್ಯರು ಸಮಾಜದಲ್ಲಿ ಭೇದ ಪ್ರಬೇಧಗಳನ್ನೊಳಗೊಂಡ ಸಮಾಜದಲ್ಲಿ ವಯಸ್ಸು, ಲಿಂಗ , ವೃತ್ತಿ, ಹಾಗೂ ವೈಯಕ್ತಿಕ ಗುಣಗಳು ಇವುಗಳ ಆಧಾರದ ಮೇಲೆ ಜನರು ವಿಭಿನ್ನ ಅಂತಸ್ತುಗಳನ್ನು ಪಡೆದು ನಾನಾ ಪಾತ್ರಗಳನ್ನು ನಿರ್ವಹಿಸುತ್ತಾರೆ. ಇದನ್ನು ಸಾಮಾಜಿಕ ಪ್ರಬೇಧ ಎನ್ನಲಾಗಿದೆ.

**ಆಶ್ರಮ ಶಾಲೆ**

ಮಹಾತ್ಮ ಗಾಂಧೀಜಿಯವರ ಕಲ್ಪನೆಯಲ್ಲಿ ಆಶ್ರಮ ಶಾಲೆಯನ್ನು ಭಾರತ ದೇಶದಲ್ಲಿ ಪ್ರಾರಂಭಿಸಲಾಯಿತು. ಸ್ವತಂತ್ರಪೂರ್ವದಲ್ಲಿ ಮಹಾತ್ಮ ಗಾಂಧೀಜಿಯವರು ಆಶ್ರಮದ ವ್ಯವಸ್ಥೆಯನ್ನು ಜನರಿಗೆ ಪರಿಚಯಿಸಿದರು. ಅದೇ ರೀತಿಯಲ್ಲಿ ಕರ್ನಾಟಕದಲ್ಲಿ ೧೯೬೪ ರಿಂದೀಚೆಗೆ ಬುಡಕಟ್ಟು ಮಕ್ಕಳಿಗೆ ಗಂಜಿ

ಕೇಂದ್ರವಾಗಿ ಪ್ರಾರಂಭವಾದ ಆಶ್ರಮವು ಕಾಡಿನಲ್ಲಿ ಅಲ್ಲಲ್ಲಿ ವಲಸೆ ಹೋಗುತ್ತಿದ್ದ ಜನರನ್ನು ಒಟ್ಟುಗೂಡಿಸಿ ಅವರ ಮಕ್ಕಳನ್ನು ಒಂದೆಡೆ ಕಲೆಹಾಕಿ ಆ ಮಕ್ಕಳಿಗೆ ಮೊದಲಿಗೆ ಊಟದ ವ್ಯವಸ್ಥೆಯನ್ನು ಮಾಡುವುದು ಹಾಗು ಬುಡಕಟ್ಟು ಮಕ್ಕಳನ್ನು ಒಂದೆಡೆ ಕಲೆಹಾಕುವ ದೃಷ್ಟಿಯಿಂದ ಪ್ರಾರಭವಾದ ಆಶ್ರಮ ಶಾಲೆಯು ಪ್ರಸ್ತುತ ಕರ್ನಾಟಕದಾದ್ಯಂತ ಬುಡಕಟ್ಟು ಮಕ್ಕಳ ಶಿಕ್ಷಣದ ಕೇಂದ್ರವಾಗಿ ಕೆಲಸ ಮಾಡುತ್ತಿದೆ.

ಕರ್ನಾಟಕದಲ್ಲಿ ಸೋಲಿಗ ಸಮುದಾಯದ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಆಶ್ರಮ ಶಾಲೆಗಳಲ್ಲಿ ಕಲಿಯುತ್ತಿದ್ದಾರೆ. ಆದರೆ ಈ ಆಶ್ರಮ ಶಾಲೆಗಳಲ್ಲಿ ನುರಿತ ಶಿಕ್ಷಕರ ಕೊರತೆ ಇದೆ, ೧ರಿಂದ ೫ನೇಯ ತರಗತಿಯವರೆಗೆ ಆಶ್ರಮ ಶಾಲೆಯಲ್ಲಿ ಸೋಲಿಗ ಮಕ್ಕಳಿಗೆ ಪಾಠವನ್ನು ಹೇಳಿಕೊಡುತ್ತಾರೆ. ಆಶ್ರಮ ಶಾಲೆಯಲ್ಲಿ ಕೆಲವು ಕಡೆ ಸ್ವಂತ ಕಟ್ಟಡ ಇರುವುದಿಲ್ಲ, ಕೆಲವು ಕಡೆ ಸ್ವಂತ ಕಟ್ಟಡ ಇದ್ದರೂ ಸಹ ಶಿಕ್ಷಕರ ಕೊರತೆ. ೧ರಿಂದ ೫ನೆಯ ತರಗತಿಯ ಎಲ್ಲಾ ಮಕ್ಕಳನ್ನು ಒಂದೆಡೆ ಸೇರಿಸಿಕೊಂಡು ಪಾಠ ಮಾಡುತ್ತಾರೆ. ಸುಸಜ್ಜಿತವಾದ ಕಟ್ಟಡ ಇದ್ದರೂ ಸಹ ನುರಿತ ಶಿಕ್ಷಕರಿಲ್ಲದೆ ಸೋಲಿಗ ಮಕ್ಕಳಿಗೆ ಬಾಲ್ಯದಲ್ಲಿಯೇ ಗುಣಮಟ್ಟದ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಪ್ರಸ್ತುತದ ಸರ್ಕಾರ ಆಶ್ರಮ ಶಾಲೆಗಳಿಗೆ ಖಾಯಂ ಶಿಕ್ಷಕರನ್ನು ನೇಮಕ ಮಾಡಲು ಯಾವುದೇ ಕ್ರಮವಹಿಸಿರುವುದಿಲ್ಲ ಹಾಗೂ ಗುತ್ತಿಗೆಯ ಆಧಾರದ ಮೇಲೆ ಶಿಕ್ಷಕರು ಹಾಗೂ ಇತರೆ ಸಿಬ್ಬಂದಿ ವರ್ಗದವರನ್ನು ನೇಮಕ ಮಾಡಿಕೊಂಡು ಕೆಲಸ ಮಾಡಿಸುತ್ತಿದ್ದಾರೆ. ಆದ್ದರಿಂದ ಸೋಲಿಗ ಮಕ್ಕಳಿಗೆ ತಳಪಾಯದ ಶಿಕ್ಷಣ ಸರಿಯಾಗಿ ಸಿಗುತ್ತಿಲ್ಲ.

**ಕೋಷ್ಟಕ ೭.೨.೧. ಕರ್ನಾಟಕದಲ್ಲಿನ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಆಶ್ರಮ ಶಾಲೆಗಳ ವಿವರ**

| ಕ್ರಸಂ. | ಜಿಲ್ಲೆ | ತಾಲ್ಲೂಕು | ಕ್ರಸಂ. | ಸ್ಥಳ | ಸ್ವಂತ/ಬಾಡಿಗೆ |
|---|---|---|---|---|---|
| ೧ | ಬೆಂಗಳೂರು (ನ) | ಆನೇಕಲ್ | ೧ | ಬೂತನಹಳ್ಳಿ | ಸ್ವಂತ |
| ೨ | ರಾಮನಗರ | ಮಾಗಡಿ | ೨ | ಜೋಡಿಘಟ್ಟ | ಬಾಡಿಗೆ |
| | | ರಾಮನಗರ | ೩ | ಬಸವನಪುರ | ಸ್ವಂತ |
| | | | ೪ | ಯರೇಹಳ್ಳಿ | ಸ್ವಂತ |
| | | ಕನಕಪುರ | ೫ | ಸಾತನೂರು | ಸ್ವಂತ |
| | | | ೬ | ಹೂಳ್ಯ | ಪ್ರಗತಿಯಲ್ಲಿದೆ |
| | | | ೭ | ನೆಹರುದೊಡ್ಡಿ | ಸ್ವಂತ |
| ೩ | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ೮ | ನಲಗುಟ್ಟಪಲ್ಲಿ | ಸ್ವಂತ |
| | | ಚಿಂತಾಮಣಿ | ೯ | ಕಂಗಾನಾಹಳ್ಳಿ | ಸ್ವಂತ |
| | | ಶಿಡ್ಲಘಟ್ಟ | ೧೦ | ವೆಮಕಾಟಪುರಾ | ಪ್ರಗತಿಯಲ್ಲಿದೆ |
| ೪ | ತುಮಕೂರು | ಕೊರಟಗೆರೆ | ೧೧ | ಕ್ಯಾಶಪುರ ಹಕ್ಕಿಪಿಕ್ಕಿ | ಸ್ವಂತ |
| | | ತುರುವೆಕೆರೆ | ೧೨ | ಹನುಮಾಪುರ | ಪ್ರಗತಿಯಲ್ಲಿದೆ |
| | | ಚಿಕ್ಕನಾಯಕನಹಳ್ಳಿ | ೧೩ | ಚಿಕ್ಕನಾಯಕನಹಳ್ಳಿ | ಸ್ವಂತ |

| ಕ್ರಸಂ. | ಜಿಲ್ಲೆ | ತಾಲ್ಲೂಕು | ಕ್ರಸಂ. | ಸ್ಥಳ | ಸ್ವಂತ/ಬಾಡಿಗೆ |
|---|---|---|---|---|---|
| ೫ | ದಾವಣಗೆರೆ | ಚನ್ನಗಿರಿ | ೧೪ | ಗೋಪನಾಳು | ಸ್ವಂತ |
| | | | ೧೫ | ಅಸ್ತಾಪನಹಳ್ಳಿ | ಸ್ವಂತ |
| ೬ | ಚಿತ್ರದುರ್ಗ | ಹೊಸದುರ್ಗ | ೧೬ | ನಾಗತೀಹಳ್ಳಿ | ಸ್ವಂತ |
| | | ಮೊಳಕಾಲ್ಮೂರು | ೧೭ | ರಾಂಪುರ | ಸ್ವಂತ |
| ೭ | ಶಿವಮೊಗ್ಗ | ಸಾಗರ | ೧೮ | ಹೀರೆಮನಿ | ಸ್ವಂತ |
| | | ಶಿವಮೊಗ್ಗ | ೧೯ | ಗೌತಮನಗರ ಹಕ್ಕಿಪಿಕ್ಕಿ ಕಾಲೋನಿ | ಸ್ವಂತ |
| ೮ | ಮೈಸೂರು | ಎಚ್ ಡಿ ಕೋಟೆ | ೨೦ | ಉದ್ಬೂರು | ಸ್ವಂತ |
| | | | ೨೧ | ಭೀಮನಹಳ್ಳಿ | ಸ್ವಂತ |
| | | | ೨೨ | ಬಿ ಮಟಕೆರೆ | ಸ್ವಂತ |
| | | | ೨೩ | ಪೆಂಜಲ್ಲಿ | ಸ್ವಂತ |
| | | | ೨೪ | ಜಕ್ಕಳ್ಳಿ | ಸ್ವಂತ |
| | | | ೨೫ | ಮೇಟಿಕುಪ್ಪೆ | ಸ್ವಂತ |
| | | | ೨೬ | ಕೆಬ್ಬೆಪುರ | ಸ್ವಂತ |
| | | | ೨೭ | ಡಿ ಬಿ ಕುಪ್ಪೆ | ಸ್ವಂತ |
| | | | ೨೮ | ಚೆನ್ನಗುಂಡಿ | ಸ್ವಂತ |
| | | | ೨೯ | ಬಸವನಗಿರಿಹಡಿ | ಸ್ವಂತ |
| | | ಹುಣಸೂರು | ೩೦ | ನೆಲ್ಲೂರುಪಲ | ಸ್ವಂತ |
| | | | ೩೧ | ನೇರಳಕುಪ್ಪೆ | ಸ್ವಂತ |
| | | | ೩೨ | ಕೊಳವಿಗೆ | ಸ್ವಂತ |
| | | | ೩೩ | ನಾಗಾನಾಪುರ | ಸ್ವಂತ |
| | | | ೩೪ | ವೀರನಹೊಸಹಳ್ಳಿ | ಸ್ವಂತ |
| | | | ೩೫ | ಶೆಟ್ಟಿಹಳ್ಳಿ | ಸ್ವಂತ |
| | | ನಂಜನಗೂಡು | ೩೬ | ನಾಗಾಪುರ | ಸ್ವಂತ |
| | | | ೩೭ | ವೆಂಕಟಗಿರಿ ಬಂಕಳ್ಳಿ | ಸ್ವಂತ |
| | | ಪಿರಿಯಾಪಟ್ಟಣ | ೩೮ | ಅಬ್ಬಳತಿ | ಸ್ವಂತ |
| | | | ೩೯ | ದೊಡ್ಡ ಹೊಸುರು | ಸ್ವಂತ |
| | | | ೪೦ | ಮುತ್ತೂರು ಕಾಲೋನಿ | ಸ್ವಂತ |
| ೯ | ಕೊಡಗು | ಮಡಿಕೇರಿ | ೪೧ | ಕರಿಕೆ | ಸ್ವಂತ |
| | | | ೪೨ | ಕುದುರುಪಾಯ | ಸ್ವಂತ |
| | | | ೪೩ | ಕಟ್ಟಪ್ಪಲ್ಲಿ | ಸ್ವಂತ |
| | | ಸೋಮವಾರಪೇಟೆ | ೪೪ | ಯಡವನಾಡು | ಸ್ವಂತ |
| | | | ೪೫ | ಬಸವನಹಳ್ಳಿ | ಸ್ವಂತ |
| | | | ೪೬ | ಮಾಲಂಬಿ | ಸ್ವಂತ |

| ಕ್ರಸಂ. | ಜಿಲ್ಲೆ | ತಾಲ್ಲೂಕು | ಕ್ರಸಂ. | ಸ್ಥಳ | ಸ್ವಂತ/ಬಾಡಿಗೆ |
|---|---|---|---|---|---|
| | | ವಿರಾಜಪೇಟೆ | ೪೭ | ಮರುರು ತಿತಿಮತಿ | ಸ್ವಂತ |
| | | | ೪೮ | ಸಿ ಬಿ ಹಳ್ಳಿ | ಸ್ವಂತ |
| | | | ೪೯ | ಕೋತೂರು | ಸ್ವಂತ |
| | | | ೫೦ | ನಾಗರಹೊಳೆ | ಸ್ವಂತ |
| | | | ೫೧ | ಗೋಣಿಗದ್ದೆ | ಸ್ವಂತ |
| | | | ೫೨ | ನಿಟ್ಟೂರು ಕಾರ್ಮಾಡು | ಸ್ವಂತ |
| ೧೦ | ಚಿಕ್ಕಮಗಳೂರು | ಚಿಕ್ಕಮಗಳೂರು | ೫೩ | ಆಲ್ದೂರು | ಸ್ವಂತ |
| | | ಮೂಡಿಗೆರೆ | ೫೪ | ಹೊಸಪುರ | ಸ್ವಂತ |
| | | | ೫೫ | ಹೊರನಾಡು | ಸ್ವಂತ |
| | | | ೫೬ | ಸಂಸೆ (ರಾಜ್ಯ) | ಸ್ವಂತ |
| | | | ೫೭ | ಸಂಸೆ (ಕೇಂದ್ರ) | ಸ್ವಂತ |
| | | ಕೊಪ್ಪ | ೫೮ | ಬಸರೀಕಟ್ಟೆ | ಸ್ವಂತ |
| | | | ೫೯ | ಮೇಗೂರು | ಸ್ವಂತ |
| | | | ೬೦ | ಮೆಣಸಿನಹಾಡ್ಯಾ | ಸ್ವಂತ |
| | | ಶೃಂಗೇರಿ | ೬೧ | ನೆಮ್ಮೂರು | ಸ್ವಂತ |
| | | ನರಸಿಂಹರಾಜಪುರ | ೬೨ | ನರಸಿಂಹರಾಜಪುರ | ಸ್ವಂತ |
| | | ಕಡೂರು | ೬೩ | ಕಡೂರು | ಸ್ವಂತ |
| | | ತರೀಕೆರೆ | ೬೪ | ಶಿವನಿ | ಸ್ವಂತ |
| ೧೧ | ದಕ್ಷಿಣ ಕನ್ನಡ | ಮಂಗಳೂರು | ೬೫ | ಕದ್ರಿ | ಸ್ವಂತ |
| | | | ೬೬ | ಮಧ್ಯ | ಸ್ವಂತ |
| | | ಪುತ್ತೂರು | ೬೭ | ಬಲ್ನಾಡು | ಸ್ವಂತ |
| | | ಸುಳ್ಯ | ೬೮ | ಬಾಳಿಲ | ಸ್ವಂತ |
| | | | ೬೯ | ಸುಬ್ರಮಣ್ಯ | ಸ್ವಂತ |
| | | | ೭೦ | ಆಲೆಟ್ಟಿ | ಸ್ವಂತ |
| | | ಬೆಳ್ತಂಗಡಿ | ೭೧ | ನೆರಿಯಾ | ಸ್ವಂತ |
| | | | ೭೨ | ನಾರಾವಿ | ಸ್ವಂತ |
| | | | ೭೩ | ಧರ್ಮಸ್ಥಳ | ಸ್ವಂತ |
| | | | ೭೪ | ಶಿಶಿಲ | ಸ್ವಂತ |
| | | ಬಂಟ್ವಾಳ | ೭೫ | ಕಡೇಶ್ವಾಲ್ಯ | ಸ್ವಂತ |
| | | | ೭೬ | ಕುದ್ದುಪದವು | ಸ್ವಂತ |
| ೧೨ | ಉಡುಪಿ | ಉಡುಪಿ | ೭೭ | ಬನ್ನಂಜೆ | ಸ್ವಂತ |
| | | ಕಾರ್ಕಳ | ೭೮ | ಹೆಬ್ರಿ | ಸ್ವಂತ |

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಕ್ರ.ಸಂ. | ಸ್ಥಳ | ಸ್ವಂತ/ಬಾಡಿಗೆ |
|---|---|---|---|---|---|
| | | ಕುಂದಾಪುರ | ೭೯ | ಕುಂದಾಪುರ | ಸ್ವಂತ |
| | | | ೮೦ | ಬೈಂದೂರು | ಸ್ವಂತ |
| ೧೩ | ಮಂಡ್ಯ | ಮಂಡ್ಯ | ೮೧ | ಶಿವಾರ | ಸ್ವಂತ |
| ೧೪ | ಚಾಮರಾಜನಗರ | ಚಾಮರಾಜನಗರ | ೮೨ | ಪುಣಜೂರು | ಸ್ವಂತ |
| | | | ೮೩ | ರಂಗಸಂದ್ರ | ಸ್ವಂತ |
| | | | ೮೪ | ಕೋಳಿಪಾಳ್ಯ | ಸ್ವಂತ |
| | | | ೮೫ | ಕೆ ಗುಡಿ | ಸ್ವಂತ |
| | | | ೮೬ | ಬೇಡಗುಳಿ | ಸ್ವಂತ |
| | | | ೮೭ | ಮುರುಟಿಪಾಳ್ಯ | ಸ್ವಂತ |
| | | ಯಳಂದೂರು | ೮೮ | ಪುರಾಣಿಪೋಡು | ಸ್ವಂತ |
| | | ಗುಂಡ್ಲುಪೇಟೆ | ೮೯ | ಬಂಡೀಪುರ | ಸ್ವಂತ |
| | | | ೯೦ | ಮದ್ದೂರು | ಸ್ವಂತ |
| | | ಕೊಳ್ಳೇಗಾಲ | ೯೧ | ಗಣಿಗಮಂಗಲ | ಸ್ವಂತ |
| | | | ೯೨ | ಎಂ ಎಂ ಹಿಲ್ಸ್ | ಸ್ವಂತ |
| | | | ೯೩ | ಪೊನ್ನಾಚಿ | ಸ್ವಂತ |
| | | | ೯೪ | ಕೋಣನಕೆರೆ | ಸ್ವಂತ |
| | | | ೯೫ | ಹಿರಿಯಂಬಲ | ಸ್ವಂತ |
| | | | ೯೬ | ಕೆಂಚಗನಹಳ್ಳಿ | ಸ್ವಂತ |
| | | | ೯೭ | ಜೀರಿಗೆಗದ್ದೆ | ಸ್ವಂತ |
| | | | ೯೮ | ರಾಜಪ್ಪಾಜಿನಗರ | ಸ್ವಂತ |
| | | | ೯೯ | ಬೈಲೂರು | ಸ್ವಂತ |
| | | | ೧೦೦ | ನಕ್ಕುಂದಿ | ನಿವೇಶನವಿದೆ |
| ೧೫ | ಬೆಳಗಾವಿ | ಬೈಲಹೊಂಗಲ | ೧೦೧ | ಹೊಸಕೋಟೆ | ಪ್ರಗತಿಯಲ್ಲಿದೆ |
| | | | ೧೦೨ | ಗಜಮಿನಾಳ | ಸ್ವಂತ |
| | | ಅಥಣಿ | ೧೦೩ | ಯಕ್ಕಂಚಿ | ಸ್ವಂತ |
| ೧೬ | ಹಾವೇರಿ | ರಾಣಿಬೆನ್ನೂರು | ೧೦೪ | ರಾಣಿಬೆನ್ನೂರು | ಸ್ವಂತ |
| | | ಬ್ಯಾಡಗಿ | ೧೦೫ | ತುಮರಿಕೊಪ್ಪ | ಪ್ರಗತಿಯಲ್ಲಿದೆ |
| ೧೭ | ಬಿಜಾಪುರ | ಬಸವನಬಾಗೇವಾಡಿ | ೧೦೬ | ಹೂವಿನಹಿಪ್ಪರಗಿ | ಸ್ವಂತ |
| ೧೮ | ಗದಗ | ಶಿರಹಟ್ಟಿ | ೧೦೭ | ನವೆಬಾವನೂರು | ಪ್ರಗತಿಯಲ್ಲಿದೆ |
| ೨೦ | ಯಾದಗಿರಿ | ಸುರಪುರ | ೧೦೮ | ಸುರಪುರ | ಪ್ರಗತಿಯಲ್ಲಿದೆ |
| ೨೧ | ರಾಯಚೂರು | ರಾಯಚೂರು | ೧೦೯ | ಗಿಲ್ಲೆಸೂಗೂರು | ಬಾಡಿಗೆ |
| | | ದೇವದುರ್ಗ | ೧೧೦ | ಭೂಮನಗೊಂಡು | ಸ್ವಂತ |

| ಕ್ರಸಂ. | ಜಿಲ್ಲೆ | ತಾಲ್ಲೂಕು | ಕ್ರಸಂ. | ಸ್ಥಳ | ಸ್ವಂತ/ಬಾಡಿಗೆ |
|---|---|---|---|---|---|
| ೨೨ | ಬಳ್ಳಾರಿ | ಸಿರುಗುಪ್ಪ | ೧೧೧ | ತೆಕ್ಕಲಕೋಟೆ | ಸ್ವಂತ |
| | | ಸಂಡೂರು | ೧೧೨ | ಯಶವಂತನಗರ | ಸ್ವಂತ |
| | | ಹೂವಿನಹಡಗಲಿ | ೧೧೩ | ನಂದಿಹಳ್ಳಿ | ಸ್ವಂತ |
| ೨೩ | ಬೀದರ್ | ಬಸವಕಲ್ಯಾಣ | ೧೧೪ | ಘೋಟಲವಾಡಿ | ಸ್ವಂತ |
| ೨೪ | ಕೊಪ್ಪಳ | ಗಂಗಾವತಿ | ೧೧೫ | ಚಿಕ್ಕಬೆನಕಲ್ | ಸ್ವಂತ |
| | | ಯಲಬುರ್ಗಾ | ೧೧೬ | ಯದೋಣಿ | ಸ್ವಂತ |

**ಸೌಜನ್ಯ:** ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು, ೨೦೧೬-೨೦೧೭

ಕರ್ನಾಟಕದಲ್ಲಿ ಒಟ್ಟು ೧೧೬ ಆಶ್ರಮ ಶಾಲೆಗಳಿದ್ದು, ಈ ಶಾಲೆಗಳಲ್ಲಿ ಪ್ರಸ್ತುತ ನುರಿತ ಖಾಯಂ ಶಿಕ್ಷಕರು ಇರುವುದಿಲ್ಲ. ಕೇವಲ ಗುತ್ತಿಗೆ ಆಧಾರಿತ ಶಿಕ್ಷಕರನ್ನು ಸರ್ಕಾರ ನೇಮಕ ಮಾಡಿಕೊಂಡು ಸೋಲಿಗ ಮಕ್ಕಳಿಗೆ ಶಿಕ್ಷಣವನ್ನು ಕಲಿಸುತ್ತಿದೆ. ಇದರಿಂದ ಸೋಲಿಗರ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ದೊರಕದೇ ಹೊರಜಗತ್ತಿನ ಮಕ್ಕಳ ಜೊತೆಗೆ ಪೈಪೋಟಿ ಮಾಡಲಾಗದೇ ಹಿಂದೆ ಉಳಿದಿರುವುದು ಕಂಡುಬರುತ್ತದೆ. ಶಾಲೆಗೆ ಹೋಗಬೇಕಾದ ಶಾಲಾ ವಯಸ್ಸಿನ ಹೆಣ್ಣು ಮತ್ತು ಗಂಡು ಮಕ್ಕಳು ಕೃಷಿ ಕೆಲಸ ಮತ್ತು ಮನೆಗೆಲಸದಲ್ಲಿ ನಿರತರಾಗಿದ್ದಾರೆ. ಇಂತಹ ಆರ್ಥಿಕ ಅಂಶದ ಜೊತೆಗೆ ಸಾಮಾಜಿಕ ಅಂಶಗಳು ಹಾಗೂ ಬುಡಕಟ್ಟು ಜನರಿಗೆ ಸರಕಾರ ನೀಡುತ್ತಿರುವ ಸೌಲಭ್ಯಗಳನ್ನು ಬುಡಕಟ್ಟೇತರರು ಬಳಸಿಕೊಳ್ಳುತ್ತಿರುವುದರಿಂದ ಬುಡಕಟ್ಟು ಮಕ್ಕಳ ಶಿಕ್ಷಣ ಹಿಂದುಳಿದಿರಲು ಕಾರಣವಾಗಿದೆ ಎಂದಿದ್ದಾರೆ. ಸೋಲಿಗ ಸಮುದಾಯದಲ್ಲಿಯೂ ಶಾಲೆಗೆ ಹೋಗಬೇಕಾದ ಹೆಣ್ಣು ಮತ್ತು ಗಂಡು ಮಕ್ಕಳು ಕೃಷಿ ಕೆಲಸ ಮತ್ತು ಮನೆಗೆಲಸದಲ್ಲಿ ನಿರತರಾಗಿದ್ದಾರೆ. ಜೊತೆಗೆ ಕೂಲಿ ಬಾಲಕಾರ್ಮಿಕರಾಗಿ ಬೇರೆಯವರ ಕಾಫಿತೋಟ, ಶುಂಠಿತೋಟ, ನಾಡವರ ಹೊಲ, ಗದ್ದೆಗಳಲ್ಲಿ ದುಡಿಯುತ್ತಿದ್ದಾರೆ. ಇತ್ತೀಚೆಗೆ ಹೆಚ್ಚು ಮಕ್ಕಳು ಕೇರಳ, ತಮಿಳುನಾಡಿಗರ ತೋಟಗಳಲ್ಲಿ ಕೂಲಿ ಕೆಲಸದಾಳುಗಳಾಗಿ ದುಡಿಯುತ್ತಿದ್ದಾರೆ. ಬುಡಕಟ್ಟು ಪಂಗಡಗಳಿಗೆ ಬಡತನ, ಸಾಮಾಜಿಕ, ಬಹಿಷ್ಕಾರ, ಅನಕ್ಷರತೆ, ಅರಿವಿನ ಕೊರತೆ ಮುಂತಾದ ಸಮಸ್ಯೆಗಳಿಂದ ಶೈಕ್ಷಣಿಕ ಸೌಲಭ್ಯಗಳನ್ನು ಸುಲಭವಾಗಿ ಧಕ್ಕಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ.

ಸೋಲಿಗರಿಗೆ ಒಂದು ಕಡೆ ಮಕ್ಕಳಿಗೆ ಅಕ್ಷರವನ್ನು ಕಲಿಸಬೇಕೆಂಬ ಆಸೆ, ಆದರೆ ಮತ್ತೊಂದು ಕಡೆ ಅವಕಾಶ ಸಿಗುವುದಿಲ್ಲ. ಸಿಕ್ಕರೂ ಸಹ, ಮಕ್ಕಳನ್ನು ದೂರ ಬಿಟ್ಟು ಇರುವ ಮನಸ್ಸು ತಂದೆ ತಾಯಿಗಳಿಗೆ ಇಲ್ಲ. ಇಂತಹ ಪರಿಸ್ಥಿತಿಯಲ್ಲಿರುವಾಗಲೇ ಕರ್ನಾಟಕದ ಎಲ್ಲಾ ಕಡೆಗಳಿಂದಲೂ ಅರಣ್ಯ ನೀತಿಗಳು, ಕಾನೂನುಗಳು, ಎಸ್ಟೇಟ್ ಸಂಸ್ಕೃತಿ, ರೆಸಾರ್ಟ್ ಸಂಸ್ಕೃತಿ ಬಂದು ಕಾಡಿನ ಮಧ್ಯದಲ್ಲಿದ್ದ ಸೋಲಿಗರನ್ನು ಬಲವಂತವಾಗಿ ಒಂದೇ ಕಡೆ ಸ್ಥಳಾಂತರಿಸುವ ಪರಿಸ್ಥಿತಿಯಿಂದಾಗಿ ಕೆಲವು ಸೋಲಿಗರು ಕುಟುಂಬ ಸಮೇತರಾಗಿ ಹೊನ್ನಮೇಟಿ ಬೇಡಗುಳಿ, ಹತ್ತಿಕಾನು ಇತ್ಯಾದಿ ದೊಡ್ಡ ದೊಡ್ಡ ಎಸ್ಟೇಟ್‌ಗಳಲ್ಲಿ ಗಂಡ ಹೆಂಡತಿ ಮಕ್ಕಳೂ ಸಮೇತವಾಗಿ ಲೈನ್‌ಮನೆಯಲ್ಲಿ ಕಾಫಿ, ಟೀ ತೋಟಗಳಲ್ಲಿ ಕೆಲಸಕ್ಕೆ ಹೋಗಿ ಸೇರಿಕೊಳ್ಳುತ್ತಾರೆ. ಇತ್ತ ಕಡೆ, ಕೊಡಗು, ಮಡಿಕೇರಿ, ಬಂಡೀಪುರ, ಗುಂಡ್ಲುಪೇಟೆಗಳಲ್ಲಿ ನಾಡವರ ಹೊಲ, ತೋಟ, ರೆಸಾರ್ಟ್‌ಗಳಲ್ಲಿ ಹಾಗೂ ಮಾಲೀಕರೇ ತೋಟ ಎಸ್ಟೇಟ್ ಕೆಲಸಕ್ಕೆ ಸೇರಿಕೊಂಡು

ದುಡಿಯುತ್ತಾರೆ. ತಮ್ಮ ಜೀವನಕ್ಕಾಗಿ ಹಲವಾರು ಕೂಲಿ ಕೆಲಸವನ್ನು ಮಾಡುತ್ತಿರುವ ಸಂದರ್ಭದಲ್ಲಿ ತಮ್ಮ ತಮ್ಮ ಮಕ್ಕಳನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಾ, ಚಿಕ್ಕ ಮಕ್ಕಳನ್ನು ಹತ್ತಿರದಲ್ಲಿಯೇ ಒಂದು ಮರದ ಟೊಂಗೆಗೆ ಕಾಡಿನ ನಾರಿನಿಂದ ಕಟ್ಟಿ ಸೀರೆಯನ್ನು ಇಳಿಬಿಟ್ಟು ಮಕ್ಕಳನ್ನು ಆ ಜೋಲಿಯಲ್ಲಿ ಮಲಗಿಸಿ, ಆ ಮಗುವನ್ನು ನೋಡಿಕೊಳ್ಳಲು ಸುಮಾರು ೫–೧೦ ವರ್ಷದ ಮಕ್ಕಳನ್ನು ಅವರ ಜೊತೆಯಲ್ಲಿ ಬಿಟ್ಟು ತಮ್ಮ ಕೂಲಿ ಕೆಲಸವನ್ನು ಮಾಡುತ್ತಿದ್ದರು. ಹೀಗಾಗಿ ಸೋಲಿಗರಿಗೆ ನಿಸರ್ಗದ ಪಾಠವೇ ಮರೆತು ಔಪಚಾರಿಕ ಶಾಲೆ ಶಿಕ್ಷಣ ಮರೀಚಿಕೆಯಾಗಿತ್ತು.

**ಪ್ರೊ. ನಂಜರಾಜ ಅರಸ್ ಅವರು ಹೇಳುವ** ಪ್ರಕಾರ ಸ್ವಾತಂತ್ರ್ಯಪೂರ್ವದಲ್ಲಿಯೇ ಬಿಳಿಗಿರಿರಂಗನ ಬೆಟ್ಟ, ಬೂದಿಪಡಗ ಇನ್ನೂ ಮುಂತಾದ ಕಡೆಗಳಲ್ಲಿ ವಯಸ್ಕರ ಶಿಕ್ಷಣ ಹಾಗೂ ಮಕ್ಕಳಿಗೆ ಶಾಲೆಯನ್ನು ನಾಲ್ವಡಿ ಜಯಚಾಮರಾಜೇಂದ್ರ ಒಡೆಯರ್ ಅವರ ಕಾಲದಲ್ಲಿ ಕಾಡಿನ ಮಕ್ಕಳಿಗೆ ಹಾಗೂ ಸ್ಥಳೀಯರಿಗೆ ಉಪಯೋಗವಾಗಲೆಂದು ತೆರೆಯಲಾಗಿತ್ತು ಎಂದು ತಿಳಿಸಿದ್ದಾರೆ. ಯಾರಾದರೂ ಬಿಳಿ ಬಟ್ಟೆ ಹಾಕಿಕೊಂಡು ಬಂದರೆ ಅವರನ್ನು ಕಂಡೊಡನೆ ಸೋಲಿಗರು ಕಾಡಿಗೆ ಓಡಿಹೋಗುತ್ತಿದ್ದರು.

೧೯೬೫ರ ಇತ್ತೀಚೆಗೆ ಭಾರತ ಸರಕಾರ ಅದರಲ್ಲಿಯೂ ಮಹಾತ್ಮ ಗಾಂಧೀಜಿ ಹಾಗೂ ಜವಾಹರಲಾಲ್ ನೆಹರೂರವರ ಚಿಂತನೆಯ ಫಲವಾಗಿ ಹಲವಾರು ಯೋಜನೆಗಳು ಜಾರಿಗೊಂಡವು. ಅವುಗಳಲ್ಲಿ ಒಂದು **'ಗಿರಿಜನರ ಆಶ್ರಮ ಶಾಲೆ'** ಪದ್ಧತಿ. ೧೯೬೫ರ ನಂತರದಲ್ಲಿ ಕರ್ನಾಟಕದಲ್ಲೂ ಹಲವಾರು ಜಿಲ್ಲೆಗಳಲ್ಲಿ ಗಿರಿಜನರ ಮಕ್ಕಳ ಶಿಕ್ಷಣಕ್ಕೋಸ್ಕರ ಅಲ್ಲಲ್ಲಿ ಚದುರಿಹೋಗಿದ್ದ ಮಕ್ಕಳನ್ನು ಮೊದಲು ಒಟ್ಟುಗೂಡಿಸಿ, ಅವರುಗಳಿಗೆ ಸಾಂತ್ವನ ಕೇಂದ್ರ, ಗಂಜಿ ಕೇಂದ್ರ, ಪಾಲನಾ ಪೋಷಣಾ ಕೇಂದ್ರ, ಉದ್ದೇಶದಿಂದ ಮೊದಮೊದಲು ಪ್ರಾರಂಭವಾಗಿ ಆ ನಂತರದಲ್ಲಿ ಅಲ್ಲಿಯೇ ಆ ಮಕ್ಕಳಿಗೆ ಅಲ್ಪಸ್ವಲ್ಪ ಶಿಕ್ಷಣ ಕೊಡುವ ಪದ್ಧತಿಯು ಜಾರಿಗೆ ಬಂದ ಮೊದಮೊದಲು ಒಂದು ಹೊತ್ತಿನ ಊಟ ಸಿಗುತ್ತದೆ ಎನ್ನುವ ಭಾವನೆಯಿಂದ ಸೋಲಿಗರು ತಮ್ಮ ಮಕ್ಕಳನ್ನು ಈ ಗಿರಿಜನ ಆಶ್ರಮ ಶಾಲೆಗಳಿಗೆ ಕರೆತಂದು ಬಿಡಲಾರಂಬಿಸಿದರು.

೧೯ನೇ ಶತಮಾನದಿಂದಲೇ ಶಿಕ್ಷಣವು ಶೋಷಿತ ಸಮುದಾಯಗಳ ಸಾಧನವೆಂದು ಪರಿಗಣಿಸಿ ಇಂತಹ ಇತರೆ ಬುಡಕಟ್ಟುಗಳಿಗೆ ಶಿಕ್ಷಣ ಸಿಗುವಂತಹ ಕ್ರಾಂತಿ ಮಾಡಿದ ನಿದರ್ಶನ ಇದಾಗಿದೆ. ಸಾವಿತ್ರಿ ಫುಲೆ, ಜ್ಯೋತಿಬಾ ಫುಲೆ, ಅಂಬೇಡ್ಕರ್, ಮಹಾತ್ಮಗಾಂಧಿ, ಫ್ಲೋರೊಫ್ರೆರೆ, ಗ್ರಾಮ್‌ಶಿ, ನೆಹರು ಇನ್ನೂ ಮುಂತಾದವರು ಶೋಷಿತ ಸಮುದಾಯಗಳು ಶಿಕ್ಷಣದಿಂದ ಜಾಗೃತರಾಗಿ ಸ್ವಾಭಿಮಾನಿ ಘನತೆ ಗೌರವದಿಂದ ಬದುಕುವಂತಹ ಶಿಕ್ಷಣದ ನೆಲೆಗಟ್ಟನ್ನು ಹಾಕಿಕೊಟ್ಟಿದ್ದಾರೆ.

ಭಾರತ ಸಂವಿಧಾನ ಹಿಂದುಳಿದ ಪಂಗಡ ಮತ್ತು ಹಿಂದುಳಿದ ವರ್ಗ ಹಾಗೂ ಮಹಿಳೆಯರ ಸರ್ವತೋಮುಖ ಅಭಿವೃದ್ಧಿಗಾಗಿ ಅನುಚ್ಛೇದ ೧೫ರಲ್ಲಿ ವಿಶೇಷ ಪ್ರಾಧ್ಯಾನ್ಯತೆಯನ್ನು ಕಲ್ಪಿಸಿಕೊಡುವಂತಹ ಅವಕಾಶ ಮಾಡಿಕೊಟ್ಟಿದೆ. ಸಂವಿಧಾನದ ಈ ಅನುಚ್ಛೇದದ ಅನುಸಾರ ಹಾಗೂ ಅರಣ್ಯ ಮೂಲದಲ್ಲಿ ವಾಸಿಸುವ ಬುಡಕಟ್ಟು ಮಕ್ಕಳ ಸಾಂಸ್ಕೃತಿಕ ಅನನ್ಯತೆ, ಜೀವನ ವಿಧಾನ, ಪಾರಂಪರಿಕ ಕೌಶಲ್ಯ, ಭಾಷಾ ವೈವಿಧ್ಯತೆ ಹಾಗೂ ಕಲಿಕಾ ವೈಶಿಷ್ಟ್ಯತೆ, ಆರ್ಥಿಕ ಸ್ಥಿತಿ ಹಾಗೂ ನಿರಂತರ ಶೋಷಣೆ, ಸಾಮಾಜಿಕ ನಿರಾಕರಣೆಯನ್ನು ಗಮನದಲ್ಲಿಟ್ಟುಕೊಂಡು ೧೯೫೨ರಲ್ಲಿ ಕೇಂದ್ರ ಸರಕಾರ ವಿಶೇಷ ಶಾಲೆಗಳನ್ನು ನಡೆಸುವ

ಮಹತ್ತರವಾದ ನಿರ್ಧಾರವನ್ನು ಮಾಡಿತ್ತು. ಅದರಂತೆಯೇ ದೇಶಾದ್ಯಂತ ಅದರಲ್ಲೂ ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ವಾಸಿಸುವ ರಾಜ್ಯಗಳಲ್ಲಿ ಆಶ್ರಮ ಶಾಲೆಗಳನ್ನು ಆರಂಭಿಸಿತು. ಇದೇ ನಡೆಯನ್ನು ಅನುಸರಿಸಿದ ಕರ್ನಾಟಕ ರಾಜ್ಯದಲ್ಲಿಯೂ ಸಹ ಬುಡಕಟ್ಟು ಮಕ್ಕಳಿಗಾಗಿ ೧೧೬ ಗಿರಿಜನ ಆಶ್ರಮ ಶಾಲೆಗಳನ್ನು ೨೩ ಜಿಲ್ಲೆಗಳಲ್ಲಿ ನಡೆಸುತ್ತಿದೆ.

ಇವುಗಳಲ್ಲಿ ಪಶ್ಚಿಮ ಘಟ್ಟದ ಜಿಲ್ಲೆಗಳಾದ ಮೈಸೂರು, ಕೊಡಗು, ಚಿಕ್ಕಮಗಳೂರು, ಚಾಮರಾಜನಗರ, ಉಡುಪಿ, ದಕ್ಷಿಣ ಕನ್ನಡ, ಶಿವಮೊಗ್ಗ, ಹಾಸನ ಜಿಲ್ಲೆಗಳಲ್ಲಿರುವ ೮೩ ಗಿರಿಜನ ಆಶ್ರಮ ಶಾಲೆಗಳಲ್ಲಿ ೬,೫೭೩ ಮಕ್ಕಳು ವಿದ್ಯಾಭ್ಯಾಸಕ್ಕಾಗಿ ದಾಖಲಾಗಿದ್ದಾರೆ.

ಸೋಲಿಗರು ಕಾಡಿನಲ್ಲಿ ತಮ್ಮದೇ ಆದ ಮೌಲ್ಯ, ಆಚಾರ-ವಿಚಾರ, ಪಾರಂಪರಿಕ ಜ್ಞಾನ ಪರಿಸರ, ಪ್ರಾಣಿ-ಪಕ್ಷಿ, ಪ್ರತಿಯೊಂದು ಸಕಲ ಜೀವ ಜಂತುಗಳ ಬಗ್ಗೆ ಪರಿಸರದಲ್ಲಿಯೇ ಪಾಠವನ್ನು ಕಲಿಯುತ್ತಾರೆ. ಮಗು-ಮಕ್ಕಳು, ಯಾವ ರೀತಿ ಕಾಡಿಗೆ ಹೊಂದಿಕೊಂಡು ಪರಿಸರದೊಟ್ಟಿಗೆ ಬದುಕಬೇಕು ಎಂಬುದನ್ನು ತಂದೆ-ತಾಯಿ, ಸಮುದಾಯದೊಟ್ಟಿಗೇನೆ ಕಲಿಯುತ್ತಾರೆ. ಉದಾ: ಕಾಡಿನಲ್ಲಿ ಕಿರು ಅರಣ್ಯ ಉತ್ಪನ್ನ ವಿಧಾನ, ಹೆಜ್ಜೇನು ಸಂಗ್ರಹಿಸುವ, ಬೇಟೆ, ಪ್ರಾಣಿ-ಪಕ್ಷಿಗಳ ಜೊತೆಗಿನ ಸಂಬಂಧ, ಕಾಡಿನ ಹಣ್ಣು ಹಂಪಲು ಸಂಗ್ರಹ, ಗುರುತಿಸುವಿಕೆ, ಮಂತ್ರ, ತಂತ್ರ ವಿದ್ಯೆ, ಕಲೆ, ಸಂಸ್ಕೃತಿ ಸಮುದಾಯದೊಟ್ಟಿಗೆ ಕಲಿಯುತ್ತಾ ಬರುತ್ತಾರೆ. ಮಕ್ಕಳು ಇಂತಹ ಅಪಾರವಾದ ಪಾರಂಪರಿಕ ಜ್ಞಾನ ಬದುಕುವ ರೀತಿ, ಸರಳ ಜೀವನ ಹಂಚಿಕೊಂಡು ತಿನ್ನುವ ಪದ್ಧತಿ ಕೂಡಿಟ್ಟುಕೊಳ್ಳದ ಗುಣ, ಪರಸ್ಪರ ಪ್ರೀತಿ ವಾತ್ಸಲ್ಯ 'ತಬ್ಬಲಿ ಹೈದರ ಪ್ರೀತಿ' ಈ ರೀತಿಯಾದ ಎಲ್ಲಾ ರೀತಿಯ ಮೌಲ್ಯಯುತವಾದ ಶಿಕ್ಷಣವು ಸೋಲಿಗರಲ್ಲಿ ಮೊದಲಿನಿಂದಲೂ ಪ್ರಸ್ತುತದವರೆಗೂ ಬೆಳೆದುಕೊಂಡು ಕಲಿಕೆಯಿಂದಲೇ ಸಮುದಾಯದಲ್ಲೇ ಬಂದಿದೆ. ಸೋಲಿಗರು ಹುಟ್ಟುತ್ತಲೇ ಕಾಡಿನ ಪರಿಸರದೊಟ್ಟಿಗೆ ಪಾರಂಪರಿಕವಾದ ಜೀವನದ ಬದುಕನ್ನು ನೋಡುತ್ತ, ಅನುಭವಿಸುತ್ತ, ಮಾಡುತ್ತ, ಕಲಿಯುತ್ತಾರೆ. ಈ ರೀತಿಯ ಪರಿಸರ ಶಿಕ್ಷಣದಲ್ಲಿ ಸೋಲಿಗರ ಮಕ್ಕಳು ಯಾವಾಗಲೂ ಮುಂದು ಇರುತ್ತಾರೆ. ಆದರೆ, ಕಾಡಿನಿಂದ ಹೊರಹಾಕಿದ ಸೋಲಿಗರಿಗೆ ಇತ್ತೀಚಿನ ದಿನಗಳಲ್ಲಿ ಈ ರೀತಿಯಾದ ಪರಿಸರದ ಶಿಕ್ಷಣವು ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗುತ್ತಿದೆ. ಅದೇನೇ ಆದರೂ ಸಹ, ಅರಣ್ಯವಾಸಿಗಳಾದ ಸೋಲಿಗರು ಹೆಚ್ಚು ಕಾನನವನ್ನು ಇಷ್ಟಪಡುತ್ತಾ, ದಿನದಲ್ಲಿ ಒಮ್ಮೆಯಾದರೂ ಸಹ ಕಾಡನ್ನು ಸುತ್ತಿ ಬರಬೇಕು. ಆ ಪರಿಸರದಲ್ಲಿಯೇ ಬೆಳೆಯಬೇಕು ಎನ್ನುವ ಆಸೆ ಸೋಲಿಗರಲ್ಲಿದೆ. ಕಾಡನ್ನು ಮರೆತರೆ ತಾಯಿಯನ್ನೇ ಮರೆತಂತೆ ಆಗುತ್ತದೆ. ಆದುದರಿಂದ ಸೋಲಿಗರಿಗೆ ಕಾಡಿನ ಪರಿಸರದ ಶಿಕ್ಷಣವು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಪರಸ್ಪರ ಸಹಕಾರದಿಂದ ನಿಷ್ಠೆಯಿಂದ ಒಂದುಗೂಡಿ ಕೆಲಸ ಮಾಡುವುದೇ ಸಮುದಾಯ ಶಾಲೆಯ ಉದ್ದೇಶ ಜನಸಂಖ್ಯೆ ಸಾಮಾಜಿಕ, ಸಾಂಸ್ಕೃತಿಕ, ಭಾಷೆ, ಆರ್ಥಿಕ ಅಂಶಗಳು, ನೈಸರ್ಗಿಕ, ಸಮುದಾಯವು ನಿರೀಕ್ಷಿಸುವ ಉದ್ದೇಶ ನೆರೆಯ ಸಮುದಾಯದೊಡನೆ ಹೊಂದಿರುವ ಔದ್ಯೋಗಿಕ ಸಂಬಂಧ ಸಾಮಾಜಿಕ ಸಂಸ್ಥೆಗಳಾದ ಕುಟುಂಬ, ಧರ್ಮ, ಸಹಕಾರ, ಆರ್ಥಿಕ, ಶೈಕ್ಷಣಿಕ, ಮನರಂಜನೀಯ ಇವುಗಳೆಲ್ಲದರ ಬಗ್ಗೆ ಸಮಾಜ, ಸಮೀಕ್ಷೆಗಳ ಕಾರ್ಯ ನಿರಂತರವಾಗಿ ನಡೆಯುವುದು ಅಗತ್ಯ ಎಂದು ತಿಳಿಸಿದ್ದಾರೆ ಕೆ.ಎಸ್. ಸದಾಶಿವಯ್ಯ ಅವರು. ಅದೇ ರೀತಿಯಲ್ಲಿ ಸೋಲಿಗರ ಬಗ್ಗೆ ಅವರ ಸಂಸ್ಕೃತಿ, ಆರ್ಥಿಕ

ವ್ಯವಸ್ಥೆ, ವೃತ್ತಿ, ಬೇಟೆ, ಕೌಶಲ್ಯ ಸಾಮಾಜಿಕ ಹಾಗೂ ಅವರಿಗೆ ಬೇಕಾಗಿರುವ ಪ್ರಸ್ತುತ ಸಮಾಜದಲ್ಲಿ ಸೋಲಿಗರ ಜೀವನಕ್ಕೆ ಅವಶ್ಯವಿರುವ ಅವರಿಂದಲೇ ಕೇಳಿ ಮಾಹಿತಿ ಪಡೆಯುವುದರ ಮೂಲಕ ಸೋಲಿಗ ಸಮುದಾಯದ ವತಿಯಿಂದ ಸರಕಾರದ ಯೋಜನೆಯನ್ನು ತಯಾರಿಸಿ ಅಭಿವೃದ್ಧಿ ಕಾರ್ಯ ಕೈಗೊಳ್ಳವುದು ಮುಖ್ಯವಾಗಿರುತ್ತದೆ.

ಗುಂಡ್ಲುಪೇಟೆ, ಚಾಮರಾಜನಗರ, ಕೊಳ್ಳೇಗಾಲ ಮತ್ತು ಯಳಂದೂರು ಭಾಗಗಳಲ್ಲಿ ೧ರಿಂದ ೫ನೇ ತರಗತಿಯವರೆಗೆ ಆಶ್ರಮ ಶಾಲೆಗಳಲ್ಲಿ ಹೇಗೋ ಶಾಲೆಯನ್ನು ಮುಗಿಸಿರುತ್ತಾರೆ. ಆನಂತರದಲ್ಲಿ ೬ನೆಯ ತರಗತಿಯಿಂದ ಮತ್ತೆ ಬೇರೆ ಊರಿಗೆ ಶಾಲೆಯನ್ನು ಕಲಿಯಲಿಕ್ಕೆ ಹೋಗಬೇಕು. ಅಲ್ಲಿ ಪೋಷಕರು ಮತ್ತು ಮಕ್ಕಳು ದಾರಿ ತಪ್ಪುತ್ತಾರೆ. ಒಂದು ವೇಳೆ ೬ನೇ ತರಗತಿಗೆ ಬೇರೆ ಶಾಲೆಗೆ ಸೇರಿಸಿರುತ್ತಾರೆ. ಆದರೆ ಮಧ್ಯದಲ್ಲಿ ಸೋಲಿಗರ ಎಷ್ಟೋ ಮಕ್ಕಳು ಶಾಲೆಯನ್ನು ಬಿಟ್ಟು ಹೊರಗುಳಿಯುತ್ತಾರೆ ಕಾರಣ ತಿಳಿದಾಗ ಆ ಮಗುವಿಗೆ ತಳಪಾಯದ ಅಂದರೆ, ಮೂಲದಲ್ಲಿ ನುರಿತ ಶಿಕ್ಷಣ ಸಿಗದೆ ಬೇರೆ ಮಕ್ಕಳ ಜೊತೆ ಪೈಪೋಟಿ ಮಾಡಲು ಸಾಧ್ಯವಾಗದೆ ಅಲ್ಲಿ ಸೋತು ಹಿಂದಿರುಗುತ್ತಾರೆ. ಹೊರಗಡೆಯ ಮಕ್ಕಳ ಜೊತೆ ಹೊಂದಾಣಿಕೆಯಾಗದೆ ಸೋತು ಹಿಂದಿರುಗುತ್ತಾರೆ. ರಜೆಯಲ್ಲಿ ಮನೆಗೆ ಬಂದ ಮಕ್ಕಳನ್ನು ಮತ್ತೆ ಪೋಷಕರು ಆರೈಕೆ ಮಾಡಿ ರಜೆ ಮುಗಿದ ಮೇಲೆ ಮತ್ತೆ ಶಾಲೆಗೆ ಕಳುಹಿಸುವಲ್ಲಿ ಸೋತು ಹೋಗುತ್ತಾರೆ. ಪೋಡು, ಹಾಡಿ, ಕಾಲೋನಿಗಳಲ್ಲಿ ಮಕ್ಕಳು ಪ್ರೌಢಶಾಲೆಗೆ ಬರುತ್ತಲೇ ಪ್ರೇಮ ಪ್ರಸಂಗಕ್ಕೆ ಬಲಿಯಾಗಿ ಸೋತುಹೋಗುತ್ತಾರೆ. ಮನೆಗೆ ರಜೆ ಅಥವಾ ಮತ್ಯಾವುದೇ ದಿನಗಳಲ್ಲಿ ಮಕ್ಕಳು ಮನೆಗೆ ಬಂದಾಗ ಪೋಷಕರು ಮಕ್ಕಳ ಓದು, ಅಭ್ಯಾಸ, ಆಸೆ, ಆಕಾಂಕ್ಷೆಗಳ ಬಗ್ಗೆ ಗಮನ ಹರಿಸುವುದಿಲ್ಲ. ಅವರಿಷ್ಟ ಬಂದ ಹಾಗೆ ಬಿಟ್ಟು ಬಿಡುತ್ತಾರೆ. ಶಾಲೆ ಬಿಟ್ಟ ಮಕ್ಕಳನ್ನು ಕರೆಯಲು ಶಿಕ್ಷಕರು, ಸಮಾಜಸೇವಕರು ನಿಮ್ಮ ಮಗುವನ್ನು ಶಾಲೆಗೆ ಕಳುಹಿಸಿ ನಾವು ಕರೆದುಕೊಂಡು ಹೋಗುತ್ತೇವೆ ಎಂದರೆ ಪೋಷಕರು ಕೊಡುವ ಉತ್ತರ 'ಅಯ್ಯಾ ನಮ್ಮ ಮಕ್ಕಳು ನಮ್ಮ ಮನೆಯಲ್ಲೇ ಇರಲಿ, ನೀವು ಅವರಿಗೆ ಊಟ, ಬಟ್ಟೆ ಕೊಡುತ್ತೀರಾ? ಅವರು ಕೆಲಸ ಮಾಡಿಕೊಂಡು ಇರಲಿ; ಹೋಗಿ ನಿಮಗೇನು ನಷ್ಟ' ಎಂದು ಹೇಳುತ್ತಾರೆ.

ಸೋಲಿಗರ ಪೋಡು, ಕಾಲೋನಿಗಳಲ್ಲಿ ಇತ್ತೀಚೆಗೆ ಅಂಗಡಿಗಳಲ್ಲಿ ಮದ್ಯಪಾನ ಮಾರಾಟ ಹೆಚ್ಚಾಗಿ ಶಾಲೆಗೆ ಹೋಗುವ ಮಕ್ಕಳು ಸಹ ಇದರ ದಾಸರಾಗುತ್ತಿದ್ದಾರೆ. ಒಂದು ಮಗು ಶಾಲೆ ಬಿಟ್ಟಿದ್ದರೆ, ಆ ಮಗು ಅದೇ ಊರಿನಲ್ಲಿ ಶಾಲೆಗೆ ಹೋಗುವ ಇತರೆ ಮಕ್ಕಳನ್ನು ಸೆಳೆದುಕೊಳ್ಳುತ್ತಾನೆ. ವಿಶೇಷವಾಗಿ ಮಕ್ಕಳು ಇತ್ತೀಚೆಗೆ ಶಾಲೆಯನ್ನು ಬಿಡಲು ಈ ಕಾರಣವೂ ಸಹ ಇದೆ ಎಂಬುದನ್ನು ನೋಡಬಹುದು. ಅದೇಂದರೆ, ಪೋಡು, ಹಾಡಿ, ಕಾಲೋನಿಗಳಲ್ಲಿ ಸೋಲಿಗರು ಕಿರುಅರಣ್ಯ ಉತ್ಪನ್ನವನ್ನು ತಂದು ಮಾರಾಟ ಮಾಡಿ ತಮ್ಮ ಜೀವನ ಸಾಗಿಸುತ್ತಾರೆ. ತಂದ ಉತ್ಪನ್ನವನ್ನು ಕೆಲವರು ಲ್ಯಾಂಪ್ಸ್ ಸೊಸೈಟಿಗೆ ತೆಗೆದುಕೊಂಡು ಹೋದರೆ ಮತ್ತೆ ಕೆಲವರು ಸ್ಥಳೀಯವಾಗಿ ಕೇರಳ, ತಮಿಳುನಾಡು ಹಾಗು ಮಧ್ಯವರ್ತಿಗಳು, ದಲ್ಲಾಳಿಗಳಿಗೆ ಮಾರಾಟ ಮಾಡುತ್ತಾರೆ. ಈ ವ್ಯಾಪಾರಗಾರರು ಎಲ್ಲೆಲ್ಲಿ ಸೋಲಿಗರಿ ರುತ್ತಾರೋ ಅಂತಹ ಕಡೆಗಳಲ್ಲಿ ಅಂಗಡಿ ಮಾಡಿಕೊಂಡಿರುತ್ತಾರೆ. ಈ ಸ್ಥಳವು ಅವರಿಗೆ ಸಂಪನ್ಮೂಲವನ್ನು ದೋಚುವ ಸ್ಥಳವಾಗಿರುತ್ತದೆ. ನಯ, ವಿನಯದ ಮಾತುಗಳನ್ನಾಡಿ, ಪೋಡಿನ, ಕಾಲೋನಿಯ ಕೆಲವು ಯುವಕರು, ಮುಖಂಡರನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ಅವರುಗಳಿಗೆ ಆಮಿಷವನ್ನು ತೋರಿಸಿ

ಅಲ್ಪ ಸ್ವಲ್ಪ ಹಣ ಕೊಟ್ಟು ಮದ್ಯಪಾನ ಕುಡಿಸಿ ಕಾಲೋನಿಯ ಎಲ್ಲಾ ಸಂಪತ್ತನ್ನು ಅಲ್ಲಿಂದ ಹೊರಗಡೆ ಸಾಗಿಸುತ್ತಾರೆ. ಅಲ್ಲದೆ ಕೆಲವು ಕಡೆ ತಮ್ಮ ಸಂಸಾರವನ್ನು ಆ ಸ್ಥಳದಲ್ಲಿಯೇ ಬಿಟ್ಟು ಅವರಿಗೆ ಓಡಾಡಲು ವಾಹನವನ್ನು ಅಂದರೆ, ಕಾರು, ವ್ಯಾನು, ಜೀಪು ಇತ್ಯಾದಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಾರೆ. ಹೀಗಿರುವಾಗ ಅಲ್ಲಿಯ ಸೋಲಿಗರ ಮಕ್ಕಳಿಗೂ ವ್ಯಾಪಾರಸ್ಥರ ಮಕ್ಕಳಿಗೂ ಸಲಿಗೆ ಬೆಳೆದು ಒಡನಾಟದಿಂದ ಶಾಲೆಗೆ ಹೋಗುವ ಮಕ್ಕಳು ಅವರು ಓಡಿಸುವ ವಾಹನದಲ್ಲಿ ಕರೆದುಕೊಂಡು ಹೋಗುವುದು ವ್ಯಾಪಾರಕ್ಕೆ ಸಹಾಯ ಪಡೆದುಕೊಳ್ಳುವುದು ಇತ್ಯಾದಿಯಾಗಿ ಅವರ ಜೊತೆಯಲ್ಲಿಯೇ ಉಳಿದು ಇವರ ವಾಹನದಿಂದ ಪ್ರಭಾವಿತರಾಗಿ ಎಷ್ಟೋ ಪೋಡು, ಹಾಡಿ, ಕಾಲೋನಿಗಳಲ್ಲಿ ಶಾಲೆಗೆ ಹೋಗುವ ಮಕ್ಕಳು ಶಾಲೆಯನ್ನು ಬಿಟ್ಟು ಮುಸಲ್ಮಾನ ವ್ಯಾಪಾರಿಗಳ, ಇತರ ವ್ಯಾಪಾರಿಗಳ ಕೆಲಸವನ್ನು ಮಾಡುತ್ತಾ ಹಿಂದೆ ಉಳಿದಿದ್ದಾರೆ. ಕೊನೆಗೆ ಪೋಡುಗಳಲ್ಲಿಯೇ ತಮಗಿಷ್ಟ ಬಂದ ಹುಡುಗಿಯನ್ನು ಮದುವೆಯಾಗಿ ವಯಸ್ಸಿಗೆ ಬಾರದ ವಯಸ್ಸಿನಲ್ಲಿ ಸಂಸಾರ ಮಾಡುತ್ತಾ ತಮ್ಮ ಬಾಳಲ್ಲಿ ಸೋತು ಹೋಗುತ್ತಾರೆ.

ಸೋಲಿಗ ಸಮುದಾಯವು ಇತ್ತೀಚೆಗೆ ಹೆಚ್ಚಿನ ಪ್ರಮಾಣದಲ್ಲಿ ಮಾಧ್ಯಮಗಳ ಪ್ರಭಾವಕ್ಕೆ ಒಳಗಾಗು ತ್ತಿರುವುದು ಕಂಡುಬಂದಿದೆ. ಮುಖ್ಯವಾಗಿ ಟಿ.ವಿ. ಮೊಬೈಲ್, ರೇಡಿಯೋ, ಸಿನಿಮಾ ಇತ್ಯಾದಿ ಹೊಸ ಹೊಸ ಜಾಗತಿಕ ಮಾಧ್ಯಮಗಳು ಸೋಲಿಗರ ಪೋಡು, ಕಾಲೋನಿಗಳಿಗೂ ಬಂದುಬಿಟ್ಟಿವೆ. ಶಾಲಾ ಮಕ್ಕಳು ಹೆಚ್ಚಾಗಿ ಟಿ.ವಿ.ಯಲ್ಲಿ, ಮೊಬೈಲ್ ಬಳಸುವುದರಲ್ಲಿ ಹೆಚ್ಚು ಪ್ರಭಾವಿತರಾಗಿರುವುದನ್ನು ಕಾಣಬಹು ದಾಗಿದೆ. ಇದರಿಂದ ಒಳ್ಳೆಯ ಹಾಗೂ ಕೆಲವೊಂದು ದುಷ್ಪರಿಣಾಮಗಳು ಸೋಲಿಗರ ಮಕ್ಕಳ ಹಾಗೂ ಸಮುದಾಯದವರಲ್ಲಿ ಪರಿಣಾಮ ಬೀರುತ್ತಿದೆ.

- ❖ ಮಕ್ಕಳನ್ನು ಶಾಲೆಗೆ ಸೇರಿಸಬೇಕು ಎನ್ನುವುದನ್ನು ಕಲಿಯುತ್ತಾರೆ.
- ❖ ತಂದೆ-ತಾಯಿಗಳಾದ ನಾವುಗಳು ಓದಲಿಲ್ಲ. ನಮ್ಮ ಮಕ್ಕಳನ್ನಾದರೂ ಓದಿಸಬೇಕು ಎನ್ನುವ ಮನ ಪರಿವರ್ತನೆ.
- ❖ ನಮಗೇ ಕಾಡೇ ಇಲ್ಲ. ಕಾಡಿನ ಕೆಲಸ ಕಡಿಮೆಯಾಗುತ್ತದೆ. ಆದುದರಿಂದ ನಮ್ಮ ಮಕ್ಕಳು ಶಾಲೆಗೆ ಹೋಗಿ ಕಲಿಯಲಿ ಅದರ ಮೂಲಕ ಅವರೂ ಸಹ ಒಂದು ಸರಕಾರಿ ಉದ್ಯೋಗ ಹೊಂದಲಿ ಎನ್ನುವುದನ್ನು ನೋಡಿ ಕಲಿಯುತ್ತಾರೆ.
- ❖ ನಮ್ಮ ಮಕ್ಕಳಿಗೂ ಇಂಗ್ಲೀಷ್ ಶಿಕ್ಷಣ ಕೊಡಿಸಬೇಕು ಎಂದು ಅರಿತು ಕೆಲವೇ ಮಂದಿ ೦.೧% ರಷ್ಟು ಸೋಲಿಗರು ಸಾಲ ಮಾಡಿಯಾದರೂ, ಕೂಲಿ ಮಾಡಿಯಾದರೂ ತಮ್ಮ ಮಕ್ಕಳನ್ನು ಕಾನ್ವೆಂಟ್ ಶಿಕ್ಷಣಕ್ಕೆ ಸೇರಿಸುತ್ತಿದ್ದಾರೆ. ಇದರಿಂದ ಪೋಷಕರಲ್ಲಿ ಔಪಚಾರಿಕ ಶಿಕ್ಷಣದ ಜಾಗೃತಿ ಟಿ.ವಿ. ಮಾಧ್ಯಮದ ಮೂಲಕ ಸ್ವಲ್ಪ ಅರಿವಾಗುತ್ತದೆ.
- ❖ ಬಾಲ್ಯ ವಿವಾಹವನ್ನು ಮಾಡಬಾರದು ಮಾಡಿದರೆ ಶಿಕ್ಷೆಯಾಗುತ್ತದೆ ಎನ್ನುವುದನ್ನು ಪುಟ್ಟಗೌರಿ ಮದುವೆ ಸೀರಿಯಲ್, ಜಾಗೃತಿ ಅಭಿಯಾನ ಕಾರ್ಯಕ್ರಮ ಇತ್ಯಾದಿಗಳಿಂದ ತಿಳಿಯುವುದರ ಮೂಲಕ ಸೋಲಿಗರಲ್ಲಿಯೂ ಸಹ ಬಾಲ್ಯವಿವಾಹ ಮಾಡಬಾರದು ಎಂಬುದರ ಬಗ್ಗೆ ಜಾಗೃತ ರಾಗುತ್ತಿದ್ದಾರೆ. ಮಾಡಿದರೆ ಶಿಕ್ಷೆ, ಪೊಲೀಸ್, ಕಾನೂನು ಕಾಯ್ದೆ ಇವುಗಳ ಬಗ್ಗೆಯೂ ಇತ್ತೀಚೆಗೆ ಮಾಧ್ಯಮಗಳ ಮೂಲಕ ತಿಳಿಯುವುದು ಕಂಡುಬಂದಿದೆ.

- ಮೊಬೈಲ್ ಪೋಡು ಮತ್ತು ಕಾಲೋನಿಗೂ ಬಂದಿದ್ದರಿಂದ ಕೆಲವೊಂದು ತುರ್ತುವಿಷಯಗಳನ್ನು ಅತೀ ಬೇಗನೇ ತಮ್ಮ ಸಂಬಂಧಿಕರಿಗೆ ಹಾಗೂ ಇತರರಿಗೂ ತಿಳಿಸಲು ಸಹಾಯಕವಾಗಿದೆ.
- ಮಕ್ಕಳು ತಂದೆ-ತಾಯಿ ದುಡಿದ ಹಣವನ್ನು ಪೇಟೆಯಲ್ಲಿ ಹೊರಗಡೆ ಹೋಗಿ ಫಿಲಂ ನೋಡಲು ಹಣ ಪಡೆಯುತ್ತಾರೆ. ಇದರಿಂದ ಒಂದು ಕಡೆ ಶಾಲೆಗೆ ಸರಿಯಾಗಿ ಹೋಗುವುದಿಲ್ಲ. ಮತ್ತೊಂದು ಕಡೆ ಗೈರು ಹಾಜರಿಯಿಂದ ದಿನ ನಿತ್ಯದ ಪಾಠ ಪ್ರವಚನಗಳನ್ನು ಸರಿಯಾಗಿ ಕೇಳದೆ ಓದಿನಲ್ಲಿ ಹಿಂದೆ ಬೀಳುತ್ತಾರೆ.
- ಹುಡುಗರು ಸಾಮಾನ್ಯವಾಗಿ ತಮ್ಮಲ್ಲೇ ಒಂದೊಂದು ಗುಂಪು ಮಾಡಿಕೊಂಡು ಪ್ರತಿಯೊಂದು ಹೊಸ ಹೊಸ ಫಿಲಂ ಬಂದಾಗಲೂ ಸಿದ್ಧರಾಗುತ್ತಾರೆ. ಕೆಲವು ಬಾರಿ ತಾವು ಹೊರಗಡೆ ಹೋಗಿ ಕೂಲಿ ಮಾಡಿಕೊಂಡು ಹಣ ಸಂಪಾದಿಸಿಕೊಂಡು ಆ ನಂತರ ಗೆಳೆಯರೆಲ್ಲ ಸೇರಿ ಫಿಲಂ ನೋಡಲು ಹೊರಡುತ್ತಾರೆ. ಇದರಿಂದ ಹಲವಾರು ಮಂದಿ ೮ರಿಂದ ೧೦ನೇ ತರಗತಿಗೆ ಬರುವಷ್ಟರಲ್ಲಿಗೆ ಶಾಲೆಯಿಂದ ಹೊರಗುಳಿಯುತ್ತಾರೆ.
- ಮನೆಯಲ್ಲಿಯೂ ಸಹ ಹೆಚ್ಚು ಮಂದಿ ಸೋಲಿಗರು ಟಿ.ವಿ. ಮಾಧ್ಯಮದಲ್ಲಿ ಸುದ್ದಿ ವಾರ್ತೆ, ಜ್ಞಾನಕ್ಕೆ ಸಂಬಂಧಿಸಿದ ವಿಷಯಗಳನ್ನು ನೋಡುವುದಿಲ್ಲ. ನೋಡಿದರೂ ತುಂಬಾ ಕಡಿಮೆ. ಹೆಚ್ಚು ಚಲಚಿತ್ರಗಳು ಕನ್ನಡ, ತಮಿಳು, ಮಲಯಾಳಂ ಹೆಚ್ಚು ನೋಡಲು ಇಷ್ಟಪಡುತ್ತಾರೆ. ತಂದೆ-ತಾಯಿಯರ ಜೊತೆಯಲ್ಲಿ ಹೆಚ್ಚು ಮಕ್ಕಳು ಶಾಲೆಯಿಂದ ಹೊರಗೆ ಉಳಿದುಬಿಡುತ್ತಾರೆ.

ಮುಖ್ಯವಾಗಿ ೧೯ನೇ ಶತಮಾನದಲ್ಲಿ ಬುಡಕಟ್ಟು ಮಕ್ಕಳಿಗಾಗಿ ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಗಿರಿಜನ ಆಶ್ರಮ ಶಾಲೆಗಳನ್ನು ತೆರೆಯುವುದರ ಮೂಲಕ ಸೋಲಿಗರು ತಮ್ಮ ಮಕ್ಕಳನ್ನು ಯೋಚಿಸಿ ಇನ್ನೂ ನಮಗೆ ಕಾಡಿನಲ್ಲಿಯೇ ಆಶ್ರಯ ಪಡೆಯಲು ಕಷ್ಟಸಾಧ್ಯ. ನಾವುಗಳು ಕಷ್ಟಪಟ್ಟರೂ ಪರವಾಗಿಲ್ಲ. ನಮ್ಮ ಮಕ್ಕಳಾದರೂ ಶಿಕ್ಷಣವನ್ನು ಕಲಿಯಲಿ ಅದರ ಮೂಲಕ ಹಸಿವಿನಿಂದ ಬಳಲುವ ಬದಲು ಹೊಟ್ಟೆ ತುಂಬ ಊಟ ಮಾಡಿಕೊಂಡು ಇಂತಹ ಆಶ್ರಮಗಳಲ್ಲಿ ಇರಲಿ ಎನ್ನುವ ಗಟ್ಟಿ ನಿರ್ಧಾರವನ್ನು ತೆಗೆದುಕೊಂಡು ಒಬ್ಬೊಬ್ಬರಾಗಿಯೇ ತಮ್ಮ ಮಕ್ಕಳನ್ನು ಆಶ್ರಮ ಶಾಲೆಗೆ ತಂದು ಬಿಡುವ ಪ್ರಯತ್ನ ಮಾಡಿದರು.

ಸೋಲಿಗರು ಕಾಡನ್ನು ತೊರೆದು ಅಲ್ಲಲ್ಲಿ ಕೂಲಿ ಆಳುಗಳಾಗಿ ಹೊನ್ನಮೇಟಿ, ಬೇಡಗುಳಿ, ಹತ್ತಿಕಾನು ಎಸ್ಟೇಟ್‌ಗಳಲ್ಲಿ ಕೆಲಸ ಮಾಡುತ್ತಿರುವಾಗ ಡಾ. ಸುದರ್ಶನ್ ಅವರು ಬಿಳಿಗಿರಿರಂಗನ ಬೆಟ್ಟದಲ್ಲಿರುವ ನೀಲಗಿರಿ ಆದಿವಾಸಿ ವೆಲ್‌ಫೇರ್ ಅಸೋಷಿಯೇಷನ್(NAWA)ನಲ್ಲಿ ಡಾಕ್ಟರ್ ಆಗಿ ಕೆಲಸ ಮಾಡುತ್ತಿದ್ದರು. ಇವರು ಮೊಬೈಲ್ ವ್ಯಾನ್ ಮೂಲಕ ಕೆಲವು ಕಡೆ ಬಂದು ಸೋಲಿಗರು ಇರುವ ಕಡೆ ವಿಚಾರಿಸಿ, ಮಾತನಾಡಿಸಿ ಸೋಲಿಗರ ಕಷ್ಟ ಸುಖಗಳ ಬಗ್ಗೆ ನೋಡಿ, ಕೆಲವೊಂದು ಮಾತ್ರೆಗಳನ್ನು ಕೊಟ್ಟು ಧೈರ್ಯ ಹೇಳಿ, ಆನಂತರದಲ್ಲಿ ತಂದೆ ತಾಯಿಯರಿಗೆ ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿ, ನಾನು ಕರೆದುಕೊಂಡು ಬೆಟ್ಟದಲ್ಲಿ ಅವರಿಗೆ ವಿದ್ಯಾಭ್ಯಾಸ, ಊಟದ ವ್ಯವಸ್ಥೆ ಕೊಡಿಸುತ್ತೇನೆ. ಇಲ್ಲದಿದ್ದರೆ ನಿಮ್ಮ ಮಕ್ಕಳು ನಿಮ್ಮ ಹಾಗೆ ಆಗುತ್ತಾರೆ. ಶಿಕ್ಷಣ ಕಲಿಯುವುದಿಲ್ಲ. ನಿಮ್ಮ ಹಾಗೆ ಸಾಯುವ ತನಕ ಕೂಲಿ ಕೆಲಸ ಮಾಡಬೇಕಾಗುತ್ತದೆ ಎಂದು ಅವರ ಜೊತೆ ಹೋದಾಗಲೆಲ್ಲ ಮಾತನಾಡುತ್ತ, ಧೈರ್ಯ ಹೇಳುತ್ತಾ ವಿಶ್ವಾಸದ

ಮಾತುಗಳನ್ನು ಹೇಳುತ್ತಿದ್ದರು. ಇದನ್ನೆಲ್ಲಾ ಕೇಳುತ್ತಿದ್ದ ಸೋಲಿಗರಿಗೆ ಹೌದು ನಮ್ಮ ಹಾಗೆ ಕಷ್ಟಪಡುವುದು ಬೇಡ ಎಂದು ಸೋಲಿಗರು ತಮ್ಮ ಮಕ್ಕಳನ್ನು ಶಾಲೆಗೆ ಒಬ್ಬೊಬ್ಬರಾಗಿ ಕಳುಹಿಸತೊಡಗಿದರು. ಡಾ. ಸುದರ್ಶನ್ ಅವರು ಸೋಲಿಗರ ಮಕ್ಕಳಿಗೆ ಶಿಕ್ಷಣ ನೀಡುವ ಮಹತ್ತರವಾದ ಕಾರ್ಯ ಮಾಡುವ ಮೂಲಕ ಸೋಲಿಗರ ಮಕ್ಕಳೂ ಶಾಲೆಗೆ ತೆರಳಿ ಕಲಿಯುತ್ತಿದ್ದಾರೆ ಎಂದರೆ, ಇವರ ಅಪಾರವಾದ ಕೊಡುಗೆ ಎಂದೇ ಹೇಳಬಹುದು. ಆನಂತರದಲ್ಲಿ ಬಿಳಿಗಿರಿರಂಗನ ಬೆಟ್ಟದಲ್ಲಿ V.G.K.K. ಸ್ವತಃ ಡಾ. ಸುದರ್ಶನ್‌ರವರೇ ಪ್ರತ್ಯೇಕವಾಗಿ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಸ್ಥಾಪಿಸಿ, ಸೋಲಿಗರ ಆರೋಗ್ಯ, ಶಿಕ್ಷಣ, ಕೌಶಲ್ಯ ತರಬೇತಿ, ಉದ್ಯೋಗ, ವೃತ್ತಿ ತರಬೇತಿ, ಪರಿಸರ ಇತರೆ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಬಿಳಿಗಿರಿರಂಗನ ಬೆಟ್ಟ ಇಲ್ಲಿ ನಡೆಯುತ್ತಿದ್ದ ಶಿಕ್ಷಣಕ್ಕೆ ೧೯೮೩ ಈ ಕಾಲದಲ್ಲಿ ಮೌಲ್ಯಾಧಾರಿತ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡಲಾಯಿತು.

ಒಂದನೇ ತರಗತಿಯಿಂದ ೫ನೇ ತರಗತಿ – ೭೦%

೫ನೇ ತರಗತಿಯಿಂದ ೧೦ನೇ ತರಗತಿ – ೨೫%

೧೦ನೇ ತರಗತಿಯಿಂದ ೧೫ನೇ ತರಗತಿ – ೫%

ಮೊದಲು ೧೯೮೩ರಿಂದ ೧೯೯೯ರವರೆಗೆ ಒಳ್ಳೆಯ ಶಿಕ್ಷಣ ಗುಣಮಟ್ಟ ಸಾಗುತ್ತಾ ಬಂದು ಸಂಖ್ಯೆಯಲ್ಲಿಯೂ ಸಹ ಹೆಚ್ಚಳವಾಗತೊಡಗಿತು. ಕರ್ನಾಟಕದ ಹಲವಾರು ಜಿಲ್ಲೆಯಿಂದ, ತಾಲ್ಲೂಕಿನಿಂದಲೂ ಸಹ ಸ್ವಯಂಸೇವಕರು, ಜೊತೆಗೆ ಶಿಕ್ಷಕರು ರಜಾ ದಿನಗಳಲ್ಲಿ ಮನೆಮನೆಗೆ ತೆರಳಿ ಮಕ್ಕಳು ಮತ್ತು ಪೋಷಕರ ಜೊತೆ ಸಮಲೋಚಿಸಿ ಆನಂತರ ಬಿಳಿಗಿರಿರಂಗನ ಬೆಟ್ಟದ V.G.K.K. ಗೆ ಮಕ್ಕಳನ್ನು ಕರೆತಂದು ದಾಖಲಾತಿ ಮಾಡಿಕೊಳ್ಳುತ್ತಿದ್ದರು. ಇಲ್ಲಿ ಶಿಕ್ಷಕರು ಹಾಗೂ ಸ್ವಯಂಸೇವಕರ ಪರಿಶ್ರಮವೂ ಹೆಚ್ಚಿನದೇ ಆಗಿತ್ತು. ಇವರ ಫಲ ಹಾಗೂ ಸುದರ್ಶನ್ ಅವರ ಮಾರ್ಗದರ್ಶನ ಫಲವಾಗಿ ಶಾಲೆಯು ಉತ್ತುಂಗ ಶಿಖರಕ್ಕೆ ಹೋಗಿತ್ತು. ಆದರೆ ಕಾಲಾನಂತರದಲ್ಲಿ ವಿ.ಜಿ.ಕೆ.ಕೆ.ಯ ಶಾಲೆಗೆ ಮಕ್ಕಳನ್ನು ಸೇರಿಸಲು ಹಲವಾರು ಬುಡಕಟ್ಟು ಸಮುದಾಯಗಳು ಕಡಿಮೆಯಾಗತೊಡಗಿದವು. ಇದಕ್ಕೆ ಸೋಲಿಗ ಸಮುದಾಯದವರು ಕೆಲವು ಕಾರಣಗಳನ್ನು ನೀಡಬಹುದು.

- ಈಗಾಗಲೇ ಸರಕಾರದ ವತಿಯಿಂದ ಸ್ಥಳೀಯವಾಗಿ ಗಿರಿಜನ ಆಶ್ರಮ ಶಾಲೆಗಳು ಪ್ರಾರಂಭವಾದವು.
- ಈ ಹೊತ್ತಿಗಾಗಲೇ ಸ್ಥಳೀಯವಾಗಿ ಅಲ್ಲಲ್ಲಿ ಅನೇಕ ಸಂಘ–ಸಂಸ್ಥೆಗಳು ಮುಂದೆ ಬಂದು ಸೋಲಿಗರ ಪರವಾಗಿ ಕೆಲಸ ಮಾಡತೊಡಗಿದವು.
- ಬೆಟ್ಟದಲ್ಲಿ ಯಾವಾಗಲೂ ಸುರಿಯುತ್ತಿರುವ ಮಳೆ ಮತ್ತು ಚಳಿಯ ವಾತಾವರಣ ಕೆಲವರಿಗೆ ಇಷ್ಟವಾಗುತ್ತಿರಲಿಲ್ಲ.
- ತುಂಬಾ ಶಿಸ್ತಿನ ಶಿಕ್ಷಣಕ್ಕೆ ಕೆಲವು ಮಕ್ಕಳಿಗೆ ಅನುಸರಣೆಯಾಗುವುದು ತೊಂದರೆಯಾಗುತ್ತಿತ್ತು.
- ಪೋಷಕರನ್ನು ಬಿಟ್ಟು ಕೆಲವು ಮಕ್ಕಳು ವಿ.ಜಿ.ಕೆ.ಕೆ.ಗೆ ಹೋಗಲು ಹಿಂಜರಿಯುತ್ತಿದ್ದರು.
- ಕೆಲವು ಮಕ್ಕಳು ಮತ್ತು ಪೋಷಕರು ವಿ.ಜಿ.ಕೆ.ಕೆ.ಯಲ್ಲಿ ಕೆಲವೊಂದು ಶಿಕ್ಷಕರು ತುಂಬಾ

ಹೊಡೆಯುತ್ತಾರೆ, ಬೈಯುತ್ತಾರೆ ಅವರನ್ನು ಕಂಡರೆ ಭಯವಾಗುತ್ತದೆ ಎಂದು ಹೇಳಿ ಮಕ್ಕಳು ಹೊರಗುಳಿಯತೊಡಗಿದರು.

- ಒಂದು ಹಂತದಲ್ಲಿ ೮, ೯, ೧೦ನೇ ತರಗತಿ ಆದ ಮಕ್ಕಳಲ್ಲಿ ಪ್ರೇಮಾಂಕುರವಾಗಿ ಕೆಲವರು ಅಲ್ಲಲ್ಲೇ ಕಾಡಿಗೆ ಓಡಿಹೋಗಿ ಮದುವೆಯಾದರು. ಇದರಿಂದ ಪೋಷಕರು ಮಕ್ಕಳನ್ನು ಕಳುಹಿಸುವುದು ಕಡಿಮೆಯಾಗತೊಡಗಿತು.

**ಕೆಲವು ಕಾರಣಗಳನ್ನು ನೋಡುವುದಾದರೆ,**

- ವರ್ಗಾವಣೆ ಇಲ್ಲದ ಶಿಕ್ಷಕರು
- ಶಿಕ್ಷಣದ ಮೇಲೆ ಆಸಕ್ತಿ ಕಡಿಮೆಯಾಗತೊಡಗಿತು
- ಗಂಡು-ಹೆಣ್ಣು ಮಕ್ಕಳಲ್ಲಿ ಆಕರ್ಷಣೆ ಹೆಚ್ಚಾಯಿತು ಪ್ರೇಮ ಪರಾರಿ ಮದುವೆ
- ಸಾಂಸ್ಕೃತಿಕ ಕಾರ್ಯಕ್ರಮ
- ೧೦ನೇ ತರಗತಿ ಆದ ಮೇಲೆ ಮುಂದೆ ಓದಲು ಮಾಹಿತಿಯ ತೊಂದರೆ, ಭಾಷೆಯ ತೊಂದರೆ ಮತ್ತು ಹಣಕಾಸಿನ ತೊಂದರೆ ಬೇರೆ ಬೇರೆ ಕಾಲೇಜುಗಳಲ್ಲಿ ನಾಡ ಮಕ್ಕಳ ಜೊತೆ ಹೊಂದಾಣಿಕೆಯ ತೊಂದರೆ ಹಾಗೂ ಶಿಕ್ಷಣದಲ್ಲಿ ಗುಣಮಟ್ಟದಲ್ಲಿ ವ್ಯತ್ಯಾಸ ಕಂಡುಬರುವುದು.
- ಮಕ್ಕಳು ೧೦ನೇ ತರಗತಿ ಮುಗಿಸಿದರೂ ನಮಗೆ ಯಾವ ಕೆಲಸ ಸಿಗುವುದಿಲ್ಲ. ಅಂದರೆ ಸೋಲಿಗರಲ್ಲಿ ಓದಿದ ಮಕ್ಕಳು ಮತ್ತೆ ಹಾಡಿ, ಪೋಡು, ಕಾಲೋನಿಗೆ ಬಂದು ಮತ್ತೆ ಕೂಲಿ ಕೆಲಸಕ್ಕೆ ಹೋಗುತ್ತಿದ್ದರು. ಇದನ್ನು ಕಂಡು ಎಷ್ಟು ಓದಿದರೂ ಸೋಲಿಗರಿಗೆ ಕೂಲಿ ಕೆಲಸವೇ ಗತಿ ಎನ್ನುವ ಭಾವನೆ ಎಲ್ಲರಲ್ಲೂ ಮನೆಮಾಡಿರುವುದು
- ಬುಡಕಟ್ಟುಗಳಲ್ಲಿಯೇ ಉದ್ಯೋಗ, ಶಿಕ್ಷಣದಲ್ಲಿ ಪೈಪೋಟಿ ಹೆಚ್ಚಾಗಿರುವುದು
- ನಾಡವರ ಕಂಡರೆ ಭಯದ ವಾತಾವರಣ; ಉನ್ನತ ವ್ಯಾಸಂಗಕ್ಕಾಗಿ ಹಾಸ್ಟೆಲ್‌ನಲ್ಲಿರುವುದು ಎಂದರೆ ಸೋಲಿಗರ ಮಕ್ಕಳಿಗೆ ಆಗದ ವಿಷಯ ಊಟದ ಸಮಸ್ಯೆ... ಇತ್ಯಾದಿ
- ತಾಲ್ಲೂಕುಗಳಲ್ಲಿ ಮೊರಾರ್ಜಿ, ಏಕಲವ್ಯ ಶಾಲೆ, ಕಿತ್ತೂರು ರಾಣಿ ಚೆನ್ನಮ್ಮ ಶಾಲೆ ಇತ್ಯಾದಿಯಾಗಿ ಅಲ್ಲಿ ಶಾಲೆಗಳು ಪ್ರಾರಂಭವಾಗಿದೆ.
- ರಾಮಾಚಾರಿ ಮಾಸ್ಟರ್ ಹೊಡೆಯುತ್ತಾರೆ ಎನ್ನುವ ಭಯ.
- ವಿ.ಜಿ.ಕೆ.ಕೆ.ಯಲ್ಲಿ ಓದಿದ ಮಕ್ಕಳ ತಂದೆ ತಾಯಿಯರ ಫೀಡ್ ಬ್ಯಾಕ್.

ಆದರೂ ಸಹ ಸ್ವಾತಂತ್ರ್ಯ ಪೂರ್ವದಿಂದ ಸ್ವಾತಂತ್ರ್ಯ ನಂತರದಲ್ಲಿ ರಾಜ ಮಹಾರಾಜರ ಕಾಲದಿಂದ ಹಿಡಿದು ಬ್ರಿಟಿಷರ ಕಾಲದಿಂದಲೂ ಬುಡಕಟ್ಟು ಮಕ್ಕಳಿಗೆ ಶಿಕ್ಷಣದ ವಿಷಯದಲ್ಲಿ ಆಸಕ್ತಿಯನ್ನು ಕೊಡುತ್ತಾ ಬಂದಿರುವುದನ್ನು ಕಾರಣಬಹುದು.. ಅದೇ ರೀತಿಯಲ್ಲಿ ಸೋಲಿಗರ ಮಕ್ಕಳು ಸಹ ಶಿಕ್ಷಣಕ್ಕೆ ಒತ್ತು ಕೊಟ್ಟಿರುವುದನ್ನೂ ಸಹ ಸ್ಮರಿಸಬಹುದಾಗಿದೆ.

ಕರ್ನಾಟಕದಲ್ಲಿ ೫೦ ಬುಡಕಟ್ಟುಗಳಿದ್ದು, ಆ ೫೦ ಬುಡಕಟ್ಟು ಪಟ್ಟಿಗಳಲ್ಲಿ ಕೆಲವೊಂದು ತೀರಾ ಹಿಂದುಳಿದಿದ್ದು, ಅರಣ್ಯವಾಸಿ ಹಾಗೂ ಅರಣ್ಯದ ಅಂಚಿನಲ್ಲಿ ವಾಸ ಮಾಡುತ್ತಿರುವ ಕೆಲವೇ ಕೆಲವು ಅಂದರೆ ೧೩ ಅರಣ್ಯವಾಸಿ ಬುಡಕಟ್ಟುಗಳು ಪ್ರಸ್ತುತದ ದಿನಗಳಲ್ಲಿ ಶಿಕ್ಷಣದಲ್ಲಿ ಹಾಗೂ ಸರ್ಕಾರಿ ಉದ್ಯೋಗದಲ್ಲಿ ತೀರಾ ಹಿಂದುಳಿದಿರುವುದನ್ನು ಕಾಣಬಹುದು.

ಜೇನುಕುರುಬ, ಕೊರಗ, ಸೋಲಿಗ, ಕಾಡುಕುರುಬ, ಯರವ, ಪಣಿಯ, ಇರುಳಿಗ, ಹಸಲರು, ಮೇದಾ, ಹಕ್ಕಿಪಿಕ್ಕಿ ಇತ್ಯಾದಿ ೧೩ ಪಂಗಡಗಳು ತೀರಾ ಹಿಂದುಳಿದಿದ್ದು, ಸರಕಾರದ ಅನುಕೂಲವನ್ನು ಪಡೆಯುವಲ್ಲಿ ತುಂಬಾ ಕಷ್ಟಪಡುತ್ತಿರುವುದು ಕಂಡು ಬಂದಿದೆ. ಇವರು ಇತ್ತೀಚೆಗೆ ಶಿಕ್ಷಣ, ಉದ್ಯೋಗದಲ್ಲಿ ಹಲವಾರು ಹೋರಾಟಗಳನ್ನು ಸಂಘ–ಸಂಸ್ಥೆಗಳ ಮೂಲಕ ಮಾಡಿಕೊಂಡು ನಮ್ಮ ಮಕ್ಕಳಿಗೆ ನುರಿತ ಗುಣಮಟ್ಟದ ಶಿಕ್ಷಣದ ವ್ಯವಸ್ಥೆ ಬೇಕು ಎಂದು ಕೇಳುತ್ತಿದ್ದಾರೆ. ಹಾಗಾಗಿ ಆಶ್ರಮ ಶಾಲೆಗಳಲ್ಲಿ ನುರಿತ ಶಿಕ್ಷಕರನ್ನು ನೇಮಕ ಮಾಡಿಕೊಂಡು ಶಿಕ್ಷಣ ಕೊಡಿಸಬೇಕು. ಕೇರಳ ಮಾದರಿಯ ಶಿಕ್ಷಣ, ನವೋದಯ ಮಾದರಿಯ ಶಿಕ್ಷಣ ಬೇಕು ಹಾಗೂ ಕಲಿತ ವಿದ್ಯಾರ್ಥಿಗಳಿಗೆ ತರಬೇತಿ ಕೊಡುವುದರ ಮೂಲಕ ಸರಕಾರ ಉದ್ಯೋಗ, ಒಳಮೀಸಲಾತಿ ಕೊಟ್ಟು ಸರಕಾರಿ ಉದ್ಯೋಗಕ್ಕೆ ಸೇರಿಸಿಕೊಳ್ಳಬೇಕು. ಅರಣ್ಯ ಇಲಾಖೆ, ತೋಟಗಾರಿಕೆ ಇಲಾಖೆ, ಕೃಷಿ ಇಲಾಖೆ, ರೇಷ್ಮೆ ಇಲಾಖೆ, ಹರ್ಬಲ್ ಪ್ಲಾಂಟೇಷನ್, ಆಶ್ರಮ ಶಾಲೆ, ಮೊರಾರ್ಜಿ ದೇಸಾಯಿ ಶಾಲೆ ಇತ್ಯಾದಿ ಇಲಾಖೆಗಳಲ್ಲಿ ಸೋಲಿಗರ ಕಲಿತ ಮಕ್ಕಳಿಗೆ ನೇರ ಅವಕಾಶವನ್ನು ಕೊಡುವುದರ ಮೂಲಕ ಸೋಲಿಗರನ್ನು ಆರ್ಥಿಕವಾಗಿ ಸದೃಢರನ್ನಾಗಿ ಮಾಡಬೇಕು.

ಪ್ರಸ್ತುತ ಶಿಕ್ಷಣದ ಸಲುವಾಗಿ ಹಲವಾರು ಹೋರಾಟಗಳು, ಧರಣಿಗಳು, ಸರಕಾರ, ಸರ್ಕಾರೇತರ ಸಂಘ–ಸಂಸ್ಥೆಗಳ ಮೂಲಕ ನಡೆಯುತ್ತಿವೆ. ಅಲ್ಲದೇ ಸರಕಾರದ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಹಲವಾರು ಕಾರ್ಯಕ್ರಮಗಳು ಆಗಾಗ್ಗೆ ನಡೆಯುತ್ತಿರುತ್ತದೆ. ಅಲ್ಲದೇ ವಿಶೇಷವಾಗಿ ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಪಂಗಡದ ಇಲಾಖೆಗಳಿಂದ ವಿಶೇಷವಾದ ಯೋಜನೆ, ಕಾರ್ಯಕ್ರಮಗಳು ಆಯಾ ವರ್ಷಗಳಲ್ಲಿ ಪಟ್ಟಿಯನ್ನು ತಯಾರಿಸಿಕೊಂಡು ಅದರ ಅನುಸಾರವಾಗಿ ಬುಡಕಟ್ಟುಗಳ ಶಿಕ್ಷಣಕ್ಕೆ ಸಂಬಂಧಿಸಿದ ಹಾಗೆ ಜರುಗುತ್ತದೆ. ಅನುದಾನವೂ ಸಹ ಖರ್ಚಾಗುತ್ತದೆ. ಆದರೆ ಸೋಲಿಗರ ಶಿಕ್ಷಣದಲ್ಲಿ, ಉದ್ಯೋಗದಲ್ಲಿ ಇನ್ನೂ ಕಡಿಮೆ ಮಟ್ಟದಲ್ಲಿರುವುದೇ ಕಂಡು ಬಂದಿದೆ ಹಾಗೂ ಹಲವಾರು ನ್ಯೂನ್ಯತೆಗಳನ್ನು ಕಾಣಬಹುದು.

❖ ಹೆಚ್ಚು ಮಂದಿ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಹೋಗಿ ನೀವು ಎಂದು ಮಕ್ಕಳ ಮನವೊಲಿಸುವ ಪ್ರಯತ್ನ ಮಾಡುವುದಿಲ್ಲ.

❖ ಶಾಲೆ ಬಿಟ್ಟ ಗಂಡು, ಹೆಣ್ಣುಮಕ್ಕಳು ಮನೆಯ ಮುಂಭಾಗ, ಗುಡಿಸಲು, ಜಗಲಿ, ಹೊಲದ ಬದುಗಳಲ್ಲಿ ಅಥವಾ ಯಾವ ಮನೆ ಖಾಲಿಯಿದೆಯೋ ಅಂತಹ ಕಡೆಗಳಲ್ಲಿ ಕುಳಿತುಕೊಂಡು ಆಟವಾಡುತ್ತಿರುತ್ತಾರೆ ಅಥವಾ ಒಬ್ಬರಿಗೊಬ್ಬರು ಭೇಟಿಯಾಗಿ ಸಂಭಾಷಣೆ ಮಾಡುತ್ತಾ ಹೀಗೆ ದಿನ ಕಳೆದಂತೆ ತಮಗಿಷ್ಟವಾದವರ ಜೊತೆ ಪ್ರೇಮಾಂಕುರವಾಗಿ ಅವರ ಗಂಡ ಹೆಂಡಿರಾಗುತ್ತಾರೆ. ಕೆಲವು ವೇಳೆ ತಂದೆ ತಾಯಿಗಳು ಮದುವೆ ಮಾಡಿಸುತ್ತಾರೆ. ವಿದ್ಯೆ ಕಲಿಯುವ ವಯಸ್ಸಿನಲ್ಲಿಯೇ ಬಾಳಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

❖ ಸೋಲಿಗರಲ್ಲಿ ಅಥವಾ ಬುಡಕಟ್ಟುಗಳಲ್ಲಿ ಯಾವುದಾದರೂ ಹುಡುಗ ಹುಡುಗಿ ೭, ೮, ೯ನೇ ತರಗತಿಯಿಂದ ಹಾಸ್ಟೆಲ್ ಅಥವಾ ಶಾಲೆಯಿಂದ ತನಗೆ ಬೇಸರವಾಗಿ ಇಷ್ಟವಿಲ್ಲದೆ ಅನೇಕ ಕಾರಣದಿಂದ ಹೊರಗುಳಿದು ವಾಪಾಸು ತನ್ನ ಪೋಡಿಗೆ ಬಂದು ಬಿಡುತ್ತದೆ. ಅಂತಹ ಮಗು ವನ್ನು ತಂದೆ ತಾಯಿ ಅಥವಾ ಇನ್ನಿತರರು ಶಾಲೆಗೆ ಹೋಗು ಎಂದು ಮನವೊಲಿಸುವುದು ಕಡಿಮೆ.

❖ ತಂದೆ ತಾಯಿಗಳಿಗೆ ಟೀಚರ್ ಅಥವಾ ಸಮುದಾಯದಲ್ಲಿ ಶಿಕ್ಷಣ ಪಡೆದವರು ಅಥವಾ ಸಮುದಾಯದ ಮುಖ್ಯಸ್ಥರು ಅವರ ಮನೆಗೆ ಹೋಗಿ ಮಕ್ಕಳನ್ನು ಶಾಲೆಗೆ ಕರೆದುಕೊಂಡು ಹೋಗಿ ಬಿಡಿ, ಓದಿಸಲು ಕಳುಹಿಸಿ ಕೆಲಸಕ್ಕೆ ಬಿಡಬೇಡಿ ಎಂದು ಹೇಳಿದಾಗ ಕೆಲವರು ಹೀಗೆ ಪ್ರತಿಕ್ರಿಯೆ ನೀಡುತ್ತಾರೆ. "ನಮ್ಮ ಮಕ್ಕಳು ಓದಿ ಏನಾಗಬೇಕು ಬಿಡಿ, ಮನೆಯಲ್ಲಿಯೇ ಕೆಲಸ ಮಾಡಿಕೊಂಡು ಇರಲಿ" ಊಟಕ್ಕೆ ನಿಮ್ಮ ಮನೆಗೆ ಕಳುಹಿಸುವುದಿಲ್ಲ. ನಮ್ಮ ಮಕ್ಕಳು ನಮ್ಮ ಮನೆಯಲ್ಲಿಯೇ ಇರುತ್ತಾರೆ. ನಿಮಗೇನು ಎಂದು ಬಹುತೇಕರು ಹೇಳುತ್ತಾರೆ.

❖ ಕೆಲವು ಮಕ್ಕಳು ತಂದೆ ತಾಯಿ ಅಥವಾ ಸಮುದಾಯದವರ ಜೊತೆಯಲ್ಲಿ ಬೇರೆಯವರ ಹೊಲದಲ್ಲಿ ಕೂಲಿ ಕೆಲಸ ಮಾಡಲು ಹೊರಟು ಹೋಗುತ್ತಾರೆ.

❖ ಕೆಲವು ಸಹ ಇಂತಹ ಮಕ್ಕಳನ್ನು ಮನವೊಲಿಸಿ ಮರಳಿ ಶಾಲೆಗೆ ಕರೆತರುವ ಪ್ರಯತ್ನದಲ್ಲಿ ಶಿಕ್ಷಕರು ಹಾಡಿಗೆ ಬರುವಾಗ ಮಧ್ಯಾಹ್ನದ ಸಮಯಕ್ಕೆ ಬರುವಾಗ ತಂದೆ ತಾಯಿ ಇರುವುದಿಲ್ಲ. ಆ ವೇಳೆಯಲ್ಲಿ ಅಂತಹ ಮಕ್ಕಳು ಶಿಕ್ಷಕರು ಬರುವುದನ್ನು ಕಂಡು ತಕ್ಷಣ ಕಾಡಿಗೆ ಓಡಿ ಹೋಗುತ್ತಾರೆ.

❖ ಕೆಲವು ಮಕ್ಕಳನ್ನು ಶಿಕ್ಷಕರು ಬೆದರಿಸಿ, ಶಾಲೆಗೆ ಕರೆಯುವ ಪ್ರಯತ್ನ ಮಾಡಿದರೆ ಕೆಲವು ಅಂತಹ ಮಕ್ಕಳು ಶಿಕ್ಷಕರಿಗೇ ತಿರುಗಿ ಮಾತನ್ನಾಡುತ್ತಾರೆ. ಉದಾಹರಣೆಗೆ ಮದ್ದೂರು ಕಾಲೋನಿಯಲ್ಲಿ ಬಸವರಾಜು ಅವರ ಮಗ ರವಿಶಂಕರ., ೬ನೇ ತರಗತಿ, ಮೊರಾರ್ಜಿ ಶಾಲೆ, ಮೇಲುಕಾಮನಹಳ್ಳಿ ಶಾಲೆ, ಶಿಕ್ಷಕರು ಮನೆಗೆ ಬಂದು ಕರೆದಾಗ ಶಿಕ್ಷಕರಿಗೆ ಮನೆಯ ಒಳಗೆ ಇದ್ದ ಮಚ್ಚನ್ನು ತೆಗೆದುಕೊಂಡು ಬಂದು ಹೀಗೆ ಹೇಳುತ್ತಾನೆ, "ನೀವು ಮತ್ತೆ ಮತ್ತೆ ಬಲವಂತವಾಗಿ ನನ್ನನ್ನು ಕರೆಯಲು ಬಂದರೆ ಈ ಮಚ್ಚಿನಿಂದ ನಿಮ್ಮನ್ನು ತರಿದು ಹಾಕುತ್ತೇನೆ ಎಂದು ಮಚ್ಚನ್ನು ತೋರಿಸುತ್ತಾನೆ" ಹೀಗೆ ಕೆಲವು ಮಕ್ಕಳು ಇತ್ತೀಚೆಗೆ ಮನೆಯಲ್ಲಿ ಊಟಕ್ಕೆ ತೊಂದರೆ ಇಲ್ಲ. ಊಟ ಆದ ಮೇಲೆ ತಮಗಿಷ್ಟ ಬಂದ ಹಾಗೆ ಅಲೆದಾಡುತ್ತಾರೆ.

❖ ಮುಖ್ಯವಾಗಿ ತಂದೆ ತಾಯಿಗಳ ಪಾತ್ರ ಬಹಳ ಮುಖ್ಯ. ಆದರೆ ತಂದೆ ತಾಯಿಗಳೇ ಬೆಳಿಗ್ಗೆ ೭ ಗಂಟೆಗೆ ಕೂಲಿಗೋಸ್ಕರ ಮನೆಬಿಟ್ಟು ಹೊರಟು ಹೋಗುತ್ತಾರೆ.

❖ ಸೋಲಿಗರ ಮಕ್ಕಳಲ್ಲಿ ೫, ೬, ೭ನೇ ತರಗತಿಯಿಂದಲೇ ಗಂಡು, ಹೆಣ್ಣುಮಕ್ಕಳಲ್ಲಿ ಆಕರ್ಷಣೆ ಹೆಚ್ಚಾಗುತ್ತದೆ ಹಾಗೂ ತಂದೆ ತಾಯಿಗಳು ಅವರುಗಳನ್ನು ಸ್ವಚ್ಛಂದವಾಗಿ ಬಿಟ್ಟುಬಿಡುತ್ತಾರೆ. ತಿಳುವಳಿಕೆ ನೀಡುವವರ ಕೊರತೆ ಇದೆ.

- ಓದಿದವರಿಗೇ ಕೆಲಸ ಇಲ್ಲ ಇನ್ನೂ ನಾವು ಓದಿ ಏನು ಮಾಡಬೇಕು ಎನ್ನುವ ತಾತ್ಸಾರ ಮನೋಭಾವ.
- ಆಶ್ರಮ ಶಾಲೆ ಮುಗಿದ ನಂತರ ಹೊರ ಊರಿಗೆ ನಾಡಮಕ್ಕಳ ಜೊತೆ ಕುಳಿತು ಶಾಲೆಯನ್ನೂ ಕಲಿಯಬೇಕು. ಈ ವ್ಯವಸ್ಥೆಯಲ್ಲಿ ನಾಡಮಕ್ಕಳ ಜೊತೆ ಶಿಕ್ಷಣದಲ್ಲಿ ಪೈಪೋಟಿಯನ್ನು ಎದುರಿಸಲಿಕ್ಕೆ ಸೋಲಿಗ ಮಕ್ಕಳಲ್ಲಿ ಆಗುವುದಿಲ್ಲ.
- ಹೊರ ಊರು, ಹೊರ ಶಾಲೆಗೆ ಹೋದರೆ ಬುಡಕಟ್ಟು ಸೋಲಿಗ ಮಕ್ಕಳು ಮಂಕಾಗಿ ಹೋಗುತ್ತಾರೆ ಎಂಬ ಭ್ರಮೆ.
- ಇತ್ತೀಚೆಗೆ ಟಿ.ವಿ. ಮೊಬೈಲ್ ಮಾಧ್ಯಮಗಳು ಬುಡಕಟ್ಟು ಮಕ್ಕಳ ಮೇಲೆ ಅತಿಯಾದ ಪರಿಣಾಮ ಬೀರುತ್ತಿವೆ.

ಇದರ ಜೊತೆಗೆ ಇನ್ನೂ ಹಲವಾರು ಅಂಶಗಳನ್ನೊಳಗೊಂಡಂತೆ ಸೋಲಿಗ ಮಕ್ಕಳು ಆಶ್ರಮ ಶಾಲೆಯಿಂದ ಹೊರ ಬಂದ ಮೇಲೆ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಹೈಸ್ಕೂಲ್ ಹಂತದಲ್ಲಿಯೇ ಹಲವು ಮಕ್ಕಳು ಶಾಲೆಯಿಂದ ಹೊರಗುಳಿಯುತ್ತಾರೆ ಮತ್ತೆ ಕೆಲವರು ಪಿ.ಯು.ಸಿ. ಬಿ.ಎ, ಬಿ.ಎಸ್ಸಿ, ಎಂ.ಎಸ್ಸಿ, ಎಂ.ಎ, ಕಲಿಯುತ್ತಿರುವ ಮಕ್ಕಳ ಸ್ಥಿತಿಗತಿಯು ಬೇರೆಯದೇ ಆಗಿರುತ್ತದೆ. ಅವುಗಳಲ್ಲಿ ಮುಖ್ಯವಾಗಿ,

- ಎಸ್.ಎಸ್.ಎಲ್.ಸಿ. ಮುಗಿದ ನಂತರ ಹಣಕಾಸಿನ ತೊಂದರೆಯಿಂದ ಯಾವ ಕಾಲೇಜಿಗೆ, ಯಾವ ವಿಷಯವನ್ನು ತೆಗೆದುಕೊಳ್ಳಬೇಕು ಎನ್ನುವ ಗೊಂದಲ, ಹೊರಗಡೆ ಕಾಲೇಜಿಗೆ ಕಳುಹಿಸಲು ತಂದೆ-ತಾಯಿಗಳು ಒಪ್ಪುವುದಿಲ್ಲ ಸಂಬಂಧಿಸಿದ ಇಲಾಖಾ ವತಿಯಿಂದ ಹಣಕಾಸಿನ ನೆರವು ಇದ್ದರೂ ಅದನ್ನು ಪಡೆದುಕೊಳ್ಳುವಲ್ಲಿ ಮಾಹಿತಿಯ ಕೊರತೆಯಿಂದ ವಿಫಲರಾಗುತ್ತಾರೆ.
- ಕೆಲವು ಮಕ್ಕಳಿಗೆ ಮದುವೆ ತಯಾರಿ
- ಅಂಕಗಳಲ್ಲಿ ೬೦% -೭೦% ಸೋಲಿಗ ಮಕ್ಕಳು ಪಡೆದಿದ್ದರೂ ಇತರೇ ೫೦ ಬುಡಕಟ್ಟುಗಳಲ್ಲಿ ಪ್ರಭಾವಿ ಮಕ್ಕಳ ಜೊತೆ ಪೈಪೋಟಿ ನಡೆಸಲೂ ಆಗದೆ ಕಾಲೇಜಿನಲ್ಲಿ ಆಯಾ ಕೋರ್ಸಿಗೆ ಸೀಟ್ ಪಡೆಯಲಾಗದೆ ಹಿಂದೆ ಬೀಳುತ್ತಾರೆ.
- ಹಾಸ್ಟೆಲ್‌ನ ತೊಂದರೆ, ಹಾಸ್ಟೆಲ್‌ಗೆ ಸೇರಿಕೊಳ್ಳಲು ಹಲವಾರು ಸಾರಿ ಪಟ್ಟಣಕ್ಕೆ ಬಂದು ಹೋಗಬೇಕು ಹಾಗೂ ಆನ್‌ಲೈನ್ ಪದ್ಧತಿಯ ಅಳವಡಿಕೆ. ಈ ರೀತಿಯ ಮಾಹಿತಿಯ ಕೊರತೆಯಿಂದ ಕೆಲವು ಮಕ್ಕಳು ತೊಂದರೆ ಅನುಭವಿಸಿ ಕೊನೆಗೆ ಶಿಕ್ಷಣವನ್ನೇ ಮೊಟಕುಗೊಳಿಸುತ್ತಾರೆ.
- ಕೆಲವು ಸಲ ಮಕ್ಕಳಿಗೆ ಪಟ್ಟಣದ ವಾತಾವರಣ ಇಷ್ಟವಾಗದೇ ಇರುವಾಗ ಹಲವಾರು ಕಾರಣ ನೀಡಿ ವಾಪಾಸ್ ತಮ್ಮ ಹಾಡಿ-ಪೋಡುಗಳಿಗೆ ಹಿಂದಿರುಗುತ್ತಾರೆ.

**ಶೈಕ್ಷಣಿಕ ಸ್ಥಿತಿಗತಿ**

ಈ ಭೂಮಂಡಲದಲ್ಲಿ ಸಾವಿರಾರು ಕೋಟಿ ಜೀವರಾಶಿಗಳು ನೆಲೆಸಿದ್ದು, ಅದರಲ್ಲಿ ಅಕ್ಷರಸ್ಥನಾಗಲು ಮಾನವ ಎಂಬ ಏಕೈಕ ಜೀವಿಗೆ ಮಾತ್ರ ಸಾಧ್ಯವಾಗಿದೆ. ವಿಧ್ಯಾವಿಹೀನಃ ಪಶುಃ ಅಂದರೆ ವಿದ್ಯೆ

ಇಲ್ಲದವನು ಪಶುವಿಗೆ ಸಮಾನನಾಗುವನು ಎಂಬ ಉಕ್ತಿಯು ಇರುವುದು. ವಿದ್ಯೆ ಎಂದರೆ ಮನುಷ್ಯನು ತನ್ನ ಅಂತರಾತ್ಮದಲ್ಲಿ ಹೊಂದಿರುವ ತಿಳುವಳಿಕೆಯ ಸಾಮರ್ಥ್ಯವಾಗಿದೆ. ಅಂದರೆ ಮನುಷ್ಯನು ತನ್ನ ದೈಹಿಕ ಶಕ್ತಿ ಮತ್ತು ಕೈಗಳಿಂದ ಮಾಡುವ ಕುಶಲಕಲೆಗಳ ಜ್ಞಾನ ಮತ್ತು ಅಕ್ಷರಸ್ಥರೆಂದರೆ ಮನುಷ್ಯನು ತನ್ನ ತಿಳುವಳಿಕೆಗಳ ಮೂಲಕ ಪೆನ್ನಿನಿಂದ ಬಿಳಿಯ ಕಾಗದದ ಮೇಲೆ ಅಕ್ಷರಗಳನ್ನು ಮೂಡಿಸುವುದರ ಮೂಲಕ - ತನ್ನ ಜ್ಞಾನದ ತಿಳುವಳಿಕೆಯನ್ನು ಅಭಿವ್ಯಕ್ತಪಡಿಸುವುದಾಗಿದೆ. ಇಂತಹ ಅಕ್ಷರಗಳ ಜ್ಞಾನ ಹೊಂದಿದವವುಗೆ ಸಮಾಜವು ಗೌರವಿಸುವುದು. ಅನಕ್ಷರತೆಯು ಓದಲು ಹಾಗೂ ಬರೆಯಲು ಬಾರದಿರುವುದನ್ನು ಸೂಚಿಸಿದರೆ, ಅಕ್ಷರತೆಯು ಕೈ ಬರಹ ಅಥವಾ ಮುದ್ರಿತವಾದಂತಹ ವಿಷಯಗಳನ್ನು ಓದಲು ಹಾಗೂ ಬರೆಯಲು ಬರುವ ಸಾಮರ್ಥ್ಯವನ್ನು ಸೂಚಿಸುತ್ತದೆ. ಈ ಅಕ್ಷರತೆಯು ಮನುಷ್ಯನ ಬಾಳಿಗೆ ಉತ್ತಮವಾದಂತಹ ಭವಿಷ್ಯ ನಿರ್ಮಾಣ ಮಾಡುತ್ತದೆ. ಅನಕ್ಷರತೆಯು ಮನುಷ್ಯನಿಗೆ ಅಂಧಕಾರದಲ್ಲಿ ದೂಡುತ್ತದೆ. ಪ್ರಸ್ತುತ ಬುಡಕಟ್ಟಿನಲ್ಲಿ ಅನಕ್ಷರತೆಯ ಪ್ರಮಾಣವು ಹೆಚ್ಚಾಗಿರುವುದು. ಏಕೆಂದರೆ ಈ ಬುಡಕಟ್ಟು ಮೂಲತಃ ಅರಣ್ಯವಾಸಿಗಳಾಗಿರುವುದರಿಂದ ಶಿಕ್ಷಣದಿಂದ ವಂಚಿತವಾಗಿರುವುದು ಕಂಡು ಬರುತ್ತದೆ. ಇವರಲ್ಲಿ ವಿದ್ಯಾವಂತರ ಸಂಖ್ಯೆ ತೀರಾ ಕಡಿಮೆಯಾಗಿದ್ದು ಶೈಕ್ಷಣಿಕ ಪ್ರಗತಿಗೆ ನಿರಾಶದಾಯಕ ಮನೋಭಾವನೆಯ ಉತ್ತರ ಇವರಲ್ಲಿದೆ.

ಸೋಲಿಗರು ಬುಡಕಟ್ಟು ತೀರಾ ಬಡತನದ ಜೀವನ ಸಾಗಿಸುತ್ತಿದ್ದು ಇವರು ತಮ್ಮ ದಿನನಿತ್ಯದ ಹೊಟ್ಟೆಪಾಡಿನ ಜಂಜಾಟದಲ್ಲಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಉತ್ಸಾಹ ತೋರಿಸುತ್ತಿಲ್ಲ. ಅಲ್ಲದೆ ಈ ಸಮುದಾಯದ ಮತ್ತು ಇಂತಹ ನಿರ್ಲಕ್ಷಿಸಲ್ಪಟ್ಟಂತಹ ಬುಡಕಟ್ಟಿನ ಮಕ್ಕಳ ಶೈಕ್ಷಣಿಕ ಪ್ರಗತಿಗೆ ಸರಕಾರವು ಸಾಧೋಹರಣವಾಗಿ ಸ್ಪಂದಿಸುತ್ತಿದೆ ಆದರೂ ಸ್ಥಾಪಿತವಾದ ಗಿರಿಜನ ಆಶ್ರಮ ಶಾಲೆಗಳಲ್ಲಿ ನುರಿತ ಖಾಯಂ ಶಿಕ್ಷಕರನ್ನು ನೀಡದೆ ಇರುವುದರಿಂದ ಪ್ರಾಥಮಿಕ ಹಂತದ ಶಿಕ್ಷಣ ಕಲಿಕೆಯಲ್ಲಿ ಮಕ್ಕಳು ಗುಣಮಟ್ಟದ ತಳಹದಿ ಶಿಕ್ಷಣ ಪಡೆಯುವಲ್ಲಿ ವಿಫಲರಾಗಿದ್ದಾರೆ.

ಓದುವ ಹಂಬಲ ಮಕ್ಕಳಲ್ಲಿರಬಹುದು. ಆದರೆ ಕಲಿಸುವ ಸಾಮರ್ಥ್ಯ ಪಾಲಕರಲಿಲ್ಲ. ನಮ್ಮ ಪಾಡಿಗೆ ನಾವು ನಮ್ಮ ಮಕ್ಕಳಿಗೆ ನಮ್ಮ ಕಸುಬು ಕಲಿಸಿಕೊಟ್ಟರೆ ಅಷ್ಟೋ ಇಷ್ಟೋ ಹೇಗಾದರೂ ಜೀವನ ಮಾಡಲು ಅನುಕೂಲವಾಗುತ್ತದೆ ಎಂಬ ಭಾವನೆಯನ್ನು ಹೊಂದಿದ್ದಾರೆ. ಹೀಗಾಗಿ ಸದಾಕಾಲ ಅರಣ್ಯದಲ್ಲಿ ಸುತ್ತಾಟ, ಕಿರು ಅರಣ್ಯೋತ್ಪಾದನಾ ಸಂಗ್ರಹದಲ್ಲಿ ತಮ್ಮ ಜಂಜಾಟದ ಬದುಕು, ಅನಕ್ಷರತೆ ಜೀವನ, ದಿನದಿಂದ ದಿನಕ್ಕೆ ಇವರನ್ನು ಕಿತ್ತು ತಿನ್ನುತ್ತಿರುವ ಬಡತನ ಇವರ ಶೈಕ್ಷಣಿಕ ಪ್ರಗತಿಗೆ ಮಾರಕವಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ಬುಡಕಟ್ಟುಗಳ ಶೈಕ್ಷಣಿಕ ಪ್ರಗತಿಗೆ ಸರಕಾರವು ಸ್ಪಂದಿಸಬೇಕಾಗಿರುವುದು ತುಂಬಾ ಅಗತ್ಯವಾಗಿದೆ. ಚಾಮರಾಜನಗರ ಜಿಲ್ಲೆಯ ಸೋಲಿಗರು ಬುಡಕಟ್ಟಿನ ಶೈಕ್ಷಣಿಕ ಪ್ರಗತಿಯ ಪಕ್ಷಿನೋಟ ಈ ಕೆಳಗಿನಂತಿದೆ.

ಸೋಲಿಗರು ಬುಡಕಟ್ಟು ಸಮೀಕ್ಷೆಗೊಳಪಟ್ಟಿರುವ ಸರಾಸರಿ ಜನಸಂಖ್ಯೆ ೧೭೩೦ರಷ್ಟಿದೆ. ಇದರಲ್ಲಿ ೦-೫ ವಯೋಮಾನದವರು ೪೦ರಷ್ಟಿದ್ದಾರೆ. ೦-೫ ವಯೋಮಾನದವರು ಶಾಲೆಗೆ ಹೋಗಲು ಅಸಮರ್ಥ್ಯರೆನ್ನುವ ಕಾರಣಕ್ಕೆ ಅವರನ್ನು ಸಾಕ್ಷರದ ಗುಂಪಿನಿಂದ ಹೊರಗಿಡಲಾಗಿದೆ. ಹಾಗಾಗಿ ಸಾಕ್ಷರತೆಗೆ ಅರ್ಹರಾದವರು ಸರಾಸರಿ ೧೬೯೦ರಷ್ಟಿದ್ದಾರೆ. ಆದರೆ ಸಾಕ್ಷರರಾದವರು ಕೇವಲ ೮೧೪ ಮಾತ್ರ ಇದೆ. ಅವರಲ್ಲಿ ಮೆಟ್ರಿಕ್ ಪೂರ್ವ ಶಿಕ್ಷಣ ಪಡೆದವರ ಸರಾಸರಿ ಪ್ರಮಾಣವು ಶೇ. ೮೯.೯೩ರಷ್ಟಿದೆ. ಆದರೆ ಮೆಟ್ರಿಕ್ ನಂತರದ ಸಾಕ್ಷರತೆ ಪ್ರಮಾಣವು ಅತ್ಯಲ್ಪವಾಗಿದ್ದು ಅದು ಕೇವಲ ಶೇ. ೧೦.೦೮ರಷ್ಟಿದೆ.

### ಕೋಷ್ಟಕ ೭.೨.೨. ಸಮೀಕ್ಷೆಗೊಳಪಟ್ಟ ಸೋಲಿಗರ ಸಾಕ್ಷರತೆ ಪ್ರಮಾಣ

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೮೬೪ | ೮೬೬ | ೧೭೩೦ |
| ೦-೫ ವಯೋಗುಂಪು | ೧೮ | ೨೨ | ೪೦ |
| ಸಾಕ್ಷರತೆಗೆ ಅರ್ಹರಾದವರು | ೮೪೬ | ೮೪೪ | ೧೬೯೦ |
| ಸಾಕ್ಷರತೆ ಹೊಂದಿದವರು | ೪೭೭ | ೩೩೭ | ೮೧೪ |
| ನಿರಕ್ಷರಿಗಳು | ೩೬೯ | ೫೦೭ | ೮೭೬ |

### ವೃತ್ತಚಿತ್ರ ೭.೨.೧. ಸಮೀಕ್ಷೆಗೆ ಒಳಪಟ್ಟ ಕುಟುಂಬಗಳ ಸಾಕ್ಷರರ ಪ್ರಮಾಣ




ಸಾಕ್ಷರತೆ ಹೊಂದಿದವರಲ್ಲಿ ಮೆಟ್ರಿಕ್ ಪೂರ್ವ ಮೆಟ್ರಿಕ್ ನಂತರದ ವಿದ್ಯಾಭ್ಯಾಸ ನಡೆಸಿದವರ ವಿವರ ಈ ರೀತಿಯಾಗಿ ಅಂಕಿ ಅಂಶಗಳಿಂದ ಕಂಡುಬರುತ್ತದೆ.

### ಕೋಷ್ಟಕ ೭.೨.೩. ಸಮೀಕ್ಷೆಗೊಳಪಟ್ಟ ಸೋಲಿಗರು ಬುಡಕಟ್ಟಿನ ಶೈಕ್ಷಣಿಕ ಹಂತಗಳು

| ಕ್ರ.ಸಂ. | ಶೈಕ್ಷಣಿಕ ಹಂತ | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|---|
| ೧ | ಪ್ರಾಥಮಿಕ | ೧೮೫ | ೧೩೫ | ೩೨೦ | ೩೯.೩೧ |
| ೨ | ಮಾಧ್ಯಮಿಕ | ೧೫೪ | ೧೩೦ | ೨೮೪ | ೩೪.೮೯ |
| ೩ | ಪ್ರೌಢ ಶಿಕ್ಷಣ | ೮೦ | ೪೪ | ೧೨೪ | ೧೫.೨೩ |
| ೪ | ಡಿಪ್ಲೋಮ | ೪ | ೦ | ೪ | ೦.೪೯೧ |
| ೫ | ಪದವಿ ಪೂರ್ವ | ೩೬ | ೧೭ | ೫೩ | ೬.೫೧೧ |
| ೬ | ಪದವಿ | ೧೧ | ೬ | ೧೭ | ೨.೦೮೮ |
| ೭ | ಸ್ನಾತಕೋತ್ತರ | ೩ | ೨ | ೫ | ೦.೬೧೪ |
| ೮ | ಇತರೆ | ೪ | ೩ | ೭ | ೦.೮೬ |
| ಒಟ್ಟು | | ೪೭೭ | ೩೩೭ | ೮೧೪ | ೧೦೦ |

ಉನ್ನತ ಶಿಕ್ಷಣಕ್ಕೆ ಹೋದಂತೆಲ್ಲ ಸೋಲಿಗರಲ್ಲಿ ಓದುವವರ ಪ್ರಮಾಣ ಕಡಿಮೆಯಾಗಿದೆ. ಪ್ರೌಢ ಶಿಕ್ಷಣ ಹೊಂದಿದವರಿಗಿಂತ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಹೊಂದಿದ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಹತ್ತನೇ ತರಗತಿಗೆ ಬರುವಷ್ಟರಲ್ಲಿ ಮಕ್ಕಳನ್ನು ನಾನಾ ಕಾರಣಗಳಿಗಾಗಿ ಶಾಲೆ ಬಿಡಿಸುವುದರಿಂದ ಮುಂದಿನ ವಿದ್ಯಾಭ್ಯಾಸವನ್ನು ಮಕ್ಕಳು ಪೂರೈಸಲು ಸಾಧ್ಯವಾಗುವುದಿಲ್ಲ.

**ಲಂಬಚಿತ್ರ ೭.೨.೧. ಸೋಲಿಗರು ಬುಡಕಟ್ಟಿನ ಶೈಕ್ಷಣಿಕ ಹಂತಗಳು**




ಹಲವಾರು ಕಾರಣಗಳಿಂದ ಕೆಲವು ಮಕ್ಕಳು ಕಾಲೇಜು ಮುಂದುವರೆಸಿದರೆ ಮತ್ತೆ ಕೆಲವು ಮಕ್ಕಳು ಅರ್ಧದಲ್ಲಿಯೇ ಬಿಟ್ಟುಬಿಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಪ್ರಜ್ಞಾವಂತರಾಗಿರುವ ಸೋಲಿಗರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲು ಹೆಚ್ಚು ಉತ್ಸಾಹ ತೋರುತ್ತಿರುವುದು ಆಶಾದಾಯಕ ವಿಚಾರವೆಂದೇ ಹೇಳಬಹುದು. ನಾವಾದರೂ ಕಲಿಯಲಿಲ್ಲ ನಮ್ಮ ಮಕ್ಕಳಾದರೂ ಕಲಿಯಲಿ ಎಂಬ ಭಾವನೆ ಇವರಲ್ಲಿ ಕಂಡುಬರುತ್ತಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವ್ಯಕ್ತಪಡಿಸುತ್ತಾರೆ.

ಸೋಲಿಗರಲ್ಲಿ ಕಲಿತ ಹೆಣ್ಣುಮಕ್ಕಳು, ಗಂಡುಮಕ್ಕಳು ಉನ್ನತ ಶಿಕ್ಷಣ ಮಾಡಿದವರು ಕೇವಲ ಕೆಲವು ಮಂದಿ ಮಾತ್ರ. ಆದರೆ ಅವರ್‍ಯಾರಿಗೂ ಸರಕಾರಿ ಉದ್ಯೋಗ ಸಿಗುತ್ತಿಲ್ಲ. ಕಾರಣ ಸ್ಪರ್ಧಾತ್ಮಕ ಜಗತ್ತಿನಲ್ಲಿ ಸೋಲಿಗರು ಸೋತು ಹಿಂದೆ ಹೋಗುತ್ತಿದ್ದಾರೆ. ಅವರುಗಳಲ್ಲಿ ಕೆಲವರು ಅರಣ್ಯ ಇಲಾಖೆಯಲ್ಲಿ, ಆಶ್ರಮ ಶಾಲೆಯಲ್ಲಿ, ಮೊರಾರ್ಜಿ ಶಾಲೆಗಳಲ್ಲಿ ಅರೆಕಾಲಿಕ ಶಿಕ್ಷಕರಾಗಿ, 'ಡಿ' ಗ್ರೂಪ್ ನೌಕರರಾಗಿ ಅಲ್ಪ ಮಂದಿ ಮಾತ್ರ ಕೆಲಸ ನಿರ್ವಹಿಸುತ್ತಿದ್ದಾರೆ. ಮತ್ತೆ ಕೆಲವರು ಆರೋಗ್ಯ ಇಲಾಖೆಯಲ್ಲಿ ಆರೋಗ್ಯ ಸಹಾಯಕರಾಗಿ, ಕೆಲವರು ಇತ್ತೀಚೆಗೆ ಚಾಮರಾಜನಗರ ಜಿಲ್ಲೆಯ ಇತರೇ ಕಡೆಗಳಲ್ಲಿ ಸಂಘ ಸಂಸ್ಥೆಗಳಲ್ಲಿ, ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಹಲವಾರು ಮಂದಿ ಸೋಲಿಗರ ಹುಡುಗ ಹುಡುಗಿಯರು ಇತ್ತ ಕಡೆ ಕೂಲಿ ಕೆಲಸ, ಕಾಡಿನ ಕೆಲಸವೂ ಮಾಡಲಾಗದೆ ಪಟ್ಟಣಕ್ಕೂ ಬಂದು ಕೆಲಸಕ್ಕೂ ಸೇರಲಾಗದೆ ಅತಂತ್ರ ಪರಿಸ್ಥಿತಿಯಲ್ಲಿ ತಮ್ಮ ಅಮೂಲ್ಯವಾದ ಸಮಯವನ್ನು ಹಾಳು ಮಾಡುತ್ತಿದ್ದಾರೆ.

**ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳು, ಕರ್ನಾಟಕ ಸರ್ಕಾರ ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.**

- ಮಹಿಳಾ ಕಲ್ಯಾಣ ಕೇಂದ್ರಗಳು
- ಆಶ್ರಮ ಶಾಲೆಗಳು– ಈ ಶಾಲೆಯಲ್ಲಿ ಪ್ರತಿಯೊಂದು ಮಕ್ಕಳಿಗೆ ರೂ.೮೦೦/–ಗಳನ್ನು ಮಾಹೆಯಾನ ಭೋಜನ ವೆಚ್ಚಕ್ಕಾಗಿ ಭರಿಸಲಾಗುತ್ತಿದೆ. ಈ ಯೋಜನೆಯಿಂದ ೧೧೬ ಆಶ್ರಮ ಶಾಲೆಗಳು ಕಾರ್ಯನಿರ್ವಹಿಸುತ್ತಿದ್ದು, ಇದರಿಂದ ೧೩,೮೩೫ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ.
- ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳು– ಈ ಯೋಜನೆಯಡಿಯಲ್ಲಿ ೯೫ ಬಾಲಕರ ಹಾಗೂ ೪೦ ಬಾಲಕಿಯರ ಒಟ್ಟಾರೆ ೧೩೪ ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳು ರಾಜ್ಯಾದ್ಯಂತ ಕಾರ್ಯನಿರ್ವಹಿಸುತ್ತಿವೆ. ಇದರಿಂದ ೭೬೬೨ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿದ್ದಾರೆ.
- ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು ೩೬ ಬಾಲಕರ ಮತ್ತು ೨೪ ಬಾಲಕಿಯರ ಒಟ್ಟಾರೆ ೬೦ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳಲ್ಲಿ ೪೨೭೯ ವಿದ್ಯಾರ್ಥಿಗಳು ಮಾತ್ರ ಪ್ರಯೋಜನ ಪಡೆಯುತ್ತಿದ್ದಾರೆ.
- ಅನುದಾನಿತ ವಿದ್ಯಾರ್ಥಿ ನಿಲಯಗಳು
- ವಿದ್ಯಾರ್ಥಿ ವೇತನ, ಮೆಟ್ರಿಕ್ ಪೂರ್ವ ಮತ್ತು ನಂತರದ ವಿದ್ಯಾರ್ಥಿ ವೇತನ, ವಿದ್ಯಾರ್ಥಿನಿಲಯದ ವಾಸಿಗಳಲ್ಲದ ೧ರಿಂದ ೮ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ.೨,೦೦,೦೦೦/– ಮಿತಿಯೊಳಗಿರುವ ವಿದ್ಯಾರ್ಥಿಗಳಿಗೆ ಆನ್‌ಲೈನ್ ಮುಖಾಂತರ ವಾರ್ಷಿಕವಾಗಿ ೭ನೇ ತರಗತಿ ಮತ್ತು ೧೦ನೇ ತರಗತಿಯಲ್ಲಿ ತೇರ್ಗಡೆಯಾದ ಮೂಲ ನಿವಾಸಿ ಬುಡಕಟ್ಟು ಗುಂಪುಗಳ ವಿದ್ಯಾರ್ಥಿಗಳಿಗೆ ಅನುಕ್ರಮವಾಗಿ ರೂ.೨೫೦೦/– ಮತ್ತು ೫,೦೦೦/–ಗಳ ಪ್ರೋತ್ಸಾಹಧನ.
- ಪಿಯುಸಿ ಪರೀಕ್ಷೆಯಲ್ಲಿ ಪ್ರತಿ ಜಿಲ್ಲೆಯಲ್ಲಿ ಕಲಾ/ವಿಜ್ಞಾನ/ವಾಣಿಜ್ಯ ವಿಭಾಗದಲ್ಲಿ ಅತೀ ಹೆಚ್ಚು ಅಂಕ ಪಡೆದ ಪರಿಶಿಷ್ಟ ಪಂಗಡ ೫ ವಿದ್ಯಾರ್ಥಿಗಳಿಗೆ ತಲಾ ರೂ.೧೦,೦೦೦/–ಗಳ ಪ್ರೋತ್ಸಾಹ ಧನ. ಪದವಿ ಕೋರ್ಸುಗಳಲ್ಲಿ ವಿವಿಧ ವಿಶ್ವವಿದ್ಯಾನಿಲಯದಲ್ಲಿ (ಕಲಾ/ವಾಣಿಜ್ಯ/ವಿಜ್ಞಾನ ವಿಭಾಗಗಳಲ್ಲಿ) ಘೋಷಿಸಲಾದ ೧ ರಿಂದ ೫ ರ್‍ಯಾಂಕ್‌ಗಳಲ್ಲಿ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿದ್ದರೆ ಅವರಿಗೆ ರೂ.೨೦,೦೦೦/– ಗಳ ಪ್ರೋತ್ಸಾಹ ಧನ.
- ವಿವಿಧ ವಿಶ್ವವಿದ್ಯಾನಿಲಯಗಳ ಸ್ನಾತಕೋತ್ತರ ಪದವಿಯಲ್ಲಿ ಪ್ರತಿ ಕೋರ್ಸುಗಳಲ್ಲಿ ಘೋಷಿಸಲಾದ ೧ ರಿಂದ ೫ ರ್‍ಯಾಂಕ್‌ಗಳಲ್ಲಿ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿದ್ದರೆ ಅವರಿಗೆ ರೂ.೨೫,೦೦೦/–ಗಳ ಪ್ರೋತ್ಸಾಹ ಧನ. ತಾಂತ್ರಿಕ ಕೋರ್ಸುಗಳಾದ ಇಂಜಿನಿಯರಿಂಗ್/ಬಿ.ಡಿ.ಎಸ್./ಇಂಡಿಯನ್ ಮೆಡಿಸಿನ್/ಕೃಷಿ/ಪಶು ವೈದ್ಯಕೀಯ/ಕೋರ್ಸುಗಳಲ್ಲಿ ೧ ರಿಂದ ೫ ರ್‍ಯಾಂಕ್ ಪಡೆದ ವಿದ್ಯಾರ್ಥಿಗಳಿದ್ದರೆ ಅವರಿಗೆ ರೂ.೨೫,೦೦೦/– ಪ್ರೋತ್ಸಾಹ ಧನ.
- ಎಂ.ಬಿ.ಬಿ.ಎಸ್. ಕೋರ್ಸುಗಳಲ್ಲಿ ೧ ರಿಂದ ೫ ರ್‍ಯಾಂಕ್ ಪಡೆದ ವಿದ್ಯಾರ್ಥಿಗಳಿದ್ದರೆ ಅವರಿಗೆ ರೂ.೩೫,೦೦೦/– ಪ್ರೋತ್ಸಾಹ ಧನ.

❖ ಐ.ಐ.ಟಿ./ಐ.ಐ.ಎಂ./ಐ.ಐ.ಎಸ್.ಸಿ./ಎನ್.ಐ.ಟಿ./ ಇತ್ಯಾದಿ ರಾಷ್ಟ್ರೀಯ ಪ್ರಸಿದ್ಧವಾದ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ಪಂಗಡದ ಅಭ್ಯರ್ಥಿಗಳಿಗೆ ನೀಡುವ ಆರ್ಥಿಕ ನೆರವನ್ನು ರೂ.೫೦,೦೦೦/– ದಿಂದ ರೂ.೧,೦೦,೦೦೦/– ಲಕ್ಷಕ್ಕೆ ಅಥವಾ ವಾಸ್ತವಿಕ ಫೀಸ್ ಮತ್ತು ಬೋರ್ಡಿಂಗ್ ವೆಚ್ಚ ಇತ್ಯಾದಿ ಮೊತ್ತದಲ್ಲಿ ಯಾವುದು ಕಡಿಮೆಯೋ ಅದನ್ನು ನೀಡುವುದು. ಈ ನೆರವನ್ನು ವಿದ್ಯಾರ್ಥಿಯ ಕೋರ್ಸ್ ಅವಧಿಯಲ್ಲಿ ಎರಡು ಕಂತುಗಳಲ್ಲಿ ರೂ.೧,೦೦,೦೦೦/– ನೀಡಲಾಗುವುದು.

❖ ಎಂ.ಫಿಲ್. ಮತ್ತು ಪಿ.ಹೆಚ್.ಡಿ. ವಿದ್ಯಾರ್ಥಿಗಳಿಗೆ ಫೆಲೋಶಿಫ್ ರಾಜ್ಯದಲ್ಲಿರುವ ವಿಶ್ವವಿದ್ಯಾನಿಲಯಗಳ ವಿವಿಧ ವಿಷಯಗಳಲ್ಲಿ ಸಂಶೋಧನೆಗೆ ತೊಡಗಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಸಂಶೋಧನೆ, ಮಾಹಿತಿ ಸಂಗ್ರಹಣೆ ಮುಂತಾದವುಗಳಿಗೆ ಹೆಚ್ಚಿನ ವೆಚ್ಚ ಭರಿಸಬೇಕಾಗುತ್ತದೆ. ಆದ್ದರಿಂದ ಎಂ.ಫಿಲ್. ಮಾಡುತ್ತಿರುವ ವಿದ್ಯಾರ್ಥಿಗಳಿಗೆ ರೂ.೮೦೦೦/– ಮತ್ತು ಪಿ. ಹೆಚ್.ಡಿ. ಮಾಡುತ್ತಿರುವ ವಿದ್ಯಾರ್ಥಿಗಳಿಗೆ ರೂ.೧೦,೦೦೦/– ಗಳನ್ನು ಇಲಾಖೆ ವತಿಯಿಂದ ನೀಡಲಾಗುತ್ತದೆ.

❖ ಕಾನೂನು ಪದವೀಧರರಿಗೆ ಶಿಷ್ಯ ವೇತನ: ಪರಿಶಿಷ್ಟ ಪಂಗಡಗಳಿಗೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ಹೆಚ್ಚಿನ ಜ್ಞಾನ ಗಳಿಸಿಕೊಳ್ಳಲು ನೆರವಾಗುವಂತೆ ತರಬೇತಿ ನೀಡಲಾಗುತ್ತಿದೆ. ಈ ತರಬೇತಿಯ ಅವಧಿಯ ನಾಲ್ಕು ವರ್ಷದ್ದಾಗಿದೆ. ತರಬೇತಿಯ ಅವಧಿಯಲ್ಲಿ ತಿಂಗಳಿಗೆ ರೂ.೨೦೦೦/– ದಂತೆ ಶಿಷ್ಯವೇತನ ನೀಡಲಾಗುವುದು. ಅಭ್ಯರ್ಥಿಯ ಪರಿಶಿಷ್ಟ ಪಂಗಡಕ್ಕೆ ಸೇರಿದವನಾಗಿರಬೇಕು ಹಾಗೂ ಕಾನೂನು ಪದವೀಧರರಾಗಿರಬೇಕು.

❖ ಕಾನೂನು ಪದವೀಧರರಿಗೆ ಧನಸಹಾಯ: ಪರಿಶಿಷ್ಟ ಪಂಗಡಕ್ಕೆ ಸೇರಿದ ನಿರುದ್ಯೋಗಿ ಕಾನೂನು ಪದವೀಧರರು ಸ್ವತಂತ್ರವಾಗಿ ವಕೀಲಿ ವೃತ್ತಿಯನ್ನು ಕೈಗೊಳ್ಳಲು ಹಾಗೂ ವಕೀಲರ ಸಂಘದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿಕೊಳ್ಳಲು ನೆರವಾಗುವಂತೆ ರೂ.೫,೦೦೦/–ಗಳ ಧನಸಹಾಯ ನೀಡಲಾಗುತ್ತಿದೆ.

ಹಲವಾರು ಬುಡಕಟ್ಟುಗಳ ಅಭಿವೃದ್ಧಿಗೆ ಸರ್ಕಾರ ಸರ್ವತೋಮುಖ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಆದರೆ ಈ ಕಾರ್ಯಕ್ರಮದಡಿಯಲ್ಲಿ ಉಪಯೋಗವನ್ನು ಪಡೆಯುವುದು ಕೆಲವೇ ಮಂದಿ ಪ್ರಭಾವಿ ಬುಡಕಟ್ಟುಗಳು ಮಾತ್ರ. ಇವುಗಳಲ್ಲಿ ಅರಣ್ಯವಾಸಿ ಸೋಲಿಗರಾಗಲೀ ಅಥವಾ ಇತರೆ ೧೩ ಮೂಲ ಅರಣ್ಯವಾಸಿ ಅಥವಾ ತೀರಾ ಹಿಂದುಳಿದ ಬುಡಕಟ್ಟುಗಳು ಈ ಮೇಲೆ ಹೇಳಿದ ಶಿಕ್ಷಣದ ಸೌಲಭ್ಯಗಳನ್ನು ಪಡೆಯುವಲ್ಲಿ ವಂಚಿತರಾಗಿದ್ದಾರೆ.

ಮುಖ್ಯವಾಗಿ ಸರಕಾರವು ಸೌಲಭ್ಯಗಳನ್ನು ಕೊಡುವಾಗ ಒಟ್ಟು ೫೦ ಬುಡಕಟ್ಟುಗಳ ಹೆಸರಿನಲ್ಲಿ ವಿತರಿಸುತ್ತಿದೆ. ಆದರೆ ತೀರಾ ಹಿಂದುಳಿದಿರುವ ಅರಣ್ಯವಾಸಿ ಬುಡಕಟ್ಟುಗಳು ಶಿಕ್ಷಣದಲ್ಲಿ ಹಿಂದುಳಿದಿರುತ್ತವೆ. ಅವರಿಗೆ ಮೂಲಭೂತ ಪ್ರಾಥಮಿಕ ಶಿಕ್ಷಣದ ಅರಿವಿನ ಕೊರತೆ ಎದ್ದು ಕಾಣುತ್ತದೆ. ಹೀಗಿರುವಾಗ ಅಂತಹ ಬುಡಕಟ್ಟುಗಳಿಗೆ ವಿಶೇಷ ವಾದ ಒತ್ತು ಕೊಡಬೇಕು. ಜೊತೆಗೆ ಇಂತಹ ಮಕ್ಕಳು ಎಸ್.ಎಸ್.ಎಲ್.ಸಿ. ಪಿ.ಯು.ಸಿ. ಬಿ.ಎ. ಬಿ.ಎಸ್ಸಿ. ಎಂ.ಎ. ಎಂ.ಎಸ್ಸಿ., ಇತರೆ ಪದವಿ ಕೋರ್ಸುಗಳಿಗೆ ಹೋಗುವುದೂ ಸಹ ತುಂಬಾ ಸಾಹಸದ ಕೆಲಸ. ಆದುದರಿಂದ ಪ್ರಭಾವಿ ಬುಡಕಟ್ಟುಗಳ ಜೊತೆಯಲ್ಲಿ ಅನುಕೂಲ ಕಲ್ಪಿಸಿಕೊಡುವುದರ ಬದಲು ಇವರಿಗೆ ಬದಲಿ ವಿಶೇಷವಾದ ಸೌಲಭ್ಯಗಳನ್ನು ಕಲ್ಪಿಸಿಕೊಡುವುದರ

ಮೂಲಕ ಶಿಕ್ಷಣದಲ್ಲಿ ಅವಕಾಶ ಕಲ್ಪಿಸಿ ಕೊಡುವುದರ ಮೂಲಕ ಅಭಿವೃದ್ಧಿಯನ್ನು ಶಿಕ್ಷಣದ ಗುರಿಯನ್ನು ಸಾಧಿಸುವುದರ ಮೂಲಕ ಆರ್ಥಿಕ ಸ್ವಾವಲಂಬಿಗಳಾಗಿ ಮಾಡಬಹುದು.

ವೆಂಕಟೇಶ್ ಡಿ. ಯೋಜನಾ ಸಂಯೋಜಕರು, ಸಿ ವಿ ಕೆ, ಬೆಂಗಳೂರು ಇವರು ಸಿದ್ಧಪಡಿಸಿದ ಉಚಿತ ಮತ್ತು ಕಡ್ಡಾಯ ಶಿಕ್ಷಣ ಎಲ್ಲಾ ಮಕ್ಕಳ ಮೂಲಭೂತ ಹಕ್ಕು ಎಂಬ ಮಕ್ಕಳ ಹಕ್ಕುಗಳು, ಹಾಜರಾತಿ ಪ್ರಾಧಿಕಾರ, ಸ್ಥಳೀಯ ಪ್ರಾಧಿಕಾರ, ಎಸ್.ಡಿ.ಎಂ.ಸಿ. ದಾಖಲಾತಿ ಆಂದೋಲನ ಕಾರ್ಯಕ್ರಮಗಳ ಬಗ್ಗೆ ಒಂದು ಸರಳ ಮಾಹಿತಿಯನ್ನು ಕೈಪಿಡಿಯಲ್ಲಿ ವಿವರಿಸಿದ್ದಾರೆ. ೩೧ನೇ ಮಾರ್ಚ್ ೨೦೧೩ ರಂದು 'ದಿ ಹಿಂದೂ' ಪತ್ರಿಕೆ ಶಾಲೆ ಬಿಟ್ಟ ಮಕ್ಕಳಿಗೆ ಸಂಬಂಧಿಸಿದಂತೆ, ಒಂದು ಸುದ್ದಿಯಲ್ಲಿ ೫೪,೦೦೦ ಮಕ್ಕಳು ಕರ್ನಾಟಕದಲ್ಲಿ ಶಾಲೆಯಿಂದ ಹೊರಗುಳಿದಿದ್ದಾರೆಂಬ ಮಾಹಿತಿ ನೀಡಿತ್ತು. ಈ ಪತ್ರಿಕಾ ಪ್ರಕಟಣೆಯನ್ನು ಗಮನಿಸಿದ ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಡಿ.ಎಚ್.ವಘೇಲರವರು ಸ್ವಯಂಪ್ರೇರಿತರಾಗಿ ಸಾರ್ವಜನಿಕ ಹಿತಾಸಕ್ತಿಯಡಿ ಪ್ರಕರಣವನ್ನು ದಾಖಲಿಸಿಕೊಂಡು ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ನೋಟಿಸ್ ಜಾರಿ ಮಾಡಿದರು. ಈ ಸುದ್ದಿಯು ೧ನೇ ಏಪ್ರಿಲ್ ೨೦೧೩ ರಂದು 'ದಿ ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯನ್ನು ಗಮನಿಸಿದ ಸಿವಿಕ್ ಬೆಂಗಳೂರು ಸಂಸ್ಥೆಯು ಪ್ರಕರಣದಲ್ಲಿ ಸೇರಿಕೊಂಡ ಮಕ್ಕಳ ಶಿಕ್ಷಣದ ಸಲುವಾಗಿ ಹಲವಾರು ಕಾನೂನುಗಳ ಮೂಲಕ ಕೆಲಸ ಮಾಡಲು ಮುಂದಾಯಿತು.

**ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು**

- ಈ ಕಾಯಿದೆ ಮತು ನಿಯಮದ ಪ್ರಕಾರ ೬ರಿಂದ ೧೪ರ ವಯೋಮಿತಿಯ ಎಲ್ಲಾ ಮಕ್ಕಳು ತಮ್ಮ ವಾಸಸ್ಥಳದ ಹತ್ತಿರವಿರುವ ಶಾಲೆಯಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಪಡೆಯಬಹುದಾಗಿದೆ(ಸೆಕ್ಷನ್ ೩(೧)).
- ಎಲಿಮೆಂಟರಿ ಶಿಕ್ಷಣ (೧–೮) ವ್ಯಾಪಿಗೆ ಬರುವ ಯಾವುದೇ ಮಗು ಶಿಕ್ಷಣವನ್ನು ಪೂರ್ಣಗೊಳಿಸುವ ಸೌಲಭ್ಯದಿಂದ ವಂಚಿತರನ್ನಾಗಿ ಮಾಡುವ ಯಾವುದೇ ರೀತಿಯ ಶುಲ್ಕವನ್ನು ಪಾವತಿಸಬೇಕಾಗಿಲ್ಲ.
- ದೈಹಿಕ ಆಶಕ್ತತೆಯಿಂದ ಪೀಡಿತರಾದ ಮಕ್ಕಳೂ ಸಹ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಪಡೆಯಲು ಹಕ್ಕನ್ನು ಹೊಂದಿರುತ್ತಾರೆ.
- ೬ ವರ್ಷ ವಯಸ್ಸಿನ ಯಾವುದೇ ಮಗು ಶಾಲೆಗೆ ಸೇರಿಲ್ಲದಿದ್ದರೆ ಅಥವಾ ಸೇರಿದ್ದರೂ ಪ್ರಾಥಮಿಕ ಶಿಕ್ಷಣವನ್ನು ಪೂರೈಸದಿದ್ದಲ್ಲಿ ಅವನ ಅಥವಾ ಅವಳ ವಯಸ್ಸಿಗೆ ಸೂಕ್ತವಾದ ತರಗತಿಗೆ ಸೇರಿಸತಕ್ಕದ್ದು.
- ಯಾವುದಾದರೂ ಒಂದು ಮಗುವನ್ನು ಮೇಲಿನಂತೆ ತನ್ನ ವಯಸ್ಸಿಗೆ ಸೂಕ್ತವಾದ ತರಗತಿಗೆ ನೇರವಾಗಿ ದಾಖಲಾಗಿದ್ದಲ್ಲಿ ಆ ತರಗತಿಯ ಇತರ ಮಕ್ಕಳಿಗೆ ಸರಿಸಮಾನವಾಗಿ ಕಲಿಕೆ ಸಾಧಿಸಲು ಬೇಕಾದ ವಿಶೇಷ ತರಬೇತಿಯನ್ನು ನೀಡಬೇಕು.
- ಮೇಲಿನಂತೆ ಶಾಲೆಗೆ ದಾಖಲಾದ ಮಗುವಿಗೆ ೧೪ ವರ್ಷಗಳ ವಯಸ್ಸನ್ನು ಪೂರೈಸಿದ ನಂತರವೂ ಪ್ರಾಥಮಿಕ ಶಿಕ್ಷಣವನ್ನು ಮುಗಿಯುವವರೆಗೆ ಉಚಿತ ಶಿಕ್ಷಣವನ್ನು ಪಡೆಯುವ ಹಕ್ಕಿರುತ್ತದೆ.

ಈ ಎಲ್ಲಾ ಕಾನೂನುಗಳು ಮತ್ತು ಉಚಿತ ಮತ್ತು ಕಡ್ಡಾಯದ ಶಿಕ್ಷಣದ ಹಕ್ಕುಗಳು ಏನೇ ಇದ್ದರೂ ಸಹ ಅವುಗಳ ಪಾಲನೆ ರೂಢಿಸಿಕೊಳ್ಳುವುದು ಜಾರಿಗೆ ತರುವುದು ಬಹಳ ಮುಖ್ಯ. ಅದರಲ್ಲೂ ಬುಡಕಟ್ಟು ಸಮುದಾಯಗಳ ಮಕ್ಕಳ ಶಿಕ್ಷಣಲ್ಲಿ ಇಂತಹ ಹಕ್ಕುಗಳು ಇದೆಯೇ ಎಂಬುದು ಬಹುಮಂದಿಗೆ ಗೊತ್ತೇ ಇರುವುದಿಲ್ಲ. ಮೊದಲಿಗೆ ಪೋಷಕರಿಗೆ ಇದರ ಬಗ್ಗೆ ಮಾಹಿತಿಯೇ ಇರುವುದಿಲ್ಲ. ಹೀಗಿರುವಾಗ ಇಂತಹ ಶಿಕ್ಷಣದ ಮಟ್ಟದಲ್ಲಿ ಕಡಿಮೆ ಪ್ರಗತಿಯನ್ನು ಕಾಣುವುದನ್ನು ನೋಡಬಹುದಾಗಿದೆ.

ಆದರೂ ಸಹ ಕರ್ನಾಟಕ ದೇಶದ ಮೊಟ್ಟ ಮೊದಲ ಬಾರಿಗೆ ವಿಶ್ವಸಮ್ಮತಿಯ ಮಕ್ಕಳ ಹಕ್ಕುಗಳ ಒಡಂಬಡಿಕೆಯ ಅನುಚ್ಛೇದ ೯(೧), ೧೮(೨), ೧೯, ೨೮ ಮತ್ತು ೩೨ ಹಾಗೂ ೪೬ ಅನ್ವಯ ತಂದೆ ತಾಯಿಯಂದಿರು ಮಕ್ಕಳ ಹಕ್ಕುಗಳನ್ನು ರಕ್ಷಿಸಲು ವಿಫಲರಾದರೆ ಅವರಿಗೆ ಸರ್ಕಾರ ಸೂಕ್ತ ನೆರವು ನೀಡಬೇಕೆಂದು ಹಾಗೂ ನೆರವು ಪಡೆದುಕೊಂಡ ತಂದೆ ತಾಯಿ ಮಕ್ಕಳ ಹಕ್ಕುಗಳನ್ನು ರಕ್ಷಿಸದಿದ್ದಲ್ಲಿ ಸರ್ಕಾರ ಆ ಮಕ್ಕಳ ಜವಾಬ್ದಾರಿಯನ್ನು ಹೊರಬೇಕು ಎನ್ನುವ ತತ್ವವನ್ನು ತನ್ನ ಕಾನೂನಿನಲ್ಲಿ/ನಿಯಮಗಳಲ್ಲಿ ಅಳವಡಿಸಿಕೊಂಡಿದೆ. ಇದರಿಂದ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲು ಹಾಗೂ ಸಮಾಜದಲ್ಲಿ ಸಮಾನತೆಯನ್ನು ತರಲು ಕರ್ನಾಟಕ ಇಡೀ ದೇಶಕ್ಕೆ ಮಾದರಿಯಾಗಿದೆ. ವಿಪರ್ಯಾಸವೆಂದರೆ, ಪ್ರಗತಿಪರ ನಿಯಮಗಳನ್ನು ಅಧಿಕಾರಿಗಳು ಇನ್ನೂ ಸಹ ಗಂಭೀರವಾಗಿ ಅನುಷ್ಠಾನಗೊಳಿಸದಿರುವುದು ಬೇಸರದ ಸಂಗತಿ. ಈ ಅಧಿಕಾರಿ ವರ್ಗವನ್ನು ಎಚ್ಚರಿಸುವುದು ನಾಗರಿಕ ಸಮಾಜದ ಮುಖ್ಯ ಕರ್ತವ್ಯವಾಗಿದೆ ಎಂದು ಕೈಪಿಡಿಯಲ್ಲಿ ತಿಳಿಸಲಾಗಿದೆ (ಪು. ೭, ೮, ೯). ಆದುದರಿಂದ ಸೋಲಿಗರಿಗೆ ಪ್ರಸ್ತುತ ದಿನಗಳಲ್ಲಿ ಬಹಳ ಮುಖ್ಯವಾದುದು. ಮೊದಲು ಅವರಿಗೆ ಪರಿಸರದೊಟ್ಟಿಗೆ ಮಾತೃಭಾಷೆಯಲ್ಲಿ ಶಿಕ್ಷಣವನ್ನು ಕೊಡಬೇಕು. ಮತ್ತು ೧ನೇ ತರಗತಿಯಿಂದ ೧೨ನೇ ತರಗತಿಯವರೆಗೆ ನವೋದಯದ ಮಾದರಿಯಲ್ಲಿ ಶಿಕ್ಷಣವನ್ನು ಕೊಡಬೇಕು ಜೊತೆಗೆ ಪ್ರತಿಯೊಂದು ತಾಲ್ಲೂಕಿಗೆ ಒಂದರಂತೆ ನವೋದಯ ಮಾದರಿಯ ಶಾಲೆಯನ್ನು ಸರಕಾರ ತೆರೆಯಬೇಕು ಅಲ್ಲದೆ ಕಡ್ಡಾಯವಾಗಿ ಮಕ್ಕಳಿಗೆ ಶಿಕ್ಷಣ ಕೊಡುವುದರ ಜೊತೆಗೆ ಮಕ್ಕಳ ತಂದೆ-ತಾಯಿಯರಿಗೂ ಶಿಕ್ಷಣದ ಮಾಹಿತಿ ಅರಿವಿನ ಜಾಗೃತಿಯನ್ನು ಮೂಡಿಸುವುದು. ಶಾಲೆ ಬಿಟ್ಟಿರುವ ಮಕ್ಕಳನ್ನು ಕಡ್ಡಾಯವಾಗಿ ಮನವೊಲಿಸಿ ಶಾಲೆಗೆ ಸೇರಿಸುವುದು. ಎಸ್.ಎಸ್.ಎಲ್.ಸಿ., ಪಿ.ಯು.ಸಿ, ಪದವಿ ಮತ್ತು ಇತರೆ ಯಾವುದೇ ವಿಷಯದಲ್ಲಿ ಓದಿರುವ ಮಕ್ಕಳನ್ನು ಗುರುತಿಸಿ ಪಟ್ಟಿಮಾಡಿ ತರಬೇತಿ ಕೊಡುವುದರ ಮೂಲಕ ಸರಕಾರವೇ ವಿಶೇಷ ಕಾಳಜಿ ವಹಿಸಿ ಹಲವಾರು ಸರಕಾರಿ ಇಲಾಖೆಯಲ್ಲಿ ಇಂತಿಷ್ಟು ಹುದ್ದೆಯನ್ನು ಮೀಸಲಿರಿಸಿ ಈ ಅರಣ್ಯವಾಸಿ ಮಕ್ಕಳಿಗೆ ದೊರಕಿಸಿಕೊಡಬೇಕು. ಇದರಿಂದ ಆರ್ಥಿಕ ಬಲವರ್ಧನೆ ಮಾಡಿದಂತಾಗುತ್ತದೆ, ಹಾಗೆಯೇ ಕಿರಿಯ ಓದುತ್ತಿರುವ ಮಕ್ಕಳಿಗೆ ನಾವು ಓದಿದರೆ ಕೆಲಸ ಸಿಗುತ್ತದೆ ಎನ್ನವ ಭಾವನೆ ಮಕ್ಕಳೂ ಹಾಗು ತಂದೆ-ತಾಯಿಗಳಿಗೂ ಬರುತ್ತದೆ. ಇದರ ಪರಿಣಾಮವಾಗಿ ಸೋಲಿಗರಲ್ಲಿ ಮಕ್ಕಳನ್ನು ನಾವೂ ಸಹ ಓದಿಸಬೇಕು ಎಂದೆನಿಸತೊಡಗುತ್ತದೆ. ಮಕ್ಕಳೂ ಸಹ ಶಾಲೆಗೆ ಉತ್ಸುಕರಾಗಿ ಹೋಗುತ್ತಾರೆ.

ಸೋಲಿಗರು ವಾಸಿಸುವ ಪೋಡು, ಕಾಲೋನಿಗಳಲ್ಲಿ ಮನರಂಜನೆಗಾಗಿ ಅಥವಾ ಪ್ರಾದೇಶಿಕ ಸಮಾಚಾರಗಳನ್ನು ತಿಳಿಯಲು ಎಷ್ಟು ಕುಟುಂಬಗಳಲ್ಲಿ ರೇಡಿಯೋಗಳನ್ನು ಬಳಸುತ್ತಾರೆ ಎಂಬುದರ ಮಾಹಿತಿಯನ್ನು ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಯಿತು. ಅದರಲ್ಲಿ

ಈ ಕೆಳಗಿನಂತೆ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಒಟ್ಟು ಅಧ್ಯಯನದ ಪ್ರಕಾರ ಒಟ್ಟು ೩೨೪ ಕುಟುಂಬಗಳು, ಅವುಗಳಲ್ಲಿ ಜನಸಂಖ್ಯೆ ೧೭೩೦ ಮಹಿಳೆಯರು ೮೬೬, ಪುರುಷರು ೮೬೪ ಇವರುಗಳಲ್ಲಿ ೨೨೪ ಮನೆಗಳಲ್ಲಿ ೧೪೮ ಕುಟುಂಬಗಳಲ್ಲಿ ರೇಡಿಯೋವನ್ನು ಬಳಸುತ್ತಾರೆ ಹಾಗು ೧೭೬ ಕುಟುಂಬಗಳು ರೇಡಿಯೋವನ್ನು ಬಳಸುವುದಿಲ್ಲ. ಒಟ್ಟು ಶೇಕಡ ೪೫.೬೭ರಷ್ಟು ರೇಡಿಯೋ ಬಳಸುವವರಾದರೆ ಶೇಕಡ ೫೪.೩೩ ಎಷ್ಟು ಕುಟುಂಬಗಳಲ್ಲಿ ಬಳಸದೇ ಇರುವುದನ್ನು ತಿಳಿಯಲಾಗಿದೆ.

### ೭.೩. ಜಾಗತೀಕರಣ ಮತ್ತು ಸ್ಥಿತ್ಯಂತರ

ಜಾಗತೀಕರಣ ನಮಗೆ ಅರಿವಿಲ್ಲದಂತೆಯೇ ಆಗುವ ಕ್ರಿಯೆ. ಜನರು ತಮಗೆ ಗೊತ್ತಿಲ್ಲದೆ ಇದ್ದರೂ ಅನೇಕ ವಿಷಯಗಳು ಹಾಗೂ ವ್ಯವಸ್ಥೆಗಳಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುವ ಪ್ರವೃತ್ತಿ ಆಗಿದೆ. ಸಮಾಜದಲ್ಲಿ ಉತ್ಪಾದಿತವಾಗುವ ಜ್ಞಾನ ಹಾಗೂ ವಿಚಾರಗಳು ಅಡೆತಡೆ ಇಲ್ಲದೇ ಪ್ರಪಂಚದಾದ್ಯಂತ ಪ್ರಸಾರವಾಗಿ, ಆಯಾ ರಾಷ್ಟ್ರಗಳ ಜನರು ಅವುಗಳನ್ನು ಅಳವಡಿಸಿಕೊಂಡು ಅವನ್ನು ತಮ್ಮ ಬದುಕಿಗೆ ಒಳ್ಳೆಯದಾಗುವ ರೀತಿಯಲ್ಲಿ ಅತೀ ಬೇಗನೆ ಉಪಯೋಗಿಸಿ ಕೊಳ್ಳುವ ಪ್ರವೃತ್ತಿಗೆ 'ಜಾಗತೀಕರಣ' ಎಂದು ಕರೆಯುತ್ತೇವೆ. ಜಾಗತೀಕರಣದ ಪ್ರಭಾವದಿಂದ ಸೋಲಿಗ ಸಮುದಾಯವೂ ಸಹ ಹೊರತಾಗಿಲ್ಲ. ತಮಗೆ ಅರಿವಿಲ್ಲದಂತೆಯೆ ಜಾಗತೀಕರಣ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ.

ಜಾಗತೀಕರಣದ ಹೆಸರಿನಲ್ಲಿ ಸೋಲಿಗ ಸಮುದಾಯವೂ ಸೇರಿದಂತೆ ಎಲ್ಲಾ ಸಮುದಾಯವು ತಮ್ಮಲ್ಲಿರುವ ಹಳೆಯ ಪದ್ಧತಿಗಳು, ಆಚರಣೆಗಳು ರೂಢಿ ಸಂಪ್ರದಾಯಗಳು, ವಿಧಿ-ವಿಧಾನಗಳನ್ನು ಇನ್ನು ಮುಂತಾದ ಪಾರಂಪರಿಕ ವಿಷಯಗಳನ್ನು ಮತ್ತು ಅದರಿಂದಾಗುವ ಉಪಯೋಗಗಳನ್ನು ಮರೆಯುವುದರ ಜೊತೆಗೆ ವೈಜಾನಿಕವಾಗಿ ತಮ್ಮ ದಿನನಿತ್ಯದ ಕ್ರಿಯೆಯಲ್ಲಿ ತಮಗೆ ಗೊತ್ತಿಲ್ಲದ ಪ್ರಕೃತಿಯಲ್ಲಿ ದೊರೆಯುವ ವಸ್ತುಗಳನ್ನು ಉಪಯೋಗಿಸುತ್ತಿದ್ದಾರೆ. ಸರಳ ಸುಂದರ ಬದುಕನ್ನು ಸಾಗಿಸುತ್ತಿದ್ದ ಸೋಲಿಗ ಸಮುದಾಯವು ಇಂದು ಜಾಗತೀಕರಣದಿಂದ ಅವರ ಪ್ರಕೃತಿದತ್ತವಾದ ಬದುಕಿಗೆ ನಷ್ಟವನ್ನುಂಟುಮಾಡಿ ಸ್ವಚ್ಛಂದ ಬದುಕು ಅನೇಕ ಹೋಳು ಹೋಳಾಗಿ ಇದರ ಲಾಭ ಯಾರಿಗೋ ಮತ್ತು ನಷ್ಟ ಯಾರಿಗೋ ಎಂಬಂತಾಗಿದೆ.

#### ೭.೩.೧. ಸಮೂಹ ಮಾಧ್ಯಮ

೧೯೯೧ರಲ್ಲಿ ಭಾರತ ಸರಕಾರವು ಗ್ಯಾಟ್‌ನ ಒಪ್ಪಂದ ಸಹಿ ಹಾಕಿತ್ತು. ಆ ಸಂದರ್ಭದಲ್ಲಿ ಜಾಗತೀಕರಣ ಎಂದರೆ ಆರ್ಥಿಕತೆಗೆ ಸಂಬಂಧಿಸಿದ ಎಲ್ಲರೂ ಗ್ಯಾಟ್‌ಗೆ ಸಹಿಯನ್ನು ಹಾಕಿದರು. ಆಮೇಲೆ ಎಲ್ಲರೂ ಸದಸ್ಯರಾದರು. ಅಭಿವೃದ್ಧಿಯ ಕಾರ್ಯಕ್ಕೆ ಸಹಾಯಕವಾಗುತ್ತದೆ ಎಂದು ರೈತ ಸಂಘವೂ ಸಹ ಒಪ್ಪಿಗೆ ಕೊಟ್ಟಿತು. ಆಗಿನ ಕಾಲದಲ್ಲಿ ಪ್ರಧಾನಿಯಾಗಿದ್ದ ಪಿ.ವಿ.ನರಸಿಂಹರಾವ್ ಅವರು ಸಹ ಒಪ್ಪಿಗೆ ನೀಡಿದರು. ೨೦ ವರ್ಷಗಳಲ್ಲಿ ಆರ್ಥಿಕತೆಯ ಮೂಲಗಳಲ್ಲಿ ಬದಲಾವಣೆ ಕಾಣತೊಡಗಿತು. ಅದು ಪರ-ವಿರೋಧಗಳ ನಡುವೆ ನಡೆಯುತ್ತದೆ. ನಂತರದ ಅವಧಿಯಲ್ಲಿ Information Technology ಮಾಹಿತಿಯ ತಂತ್ರಜ್ಞಾನ ವ್ಯವಸ್ಥೆಯಿಂದ ಕಾಲ, ಸಮಯ, ಮತ್ತು ದೇಶಗಳನ್ನು ಬಹಳ ಹತ್ತಿರವಾಗಿ ಮಾಡತೊಡಗಿತು. ಅಂದರೆ ಸಮೂಹ ಮಾಧ್ಯಮಗಳಿಂದ ಟೀವಿ, ರೇಡಿಯೋ, ಪತ್ರಿಕೆ ಇತ್ಯಾದಿ ಮಾಧ್ಯಮಗಳು ಸಮಾಜದಲ್ಲಿ ಬಂದುದರಿಂದ ಎಲ್ಲೋ ನಡೆಯುವ ಘಟನೆಗಳು, ವಿಷಯಗಳು ಬಹಳ ಬೇಗ ಜನರಿಗೆ ತಲುಪುವಂತಾಯಿತು.

ಬುಡಕಟ್ಟು ಸಮುದಾಯಗಳನ್ನು ಅವರು ಎಲ್ಲಿ ವಾಸ ಮಾಡುತ್ತಾರೋ ಆ ಸ್ಥಳದಲ್ಲಿಯೇ ಬದುಕಲು ಬಿಡಬೇಕು. ಹಾಗಾದಾಗ ಮಾತ್ರ ಬುಡಕಟ್ಟುಗಳಲ್ಲಿ(Culturual Behavior) ಸಂಸ್ಕೃತಿಯ ನಡಿಗೆ ಬದಲಾಗುವುದಿಲ್ಲ. ಜಾಗತೀಕರಣದಿಂದ ಬುಡಕಟ್ಟುಗಳ ಸಂಸ್ಕೃತಿಗೆ ಧಕ್ಕೆ ಬಂದಿದೆ. ಅವರ ಜೀವನ ಶೈಲಿಗೆ ಹಾನಿಯಾಗುತ್ತದೆ ಹಾಗೂ ಅವರು ಮಾನಸಿಕ ತೊಂದರೆಗೆ ಗುರಿಯಾಗುತ್ತಾರೆ. ಬುಡಕಟ್ಟುಗಳಿಗೆ ಮುಖ್ಯವಾಗಿ ಶಿಕ್ಷಣ ಬೇಕು, ಒಂದು ಪೀಳಿಗೆ ಮುಂದೆ ಬಂದು ಅವರಲ್ಲಿಯೇ ಶಿಕ್ಷಣದ ಕ್ರಾಂತಿ ಉಂಟಾಗುವಂತಾಗಬೇಕು(Revaluation). ಆದರೆ ಅದು ಬುಡಕಟ್ಟುಗಳಲ್ಲಿ ಬಹಳ ನಿಧಾನಗತಿಯಲ್ಲಿ ಆಗುವ ಕ್ರಿಯೆಯಾಗಿದೆ. ಅದರಲ್ಲೂ ಭಾರತದ ಬುಡಕಟ್ಟುಗಳಿಗಿಂತ ಆಫ್ರಿಕಾದ ಬುಡಕಟ್ಟುಗಳು ಇನ್ನೂ ಬಹಳ ಹಿಂದೆ ಇವೆ ಎಂದು ತಿಳಿಯಬಹುದಾಗಿದೆ.

ಜಾಗತೀಕರಣದ ಪರಿಣಾಮ ಸೋಲಿಗರಿಗೆ ಮಾಧ್ಯಮಗಳ ಮೂಲಕ ಆಗಿದೆ ಎಂದರೆ ತಪ್ಪಾಗಲಾರದು. ಹಿಂದಿನ ದಿನಗಳಲ್ಲಿ ಸೋಲಿಗರು ಸಮಯವನ್ನು ನೋಡಲು ಪ್ರಕೃತಿಯಲ್ಲಿ ನಡೆಯುವ ಕ್ರಿಯೆಯಿಂದಲೇ ಕಂಡುಹಿಡಿಯುತ್ತಿದ್ದರು. ಉದಾ: ಅವುಗಳಲ್ಲಿ ಸೂರ್ಯ ಹೊತ್ತು, ಹನ್ನೆರಡು ಗಂಟೆ ರಾಣಿ ಹೂವು, ನೆರಳು, ಪಕ್ಷಿಗಳ ಕೂಗು ಇವುಗಳ ಮೂಲಕ ಸಮಯವನ್ನು ತಿಳಿಯುತ್ತಿದ್ದರು. ಆದರೆ ಇತ್ತೀಚೆಗೆ ಜಾಗತೀಕರಣದ ಪ್ರಭಾವದಿಂದ ಗಡಿಯಾರ, ಟಿ.ವಿ, ಮೊಬೈಲ್ ಇತ್ಯಾದಿ ಮಾಧ್ಯಮಗಳ ಮೂಲಕ ಬಹಳ ಬೇಗ ತಿಳಿಯುತ್ತಾರೆ. ಪರಿಣಾಮವಾಗಿ ಸೋಲಿಗರಲ್ಲಿ ತಮ್ಮ ಹಿರಿಯರು ಅನುಸರಿಸುತ್ತಿದ್ದ ಸಮಯದ ಜ್ಞಾನವನ್ನು ಮರೆಯುತ್ತಿರವುದನ್ನು ಕಾಣಬಹುದಾಗಿದೆ.

ಜಾಗತೀಕರಣದ ಮೂಲಕ ಎಲ್ಲರೂ ಎಲ್ಲಾ ದೇಶಗಳು ಹತ್ತಿರವಾಗುತ್ತಿದೆ. ಜಗತ್ತಿನ ದೊಡ್ಡಣ್ಣನಾದ' ಅಮೇರಿಕಾದಲ್ಲಿಯೇ ಕುಳಿತು ಜಗತ್ತಿನ ಮೂಲೆಮೂಲೆಗೂ ಸಂಪರ್ಕ ಬೆಳೆಸುವಂತಾಯಿತು. ಎಲ್ಲಾ ಆರ್ಥಿಕ ವ್ಯವಸ್ಥೆಯನ್ನು ಅಮೇರಿಕಾಗೆ ಸೇರಿಸಲಾಯಿತು. ಅಮೇರಿಕಾ ಹೇಳಿದಂತೆ ಎಲ್ಲರೂ ಕೇಳುವುದು ರೂಢಿಯಾಯಿತು. ರಾಷ್ಟ್ರ ಉಳ್ಳವರ ಕೈಯಲ್ಲಿ ಆಡಳಿತ ಜಾರಿಗೆ ಬಂದಿತು. ಜಾಗತೀಕರಣದಲ್ಲಿ ಹಣದ ಪ್ರಾಮುಖ್ಯತೆ ಪ್ರಮುಖವಾಯಿತು.

ಮುಖ್ಯವಾಗಿ ನಾವು ಸಾಮಾಜಿಕ ವ್ಯವಸ್ಥೆಯೊಳಗೆ ನೋಡಿದಾಗ ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ನಂತರದ ದಿನಗಳಲ್ಲಿ ಸೋಲಿಗ ಸಮುದಾಯವೂ ಸಹ ಈ ರೀತಿಯ ಪ್ರಭಾವಗಳಿಗೆ ಒಳಗಾಗಿರುವುದನ್ನು ಕಾಣುತ್ತಿದ್ದೇವೆ. ಅಂದರೆ ಅನೇಕ ಮಾಧ್ಯಮಗಳ ಮೂಲಕ ಪ್ರಸಾರವಾಗುವ ಮಾಹಿತಿಗಳನ್ನು ಜಾಹೀರಾತುಗಳನ್ನು ನೋಡುತ್ತಾರೆ ಹಾಗು ಕಲಿಯುತ್ತಾರೆ. ಅವುಗಳನ್ನು ಮಾಡುವುದರ ಜೊತೆಗೆ ಉಪಯೋಗ ಮಾಡಬೇಕು ಎಂದು ಸಮುದಾಯಗಳು ಅರಿಯುವುದು ಕಂಡುಬರುತ್ತದೆ.

ಸಮೂಹ ಮಾಧ್ಯಮದಿಂದ ಸೋಲಿಗರಲ್ಲಿ ಹಲವಾರು ರೀತಿಯಲ್ಲಿ ಬದಲಾವಣೆಯಾಗುತ್ತಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಸೋಲಿಗರು ಅನಾದಿಕಾಲದಿಂದಲೂ ರೂಢಿಸಿಕೊಂಡು ಬಂದಿರುವ ಅದೆಷ್ಟೋ ಪಾರಂಪರಿಕ ಜ್ಞಾನ ವ್ಯವಸ್ಥೆಯನ್ನು ತಿಳಿಯಬಹುದು. ಅವರಲ್ಲಿನ ಆಹಾರ ಪದ್ಧತಿ, ಬೆಳೆ ಸಂಸ್ಕರಣ, ಉತ್ತಮ ಗುಣಮಟ್ಟದ ತಳಿ ಬೇಸಾಯ ಕ್ರಮ, ಅದರಲ್ಲೂ ಮಿಶ್ರಬೇಸಾಯ, ಹಲವು ಮಜಲು ಬೇಸಾಯ, ಕಾಡಿನಲ್ಲಿ ಸಂಗ್ರಹಿಸುತ್ತಿದ್ದ ಆಹಾರ ಕ್ರಮ ಇನ್ನೂ ಹಲವಾರುಗಳನ್ನು ಅವರ

ಜೀವನದಲ್ಲಿ ಕಾಣಬಹುದು. ಆದರೆ ಜಾಗತೀಕರಣದ ಸಮೂಹ ಮಾಧ್ಯಮಗಳ ಪ್ರಭಾವದಿಂದ ಸೋಲಿಗರಲ್ಲಿ ಹಲವಾರು ಈ ರೀತಿಯ ಪದ್ಧತಿಯು ನಶಿಸಿಹೋಗುತ್ತಿದೆ. ಆದುದರಿಂದ ಸರಕಾರವು ಇವುಗಳು ನಶಿಸಿಹೋಗುವುದಕ್ಕಿಂತ ಮೊದಲು ಸಂರಕ್ಷಿಸಿ ಇವುಗಳಿಗೆ ಪ್ರಾಶಸ್ತ್ಯ ನೀಡಿ ಉಳಿಸಿ, ಬೆಳೆಸುವ ಪ್ರಯತ್ನ ಮಾಡಿದರೆ ಇಡೀ ದೇಶಕ್ಕೆ ಹಾಗೂ ಮಾನವ ಜನಾಂಗಕ್ಕೆ ಅನುಕೂಲವಾಗುತ್ತದೆ.

ಸೋಲಿಗರು ಅಡುಗೆ ಮಾಡುವ ಗ್ಯಾಸ್ ಇದರ ಬಗ್ಗೆ ಮಾತನಾಡುತ್ತಾ ಹೀಗೆ ಹೇಳುತ್ತಾರೆ. "ನಮಗೂವೆ ಗ್ಯಾಸ್ ಸಿಲಿಂಡರ್ ಬೇಕು. ಇತ್ತೀಚೆಗೆ ಕಾಡಿನ ಸೌದೆ ಸಿಗುವುದು ಕಷ್ಟದ ಕೆಲಸ ಹಾಗೂ ಮಳೆಗಾಲದಲ್ಲಿ ನಮಗಾವೆ ತುಂಬಾ ತೊಂದರೆ. ಆದುದರಿಂದ ಗ್ಯಾಸ್ ಬೇಕು ಎಂದು ಹೇಳುತ್ತಾರೆ." ಆದರೆ ಅರಣ್ಯ ಇಲಾಖೆಯವರು ಕೊಟ್ಟಿರುವ ಗ್ಯಾಸ್ ಬಗ್ಗೆ ಕೇಳಿದಾಗ "ಹೋಗವ್ವಾ ನಾವು ಎಷ್ಟೇ ಕಷ್ಟ ಬಂದರೂ ಸಹ ಆ ಗ್ಯಾಸ್ ಅನ್ನು ಉಪಯೋಗಿಸುವುದಿಲ್ಲಾ. ಒಂದು ಸಲ ಟಿ.ವಿ.ಯಲ್ಲಿ ನೋಡಿದಾಗ ಒಬ್ಬ ಹೆಂಗಸು ಗ್ಯಾಸ್ ಸಿಲಿಂಡರ್ ಸಿಡಿದು ಕರಕಲಾಗಿ ಸುಟ್ಟುಹೋಗಿದ್ದಳು ಅದನ್ನು ನೋಡಿ ನನಗೂ ಭಯವಾಯಿತು. ಈ ಅರಣ್ಯ ಇಲಾಖೆಯವರು ನಮ್ಮನ್ನೆಲ್ಲಾ ಈ ರೀತಿಯಲ್ಲಿ ಸುಟ್ಟು ಹೋಗಲಿ ಎಂದು ಗ್ಯಾಸ್ ಕೊಟ್ಟಿದ್ದಾರೆ. ಸೋಲಿಗರು ನಾಶವಾಗಲಿ ಎಂದು ನಮ್ಮನ್ನು ಕಾಡು ಬಿಟ್ಟು ದೂರ ಹೋಗಲಿ ಇಲ್ಲ ಇವರು ಗ್ಯಾಸು ಸಿಡಿದು ಎಲ್ಲರೂ ನಾಶವಾಗಲಿ ಎಂದು ನವಗೆಲ್ಲಾ (ನಮಗೆಲ್ಲ) ಈ ರೀತಿಯಲ್ಲಿ ಮಾಡುತ್ತಿರುವ ಪ್ಲಾನು, ನಾನು ಮಾತ್ರ ಸೌದೆ ಒಲೆಯಲ್ಲಿಯೇ ಹಿಟ್ಟು, ಉದುಕ ಬೇಯಿಸಿ ತಿಂತ್ತೀನಿ. ಈ ಗ್ಯಾಸ್ ಸಿಲಿಂಡರ್ ಅನ್ನು ಯಾರಿಗೂ ಕಾಣಬಾರದು ಎಂದು ಮನೆಯ ಹಿತ್ತಲಿನಲ್ಲಿ ಆಳವಾಗಿ ಗುಂಡಿ ತೆಗೆದು ಹೂತಾಕಿದ್ದೇನೆ" ಎಂದು ತಿಳಿಸಿದರು.

ಇಲ್ಲಿ ಮುಖ್ಯವಾಗಿ ಒಂದು ಕಡೆ ಮಾಧ್ಯಮದ ಪ್ರಭಾವ ಸೋಲಿಗರ ಯುವಕ-ಯುವತಿಯರಲ್ಲಿ ಅದರಲ್ಲೂ ಶಿಕ್ಷಣ ಕಲಿತಿರುವವರಲ್ಲಿ, ಕಲಿಯದವರಲ್ಲಿ ಮಕ್ಕಳು, ಮಹಿಳೆಯರು, ಪುರುಷರು ಎಲ್ಲರಾದಿಯಾಗಿ ಪರಿಣಾಮ ಹೆಚ್ಚಾಗಿ ಬೀರುತ್ತಿದೆ. ಮತ್ತೊಂದು ಕಡೆ ತೀರಾ ಹಿಂದುಳಿದ ಕಾಡಿನಹೊಳಗೆ ವಾಸಿಸುತ್ತಿರುವ, ಅದರಲ್ಲೂ ವಯಸ್ಸಾದವರಲ್ಲಿ, ಶಿಕ್ಷಣದ ಅಂದರೆ ಓದು-ಬರಹದ ಜ್ಞಾನ ಬಾರದವರು ಈ ರೀತಿಯ ಮಾಧ್ಯಮದ ಜ್ಞಾನವನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳುವಲ್ಲಿ ಇನ್ನೂ ಪ್ರಸ್ತುತದಲ್ಲಿಯೂ ಸಹ ಹಿಂಜರಿಯುವುದನ್ನು ನೋಡಬಹುದಾಗಿದೆ. ಕಾಡಿನ ಪರಿಸರದಲ್ಲಿ ಇನ್ನೂ ಅರಣ್ಯ ಇಲಾಖೆಯವರ ಮೇಲಿನ ಅನುಮಾನವನ್ನು ಗಮನಿಸಬಹುದು.

ಪ್ರಾಕೃತಿಕ ಸಂಪತ್ತು ಉತ್ತರಕ್ಕಿಂತ ದಕ್ಷಿಣದ ಕಡೆಗಳಲ್ಲಿ ಹೆಚ್ಚಾಗಿದೆ ಹಾಗೂ ಜಾಗತೀಕರಣ ಪ್ರಭಾವದಿಂದ ಬುಡಕಟ್ಟುಗಳನ್ನು ನೋಡುವ ಮನೋಭಾವ ಬದಲಾಗಿದೆ. ಇದರಿಂದ ಸೋಲಿಗ ಸಮುದಾಯವು ತಮ್ಮದಲ್ಲದ ಜೀವನ ಶೈಲಿ, ಆಹಾರ ಕ್ರಮ, ಸಂಸ್ಕೃತಿಗೆ ಕೆಲವು ಕಡೆ ಬಲವಂತವಾಗಿ ಸೇರಿಕೊಳ್ಳುವ ಮತ್ತೊಂದು ಕಡೆ ಪರಿಸ್ಥಿತಿಗೆ ತಕ್ಕಹಾಗೆ, ಕೆಲವರು ಇಷ್ಟ ಇಲ್ಲದಿದ್ದರೂ, ಕಷ್ಟದಿಂದ ಇಷ್ಟಪಟ್ಟು ಸೇರಿಕೊಳ್ಳುವ ಪ್ರವೃತ್ತಿಯು ನಡೆಯುತ್ತಿದೆ.

ಸೋಲಿಗರ ಬುಡಕಟ್ಟು ಸ್ಥಿತಿಗತಿಗಳಿಗೆ ಇಟ್ಟು ಹೋಲಿಕೆ ಮಾಡಿದಾಗ ಪ್ರತಿಯೊಂದು ಸಮುದಾಯ, ಸಮಾಜ, ರಾಷ್ಟ್ರ, ದೇಶಗಳಲ್ಲಿಯೂ ನೈತಿಕತೆಯಲ್ಲಿ ಅದೊಂದು ಸಾಮಾಜಿಕ ಅಂಶವನ್ನು ಮನಗಾಣ ಬಹುದು. ಮೊದಲನೆಯ ಅಂಶದಲ್ಲಿ ಜಾಗತೀಕರಣ ಪ್ರಕ್ರಿಯೆಯಲ್ಲಿ ಸೋಲಿಗರು ತಮಗೆ ಗೊತ್ತೊ-

ಗೊತ್ತಿಲ್ಲದ ರೀತಿಯಲ್ಲಿ ತಮಗೆ ಅರಿವಿಲ್ಲದಂತೆಯೇ ಜಾಗತೀಕರಣದ ಪ್ರಕ್ರಿಯೆಯಲ್ಲಿ ಸೇರಿಕೊಂಡಿರುತ್ತಾರೆ. ಅದರಲ್ಲೂ ಆರ್ಥಿಕತೆ ಮುಖ್ಯ ಬೆಳವಣಿಗೆಯಲ್ಲಿ ಮಾಧ್ಯಮಗಳ ಬಹುಪ್ರಭಾವದಿಂದ ಒಳ್ಳೆಯ ಪರಿಣಾಮಗಳ ಜೊತೆಗೆ ಹೆಚ್ಚು ಕೆಟ್ಟ ಪರಿಣಾಮಗಳನ್ನು ರೂಢಿಸಿಕೊಳ್ಳುವುದರ ಜೊತೆಗೆ ಸಮುದಾಯದ ಅಭಿವೃದ್ಧಿಗೆ ತೊಡಕಾಗುತ್ತದೆ ಎಂದು ಹೇಳಬಹುದು.

ಯಜಮಾನಿಕ ಸ್ಥಾನ (ಡಾಮಿನೆಂಟ್ ಪೊಸಿಷನ್) ಎಂಬುದು ಬುಡಕಟ್ಟುಗಳಲ್ಲಿ ಬಹಳ ಪ್ರಭಾವವನ್ನು ಬೀರುತ್ತದೆ. ಇದು ಸೋಲಿಗರಲ್ಲಿಯೂ ಸಹ ಕಂಡುಬರುತ್ತದೆ. ಮೊದಲನೆಯದಾಗಿ ಇಡೀ ದೇಶದಲ್ಲಿ ಕೊನೆಯ ಸ್ಥಾನ ಬುಡಕಟ್ಟುಗಳಿಗೆ. ಅದೇ ರೀತಿಯಲ್ಲಿ ಬಡಬುಡಕಟ್ಟುಗಳು ಇರುವ ಸ್ಥಳಗಳ ಅಭಿವೃದ್ಧಿಯಲ್ಲಿ ಇತರರು ಹೆಚ್ಚು ಇರುವ ರಾಜ್ಯಗಳು ಅಭಿವೃದ್ಧಿ ಉತ್ತಮವಾಗಿರುತ್ತದೆ ಹಾಗೂ ಬೇಗನೇ ಆಗುತ್ತಿರುತ್ತದೆ. ಸೋಲಿಗರಲ್ಲಿಯೇ ಆಯಾಯ ಸಮುದಾಯದವರಲ್ಲಿ ಹಿಂದೆ ಆ ಕುಟುಂಬದಲ್ಲಿ ತಾಯಿ ಯಜಮಾನಿಯಾಗಿ ಇರುತ್ತಿದ್ದರು. ಆದರೆ ಇತ್ತೀಚೆಗೆ ಸಮುದಾಯದಲ್ಲಿ, ಸಮುದಾಯದ ಸಂಘಟನೆಯಲ್ಲಿ ಓಡಾಡಿ ಕೆಲಸ ಮಾಡುವವರು, ಸಮುದಾಯದ ಮುಂದಾಳತ್ವ ವಹಿಸುವವರು, ಹೆಚ್ಚಿನ ಶಿಕ್ಷಣ ಪಡೆದಿರುವವರು ಸಮುದಾಯದಲ್ಲಿ ತಮ್ಮಡಿ(ಗುಡ್ಡಪ್ಪ) ಯಜಮಾನ– ಹೀಗೆ ಇವರು ಯಜಮಾನಿಕೆ ಅಥವಾ ಡಾಮಿನೆಂಟ್ ಆಗಿರುತ್ತಾರೆ.

### ೭.೩.೨. ಜಾಗತೀಕರಣ ಮತ್ತು ಬದಲಾವಣೆ

ಆದರೆ ಕಾಲ ಬದಲಾದಂತೆ ಜಾಗತೀಕರಣ ಮಾಧ್ಯಮಗಳ ಪ್ರಭಾವದಿಂದ ಇತ್ತೀಚೆಗೆ ಈ ರೀತಿಯ ಪ್ರಬಲ ವರ್ಗದವರಲ್ಲಿ(ಡಾಮಿನೆಂಟ್) ಬದಲಾವಣೆಗಳಾಗಿವೆ. ಅವುಗಳೆಂದರೆ,

- ಕುಟುಂಬದಲ್ಲಿ ಗಂಡ ಅಥವಾ ಹೆಂಡತಿ
- ಸಮುದಾಯದಲ್ಲಿ ಮುಖ್ಯವಾಗಿ ಹೋರಾಟ, ಸಂಘಟನೆ ಮನೋಭಾವವನ್ನಿಟ್ಟುಕೊಂಡಿರುವವರು, ಎಲ್ಲಾ ಕಛೇರಿಗಳಿಗೆ ಸಮುದಾಯದ ಪರವಾದ ಹಾಗೂ ವೈಯಕ್ತಿಕ ಕೆಲಸಗಳಿಗೆ ಹೋಗಿ ಬರುವವರು ಸೋಲಿಗರಲ್ಲಿಯೇ ಡಾಮಿನೆಂಟ್ ಆಗಿರುತ್ತಾರೆ.
- ಹೊರ–ಜನರ ಒಡನಾಟ, ಸಂಪರ್ಕವನ್ನಿಟ್ಟುಕೊಂಡವರು ಹೆಚ್ಚು ಡಾಮಿನೆಂಟ್ ಆಗಿರುತ್ತಾರೆ.
- ರಾಜಕೀಯ ವ್ಯಕ್ತಿಗಳ ಪರಿಚಯ, ಸಂಪರ್ಕ, ಮಾತುಗಾರಿಕೆ, ಚಾಣಾಕ್ಷತನ ಬುದ್ಧಿ ಇತ್ಯಾದಿಯನ್ನು ರೂಢಿಸಿಕೊಂಡಿರುವವರು ಡಾಮಿನೆಂಟ್ ಆಗಿರುತ್ತಾರೆ.
- ಶಿಕ್ಷಣ ಕಲಿತರುವವರು, ಸಮುದಾಯದಲ್ಲಿ ಒಡನಾಟ ಇಟ್ಟುಕೊಂಡವರು, ಸ್ಥಳೀಯ ಸಂಘ–ಸಂಸ್ಥೆಗಳವರು, ಸರಕಾರಿ ಅಧಿಕಾರಿ, ಸರಕಾರಿ ಕಛೇರಿಗಳ ಸಂಪರ್ಕ ಇಟ್ಟುಕೊಂಡವರು, ಡಾಮಿನೆಂಟ್ ಆಗಿರುತ್ತಾರೆ.
- ಸೋಲಿಗ ಸಮುದಾಯದಲ್ಲಿ ಸ್ವಲ್ಪ ಜಮೀನು ಅಂದರೆ ೫ ಎಕರೆ ಮೇಲ್ಪಟ್ಟು ಹೊಂದಿ ಹಣದ ವ್ಯವಹಾರ ಚೆನ್ನಾಗಿದ್ದು, ಅದರಲ್ಲೂ ಕೆಲವರು ತೋಟವನ್ನು ಹೊಂದಿರುವವರು ಡಾಮಿನೆಂಟ್ ಆಗಿರುತ್ತಾರೆ.
- ಬಲವಾದ ಮಾಟ–ಮಂತ್ರ ವಿದ್ಯೆಯನ್ನು ಮಾಡುತ್ತಿರುವವರು, ಸಮುದಾಯದಲ್ಲಿ ಕಾಯಿಲೆ–ಕಸಾಲೆಗಳಿಗೆ ಔಷಧಿಯನ್ನು ಕೊಡುವವರು, ನಾವು ಡಾಮಿನೆಂಟ್ ಎನ್ನುತ್ತಾರೆ.
- ತಮ್ಮಡಿ, ಗುಡ್ಡಪ್ಪ, ದೇವರುಕರೆಯುವವರು ಸಮುದಾಯದಲ್ಲಿ ಡಾಮಿನೆಂಟ್ ಆಗಿರುತ್ತಾರೆ

ಸೋಲಿಗರಲ್ಲಿಯೇ ಪ್ರಬಲರು ಮತ್ತು ದುರ್ಬಲರು ಎಂಬುದನ್ನು ಕಾಣುತ್ತೇವೆ. ಕೆಲವರು ಮಾತ್ರ ಸರಕಾರದ ಸವಲತ್ತುಗಳನ್ನು ಪಡೆದು ಮುಂದೆ ಹೋಗುತ್ತಿದ್ದರೆ, ಇನ್ನೂ ಅದೆಷ್ಟೋ ಮಂದಿಗೆ ಸೌಲಭ್ಯಗಳ ಬಗ್ಗೆ ಮಾಹಿತಿಯೇ ಇರುವುದಿಲ್ಲ. ಇದರಿಂದ ಮುಂದೆ ಹೋಗುವವರು ಹೋಗುತ್ತಾರೆ ಹಿಂದೆ ಉಳಿಯುವವರು ಹಿಂದೆಯೇ ಉಳಿಯುತ್ತಾರೆ. ಇಲ್ಲಿ ಮುಖ್ಯವಾಗಿ ಸರಕಾರವಾಗಲೀ, ಸಂಘ-ಸಂಸ್ಥೆಗಳಾಗಲಿ ತಳ ಸಮುದಾಯದಲ್ಲಿರುವವರಿಗೆ ಮೊದಲ ಆದ್ಯತೆಯನ್ನು ನೀಡಬೇಕು. ಯಾವುದೇ ಮಾಹಿತಿಯನ್ನು, ಸೌಲಭ್ಯವನ್ನು ತಳ ಸಮುದಾಯದಲ್ಲಿರುವವರಿಗೆ ಮುಟ್ಟಿಸಬೇಕು. ಶಿಕ್ಷಣದ ಮಟ್ಟವನ್ನು ಸುಧಾರಿಸಬೇಕು. ತಳಸಮುದಾಯದವರಿಗೆ ಯೋಜನೆ ರೂಪಿಸುವಾಗ ಅವರಿಂದಲೇ ಯೋಜನೆಯನ್ನು ರೂಪಿಸಬೇಕು. ಸಮುದಾದಲ್ಲಿ ಡಾಮಿನೆಂಟ್ ಆಗಿರುವವರು ಮೊದಲು ಕೆಳಗಿರುವ ಸಮುದಾಯದ ವ್ಯಕ್ತಿ ಅಥವಾ ಯಾರು ವಂಚಿತರಾಗಿರುತ್ತಾರೋ, ಯಾರಿಗೆ ಸೌಲಭ್ಯ ಸಿಗುತ್ತಿಲ್ಲವೋ ಅಂಥವರ ಬಗ್ಗೆ ಗಮನಹರಿಸಬೇಕು. ಅವರನ್ನು ಮೊದಲು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು.

**ಟಿ.ವಿ. ಮಾಧ್ಯಮ(ಟೆಲಿವಿಷನ್)**

ಸಾಮಾನ್ಯವಾಗಿ ಸೋಲಿಗರು ಪೋಡು, ಕಾಲೋನಿಗಳಲ್ಲಿ ೧೯೮೦ರ ಆಸುಪಾಸು ಹಾಗೂ ೧೯೯೫ರ ಒಳಗೆ ಸೋಲಿಗರು ಟಿ.ವಿ.ಯನ್ನು ಸಾಮೂಹಿಕವಾಗಿ ಮನೆ, ಮನೆಗೂ. ೫೦/-, ೧೦೦/- ಸಂಗ್ರಹಿಸಿ ಒಟ್ಟಿಗೆ ಕೂಡಿಹಾಕಿ ಪಟ್ಟಣದಿಂದ ಟಿ.ವಿ.ಯವರನ್ನು ಕರೆದುಕೊಂಡು ಬಂದು ನಡುಬೀದಿಯಲ್ಲಿ ರಾತ್ರಿ ೭ರಿಂದ ೮ ಗಂಟೆಗೆ ಪ್ರಾರಂಭವಾದರೆ ಬೆಳಿಗ್ಗೆ ೬ ಗಂಟೆ ಸುಮಾರಿಗೆ ಬೀದಿಯಲ್ಲಿಯೇ ಪುರುಷರು, ಮಹಿಳೆಯರು, ಗಂಡುಮಕ್ಕಳು, ಹೆಣ್ಣುಮಕ್ಕಳು ಎಲ್ಲರೂ ಕುಳಿತುಕೊಂಡು ನೋಡಿ ಸಂತೋಷ ಪಡುತ್ತಿದ್ದರು.

**ಕೋಷ್ಟಕ ೭.೩.೨.೧. ಸೋಲಿಗರಲ್ಲಿ ಟಿ.ವಿ. ಬಳಸುವವರ ಹಾಗೂ ಬಳಸದೇ ಇರುವವರ ವಿವರ**

| | | | |
|---|---|---|---|
| ೧ | ಟಿ.ವಿ ಇರುವವರು | ೭೨ | ೨೨.೨೩ |
| ೨ | ಟಿ.ವಿ ಇಲ್ಲದವರು | ೨೫೨ | ೭೭.೭೭ |
| | ಒಟ್ಟು | ೩೨೪ | ೧೦೦ |

**ಲಂಬಚಿತ್ರ ೭.೩.೨.೧. ಟಿ.ವಿ. ಬಳಸುವವರ ಹಾಗೂ ಬಳಸದೇ ಇರುವವರು**



ಇತ್ತೀಚೆಗೆ ಒಂದು ಕಾಲೋನಿ/ಪೋಡಿನಲ್ಲಿ ೧೦೦ ಕುಟುಂಬಗಳಿದ್ದರೆ, ಅವುಗಳಲ್ಲಿ ಸುಮಾರು ೧೦ ರಿಂದ ೨೦ ಮನೆಗಳಲ್ಲಿ ಟಿ.ವಿ.ಯನ್ನು ಅಳವಡಿಸಿಕೊಂಡಿದ್ದಾರೆ. ಉಳಿದವರು ಯಾರ ಮನೆಯಲ್ಲಿ ಟಿ.ವಿ. ಇದೆಯೋ ಅಂತಹವರ ಮನೆಗೆ ಹೋಗಿ ಟಿ.ವಿ.ಯ ವೀಕ್ಷಣೆ ಮಾಡುತ್ತಾರೆ. ಆದರೆ ಇತ್ತೀಚೆಗೆ ಸೋಲಿಗರಲ್ಲಿ ಹುಡುಗರು, ಹುಡುಗಿಯರು ಪುರುಷರು, ಮಹಿಳೆಯರು, ಮಕ್ಕಳು ಥೀಯೆಟರಿಗೆ ಹೋಗಿ ಹಣವನ್ನು ಕೊಟ್ಟು ಚಲನಚಿತ್ರವನ್ನು ನೋಡುತ್ತಾರೆ. ಸಾಮಾನ್ಯವಾಗಿ ಸೋಲಿಗರ ಮಕ್ಕಳು ಗಂಡು-ಹೆಣ್ಣು ಮಕ್ಕಳು, ಮಹಿಳೆಯರು-ಪುರುಷರು ಟಿ.ವಿ.ಯನ್ನು ನೋಡುವುದು ಫಿಲಂ(ಪಿಕ್ಚರ್). ಮೊದಲ ಪ್ರಾಶಸ್ತ್ಯ. ಇವರು ತುಂಬಾ ಕಡಿಮೆ, ನ್ಯೂಸ್‌ಗಳನ್ನು, ಪ್ರಾದೇಶಿಕ ಸುದ್ದಿ ಸಮಾಚಾರಗಳನ್ನು ಹೆಚ್ಚು ನೋಡುವುದಿಲ್ಲ. ಇತ್ತೀಚೆಗೆ ಸೀರಿಯಲ್‌ಗಳನ್ನೂ ಸಹ ಹೆಚ್ಚಾಗಿ ಮಹಿಳೆಯರು ನೋಡಲು ಪ್ರಾರಂಭಿಸಿದ್ದಾರೆ. ಟಿ.ವಿ.ಯಲ್ಲಿ ಬರುವ ಆರೋಗ್ಯ ಔಷಧಿಗಳು, ಸೌಂದರ್ಯವರ್ಧಕಗಳು, ಬಟ್ಟೆ, ಉಡುಗೆ-ತೊಡುಗೆ, ಜೀವನ ಶೈಲಿ, ಮನೆಯ ವಸ್ತುಗಳು ಇತ್ಯಾದಿಗಳನ್ನು ಹೆಚ್ಚು ಅಳವಡಿಸಿಕೊಳ್ಳುತ್ತಿದ್ದಾರೆ. ಟೀವಿ ವೀಕ್ಷಿಸುವುದು ಇತ್ತೀಚೆಗೆ ಸೋಲಿಗರಲ್ಲಿ ಹೆಚ್ಚಾಗಿದೆ. ಶಾಲೆ ಬಿಟ್ಟ ಮಕ್ಕಳು ಶಾಲೆಗೆ ಹೋಗುತ್ತಿರುವ ಮಕ್ಕಳಿಂದ ಹಿಡಿದು ವಯಸ್ಸಾದವರವರೆಗೆ ಟಿವಿಯನ್ನು ಬಹಳ ಉತ್ಸುಕರಾಗಿ ನೋಡುತ್ತಾರೆ. ತಮ್ಮದಲ್ಲದ ಹೊಸ ಹೊಸ ವಿಷಯಗಳನ್ನು ನೋಡಿ ಕೇಳಿ ಅದನ್ನು ಅನುಸರಿಸುವುದನ್ನು ಕಾಣಬಹುದಾಗಿದೆ.

### ೭.೯.೨. ರೇಡಿಯೋ

ಮೊದಮೊದಲು ಸೋಲಿಗರು ತಾವು ಕೆಲಸ ಮಾಡುವ ಸ್ಥಳಗಳಲ್ಲಿ, ತೋಟಗಳಲ್ಲಿ ಹೊಲ ಗದ್ದೆಗಳಲ್ಲಿ, ಎಸ್ಟೇಟ್‌ಗಳಲ್ಲಿ ರೇಡಿಯೋವನ್ನು ಕೇಳುತ್ತಿದ್ದರು. ಪೋಡುಗಳಲ್ಲಿ ಮೊದಲಿಗೆ ತಮ್ಮ ಕೆಲಸವನ್ನು ಮುಗಿಸಿ ನಾಡವರ ಮನೆಯ ಹತ್ತಿರ, ಅಂಗಡಿಯ ಹತ್ತಿರ ಸೋಲಿಗ ಪುರುಷರು ಮತ್ತು ಮಕ್ಕಳು ಕುಳಿತುಕೊಂಡು ರೇಡಿಯೋದಲ್ಲಿ ಬರುವ ವಾರ್ತಾ, ಹಾಡು ಇತ್ಯಾದಿ ಕಾರ್ಯಕ್ರಮವನ್ನು ಕೇಳುತ್ತಿದ್ದರು. ಸೋಲಿಗರಲ್ಲಿ ರೇಡಿಯೋ ಮಾಧ್ಯಮವು ಸುಮಾರು ೧೯೬೫ರಿಂದ ೧೯೮೫ರ ಸುಮಾರಿಗೆ ಹೆಚ್ಚು ಕೆಲವರಿಗೆ ಮಾತ್ರ ಪರಿಚಯವಿತ್ತು. ಒಂದು ಪೋಡು/ಕಾಲೋನಿಯಲ್ಲಿ ಕೆಲವು ೩-೪ ಮಂದಿ ಮಾತ್ರ ಇಟ್ಟುಕೊಳ್ಳುತ್ತಿದ್ದರು. ರೇಡಿಯೋವನ್ನು ಹಾಕಿದಾಗ ಅದರ ಸುತ್ತಲೂ ಕುಳಿತುಕೊಂಡು 'ಕಿಚ್ಚಿನ' (ಬೆಂಕಿಗುಳಿಯ ಮಧ್ಯ) ಸುತ್ತಲೂ ಕುಳಿತುಕೊಂಡು ಹಾಡು ಅಥವಾ ವಾರ್ತಾಪ್ರಸಾರವನ್ನು ಕೇಳುತ್ತಿದ್ದರು. ರೇಡಿಯೋ ಮಾಧ್ಯಮವನ್ನು ಯಾರೋ ಒಬ್ಬೊಬ್ಬರು ಅಲ್ಲಲ್ಲಿ ಸೋಲಿಗರು ಉಪಯೋಗಿಸುತ್ತಿದ್ದರು.

### ಮೊಬೈಲ್

ಸೋಲಿಗರಲ್ಲಿ ಮೊಬೈಲ್ ಸಂಸ್ಕೃತಿಯು ಅತೀ ವೇಗವಾಗಿ ಪ್ರತಿಯೊಂದು ಮನೆಯಲ್ಲಿಯೂ ಅದರಲ್ಲಿಯೂ ಶಿಕ್ಷಣ ಕಲಿತವರು, ಕಲಿಯದವರು, ಮಹಿಳೆಯರು ಪುರುಷರುಗಳ ಕೈಯಲ್ಲಿ ಇರುವುದು ವಾಡಿಕೆ.

ಕೋಷ್ಟಕ ೭.೩.೨.೨. ಸೋಲಿಗರಲ್ಲಿ ಮೊಬೈಲ್ ಹೊಂದಿರುವವರು ಮತ್ತು ಇಲ್ಲದಿರುವವರ ವಿವರ

| | | | |
|---|---|---|---|
| ೧ | ಮೊಬೈಲ್ ಹೊಂದಿದವರು | ೯೮ | ೩೦.೨೪ |
| ೨ | ಮೊಬೈಲ್ ಇಲ್ಲದವರು | ೨೨೬ | ೬೯.೭೬ |
| | ಒಟ್ಟು | ೩೨೪ | ೧೦೦.೦೦ |

ಲಂಬಚಿತ್ರ ೭.೩.೨.೨. ಮೊಬೈಲ್ ಹೊಂದಿರುವವರು ಮತ್ತು ಇಲ್ಲದಿರುವವರು




ಮೊಬೈಲ್ ಮೂಲಕ ಓದಿರುವವರು ಮಾತ್ರ ಮೆಸೇಜ್, ವಾಟ್ಸಪ್ ಇತ್ಯಾದಿಗಳನ್ನು ಬಳಸುತ್ತಾರೆ. ಆದರೆ ಹೆಚ್ಚು ಮಂದಿ ಒಬ್ಬರಿಂದ ಮತ್ತೊಬ್ಬರಿಗೆ ಫೋನ್ ಮೂಲಕ ವಿಷಯ ತಿಳಿಸಲು, ಮಾತನಾಡಲು, ವ್ಯವಹರಿಸಲು ಮಾತ್ರ ಫೋನ್ ಉಪಯೋಗಿಸುತ್ತಾರೆ.

**ಜಾಗತೀಕರಣದ ಒಳ್ಳೆಯ ಪರಿಣಾಮಗಳೆಂದರೆ**

ಸೋಲಿಗರಲ್ಲಿ ಮಾಧ್ಯಮಗಳ ಮೂಲಕ ದೊರಕುವ ಒಳ್ಳೆಯ ಪರಿಣಾಮವೂ ಕಡಿಮೆ ಆದರೂ ಸಹ ಕೆಲವೊಂದು ಒಳ್ಳೆಯ ಪರಿಣಾಮಗಳನ್ನು ಗುರುತಿಸಬಹುದಾಗಿದೆ.

- ಕೆಲವು ಸೀರಿಯಲ್, ಸಿನಿಮಾ ಇತ್ಯಾದಿಗಳನ್ನು ನೋಡುವುದರ ಮೂಲಕ ಸೋಲಿಗರು ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿಗೆ ಮದುವೆ ಮಾಡಿಸಬಾರದು ಎಂದು ಕೆಲವರು ತಿಳಿದಿರುತ್ತಾರೆ.
- ಮದುವೆಯ ವಯಸ್ಸು ಗಂಡು ಮತ್ತು ಹೆಣ್ಣಿಗೆ ಇಂತಿಷ್ಟು ಇರಬೇಕು ಅಂದರೆ, ಹುಡುಗಿಗೆ ೧೮ ವರ್ಷ ತುಂಬಿರಬೇಕು, ಹುಡುಗನಿಗೆ ೨೧ ವರ್ಷ ಆಗಿರಬೇಕು ಎಂದು ತಿಳಿದಿರುತ್ತಾರೆ.
- ತಮ್ಮ ಮಕ್ಕಳನ್ನು ಮದುವೆ ಮಾಡದೆ ಶಾಲೆಗೆ ಕಳುಹಿಸಬೇಕು ಎಂದು ತಿಳಿದು ಕೆಲವು ಓದಿರುವ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಲು ಮುಂದೆ ಬರುತ್ತಾರೆ.
- ತಮ್ಮ ಮಕ್ಕಳಿಗೆ ತಾವು ಕೂಲಿ ಮಾಡಿ ಬಂದ ಹಣದಿಂದ ಕಾಲಿಗೆ ಶೂ, ಚಪ್ಪಲಿ, ಬಟ್ಟೆ ಇತ್ಯಾದಿ ವಸ್ತುಗಳನ್ನು ತೆಗೆದುಕೊಡುವುದನ್ನು ಕಲಿಯುತ್ತಿದ್ದಾರೆ. ತಾವು ಮತ್ತು ತಮ್ಮ ಮಕ್ಕಳು ಸ್ವಚ್ಛವಾಗಿರಬೇಕು ಎಂದು ಸ್ವಚ್ಛತೆಯ ಬಗ್ಗೆ ತಿಳಿಯುವುದು ಕಂಡು ಬಂದಿದೆ.
- ಸೋಲಿಗರು ತಮ್ಮ ಮಕ್ಕಳನ್ನು ಇಂಗ್ಲೀಷ್ ಮಾಧ್ಯಮದಲ್ಲಿ ಓದಬೇಕು ಎಂದು ಕೆಲವೇ ಕೆಲವು ಮಂದಿ ಕಾನ್ವೆಂಟ್ ಶಾಲೆಗಳಿಗೆ ಕಳುಹಿಸಲು ಪ್ರಾರಂಭಿಸಿದ್ದಾರೆ.

**ಜಾಗತೀಕರಣದ ದುಷ್ಪರಿಣಾಮಗಳು**

ಸೋಲಿಗರಲ್ಲಿ ರಾಗಿಯ ಬಳಕೆ ಕಡಿಮೆಯಾಗುತ್ತದೆ. ಆಹಾರದ ವಿಧಾನದಲ್ಲೂ ಬದಲಾವಣೆಯಾಗಿದೆ. ಒಂದೆ ಬಳಸುತ್ತಿದ್ದ ಅಡುಗೆಯ ಪರಿಕರಗಳಾದ ಹಿಟ್ಟನ್ನು ಹೊಂದಿಸುವ ಕೋಲು, ಕಡ್ಡಿ ಕಾವಲು ಕಡ್ಡಿ, ಒಂದೆ ಬಳಸುತ್ತಿದ್ದ ಮರಗ(ಮುದ್ದೆಯನ್ನು ತಟ್ಟೆಯಲ್ಲಿ ಹಾಕಿ ದುಂಡಗೆ ಮಾಡುವ ತಟ್ಟೆ) ಮಾಯವಾಗಿದೆ.

**ಪರಿಣಾಮಗಳು**

- ❖ ಶಾಲೆಗೆ ಹೋಗುವ ಮಕ್ಕಳು ತಂದೆ-ತಾಯಿಗಳಿಗೆ ಫೋನ್ ಬೇಕು ಎಂದು ಹಠ ಮಾಡುತ್ತಾರೆ.
- ❖ ಕೆಲವು ಮಕ್ಕಳು ತೆಗೆದುಕೊಡದಿದ್ದರೆ ಶಾಲೆಯನ್ನೇ ಬಿಟ್ಟು ಬಿಡುತ್ತಾರೆ.
- ❖ ಕೆಲವು ಮಕ್ಕಳಿಗೆ ಪ್ರೇಮಾಂಕುರ ಈ ಫೋನ್ ಮೂಲಕ ವ್ಯಕ್ತಪಡಿಸಿ ಆ ಮೂಲಕ ಸಂಭಾಷಣೆ ಮಾಡುತ್ತಿರುತ್ತಾರೆ.
- ❖ ಕೆಲವು ಮಹಿಳೆಯರು ಫೋನ್ ಮೂಲಕ ಸಂಭಾಷಣೆ ಮಾಡುತ್ತಿರುವುದರಲ್ಲಿಯೇ ಸಮಯ ಕಳೆಯುತ್ತಾರೆ.
- ❖ ಹಿಂದೆ ಸೋಲಿಗರು ಯಾವುದೇ ಸಮಾಚಾರ, ಸಾವಿನ ಸುದ್ದಿ ಇತ್ಯಾದಿಗಳನ್ನು ತಿಳಿಸಬೇಕಾದರೆ ಕಾಡಿನ ಮೂಲಕವೇ ನಡೆದುಕೊಂಡು ಹೋಗಿ ಮುಟ್ಟಿಸುತ್ತಿದ್ದರು ಹಾಗೂ ಹಾಡಿ/ಪೋಡುಗಳಿಂದ ಜನ ಬರುವವರೆಗೆ ಕಿಚ್ಚು, ಹಾಕಿಕೊಂಡು ಹೆಣವನ್ನು ಕೆಡದಂತೆ ಕಾಯುತ್ತಿದ್ದರು. ಆದರೆ ಇತ್ತೀಚೆಗೆ ಈ ರೀತಿಯ ಯಾವುದೇ ಸುದ್ದಿಯನ್ನು ಈ ಫೋನಿನ ಮೂಲಕ ಬಹುಬೇಗ ತಿಳಿಸುತ್ತಾರೆ. ಅದರ ಮೂಲಕ ಒಂದೇ ದಿನ ಅಥವಾ ಮಾರನೇ ದಿನದಲ್ಲಿ ಶವಸಂಸ್ಕಾರವನ್ನು ಮಾಡಿ ಮುಗಿಸುತ್ತಾರೆ.
- ❖ ಹೀಗೆ ಫೋನಿನ ಉಪಯೋಗ ಎಷ್ಟು ಕೆಟ್ಟದ್ದೋ, ಅಷ್ಟೇ ಒಳ್ಳೆಯದು ಇರುತ್ತದೆ. ಆದುದರಿಂದ ಮಕ್ಕಳಿಗೆ ಮಾಧ್ಯಮಗಳ ಮೂಲಕ ಕೆಲವೊಂದು ಬಾರಿ ಅರಿವು ಮೂಡಿಸುವುದು ಮುಖ್ಯವಾಗಿರುತ್ತದೆ.

೧. ಸೋಲಿಗರ ಭಾಷೆಯ ಮೇಲೆ ಪರಿಣಾಮ ಬೀರಿದೆ.

೨. ಸೋಲಿಗರ ಸಂಸ್ಕೃತಿಯ ಮೇಲೆ ಪರಿಣಾಮ ಬೀರಿದೆ.

೩. ಸೋಲಿಗರ ಉಡುಗೆ-ತೊಡುಗೆಗಳ ಮೇಲೆ ಪರಿಣಾಮ ಬೀರಿದೆ.

೪. ಸೋಲಿಗರ ಆಚಾರ-ವಿಚಾರಗಳ ಮೇಲೆ ಪರಿಣಾಮ ಬೀರಿದೆ.

೫. ಸೋಲಿಗರ ಹಬ್ಬ-ಹರಿದಿನಗಳ ಮೇಲೆ ಪರಿಣಾಮ ಬೀರಿದೆ.

೬. ಸೋಲಿಗರ ಆಹಾರ-ಪಾನೀಯಗಳ ಮೇಲೆ ಪರಿಣಾಮ ಬೀರಿದೆ.

೭. ಸೋಲಿಗರ ಶಿಕ್ಷಣದ ಮೇಲೆ ಪರಿಣಾಮ ಬೀರಿದೆ.

೮. ಸೋಲಿಗರ ಮದುವೆ ವಿಚಾರ, ಸಂಬಂಧ ಆಯ್ಕೆ ಇತ್ಯಾದಿ ವಿಷಯಗಳ ಮೇಲೆ ಪರಿಣಾಮ ಬೀರಿದೆ.

೯. ಸೋಲಿಗರ ಕುಟುಂಬಕ್ಕೆ ಬೇಕಾದ ವಸ್ತುಗಳ ಮೇಲೆ ಪರಿಣಾಮ ಬೀರಿದೆ.

೧೦. ಜಾಗತೀಕರಣದ ಪ್ರಭಾವದಿಂದಾಗಿ ಸೋಲಿಗರಲ್ಲಿ ವ್ಯಾಪಾರ ಮನೋಭಾವನೆಯು ಬಂದಿದೆ (ಮಾರ್ಕೇಟಿಂಗ್ ಎಕಾನಾಮಿ)

೧೧. ಹೊಸ ಹೊಸ ವಸ್ತುಗಳನ್ನು ಕೊಂಡುಕೊಳ್ಳುವ ಮನೋಭಾವನೆ ಬರತೊಡಗಿದೆ.

೧೨. ಬೇಕು ಎನ್ನುವ ಸಂಸ್ಕೃತಿಯು ಬಂದು, ಆಸೆಗಳು ಹುಟ್ಟಿಕೊಳ್ಳುತ್ತಿದೆ.

೧೩. ಇತ್ತೀಚೆಗೆ ಕೂಡಿಟ್ಟುಕೊಳ್ಳುವ ಮನಸ್ಥಿತಿಯೆಡೆಗೆ ಬರುತ್ತಿದ್ದಾರೆ.

೧. **ಸೋಲಿಗರ ಭಾಷೆಯ ಮೇಲೆ ಪರಿಣಾಮ ಬೀರಿದೆ:** ಸೋಲಿಗರು ಟೀವಿಯನ್ನು ನೋಡುವುದರ ಮೂಲಕ ಸಾಮಾನ್ಯವಾಗಿ ತಮ್ಮ ಮೂಲ ಭಾಷೆಯನ್ನು ಕಡಿಮೆ ಮಾಡುವುದು ಕಂಡು ಬರುತ್ತಿದೆ. ಟೀವಿಯಲ್ಲಿ ಬರುವ ಡೈಲಾಗ್‌ಗಳು, ಹಾಸ್ಯ ಇತ್ಯಾದಿ ವಿಷಯಗಳನ್ನು ಬಹಳ ಬೇಗ ಕಲಿಯುತ್ತಾರೆ. ಆದರೂ ಸಹ ಟೀವಿಯಲ್ಲಿ ಬರುವ ಕಥೆ, ಸಿನಿಮಾ, ಸೀರಿಯಲ್ ಇತ್ಯಾದಿಯಲ್ಲಿ ನಡೆಯುವ ಸಂಭಾಷಣೆಯನ್ನು ಬೇಗ ಕಲಿತು ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಇದರ ಮೂಲಕ ತಮ್ಮ ಭಾಷೆಗೆ ಎಲ್ಲೋ ಒಂದು ಕಡೆ ತೊಡಕಾಗುತ್ತಿರುವುದು ಕಂಡುಬರುತ್ತದೆ. ಚಿಕ್ಕಮಕ್ಕಳು, ಶಾಲಾ, ಕಾಲೇಜಿಗೆ ಹೋಗುವ ಮಕ್ಕಳು ಹೊರಗಿನ ಭಾಷೆಗೆ ಹೆಚ್ಚು ಪ್ರಭಾವಿತರಾಗುವುದು ಕಂಡುಬರುತ್ತಿದೆ. ಹೊರಗಿನ ಭಾಷೆಯನ್ನು ಕಲಿಯುವುದು ಮುಖ್ಯವಾದುದ್ದು ಅದರ ಜೊತೆಗೆ ಸೋಲಿಗರ ಭಾಷೆಯನ್ನು ಉಳಿಸುವುದು ಮುಖ್ಯವಾಗಿರುತ್ತದೆ.

೨. **ಸೋಲಿಗರ ಸಂಸ್ಕೃತಿಯ ಮೇಲೆ ಪರಿಣಾಮ ಬೀರಿದೆ:** ಜಾಗತೀಕರಣದ ಪರಿಣಾಮದಿಂದ ಸೋಲಿಗರ ಸಂಸ್ಕೃತಿಯ ಮೇಲೆ ಪರಿಣಾಮ ಬೀರುತ್ತಿದೆ. ಇದರಲ್ಲಿ ಮುಖ್ಯವಾಗಿ ಸೋಲಿಗರು ಆಚರಣೆ ಮಾಡುವ ಹಬ್ಬಗಳಾದ ರೊಟ್ಟಿ ಹಬ್ಬ, ಹೊಸರಾಗಿ ಹಬ್ಬ, ಜಡೆಸ್ವಾಮಿ ಹಬ್ಬ, ಸಂಕ್ರಾಂತಿ ಹಬ್ಬ ಇತ್ಯಾದಿ ಹಬ್ಬಗಳನ್ನು ಹಿಂದೆ ಸೋಲಿಗರು ಬಹಳ ಕಟ್ಟುನಿಟ್ಟಿನಿಂದ ಪೋಡಿನಲ್ಲಿ ಯಾರ ಭಯವಿಲ್ಲದೆ ಮಾಡುತ್ತಿದ್ದರು. ಗೋರುಕಾನ ಕುಣಿತದಲ್ಲಿ ಹಿಂದೆ ಜನರು ಮೌಖಿಕವಾಗಿ ಹಾಡುಗಳನ್ನು ಹಾಡುವುದರ ಮೂಲಕ ಕುಣಿತ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಸೋಲಿಗರ ಹಬ್ಬಗಳಲ್ಲಿ ನಗರವಾಸಿಗಳಂತೆ ಹಬ್ಬಗಳಲ್ಲಿ ಹಾಕುವ ರೀತಿಯ ಮೈಕ್ ಸೆಟ್‌ಅನ್ನು ಅಳವಡಿಸುತ್ತಾರೆ. ಹಾಗೂ ಸಿನಿಮಾ ಗೀತೆಗಳನ್ನು ಹಾಕಿಕೊಂಡು ಕುಣಿತವನ್ನು ಮಾಡುವುದನ್ನು ನೋಡಬಹುದು. ಇದು ಸೋಲಿಗರ ಸಂಸ್ಕೃತಿಯ ಮೇಲೆ ಪರಿಣಾಮ ಬೀರುವ ಅಂಶಗಳನ್ನು ಕಾಣಬಹುದಾಗಿದೆ.

೩. **ಸೋಲಿಗರ ಉಡುಗೆ–ತೊಡುಗೆಗಳ ಮೇಲೆ ಪರಿಣಾಮ ಬೀರಿದೆ:** ಜಾಗತೀಕರಣದ ಪರಿಣಾಮವಾಗಿ ಸೋಲಿಗರು ಟೀವಿ ಮತ್ತು ಸಿನಿಮಾಗಳನ್ನು ನೋಡುವುದರ ಮೂಲಕ ಜೀನ್ಸ್ ಪ್ಯಾಂಟನ್ನೇ ಹಾಕದ ಸೋಲಿಗ ಹೆಣ್ಣುಮಕ್ಕಳು ಇತ್ತೀಚೆಗೆ ಪ್ಯಾಂಟ್ ಧರಿಸುತ್ತಿದ್ದಾರೆ. ಸೌಂದರ್ಯವರ್ಧಕಗಳನ್ನು ಉಪಯೋಗಿಸುತ್ತಿದ್ದಾರೆ. ಹಿಂದೆ ಸೋಲಿಗರಲ್ಲಿ ಪುರುಷರು ನಗರ ಅಥವಾ ಸಂತೆ ಅಥವಾ ಪೋಡುಗಳಲ್ಲಿ ವ್ಯಾಪಾರಿಗಳು ಬಂದಾಗ ಕೇವಲ ಒಂದು ಪಂಚೆಯನ್ನು ತೆಗೆದುಕೊಂಡು ಅದನ್ನು ಎರಡು ತುಂಡು ಮಾಡಿ ಒಂದು ಪಂಚೆಯನ್ನು ಒಂದು ವರ್ಷದವರೆಗೂ ಉಪಯೋಗಿಸುತ್ತಿದ್ದರು. ಆದರೆ ಇತ್ತೀಚೆಗೆ ಪುರುಷರು ಹಾಗು ಗಂಡು ಮಕ್ಕಳೂ ಸಹ ಲುಂಗಿ, ಪಂಚೆಯ ಬದಲಾಗಿ ಇತ್ತೀಚೆಗೆ ಪ್ಯಾಂಟನ್ನು ಧರಿಸುವುದು ಕಂಡುಬಂದಿದೆ. ಕೆಲವರು ಮಾತ್ರ ಇನ್ನು ಪಂಚೆಯನ್ನು ಧರಿಸುತ್ತಾರೆ. ಇನ್ನೂ ಕೆಲವರು ಬರೀ ಚಡ್ಡಿಯನ್ನು ಧರಿಸುತ್ತಾರೆ. ಮೇಲಿನ ಭಾಗಕ್ಕೆ ಶರ್ಟನ್ನು ಹಾಕಿಕೊಳ್ಳುತ್ತಾರೆ. ಮಹಿಳೆಯರು ಸೀರೆಯನ್ನು ತೊಡುತ್ತಾರೆ, ಜೊತೆಗೆ ಚೂಡಿದಾರವನ್ನು ಹಾಕುತ್ತಾರೆ ಅಲ್ಲದೆ ಇತ್ತೀಚೆಗೆ ಹೆಣ್ಣು ಮಕ್ಕಳು ಹೆಚ್ಚಾಗಿ ನೈಟಿ ಉಡುಪಿನಲ್ಲಿ ಹೆಚ್ಚು ಇರುತ್ತಾರೆ. "ಇತ್ತೀಚೆಗೆ ಸೋಲಿಗರು ಹೆಚ್ಚಾಗಿ ತಾವು ಕೂಲಿ

ಅಥವಾ ತಮ್ಮ ಆದಾಯದಲ್ಲಿ ಬರುವ ಹಣದಲ್ಲಿ ಹೆಚ್ಚಾಗಿ ಉಡುಗೆ ತೊಡುಗೆಗೆ ಖರ್ಚು ಮಾಡುತ್ತಾರೆ ಎಂದು ಹಲವು ಮಂದಿ ಸೋಲಿಗ ಮಹಿಳೆಯರು ತಿಳಿಸಿದ್ದಾರೆ.

**೪. ಸೋಲಿಗರ ಆಚಾರ-ವಿಚಾರಗಳ ಮೇಲೆ ಪರಿಣಾಮ ಬೀರಿದೆ:** ಹಿಂದೆ ಸೋಲಿಗರು ತಮ್ಮ ಕಾಡಿನ ದೇವರುಗಳನ್ನು ಮಾತ್ರ ಪೂಜಿಸುತ್ತಿದ್ದರು ಹಾಗೂ ತಮ್ಮದೇ ಆದ ಕೆಲವು ಹಬ್ಬಗಳನ್ನು ಮಾತ್ರ ಆಚರಣೆ ಮಾಡುತ್ತಿದ್ದರು. ಆದರೆ ಇತ್ತೀಚೆಗೆ ಸೋಲಿಗರು ನಾಡವರು ಮಾಡುವ ಹಬ್ಬ ಮತ್ತು ದೇವರುಗಳ ಪೂಜೆಯನ್ನು ಮಾಡುತ್ತಾರೆ.

**೫. ಸೋಲಿಗರ ಆಹಾರ-ಪಾನೀಯಗಳ ಮೇಲೆ ಪರಿಣಾಮ ಬೀರಿದೆ:** ಸೋಲಿಗರು ಹಿಂದೆ ಸಾಮಾನ್ಯವಾಗಿ ಕಾಡಿನಲ್ಲಿ ಸಿಗುವ ನಾರೆ ಗೆಣಸು, ನೂರೆ ಗೆಣಸು, ಬೆಲ್ಲರೆ ಗೆಣಸು, ಮುಳ್ಳು ಗೆಣಸು, ನವರಕಾಲೆ ಗೆಣಸು, ತೋಟಂಬು ಗೆಣಸು, ಕಾಡಿನ ಸೊಪ್ಪುಗಳು, ಕಾಡಿನ ಹಣ್ಣು ಹಂಪಲು, ಜೊತೆಗೆ ಜೇನು ಮತ್ತು ರಾಗಿ ಇದು ಸೋಲಿಗರ ಮುಖ್ಯ ಆಹಾರವಾಗಿತ್ತು. ಆದರೆ ಇತ್ತೀಚೆಗೆ ಸೋಲಿಗರಲ್ಲಿ ಈ ರೀತಿಯ ಆಹಾರವು ಕಡಿಮೆಯಾಗಿದೆ. ಇದರ ಜೊತೆಗೆ ಅನ್ನ, ಚಪಾತಿ, ಪರೋಟಾ ಇತ್ಯಾದಿ ಆಹಾರವೂ ಸಹ ಸೋಲಿಗರಲ್ಲಿ ಬಂದುಬಿಟ್ಟಿದೆ. ಸೋಲಿಗರು ಹಿಂದೆ ಕಾಡಿನಲ್ಲಿ ಸಿಗುವ ಸೊಗದೆ ಬೇರಿನ ರಸ, ನೆಲ್ಲಿಕಾಯಿಯ ರಸ, ಮಾಗಳಿ ಬೇರಿನ ರಸ ಇತ್ಯಾದಿ ಪಾನೀಯಗಳನ್ನು ಕುಡಿಯುತ್ತಿದ್ದರು. ಆದರೆ ಇತ್ತೀಚೆಗೆ ಜಾಗತೀಕರಣದ ಪರಿಣಾಮವಾಗಿ ಸೋಲಿಗರ ಪೋಡಿಗೆ ಕೋಕೋ ಕೋಲಾ, ಪೆಪ್ಸಿ, ಮಿರಿಂಡಾ, ಮಾಝಾ, ಸ್ಲೈಸ್, ಬಾದಾಮಿ, ಫ್ರೂಟಿ ಇತ್ಯಾದಿ ಪಾನೀಯಗಳನ್ನು ಸೋಲಿಗರೂ ಸಹ ಉಪಯೋಗಿಸುವುದು ಕಂಡು ಬಂದಿದೆ.

**೬. ಸೋಲಿಗರ ಶಿಕ್ಷಣದ ಮೇಲೆ ಪರಿಣಾಮ ಬೀರಿದೆ:** ಜಾಗತೀಕರಣ ಮತ್ತು ಶಿಕ್ಷಣದ ಮೇಲೂ ಸಹ ತನ್ನ ಪ್ರಭಾವವನ್ನು ಬೀರಿದೆ. ಇದರ ಪರಿಣಾಮವಾಗಿ ಶಿಕ್ಷಣದ ಗೊತ್ತುಗುರಿಗಳನ್ನು ಹಾಗೂ ಶೈಕ್ಷಣಿಕ ಸಂಸ್ಥೆಗಳ ಆರ್ಥಿಕ ಸ್ಥಿತಿಗತಿಗಳನ್ನು ಪರಾಮರ್ಶೆ ಮಾಡುವುದು ಅನಿವಾರ್ಯವಾಗತೊಡಗಿದೆ. ಈ ಹಿಂದೆ ಶಿಕ್ಷಣ ಕೇವಲ ಕೆಲವು ಜನರಿಗೆ ಮಾತ್ರ ಅಗತ್ಯವಾಗಿತ್ತು. ಆದರೆ ಜಾಗತೀಕರಣ, ಪ್ರಕ್ರಿಯೆ ಪ್ರಾರಂಭವಾದಂದಿನ್ನಿಂದ ಉಚ್ಚ ಶಿಕ್ಷಣ ಸಂಸ್ಥೆಗಳು ಅನೇಕ ಬದಲಾವಣೆಯನ್ನು ಮಾಡಿಕೊಳ್ಳಬೇಕಾಗಿದೆ.

ಟಿ.ವಿ. ಯು ಇತ್ತೀಚೆಗೆ ಸೋಲಿಗರ ಪೋಡು, ಕಾಲೋನಿ ಮತ್ತು ಮನೆಗಳಿಗೂ ಬಂದುಬಿಟ್ಟಿದೆ. ಮತ್ತೊಂದು ಕಡೆ ಶಿಕ್ಷಣದ ಮೇಲೆ ಜಾಗತೀಕರಣವು ಒಳ್ಳೆಯ ಹಾಗೂ ಕೆಟ್ಟ ಎರಡೂ ಪರಿಣಾಮಗಳನ್ನೂ ಬೀರುತ್ತದೆ. ಅವುಗಳಲ್ಲಿ ಮುಖ್ಯವಾಗಿ ಇತ್ತೀಚೆಗೆ ಶಾಲೆಗೆ ಮಕ್ಕಳನ್ನು ಸೇರಿಸುವುದು ಯಾವ ಶಾಲೆ, ಮೊರಾರ್ಜಿ ದೇಸಾಯಿ, ಕಿತ್ತೂರು ಚೆನ್ನಮ್ಮಶಾಲೆ, ಏಕಲವ್ಯ ಶಾಲೆ ಇತ್ಯಾದಿ ಶಾಲೆಗಳಿಗೆ ಸೇರಿಸುವುದಕ್ಕೆ ಸಂಬಂಧಿಸಿದ ಇಲಾಖೆಯವರು ಮಾಧ್ಯಮಗಳ ಮೂಲಕ ತಿಳಿಸುತ್ತಾರೆ. ಅದರೆ ಇಂತಹ ವಿಷಯಗಳು ಸೋಲಿಗ ಸಮುದಾಯದವರಿಗೆ ಗೊತ್ತೇಆಗುವುದಿಲ್ಲ. ಇಂತಹ ವಿಷಯಗಳನ್ನು ಮಾಧ್ಯಮಗಳಲ್ಲಿ ನೋಡುವುದಿಲ್ಲ. ಹಾಗಾಗಿ ಶಾಲೆಗೆ ಸೇರಿಸುವುದು ಕೊನೆಯ ದಿನಾಂಕವಾಗಿ, ಕೊನೆಗೆ ಗೊಂದಲದ ಸ್ಥಿತಿಯಲ್ಲಿರುತ್ತಾರೆ. ಕೆಲವರು ಮಕ್ಕಳನ್ನು ಶಾಲೆಗೆ ಸೇರಿಸುವ ಗೋಜಿಗೇ ಹೋಗುವುದಿಲ್ಲ. ಉನ್ನತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಕಾಲೇಜಿಗೆ ಸೇರಿಕೊಳ್ಳಲು ಇತ್ತೀಚೆಗೆ ಎಲ್ಲವೂ ಆನ್ ಲೈನ್ ಮೂಲಕವೇ ಮಾಡಬೇಕು. ನಗರಗಳಲ್ಲಿ ಹೋಗಿ ಗಣಕಯಂತ್ರದ ಮೂಲಕ ಎಲ್ಲವನ್ನು ತುಂಬಬೇಕು

ಈ ಕೆಲಸವು ಸೋಲಿಗ ಮಕ್ಕಳಲ್ಲಿ ತುಂಬಾ ಕಷ್ಟ ಹಾಗೂ ಕಾಯುವ ಗುಣ ಕಡಿಮೆ ಏನಾದರೂ ವ್ಯತ್ಯಾಸವಾದರೆ ಸಂಕುಚಿತ ಸ್ವಭಾವದಿಂದ ಹಿಂದಿರುಗುತ್ತಾರೆ. ಕೆಲವರು ಮಾತ್ರ ಸರಿಯಾದ ದಾರಿಯಲ್ಲಿ ಮುಂದೆ ಹೋಗುತ್ತಾರೆ. ಇವರಿಗೆ ಸರಿಯಾದ ಮಾರ್ಗದರ್ಶನ ಕೊಡುವವರು ಇರುವುದಿಲ್ಲ ಇದ್ದರೂ, ಸಹ ತಾಳ್ಮೆಯಿಂದ ಕೇಳಿಸಿಕೊಳ್ಳುವ ಮನೋಭಾವವಿರುವುದಿಲ್ಲ ಹೆಚ್ಚು ಮಂದಿ ಉನ್ನತ ವ್ಯಾಸಂಗದಿಂದ ದೂರ ಉಳಿಯುತ್ತಾರೆ. ಕೆಲವೊಮ್ಮೆ ಆನ್‌ಲೈನ್ ಮೂಲಕ ದಾಖಲಾತಿಗೆ ಅನುಮತಿ ಸಿಕ್ಕಿದ್ದರೆ ಕಾಲೇಜಿಗೆ ಫೀಜನ್ನು ತುಂಬಲು ತಂದೆ ತಾಯಿಗಳು ಹಣದ ತೊಂದರೆಯಿಂದ ಕಷ್ಟಪಡುತ್ತಾರೆ. ಬಡ್ಡಿಗೆ ಸಾಲವನ್ನು ಪಡೆಯುವುದು ಕಾಲೇಜನ್ನು ಸೇರಲು ಕೊನೆಯ ದಿನಾಂಕವಾಗಿ ಹಣ ಇದ್ದರೂ ಸಹ ಕಾಲೇಜಿಗೆ ಸೇರುವುದಕ್ಕೆ ಆಗುವುದಿಲ್ಲ. ಸೋಲಿಗ ಮಕ್ಕಳಿಗೆ ಉನ್ನತ ವ್ಯಾಸಂಗ ಮಾಡಲು ಮಾಧ್ಯಮದಲ್ಲಿ ಕೊಡುವ ಆಯ್ಕೆಗಳಲ್ಲಿ ಗೊಂದಲವಿರುತ್ತದೆ. ಯಾವ ವಿಷಯವನ್ನು ತೆಗೆದುಕೊಳ್ಳಬೇಕು ಯಾವುದನ್ನು ತೆಗೆದುಕೊಳ್ಳಬಾರದು ಎಂಬುದರ ಬಗ್ಗೆ ಗೊಂದಲವಿರುತ್ತದೆ.

೭. **ಸೋಲಿಗರ ಮದುವೆ ವಿಚಾರ, ಸಂಬಂಧ ಆಯ್ಕೆ ಇತ್ಯಾದಿ ವಿಷಯಗಳ ಮೇಲೆ ಪರಿಣಾಮ ಬೀರಿದೆ:** ಜಾಗತೀಕರಣದ ಪ್ರಭಾವದಿಂದ ಸೋಲಿಗರ ಮದುವೆ, ಸಂಬಂಧ, ಆಯ್ಕೆ, ಇತ್ಯಾದಿ ವಿಷಯಗಳ ಮೇಲೂ ಸಹ ಪರಿಣಾಮ ಬೀರಿದೆ. ಹಿಂದೆ ಸೋಲಿಗರು ತಮ್ಮ ಒಳಬಾಂಧವ್ಯ ವಿವಾಹಗಳು ಮತ್ತು ತಮ್ಮದೇ ಆದ ಆಚಾರ ವಿಚಾರಗಳ ಮೂಲಕ ಮದುವೆಯನ್ನು ಮಾಡಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ಇವರಲ್ಲಿಯೂ ಸಹ ಬದಲಾವಣೆಯನ್ನು ಕಾಣಬಹುದಾಗಿದೆ. ಇತ್ತೀಚೆಗೆ ಕೆಲವು ಮಾಧ್ಯಮಗಳನ್ನು ನೋಡುವುದರ ಮೂಲಕ ಸೋಲಿಗರು ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿಗೆ ಮದುವೆ ಮಾಡಿಸಬಾರದು ಎಂದು ಕೆಲವರು ತಿಳಿದಿರುತ್ತಾರೆ. ಮದುವೆಯ ವಯಸ್ಸು ಗಂಡು ಮತ್ತು ಹೆಣ್ಣಿಗೆ ಇಂತಿಷ್ಟು ಇರಬೇಕು ಎಂದು ತಿಳಿದಿರುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಮದುವೆಯಾದರೆ ನಮ್ಮ ಮೇಲೆ ಕೇಸನ್ನು ದಾಖಲಿಸುತ್ತಾರೆ ಎಂಬ ಭಯವೂ ಸಹ ಇರುತ್ತದೆ, ಅದರೂ ಸಹ ಮಾಧ್ಯಮದ ಪ್ರಭಾವದಿಂದ ಹುಡುಗ-ಹುಡುಗಿಗೆ ಹೆಚ್ಚು ಪ್ರಭಾವಿತರಾಗಿ ಪ್ರೇಮಿಸಿ ವಿವಾಹವಾಗುವುದನ್ನು ನೋಡುತ್ತೇವೆ. ಹಾಗೂ ಒಪ್ಪಂದ ವಿವಾಹವೂ ಸಹ ಸೋಲಿಗರಲ್ಲಿ ಬಂದುಬಿಟ್ಟಿದೆ. ಮಧ್ಯಮ, ಹೊರ ಪ್ರಪಂಚದ ಸಂಬಂಧದಿಂದ ಶಾಸ್ತ್ರ ಸಂಬಂಧ ಮಾಡಿ ಅಲ್ಪ ಸ್ವಲ್ಪ ಸಾಲ ಮಾಡಿಯಾದರೂ ಸಹ ತಮ್ಮ ಮಕ್ಕಳಿಗೆ ಒಪ್ಪಂದದ ಮದುವೆ ಮಾಡಬೇಕು ಎಂದು ಉದ್ದೇಶಿಸುತ್ತಾರೆ.

೮. **ಸೋಲಿಗರ ಕುಟುಂಬಕ್ಕೆ ಬೇಕಾದ ವಸ್ತುಗಳ ಮೇಲೆ ಪರಿಣಾಮ ಬೀರಿದೆ:** ಸೋಲಿಗರು ತಮ್ಮಲ್ಲಿ ಹಿಂದೆ ಬಳಸುತ್ತಿದ್ದ ಪರಿಕರಗಳಾದ ಮಣ್ಣಿನ ಮಡಕೆ, ಬಿದಿರಿನ ದಿಂಬಿ, ಬಿದಿರಿನ ಕೊಟ್ಟ, ಬಿದಿರಿನ ಲೋಟ, ಮುತ್ತಗದ ಎಲೆಯ ಜೊನ್ನೆ, ತೇಗದ ಎಲೆಯ ಜೊನ್ನೆ, ಕಾಡಿನ ಹಿಡಿಗಲು (ಕಸಬರಕೆ) ಸೊಗದೆ ನಾರಿನ ಚೀಲ, ದಡಸಿಲ ಮರದ ಪಟ್ಟೆ, ಸೋಗೆ ಹುಲ್ಲಿನ ಹೊದಿಕೆ, ಇತ್ಯಾದಿ ಪರಿಕರಗಳನ್ನು ಉಪಯೋಗಿಸುತಿದ್ದರು. ಆದರೆ ಇತ್ತೀಚೆಗೆ ಸೋಲಿಗರ ಮನೆಗೆ ಹೊಸ ಹೊಸ ಪರಿಕರಗಳು ಬಂದಿದೆ ಅವುಗಳಲ್ಲಿ ಮಿಕ್ಸಿ, ಕುಕ್ಕರ್, ಸ್ಟೀಲ್ ತಟ್ಟೆ, ಲೋಟ, ಚೊಂಬುಗಳು, ಹಿತ್ತಾಳೆಯ ಹಂಡೆ, ಡ್ರಮ್ಮುಗಳು, ಕುರ್ಚಿ, ಕೆಲವರ ಮನೆಯಲ್ಲಿ ಟೇಬಲ್ ಇತ್ಯಾದಿ ಮನೆಗೆ ಬೇಕಾದ ವಸ್ತುಗಳನ್ನು ಸೋಲಿಗರು ಖರೀದಿಸುತ್ತಿದ್ದಾರೆ.

ಇತ್ತೀಚೆಗೆ ಎಲ್ಲಾ ಕೆಲಸ ಕಾರ್ಯಗಳು ಕಂಪ್ಯೂಟರ್‌ನ ಮೂಲಕ ನಡೆಯುವುದರಿಂದ ಮಾಧ್ಯಮಗಳ ಮೂಲಕ ಮಾಡುವ ಕೆಲಸ ಕಾರ್ಯಗಳು ಸೋಲಿಗರಿಗೆ ಹೆಚ್ಚು ವಿಷಯ ತಿಳಿಯದೆ ಸೌಲಭ್ಯಗಳಿಂದ ವಂಚಿತರಾಗಿ ಹಿಂದೆ ಉಳಿಯುತ್ತಿದ್ದಾರೆ.

**ರಾಜಕೀಯ ಜಾಗತೀಕರಣ(ಪೊಲಿಟಿಕಲ್ ಗ್ಲೋಬಲೈಜೇಷನ್)**

ವ್ಯಾಪಾರ ಅಂತಾರಾಷ್ಟ್ರೀಯವಾಗಿದೆ. ಕ್ರೀಡೆ, ಹಾಡು, ಯೋಗ, ಭಾಷೆ, ಮಾಲ್ ಸಂಸ್ಕೃತಿ ಹಾಗೂ ಪರಿಸರದ ಮೇಲೂ ಅನೇಕ ರೀತಿಯಲ್ಲಿ ಜಾಗತೀಕರಣವನ್ನು ಕಾಣುತ್ತೇವೆ. ಪ್ರಾಕೃತಿಕ ಸಂಪತ್ತು ಉತ್ತರಕ್ಕಿಂತ ದಕ್ಷಿಣದಲ್ಲಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಜಾಗತೀಕರಣದಿಂದ ಬುಡಕಟ್ಟು ಸಮುದಾಯವನ್ನು ನೋಡುವ ದೃಷ್ಟಿಕೋನ ಬದಲಾಗಿದೆ. ಇದರಿಂದ ಬುಡಕಟ್ಟು ಸಮುದಾಯವೇ ತಮ್ಮದಲ್ಲದ ಜೀವನ ಶೈಲಿ ಮತ್ತು ಸಂಸ್ಕೃತಿಗೆ ಬಲವಂತವಾಗಿ ನಡೆಯುತ್ತಿದೆ. ೧೯ನೇ ಶತಮಾನದಲ್ಲಿ ಬುಡಕಟ್ಟು ಸಮುದಾಯದ ಜನರನ್ನು ಸ್ಲೇವರೀಸ್, ಬಾರ್‌ಬರೀಸ್, ಅನಾಗರಿಕರು ಹಾಗೂ ಇವರನ್ನು ಕಣ್ಣಿಲ್ಲ, ಬುದ್ಧಿಲ್ಲ, ಇವರ ನಡವಳಿಕೆ ಸರಿಯಿಲ್ಲ ಹಾಗೂ ಇವರು ಕಳ್ಳರು ಎಂದು ಹೇಳಿದರು. ೧೯೪೦-೫೫ರಲ್ಲಿ ಎಂ.ಎನ್. ಶ್ರೀನಿವಾಸ್‌ರವರು ರೈತರು, ಸಣ್ಣಹಳ್ಳಿಯ ರೈತರು ಹಾಗೂ ಕೊಡಗಿನ ಹಳ್ಳಿಗಳ ಅಧ್ಯಯನ ಮಾಡಿದರು, ಅಲ್ಲದೆ ಅಭಿವೃದ್ಧಿ ಮತ್ತು ಅಭಿವೃದ್ಧಿ ಹೊಂದಿಲ್ಲದ ಜನರ ಬಗ್ಗೆ ಅಧ್ಯಯನ ಮಾಡಿದರು. ಮಲಿನೋಸ್ಕಿ, ಬೋಬಾಸ್, ಹುಲ್ಸ್, ಹ್ಯಾರೀಸ್ ಹಾಗೂ ವೀಣಾದಾಸ್ ಇವರುಗಳೂ ಸಹ ೮೦-೯೦ ದಶಕದಲ್ಲಿ ಬುಡಕಟ್ಟುಗಳ ಬಗ್ಗೆ ವಿಶ್ಲೇಷಣೆ ಮಾಡಿ ಅವರ ಜೀವನ ಕ್ರಮ ಅವರ ಬಗೆಗಿನ ವ್ಯಾಖ್ಯಾನಗಳ ಬಗ್ಗೆ ಅಧ್ಯಯನ ನಡೆಸಿದರು.

ವಲಸೆ ಹೋಗವವರ ಬಗ್ಗೆಯೂ ಸಹ ಅಧ್ಯಯನ ನಡೆಸಲಾಯಿತು. ಹಿಂದೆ ದಕ್ಷಿಣ ಆಫ್ರಿಕಾದಿಂದ ವೆಸ್ಟ್ ಇಂಡೀಸ್‌ಗೆ ವಲಸೆ ಬಂದವರ ಬಗ್ಗೆ ಅಧ್ಯಯನ ಹೊರ ದೇಶದಿಂದ ಹೊರ ದೇಶಕ್ಕೆ ಹೋದವರು ಹಾಗು ಹೊರ ದೇಶದಿಂದ ಭಾರತಕ್ಕೆ ವಲಸೆ ಬಂದವರ ಬಗ್ಗೆ ಅಧ್ಯಯನ ನಡೆಸಲಾಯಿತು. ಇದನ್ನು "ಡಯಾಸ್ಪುರಾ" ಎಂದು ಕರೆಯುತ್ತಾರೆ. ಹೀಗೆ ಜಾಗತೀಕರಣದ ಮೂಲಕ ಯಾವ ರೀತಿಯಲ್ಲಿ ಬುಡಕಟ್ಟು ಜನರ ಮೇಲೆ ಪರಿಣಾಮ ಬೀರುತ್ತದೆ ಎಂಬುದನ್ನು ಹಲವಾರು ಉದಾಹರಣೆಗಳ ಮೂಲಕ ಬಹು ವಿಸ್ತಾರವಾಗಿ ಮನವರಿಕೆ ಮಾಡಿಸಿದರು. ಇದನ್ನು ತಿಳಿದಾಗ ಸೋಲಿಗರಲ್ಲಿಯೂ ಸಹ ಕಾಡಿನ ಮಧ್ಯದಲ್ಲಿದ್ದ ಸೋಲಿಗರನ್ನು ನಾಡಿನತ್ತ ಪುನರ್ವಸತಿ ಮಾಡಿದಾಗ ತಮ್ಮದಲ್ಲದ ಅನೇಕ ಆಚಾರ ವಿಚಾರ ಸಂಸ್ಕೃತಿಗೆ ತಮ್ಮನ್ನು ಒಪ್ಪಿಸಿಕೊಳ್ಳುವುದು ಮಾನಸಿಕವಾಗಿ ನೋವನ್ನುಂಟುಮಾಡುತ್ತದೆ. ಆದರೆ ವೈಜ್ಞಾನಿಕವಾಗಿ ತಿಳಿದುಕೊಳ್ಳುವುದು ಇನ್ನೂ ಅಪಾರವಾಗಿ ಇದೆ. ಇದರಿಂದ ಬೆಳೆಯಲ್ಲಿ ಲಾಭಕ್ಕಿಂತ ನಷ್ಟವನ್ನೇ ಅನುಭವಿಸುತ್ತಾರೆ. ಹೀಗಾಗಿ ಭಾರತದಲ್ಲಿನ ಜಾಗತೀಕರಣವು ಸೋಲಿಗರ ಮೇಲೆ ವಿವಿಧ ವಲಯಗಳಲ್ಲಿ ಅಭಿವೃದ್ಧಿಗೆ ತಡೆಯಾಗಿದೆ ಎಂದರೆ ತಪ್ಪಾಗಲಾರದು.

ಭಾರತದಲ್ಲಿ ಉಚ್ಚ ಶಿಕ್ಷಣ ಯಾವುದೇ ರೀತಿಯ ಪ್ರೋತ್ಸಾಹವಿಲ್ಲದೆ ಸರಕಾರದಿಂದ ಸಾಕಷ್ಟು ಅನುದಾನವೂ ದೊರೆಯದೆ ಬಹಳ ಸಂಕಷ್ಟಮಯವಾಗಿತ್ತು. ಆದರೆ ಜಾಗತೀಕರಣದ ಪ್ರಭಾವದಿಂದಾಗಿ ಸ್ವಯಂಪರಿಪೂರ್ಣತೆ ಹಾಗು ಸ್ವಯಂ ಬೆಳವಣಿಗೆಯನ್ನು ಕಂಡುಕೊಳ್ಳುವ ಅವಕಾಶ ಒದಗಿಬಂದಿದೆ. ಪ್ರಸ್ತುತದಲ್ಲಿ ಅನೇಕ ಖಾಸಗಿ ಸಂಸ್ಥೆಗಳು ಹಣಕಾಸಿನ ಮುಗ್ಗಟ್ಟಿನಿಂದಾಗಿ ನಿರಂತರ ಸಮಸ್ಯೆಗಳಿಗೆ

ಒಳಗಾಗುತ್ತಿವೆ. ಜೊತೆಗೆ ಅಂಥ ಸಂಸ್ಥೆಗಳು ಯಾವುದೇ ಬಗೆಯ ಆದಾಯವನ್ನು ಗಳಿಸುವ ಹಂತದಲ್ಲಿಲ್ಲ. ಈ ರೀತಿಯ ಶೈಕ್ಷಣಿಕ ಸಮಸ್ಯೆಗಳನ್ನು ಬಗೆಹರಿಸಲು ಜಾಗತೀಕರಣವು ಅನೇಕ ರೀತಿ ಮಾರ್ಗೋಪಾಯ ಗಳನ್ನು ಮಾಡಿಕೊಡುತ್ತದೆ. ಅವುಗಳಲ್ಲಿ ಮುಖ್ಯವಾದ ಕೆಲವು ಅಂಶಗಳೆಂದರೆ, ಪಾಠ ಪ್ರವಚನಕ್ಕೆ ಶುಲ್ಕವನ್ನು ಹೆಚ್ಚಿಸುವುದು, ಸರಕಾರದಿಂದ ಧನಸಹಾಯವನ್ನು ಕೇಳುವುದು, ಖರ್ಚಿನಲ್ಲಿ ಆದಷ್ಟು ಉಳಿತಾಯವನ್ನು ಕಂಡುಕೊಳ್ಳುವುದು, ಸಹಾಯಧನ ಹಾಗೂ ಸಂಘ-ಸಂಸ್ಥೆಗಳಿಂದ ಉದಾರ ದಾನ ಪಡೆಯುವುದು, ಕೈಗಾರಿಕಾ ಸಲಹೆಗಾರರಿಂದ ಶುಲ್ಕವನ್ನು ಪಡೆಯುವುದು, ಹಳೆಯ ವಿದ್ಯಾರ್ಥಿಗಳಿಂದ ಹಣವನ್ನು ಶೇಖರಿಸುವುದು. ಈ ರೀತೀಯ ಕಾರ್ಯಕ್ರಮಗಳ ಮೂಲಕ ಶಿಕ್ಷಣದ ವ್ಯಾಪ್ತಿ ಮತ್ತು ಉದ್ದೇಶಗಳನ್ನು ಜಾಗತೀಕರಣದ ಬದಲಾವಣೆಗೆ ಅನುಗುಣವಾಗಿ ಬದಲು ಮಾಡಲು ಪ್ರಯತ್ನಿಸುತ್ತದೆ.

ಪ್ರಾಥಮಿಕ ಹಾಗು ಪ್ರೌಢ ಶಿಕ್ಷಣವನ್ನು ಸರಕಾರಿ ಶಾಲೆಗಳಲ್ಲಿ ಸರಕಾರ ಉಚಿತವಾಗಿ ನೀಡುವ ಕಾರ್ಯಕ್ರಮ ಭಾರತದ ಉದ್ದಗಲಕ್ಕೂ ಈಗಾಗಲೇ ಜಾರಿಯಾಗಿ ಅದೆಷ್ಟೋ ವರ್ಷಗಳು ಕಳೆದುಹೋಗಿವೆ. ಆದರೆ ಅಂತಹ ಪ್ರಾಥಮಿಕ ಶಿಕ್ಷಣನ್ನು ಸೋಲಿಗ ಬುಡಕಟ್ಟು ಮಕ್ಕಳು ಗಿರಿಜನ ಆಶ್ರಮ ಶಾಲೆಗಳಲ್ಲಿಯೇ ಕಲಿತು ಮುಂದೆ ಬರಬೇಕಾಗಿದೆ. ಆದರೆ ಈ ಆಶ್ರಮ ಶಾಲೆಗಳಲ್ಲಿ ಸರಕಾರವು ಇನ್ನು ಸಹ ನುರಿತ ಶಿಕ್ಷಕರನ್ನು ನೇಮಕ ಮಾಡಿಕೊಂಡಿರುವುದಿಲ್ಲ. ಇದರಿಂದ ಸೋಲಿಗ ಮಕ್ಕಳು ತಳಹದಿಯ ವಿದ್ಯಾಭ್ಯಾಸದಿಂದ ವಂಚಿತರಾಗಿದ್ದಾರೆ. ಆಶ್ರಮಶಾಲೆಗಳಿಗೆ ನುರಿತ ಶಿಕ್ಷಕರ ಅವಶ್ಯಕತೆ ಇದೆ. ಜಾಗತೀಕರಣದ ಪರಿಣಾಮವಾಗಿ ನುರಿತ ಶಾಲೆಗಳಲ್ಲಿ ಉಳ್ಳವರ ಮಕ್ಕಳು ಮಾತ್ರ ಶಿಕ್ಷಣವನ್ನು ಪಡೆದು ಉದ್ಯೋಗವಂತ ರಾಗಬಹುದು. ಆದರೆ ಹಣ ಇಲ್ಲದ ಸೋಲಿಗ ಮಕ್ಕಳು ಆಶ್ರಮ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಲಿತು ಅರ್ಧದಷ್ಟು ಮಕ್ಕಳು ಪ್ರೌಢಶಾಲೆಯ ಮೆಟ್ಟಿಲನ್ನು ಏರದೇ, ಬೆರಳೆಣಿಕೆಯಷ್ಟು ಮಾತ್ರ ಕಾಲೇಜು ಇತರೆ ಉನ್ನತ ಶಿಕ್ಷಣ ಪಡೆದರೂ ಪೈಪೋಟಿ ಮತ್ತು ಸವಾಲುಗಳನ್ನು ಎದುರಿಸಲಾಗದೆ ನಿರುದ್ಯೋಗಿಗಳಾಗಿ ಉಳಿದುಬಿಡುತ್ತಾರೆ. ಇದು ಜಾಗತೀಕರಣದಿಂದ ಉಂಟಾಗುವ ಪ್ರಮುಖ ಸಮಸ್ಯೆಯಾಗಿದೆ.

ಜಾಗತೀಕರಣದಿಂದ ಸೋಲಿಗರ ಭಾಷೆಗಳು ಸಂಪ್ರದಾಯಗಳು, ಸಾಂಸ್ಕೃತಿಕ ಮೌಲ್ಯಗಳು ನಶಿಸುತ್ತವೆ ಎಂಬುದು ಸತ್ಯ. ಇದಕ್ಕೆ ಪ್ರತಿಯಾಗಿ ಸರಕಾರ, ಶಿಕ್ಷಿತರು ಹಾಗೂ ಸಮುದಾಯದಲ್ಲಿ ನುರಿತರು ವಿಮರ್ಶಾತ್ಮಕವಾಗಿ ಯಾವುದು ಬೇಕು-ಬೇಡ ಎಂಬುದನ್ನು ನಿರ್ಣಯಿಸುವಂತಹ ವ್ಯಕ್ತಿತ್ವವನ್ನು ಪಡೆಯಬೇಕಾಗಿದೆ. ಆದ್ದರಿಂದ 'ನೀನು ಏನನ್ನೂ ಸಹ ಬೇಕಾದರೂ ಶಿಕ್ಷಣದಿಂದ ಪಡೆದುಕೊಳ್ಳಬಲ್ಲೆ ಎಂಬ ಚೈತನ್ಯ, ಸ್ಫೂರ್ತಿ ಶಿಕ್ಷಣದಿಂದ ಸೋಲಿಗ ಮಕ್ಕಳಿಗೆ ದೊರೆಯುವಂತಾಗಬೇಕು'.

**ಕೊನೆಟಿಪ್ಪಣಿ**

೧. ಶ್ರೀನಿವಾಸ್ ಎಮ್ ಎನ್, ರಿಲಿಜಿಯನ್ ಆಂಡ್ ಸೊಸೈಟಿ ಆಮಾಂಗ್ ದಿ ಕೂರ್ಗ್ ಆಫ್ ಸೌತ್ ಇಂಡಿಯಾ, ಪು. ೧೫೫

೨. ಚಂದ್ರು ಕಾಳೇನಹಳ್ಳಿ, ೨೦೦೬, *ಸೋಲಿಗರ ಸಂಸ್ಕೃತಿ, ಸೋಲಿಗರ ಸಂಸ್ಕೃತಿ*, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೮೧

೩. ಬೋರಲಿಂಗಯ್ಯ ಹಿ ಚಿ, ೨೦೦೧, *ಅರಣ್ಯದೊಳಗಿನ ಬುಡಕಟ್ಟುಗಳು ಒಂದು ವಿವೇಚನೆ* (ಲೇ.), ಪ್ರಭಾಕರ ಎ ಎಸ್ (ಸಂ), ಆದಿವಾಸಿ ಆಖ್ಯಾನ, ಸಿದ್ದಾರ್ಥ ಪ್ರಕಾಶನ, ಹೊಸಪೇಟೆ ಪು. ೧೬

೪. ಮೈತ್ರಿ ಕೆ ಎಂ, ೨೦೦೨, *ಬುಡಕಟ್ಟು ಕುಲಕಸುಬುಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧, ೯

೫. ಕೇಶವನ್ ಪ್ರಸಾದ್ ಕೆ, ೨೦೦೮, (ಲೇ), (ಸಂ), ಸಂಪುಟ-೫, ಸಂಚಿಕೆ -೨, ಏನ್ಷಿಯಂಟ್ ಮೆತೆಡ್ ಆಫ್ ಹಂಟಿಂಗ್ ಟ್ರೆಡಿಷಿನಲ್ ಪ್ರಾಕ್ಟೀಸ್ ಫಾರ್ ಫಾರೆಸ್ಟ್ ಡೆವಿಲರ್ಸ್ ಸೋಲಿಗಾ ಟ್ರೈಬ್ಸ್ ಕರ್ನಾಟಕ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧-೨

೬. ಕಾಶಿನಾಥ್ ಎಚ್ ಎಂ (ಸಂ), ೧೯೮೬, *ರಾಷ್ಟ್ರೀಯ ಶಿಕ್ಷಣ ನೀತಿ ಪ್ರಗತಿ ಪರಿಶೀಲನೆ*, ತೃಪ್ತಿ ಪ್ರಕಾಶನ, ಧಾರವಾಡ, ಪು. ೩೨

೭. ಬಿಲಾಕರ ಎಮ್ ಎಚ್, ೨೦೦೯, *ಮೌಲ್ಯಾಧಾರಿತ ಶಿಕ್ಷಣ*, ವಿಜೇತ ಪ್ರಕಾಶನ, ಗದಗ. ಪು. ೧೨.

೮. ಮಂಜುನಾಥ್ ಬಿ ಆರ್, ೨೦೧೪, *ಬುಡಕಟ್ಟುಮಕ್ಕಳ ಶೈಕ್ಷಣಿಕ ಸ್ಥಿತಿಗತಿಗಳು:* ಒಂದು ಮಾನವಶಾಸ್ತ್ರೀಯ ಅಧ್ಯಯನ, ಅಪ್ರಕಟಿತ ಸಂಶೋಧನಾ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪು. ೧೨೨

೯. ರಘು ಕೆ, ೧೯೯೯, *ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ*, ಚೇತನ ಬುಕ್ ಹೌಸ್ ಮೈಸೂರು ಪು. ೩೨

೧೦. ಲಕ್ಷ್ಮಿ ಎನ್, ೨೦೧೪, ತಾತ್ವಿಕ ಮತ್ತು ಶೈಕ್ಷಣಿಕ ಬುನಾದಿಗಳು, ಅನ್ನಪೂರ್ಣ ಮಡನಸಗಿ ವಿದ್ಯಾನಿಧಿ ಪ್ರಕಾಶನ, ಗದಗ ಪು. ೧೫೧-೧೫೨

೧೧. ವೀರಭದ್ರನಾಯಕ ಪಿ, ೨೦೧೦, *ಶಿಕ್ಷಣ ಮತ್ತು ಬುಡಕಟ್ಟು ಅಭಿವೃದ್ಧಿ ಚಾಮರಾಜನಗರ ಜಿಲ್ಲೆಯ ಆಶ್ರಮ ಶಾಲೆಗಳ ಒಂದು ವಿಮರ್ಶಾತ್ಮಕ ಅಧ್ಯಯನ*, ಅಪ್ರಕಟಿತ ಮಹಾಪ್ರಬಂಧ, ಸಮಾಜಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪು. ೧೦

೧೨. ಸದಾಶಿವಯ್ಯ ಕೆ ಎನ್, ೧೯೭೬, *ಇಂದಿನ ಶೈಕ್ಷಣಿಕ ಸಮಸ್ಯೆಗಳು ಭಾಗ-೧*, ಕೆ ಎಸ್ ಶಾರದ ವಿಶ್ವನಾಥ್ ಪ್ರಕಾಶನ, ಮೈಸೂರು.

೧೩. ಸದಾಶಿವಯ್ಯ ಕೆ ಎನ್, ೧೯೭೩, *ಸಮುದಾಯ ಶಾಲೆ*, ವಿಶ್ವನಾಥ್ ಪ್ರಕಾಶನ, ಮೈಸೂರು.

೧೪. ನಾಗೇಶ್, ೧೯೯೭, *ಗಿರಿಜನ ಸಂಸ್ಕೃತಿ ದರ್ಶನ* (ಶಿಕ್ಷಕರ ಕೈಪಿಡಿ) ಮೈಸೂರು ಮತ್ತು ಬೆಂಗಳೂರು ಗ್ರಾಮಾಂತರ ಗಿರಿಜನ ಸಂಸ್ಕೃತಿ ಆಧಾರಿತ, ಬೆಂಗಳೂರು, ಪು. ೧೫೪

ಅಧ್ಯಾಯ ಎಂಟು

# ಸಮಾರೋಪ

ಕರ್ನಾಟಕದಲ್ಲಿರುವ ೫೦ ಬುಡಕಟ್ಟುಗಳಲ್ಲಿ ಸೋಲಿಗರು ಬುಡಕಟ್ಟು ಒಂದು. ಇದು ತನ್ನ ಪ್ರಾಚೀನತೆಯ ಕಾರಣಕ್ಕಾಗಿ ಹಾಗೂ ಸಾಂಸ್ಕೃತಿಕ ವೈವಿಧ್ಯತೆಯ ಕಾರಣಕ್ಕಾಗಿ ಒಂದು ಪ್ರಮುಖ ಬುಡಕಟ್ಟಾಗಿ ಗುರುತಿಸಿಕೊಂಡಿದೆ. ಕರ್ನಾಟಕದ ದಕ್ಷಿಣ ಭಾಗದ ಬೃಹತ್ ಅರಣ್ಯದ ಒಡಲಿನಲ್ಲಿ ಇಂದಿಗೂ ಇವರು ವಿಶಿಷ್ಟವಾಗಿ ಜೀವಿಸುತ್ತಿದ್ದಾರೆ. ಬಹಳ ಪ್ರಾಚೀನದಿಂದ ಆಹಾರ ಸಂಗ್ರಹಣೆಯ ಮೂಲಕ ಜೀವನ ಸಾಗಿಸುತಿದ್ದ ಇವರು ಇಂದಿಗೂ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುವ ಕಾರ್ಯವನ್ನು ಮಾಡುತ್ತಿದ್ದಾರೆ. ಕರ್ನಾಟಕದ ದಕ್ಷಿಣ ಭಾಗದ ಅನೇಕ ಜಿಲ್ಲೆಗಳಲ್ಲಿ ಜನಪ್ರಿಯವಾಗಿರುವ ಮಲೆಮಹದೇಶ್ವರ ಕಾವ್ಯ ಸೋಲಿಗರ ಪ್ರಾಚೀನ ಬದುಕನ್ನು ಕುರಿತು ಚರ್ಚಿಸುತ್ತದೆ. ಆಹಾರ ಸಂಗ್ರಹಣೆಯ ವಿವರಗಳನ್ನು ಮತ್ತು ಪಾರಂಪರಿಕ ಕೃಷಿಯ ಮಾರ್ಗಗಳನ್ನು ಈ ಕಾವ್ಯದಲ್ಲಿ ಕಾಣಬಹುದು.

ಮಲೆಮಹದೇಶ್ವರ ಬೆಟ್ಟ, ಬಿಳಿಗಿರಿರಂಗನ ಬೆಟ್ಟ, ಹಿಮವದ್ ಗೋಪಾಲಸ್ವಾಮಿ ಬೆಟ್ಟ ಮುಂತಾದ ಗಿರಿ ಶ್ರೇಣಿಗಳ ದಟ್ಟ ಕಾಡಿನಲ್ಲಿ ವಾಸ ಮಾಡುವ ಸೋಲಿಗರ ಬದುಕು ನಮ್ಮ ಪರಂಪರೆಯ ಅನೇಕ ಜ್ಞಾನಶಾಖೆಯನ್ನು ಕಣ್ಣಮುಂದೆ ತೆರೆದಿಡುತ್ತದೆ. ಚಾಮರಾಜನಗರ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹರಡಿಕೊಂಡಿರುವ ಸೋಲಿಗ ಸಮುದಾಯದ ವಾಸಸ್ಥಳಗಳನ್ನು 'ಪೋಡು' ಎಂದು ಕರೆಯಲಾಗುತ್ತದೆ. ಇದೇ ಜಿಲ್ಲೆಗಳಲ್ಲಿರುವ ಇತರೆ ನಾಗರಿಕ ಸಮುದಾಯಗಳಿಗಿಂತ ಭಿನ್ನವಾದ ಜೀವನವನ್ನು ರೂಢಿಸಿಕೊಂಡಿರುವ ಸೋಲಿಗರು ಹಲವು ಕಾರಣಗಳಿಗಾಗಿ ಇನ್ನೂ ಕೀಳರಿಮೆಯಲ್ಲಿಯೇ ಬದುಕುತ್ತಿದ್ದಾರೆ. ಪರಂಪರೆ ಮತ್ತು ಆಧುನಿಕತೆಯ ಸಂಘರ್ಷದಲ್ಲಿ ಸಿಲುಕಿರುವ ಸೋಲಿಗ ಸಮುದಾಯವು ಇನ್ನೂ ಸ್ಪಷ್ಟವಾದ ನಿಲುವುಗಳನ್ನು ತಳೆದು ಆಧುನಿಕತೆಯನ್ನು ಮುಖಾಮುಖಿಯಾಗಿಸಿಕೊಳ್ಳುವಲ್ಲಿ ಹೆಣಗಾಡುತ್ತಿದೆ. ಅನೇಕ ಸಾಮಾಜಿಕ ಪದ್ಧತಿಗಳನ್ನು ಅರಗಿಸಿಕೊಳ್ಳುವ ಪ್ರಯತ್ನದಲ್ಲಿ ಸೋಲಿಗ ಸಮುದಾಯವು ಇದೆ. ಪ್ರಕೃತಿಯ ಒಡನಾಡಿಗಳಾಗಿ, ಗಿಡಮರಗಳ ಆರಾಧಕರಾಗಿ ಜೀವನ ನಡೆಸಿಕೊಂಡು ಬಂದ ಸೋಲಿಗರು ಇಂದಿನ ಕಾಡಿನ ಕಾನೂನುಗಳ ವ್ಯವಸ್ಥೆಯಲ್ಲಿ ತೊಳಲಾಡುತ್ತಿದ್ದಾರೆ.

ಪ್ರಾಚೀನ ಪರಂಪರೆ ಮತ್ತು ಆಧುನಿಕ ಸಂದಿಗ್ಧತೆಯಲ್ಲಿ ಸೋಲಿಗರ ಸಾಮಾಜಿಕ ಬದುಕನ್ನು ಕ್ಷೇತ್ರಕಾರ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಸೋಲಿಗ ಸಮುದಾಯದ ಒಳಗಿನ ಒಬ್ಬ ಮಹಿಳೆಯಾಗಿ ಕಣ್ಣಮುಂದಿನ ಬದುಕನ್ನೇ ಅಧ್ಯಯನದ ಚೌಕಟ್ಟಿನೊಳಗೆ ರೂಪಿಸುವ ಪ್ರಯತ್ನವನ್ನು ಇಲ್ಲಿ ಮಾಡಿದ್ದೇನೆ. ಈಗಾಗಲೇ ಸೋಲಿಗರನ್ನು ಕುರಿತು ಪ್ರಕಟವಾಗಿರುವ ಬರಹಗಳನ್ನು ಅವಲೋಕಿಸಿ ನನ್ನ ಕ್ಷೇತ್ರಕಾರ್ಯದೊಡನೆ ತುಲನೆ ಮಾಡಿ ಪ್ರಸ್ತುತ ಬದುಕಿನ ಸಂಕಥನವನ್ನು ಕಟ್ಟುವ ಪ್ರಯತ್ನ ಇಲ್ಲಿ ನಡೆದಿದೆ. ಸೋಲಿಗ ಸಮುದಾಯವನ್ನು ಕುರಿತು ಗಂಭೀರವಾದ ಮತ್ತು ಅನುಭವಜನ್ಯವಾದ

ಅಧ್ಯಯನಗಳು ನಡೆದಿರುವುದು ವಿರಳ ಎಂದೇ ಹೇಳಬೇಕು. ಅದರಲ್ಲಿಯೂ ಸಮುದಾಯದ ಒಳಗಿನವರಾಗಿ ಮತ್ತು ಒಬ್ಬ ಮಹಿಳೆಯಾಗಿ ಇಂತಹ ಅಧ್ಯಯನಗಳನ್ನು ಯಾರೂ ಮಾಡಿಲ್ಲ. ನನಗೆ ತಾಂತ್ರಿಕವಾದ ಚೌಕಟ್ಟಿಗಿಂತ, ತಾತ್ವಿಕವಾದ ಅನುಭವದ ವಿಶ್ಲೇಷಣೆಯೇ ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಒಳಗಿನ ಒಬ್ಬರ ಅನಿಸಿಕೆಯಾಗಿ ಪರಿಗಣಿಸಬೇಕೆಂದು ಕೋರುತ್ತೇನೆ.

"ಸೋಲಿಗರು ಬುಡಕಟ್ಟು: ಒಂದು ಸಮಾಜಶಾಸ್ತ್ರೀಯ ಅಧ್ಯಯನ" ಎಂಬ ಶೀರ್ಷಿಕೆಯ ಈ ಅಧ್ಯಯನದಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ. ವಕ್ತೃಗಳ ಜೊತೆ ನಡೆಸಿದ ಸಂದರ್ಶನ, ಅವಲೋಕನ ಮತ್ತು ಇತರೆ ಮೂಲಗಳ ಆಧಾರದಲ್ಲಿ ಸೋಲಿಗರ ಬದುಕನ್ನು ಕಾಣಿಸುವ ಪ್ರಯತ್ನವನ್ನು ಮಾಡಲಾಗಿದೆ.

**ಅಧ್ಯಾಯ ಒಂದು:** ಈ ಅಧ್ಯಯನದಲ್ಲಿ ವಿವರವಾದ ಪ್ರವೇಶಿಕೆಯ ಜೊತೆಗೆ ಬುಡಕಟ್ಟು ಸಮುದಾಯಗಳ ಅರ್ಥ ಮತ್ತು ವ್ಯಾಖ್ಯಾನ, ಕರ್ನಾಟಕ ಬುಡಕಟ್ಟು ಸಮುದಾಯಗಳ ವಿವರಗಳನ್ನು ನೀಡಲಾಗಿದೆ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಮತ್ತು ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ನಾನು ಆಯ್ಕೆ ಮಾಡಿಕೊಂಡಿರುವ ಸಂಶೋಧನ ವಿಧಿ-ವಿಧಾನಗಳನ್ನು ಮನಗಾಣಿಸಲಾಗಿದೆ. ಅಧ್ಯಯನಕ್ಕೆ ಪೂರಕವಾದ ಮೂಲ ಸಾಹಿತ್ಯವನ್ನು ಕುರಿತು ಚರ್ಚಿಸಲಾಗಿದೆ. ಸೋಲಿಗ ಸಮುದಾಯವನ್ನು ಕುರಿತಂತೆ ಇದುವರೆಗೆ ಆಗಿರುವ ಅಧ್ಯಯನಗಳ ಸಮೀಕ್ಷೆಯನ್ನು ನೀಡಲಾಗಿದೆ.

**ಅಧ್ಯಾಯ ಎರಡು:** ಈ ಅಧ್ಯಾಯದಲ್ಲಿ ಸೋಲಿಗರು ಬುಡಕಟ್ಟಿನ ಹಿನ್ನೆಲೆ, ಬುಡಕಟ್ಟಿನ ಲಕ್ಷಣ, ಸೋಲಿಗ ಭಾಷೆ, ಸೋಲಿಗರ ಒಳಪಂಗಡಗಳು, ಸೋಲಿಗರು ವಾಸಿಸುವ ಪೋಡುಗಳ ಮಾಹಿತಿ, ಕುಟುಂಬ ಮತ್ತು ಜನಸಂಖ್ಯಾ ವಿವರ, ಸೋಲಿಗರ ಐತಿಹ್ಯ ಮತ್ತು ಪುರಾಣಗಳು ಮುಂತಾದ ವಿವರಗಳನ್ನು ಕ್ಷೇತ್ರಕಾರ್ಯ ಆಧಾರಿತ ಮಾಹಿತಿಗಳ ಮೂಲಕ ವಿವರಿಸಲಾಗಿದೆ.

**ಅಧ್ಯಾಯ ಮೂರು:** ಸೋಲಿಗರು ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆಯನ್ನು ಕುರಿತ ಮೂರನೆಯ ಅಧ್ಯಾಯದಲ್ಲಿ ಸೋಲಿಗರ ಮನೆಗಳ ವ್ಯವಸ್ಥೆ ಪೋಡಿನ ವಿವರಗಳನ್ನು ವಿಸ್ತೃತವಾಗಿ ನೀಡಲಾಗಿದೆ. ಸರಳ, ಸುಂದರವಾದ ಅವರ ಮನೆಗಳ ಒಳರಚನೆಯನ್ನು ವಿವರಿಸಲಾಗಿದೆ. ಪರಂಪರಾಗತವಾದ ಮಣ್ಣಿನ ಗೋಡೆಯ ಹುಲ್ಲಿನ ಮನೆಗಳು, ನೆರಕೆಗೋಡೆಯ ಮನೆಗಳು, ಇತ್ತೀಚಿನ ಸೀಮೆಂಟ್ ಮತ್ತು ಹೆಂಚಿನ ಕಟ್ಟಡದ ಮನೆಗಳು, ಮೂಲಭೂತ ಸೌಕರ್ಯ ಇರುವ ಮತ್ತು ಇಲ್ಲದ ಮನೆಯ ವಿವರಗಳನ್ನು ತಿಳಿಸಲಾಗಿದೆ. ಸೋಲಿಗರ ವಿವಾಹದ ವ್ಯವಸ್ಥೆ ಅನನ್ಯವಾದ ರೀತಿಯಲ್ಲಿ ಇರುತ್ತದೆ. ಅವರಲ್ಲಿ ಇರುವ ವಿವಿಧ ಬಗೆಯ ವಿವಾಹ ಪದ್ಧತಿಗಳನ್ನು ಅವುಗಳಿಗೆ ಸಂಬಂಧಪಟ್ಟ ಹಾಡು ಮತ್ತು ಕಥೆಗಳ ಮೂಲಕ ವಿವರಿಸುವ ಪ್ರಯತ್ನ ಮಾಡಲಾಗಿದೆ. ಸೋಲಿಗರಲ್ಲಿ ಇರುವ ಅಪಹರಣ ವಿವಾಹ, ಕಾಡಿಗೆ ಓಡಿ ಹೋಗಿ ವಿವಾಹ ಎಂಬ ಹೆಣ್ಣು ಗಂಡಿಗೆ ಸ್ವತಂತ್ರ ನೀಡುವ ಪೂರ್ವ ಪದ್ಧತಿಯನ್ನು ವಿಶ್ಲೇಷಿಸಲಾಗಿದೆ. ಆಧುನಿಕ ವ್ಯವಸ್ಥೆಯ ಪರಸ್ಪರ ಒಪ್ಪಂದದ ವಿವಾಹಗಳ ಬಗೆಯೂ ಚರ್ಚಿಸಲಾಗಿದೆ. ಇತ್ತೀಚಿನ ಮದುವೆ ವಿದಿ ವಿಧಾನಗಳನ್ನು ವಿವರಿಸಲಾಗಿದೆ.

ಕುಟುಂಬದ ಒಳ ವಿವರಗಳನ್ನು ನೀಡಲಾಗಿದೆ. ಮಗುವಿನ ಜನನ ಮತ್ತು ಬಾಣಂತಿಯ ಆರೈಕೆಗೆ ಸೋಲಿಗರಲ್ಲಿ ವಿಶೇಷವಾದ ಸ್ಥಾನವಿದೆ. ಅಂತಹ ವಿಶಿಷ್ಟ ವಿಚಾರಗಳಿಗೆ ಇಲ್ಲಿ ಒತ್ತು ನೀಡಲಾಗಿದೆ. ವ್ಯಕ್ತಿಯು ತೀರಿಕೊಂಡ ನಂತರ ಆಚರಿಸುವ ಶವಸಂಸ್ಕಾರದ ವಿಧಿ ವಿಧಾನಗಳನ್ನು,

ಕುಲ ಸಂಬಂಧಿಯಾದ ಕಲ್ಲು ಗುಡಿಯ ವಿವರಗಳನ್ನು, ತಿಥಿಯ ಆಚರಣೆಗಳನ್ನು, ಆ ಸಂದರ್ಭದಲ್ಲಿ ಮೈಮೇಲೆ ದೇವರು ಬರುವ ವಿವರಗಳನ್ನು, ತೀರಿಕೊಂಡವರಿಗಾಗಿಯೇ ನಿಗದಿ ಮಾಡಲ್ಪಟ್ಟ 'ಸಗ್ಗದ' ಮನೆಯ ಕಲ್ಪನೆಗಳನ್ನು ವಿವೇಚನೆಗೆ ಒಳಪಡಿಸಲಾಗಿದೆ. ಸೋಲಿಗರ ನ್ಯಾಯ ಪದ್ಧತಿ, ಕುಲ ಪಂಚಾಯಿತಿ, ಕುಲದಿಂದ ಹೊರಹಾಕುವ ವಿಧಿ, ನಿಷೇಧಗಳು ಹಾಗೂ ಯಜಮಾನ ಕೋಲುಕಾರ, ಪಟ್ಟೆಕಾರ ಮುಂತಾದವರ ಸ್ಥಾನಮಾನಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ನಾಲ್ಕು:** ಸೋಲಿಗರು ಬುಡಕಟ್ಟಿನ ಆರ್ಥಿಕ ವ್ಯವಸ್ಥೆಯನ್ನು ವಿವರಿಸುವ ಈ ಅಧ್ಯಾಯದಲ್ಲಿ ಬುಡಕಟ್ಟುಗಳ ಅರ್ಥಿಕ ವ್ಯವಸ್ಥೆಯನ್ನು ಕುರಿತ ಟಿಪ್ಪಣಿಯೊಂದಿಗೆ ಆರಂಭಿಸಿ ಸೋಲಿಗರ ನಾಲ್ಕು ಬಗೆಯ ಪ್ರಮುಖ ಕಸುಬುಗಳನ್ನು ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ. ನಿಸರ್ಗವನ್ನು ಇದ್ದಂತೆಯೇ ಕಾಪಾಡುವ ಹಾಗೂ ಪರಿಸರ ಜಾಗೃತಿಯನ್ನು ಸದಾ ಬದುಕಿನ ಭಾಗವಾಗಿಸುವ ಸೋಲಿಗರ ಕಸುಬುಗಳು ವ್ಯಾಪಾರಿ ದೃಷ್ಟಿಯಿಂದ ಹೇಗೆ ಹೊರತಾಗಿದ್ದವು ಎಂಬುದನ್ನು ವಿಶ್ಲೇಷಿಸಲಾಗದೆ. ಸೋಲಿಗರ ಅರಣ್ಯ ಆಧಾರಿತ ಕೃಷಿ, ಸ್ಥಳಾಂತರ ಕೃಷಿ ಪದ್ಧತಿ, ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಜೇನು ಬೇಟೆಯ ಪ್ರಾದಾನ್ಯತೆ ಹಾಗೂ ಇತ್ತೀಚಿನ ಆಧುನಿಕ ವೃತ್ತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಪ್ರಾಚೀನ ಕಾಲದ ಆಹಾರ ಸಂಗ್ರಹಣೆಯ ವಿಧಿ ವಿಧಾನಗಳನ್ನು, ಇಂದಿಗೂ ಉಳಿಸಿಕೊಂಡಿರುವ ಸೋಲಿಗರು ಕಾಡಿನ ಪರಿಸರಕ್ಕೆ ಧಕ್ಕೆಯಾಗದ ಕೃಷಿಯನ್ನು ಮಾಡಬಲ್ಲವರು. ಮಳೆ ಮತ್ತು ನಕ್ಷತ್ರಗಳನ್ನು ಆಧರಿಸಿ ಇವರು ಬೆಳೆಯುವ ಧವಸ ಧಾನ್ಯಗಳು ಮತ್ತು ಸೊಪ್ಪು-ತರಕಾರಿಗಳು ಅತ್ಯಂತ ವಿಶಿಷ್ಟವಾದವುಗಳು. ಮಣ್ಣಿನ ಫಲವತ್ತತೆಯನ್ನು ಹಾಳುಮಾಡದ ಇವರ ಸಾಂಪ್ರದಾಯಿಕ ಕೃಷಿ ವಿಧಾನ ಇವತ್ತಿನ **'ಸಾವಯವ ಕೃಷಿಗೆ'** ಒಂದು ಮಾದರಿ. ರಾಗಿಯನ್ನು ಯಥೇಚ್ಚವಾಗಿ ಬೆಳೆಯುವ ಸೋಲಿಗರಿಗೆ ರಾಗಿಯ ಬಗೆಗೆ ಹಾಡನ್ನು ಕಟ್ಟಿ ಹಾಡುವುದಕ್ಕೂ ಅಷ್ಟೇ ಉತ್ಸಾಹ.

ಹೀಗೆ ಸಾಂಪ್ರದಾಯಿಕ ವಿಧಿ-ವಿಧಾನಗಳಲ್ಲಿ ಬೇಸಾಯ ಮಾಡುತ್ತಿದ್ದ ಸೋಲಿಗರು ಇತ್ತೀಚಿನ ವರ್ಷಗಳಲ್ಲಿ ಕಾಫಿ ಎಸ್ಟೇಟ್‌ಗಳಲ್ಲಿ, ಭೂಮಾಲೀಕರ ಹೊಲ ಗದ್ದೆಗಳಲ್ಲಿ ಕೃಷಿ ಕೂಲಿಗಳಾಗಿ ಕೆಲಸ ಮಾಡುತ್ತ ಕಾಫಿ ಬೆಳೆಯುವಲ್ಲಿಯೂ ಪಳಗಿದ್ದಾರೆ. ಇಷ್ಟೆಲ್ಲದರ ಆಚೆಗೆ ಇಂದಿಗೂ ಕಾಡಿನಲ್ಲಿ ಸಂಗ್ರಹಿಸುವ ಕಿರು ಅರಣ್ಯ ಉತ್ಪನ್ನಗಳೇ ಅವರ ಆರ್ಥಿಕತೆಯ ಮೂಲವಾಗಿದೆ. ಸೋಲಿಗರು ಸಂಗ್ರಹಿಸುವ ಹೆಜ್ಜೇನು, ತುಡುವೆ ಜೇನು, ಕಿರುಜೇನು, ಕೋಲುಜೇನು ಮುಂತಾದ ಜೇನುಗಳ ಸವಿ ನಾಡಿನ ಜನರಿಗೆ ಚಿರಪರಿಚಿತವಾಗಿದೆ.

ಇಷ್ಟೆಲ್ಲ ಶ್ರಮವಹಿಸಿದರೂ ಸಹ ಸೋಲಿಗರು ಸಂಗ್ರಹಿಸುವ ಉತ್ಪನ್ನಗಳಿಗೆ ಸರಿಯಾದ ಮಾರುಕಟ್ಟೆಗಳಿಲ್ಲ. ಗಿರಿಜನರ ವಿವಿದ್ದೋದ್ದೇಶ ಸಹಕಾರ ಸಂಘಗಳು (ಲ್ಯಾಂಪ್ಸ್) ಮುಂತಾದ ಯಾವುದೇ ವ್ಯವಸ್ಥೆಯು ಅವರಿಗೆ ನ್ಯಾಯ ದೊರಕಿಸಿಕೊಡುವಲ್ಲಿ ವಿಫಲವಾಗಿದೆ. ಈ ಎಲ್ಲಾ ಕಾರಣಗಳಿಂದ ಸೋಲಿಗರು ತಮ್ಮ ಕುಲ ಮತ್ತು ಕುಲ ಕಸುಬುಗಳಿಂದ ವಿಮುಖರಾಗಿ ಧನಿಕರ ಹೊಲ ಮತ್ತು ಅರಣ್ಯ ಇಲಾಖೆಯಲ್ಲಿ ಕೂಲಿಗಳಾಗಿ ಕಾರ್ಯನಿರ್ವಹಿಸುವುದು ಅನಿವಾರ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಬಡ್ಡಿಸಾಲ ಮತ್ತು ಚಕ್ರಬಡ್ಡಿಯ ಸಾಲಕ್ಕೆ ಸಿಲುಕಿ ಮಾನಸಿಕ ನೆಮ್ಮದಿಯನ್ನು ಕಳೆದುಕೊಳ್ಳುವ ಪರಿಸ್ಥಿತಿಯೂ ಉಂಟಾಗಿದೆ.

**ಅಧ್ಯಾಯ ಐದು:** ಸೋಲಿಗರು ಬುಡಕಟ್ಟಿನ ಧಾರ್ಮಿಕ ಹಿನ್ನೆಲೆ ಎಂಬ ಈ ಅಧ್ಯಾಯ ಪ್ರಮುಖವಾಗಿ ಸೋಲಿಗರ ದೈವಾರಾಧನೆಯನ್ನು ಕುರಿತು ಚರ್ಚಿಸುತ್ತದೆ. ಸೊಲಿಗರು ಪ್ರಾಚೀನಕಾಲದಿಂದಲೂ ಪ್ರಕೃತಿಯ ಆರಾಧಕರು ತಮ್ಮ ಪೂರ್ವಜರ ಆತ್ಮವು ತಮ್ಮ ಸುತ್ತಲ ಸಸ್ಯ, ಪ್ರಾಣಿ, ಬಂಡೆ ಮತ್ತು ಬೆಟ್ಟಗಳಲ್ಲಿ ಸೇರಿಕೊಂಡಿರುತ್ತವೆ ಎಂಬ ನಂಬಿಕೆಯುಳ್ಳವರಾಗಿದ್ದರು. ಇಡೀ ಸೋಲಿಗ ಕುಲ ಪೂಜಿಸುವ ಬಿಳಿಗಿರಿರಂಗನ ಬೆಟ್ಟದ **'ದೊಡ್ಡಸಂಪಿಗೆ ಮರ'** ಇಂದಿಗೂ ಸೋಲಿಗರ ಪವಿತ್ರ ಆರಾಧನೆಯ ಸ್ಥಳವಾಗಿ ಉಳಿದಿದೆ. ನಂತರದ ಕಾಲ ಘಟ್ಟಗಳಲ್ಲಿ ತಮ್ಮ ಹಿರಿಯರ ಸಂಕೇತವಾದ ಸಾಂಸ್ಕೃತಿಕ ವೀರರೆನಿಸಿದ **ಕೇತದೇವರು, ಜಡೆದೇವರು, ಪಂದದೇವರು, ಬೊಮ್ಮದೇವರು, ಬೀರದೇವರು ಕಾರಯ್ಯ** ಮತ್ತು **ಬಿಲ್ಲಯ್ಯ** ಮುಂತಾದವರನ್ನು ಆರಾಧಿಸಲಾರಂಭಿಸುತ್ತಾರೆ. ಇಂದಿಗೂ ಈ ದೇವರುಗಳು ಆರಾಧಿಸಲ್ಪಡುತ್ತವೆ. ನಂತರದ ಕಾಲಘಟ್ಟದಲ್ಲಿ 'ಮಲೆಮಹದೇಶ್ವರ', ನಂಜುಂಡೇಶ್ವರ, ಬಿಳಿಗಿರಿರಂಗ, ಚಾಮುಂಡೇಶ್ವರಿ, ಮುಂತಾದ ದೈವಗಳನ್ನು ಅಪ್ಪಿಕೊಂಡರು. ಮಾತೃದೇವತೆಯರ ಪೂಜೆಯು ಸೋಲಿಗರಲ್ಲಿ ಅನೂಚಾನವಾಗಿ ನಡೆದು ಬಂದಿದೆ. ಹೀಗೆ ನಿಸರ್ಗದತ್ತ ಆರಾಧನೆಯಿಂದ ಆರಂಭಿಸಿ ಇಂದಿನ ಆಧುನಿಕ ದೈವರಾಧನೆಯೆಡೆಗೆ ಸೋಲಿಗರ ದೈವಾರಾಧನೆಯ ಮಜಲುಗಳು ಕಂಡುಬರುತ್ತದೆ. ದೈವಾರಾಧನೆಯ ಈ ಅವಾಸ್ತಾಂತರಗಳನ್ನು ದೈವಗಳಿಗೆ ಸಂಬಂಧಿಸಿದ ಪ್ರಮುಖ ಹಾಡುಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಇವೆಲ್ಲಕ್ಕಿಂತ ಪ್ರಮುಖವಾಗಿ ತಮ್ಮ ಪಿತೃಗಳ ಆರಾಧನೆಯೇ ಇವರಿಗೆ ಮುಖ್ಯ. ತಮ್ಮ ಪಿತೃಗಳನ್ನು ಹಾಗೂ ದೇವರುಗಳನ್ನು ಮೈಮೇಲೆ ಆಹ್ವಾನಿಸಲು **'ಗುಂಜಿ', ಮತ್ತು 'ಬುರುಡೆ ಕರೆಯುವ'** ಆಚರಣೆಯನ್ನು ಕೈಗೊಳ್ಳುತ್ತಾರೆ. ಸೋಲಿಗರ ಪರಿಣಾಮವನ್ನುಂಟುಮಾಡಿದ ಶೈವ ಧರ್ಮ ಮತ್ತು ವೈಷ್ಣವ ಧರ್ಮದ ಪ್ರಭಾವಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ಆರು:** ಸೋಲಿಗರು ಬುಡಕಟ್ಟಿನ ನಂಬಿಕೆ ಮತ್ತು ಆಚರಣೆಗಳನ್ನು ಕುರಿತ ಈ ಅಧ್ಯಾಯದಲ್ಲಿ ಸೋಲಿಗರ ಹಬ್ಬ ಮತ್ತು ಸೋಲಿಗರ ವೈದ್ಯ ಪದ್ಧತಿಗಳನ್ನು ವಿವರಿಸಲಾಗಿದೆ. ಸೋಲಿಗರು ಬೆಳೆಯುವ ಧಾನ್ಯಗಳಲ್ಲಿ **'ರಾಗಿಗೆ'** ಹೆಚ್ಚಿನ ಮಹತ್ವವಿದೆ. ಹಾಗಾಗಿ ರಾಗಿಗೆ ಸಂಬಂಧಿಸಿದ ಒಂದು ವಿಶಿಷ್ಟ ಹಬ್ಬವನ್ನೇ ಸೋಲಿಗರು ಆಚರಿಸುತ್ತಾರೆ. ಅದನ್ನು 'ಹೊಸರಾಗಿ ಹಬ್ಬವೆಂದು' ಕರೆಯುತ್ತಾರೆ. ಸೋಲಿಗರ ಮತ್ತೊಂದು ಪ್ರಮುಖ ಹಬ್ಬವೆಂದರೆ 'ರೊಟ್ಟಿ ಹಬ್ಬ', ತುಂಬು ಹುಣ್ಣಿಮೆಯಲ್ಲಿ ಆಚರಿಸುವ ಈ ರಾಗಿ ರೊಟ್ಟಿ ಹಬ್ಬ ಅನೇಕ ಹಾಡು, ಕುಣಿತ, ಕಥೆ ಕುಣಿತಗಳ ಮೂಲಕ ನೆರವೇರುತ್ತದೆ. ರೊಟ್ಟಿ ಹಬ್ಬದಂದು ನಡೆಯುವ **'ಗೋರುಕನ'** ಕುಣಿತ ಎಂಬ ನೃತ್ಯ ಸೋಲಿಗ ಸಮುದಾಯದ ಒಂದು ವಿಶಿಷ್ಟ ಕಲೆ. ಸೋಲಿಗರ ಸಂಕ್ರಾಂತಿ ಹಬ್ಬ, ಜಡೆಸ್ವಾಮಿ ಹಬ್ಬ ಮುಂತಾದ ಹಬ್ಬಗಳ ವಿವರಣೆಯನ್ನು ಇಲ್ಲಿ ನೀಡಲಾಗಿದೆ.

ಈ ಅಧ್ಯಾಯದ ಪ್ರಮುಖ ಅಂಶ ಸೋಲಿಗರ **'ವೈದ್ಯ ಪದ್ಧತಿಯನ್ನು'** ಕುರಿತಾಗಿದೆ. ನಂಬಿಕೆ ಆಚರಣೆಗಳ ಮೂಲಕ ಮನುಷ್ಯನ ಮಾನಸಿಕ ಸ್ಥಿತಿಗತಿಗಳಿಗೆ ಉಪಚಾರ ನೀಡುತ್ತ ಸೋಲಿಗರು ದೈಹಿಕವಾದ ರೋಗ ರುಜಿನಗಳಿಗೆ ಪ್ರಕೃತಿದತ್ತವಾದ ನಾರುಬೇರಿನ ಗಿಡಮೂಲಿಕಾ ಔಷಧಿಗಳನ್ನು ಮಾಡುವುದರಲ್ಲಿ ನಿಸ್ಸೀಮರು. ಗಿಡದ ಸೊಪ್ಪು, ಮರದ ಚೆಕ್ಕೆ, ನೆಲದೊಳಗಿನ ಬೇರು ಅಲ್ಲದೆ ಆಹಾರ ಧಾನ್ಯ ಮತ್ತು ಕಾಡಿನ ಕಿರು ಉತ್ಪನ್ನಗಳನ್ನೇ ಬಳಸಿ ಮಾಡುವ ಔಷಧೋಪಚಾರಗಳು ಅನೇಕ ಬಗೆಯಲ್ಲಿವೆ. ಸೋಲಿಗರಲ್ಲಿ ಅನೇಕ ಬಗೆಯ ಮಾಂತ್ರಿಕ ವೈದ್ಯ ಪದ್ಧತಿಯು ರೂಡಿಯಲ್ಲಿದೆ. ನಾಯಿಯ

ಕಡಿತಕ್ಕೆ, ಹಾವಿನ ಕಡಿತಕ್ಕೆ, ಕ್ರಿಮಿಕೀಟಗಳ ಕಡಿತಕ್ಕೆ ಸರಳ ಔಷಧಿಗಳ ಮೂಲಕವೇ ಪರಿಹಾರ ಕಂಡುಕೊಳ್ಳುತ್ತಾರೆ. ಸೋಲಿಗರಲ್ಲಿ ಬಹು ಜನಪ್ರಿಯವಾದ ಹಾಗೂ ಅವರ ಪರಂಪರೆಯ ಜ್ಞಾನದ ಪ್ರತೀಕವಾದ **'ಹೆರಿಗೆ ಮಾಡಿಸುವ ಪದ್ಧತಿ'** ಅಧ್ಯಯನಯೋಗ್ಯವಾಗಿದೆ. ಸೋಲಿಗರ **'ಜಲ್ಲೆಸಿದ್ದಮ್ಮ'** ಎಂಬ ಮಹಿಳೆ ಒಬ್ಬ ಸಾವಿರಾರು ಹೆರಿಗೆಗಳನ್ನು ಮಾಡಿಸಿ **'ಸಾವೇ ಇಲ್ಲದ ಹೆರಿಗೆಗೆ'** ಪ್ರಸಿದ್ಧರಾಗಿದ್ದರು; ಅವರಿಗೆ ರಾಜ್ಯ ಸರ್ಕಾರದಿಂದ ಅನೇಕ ಪ್ರಶಸ್ತಿಗಳು ಬಂದಿವೆ. ಅಂತಹ ಎಷ್ಟೋ ಪರಿಣಿತ ಮಹಿಳೆಯರು ಸೋಲಿಗ ಸಮುದಾಯದಲ್ಲಿ ಈಗಲೂ ಇದ್ದಾರೆ.

ಆದರೆ ಇಂದಿನ ಆಧುನಿಕ ವೈದ್ಯ ಪದ್ಧತಿಯ ಅಳವಡಿಕೆಯಿಂದಾಗಿ ಸೋಲಿಗರ ಪರಂಪರೆಯ ವೈದ್ಯ ಕ್ಷೀಣಿಸುತ್ತಿದೆ. ಆಧುನಿಕ ವೈದ್ಯ ಪದ್ಧತಿಯ ಜೊತೆಜೊತೆಗೆ ಸೋಲಿಗರ ಪ್ರಾಚೀನ ಜ್ಞಾನದ ಪ್ರತೀಕವಾದ **'ದೇಸಿ'** ವೈದ್ಯ ಪದ್ಧತಿಯು ಉಳಿಯಬೇಕೆಂಬ ಹಿನ್ನೆಲೆಯಲ್ಲಿ ಕೆಲವು ಸಲಹೆಗಳನ್ನು ಈ ಅಧ್ಯಾಯದಲ್ಲಿಯೇ ನೀಡಲಾಗಿದೆ.

**ಅಧ್ಯಾಯ ಏಳು:** ಸೋಲಿಗರ ಬದುಕಿನ ಮೇಲೆ ಆಧುನಿಕ ವ್ಯವಸ್ಥೆ ಉಂಟುಮಾಡುತ್ತಿರುವ ಪರಿಣಾಮಗಳಿಂದಾಗಿ ಸೋಲಿಗರು ಅನೇಕ ಬದಲಾವಣೆಗೆ ಒಳಗಾಗುತಿದ್ದಾರೆ. ಈ ಸ್ಥಿತ್ಯಂತರವು ಪ್ರಮುಖವಾಗಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಉಂಟಾಗುತ್ತಿದೆ. ಆರಂಭದಲ್ಲಿ ಆಹಾರ ಸಂಗ್ರಾಹಕರಾಗಿ ನಂತರ ಪಶುಪಾಲಕರಾಗಿ ಜೀವನ ನಡೆಸುವ ಪರಾವಲಂಬಿಗಳಾಗಿದ್ದಾರೆ. ಭೂಮಾಲೀಕರ ಕಿರುಕುಳ, ಅರಣ್ಯ ಇಲಾಖೆಯ ಕಟ್ಟುಪಾಡುಗಳು, ಜಾಗತೀಕರಣದ ದುಷ್ಪರಿಣಾಮಗಳಿಂದಾಗಿ ಸೋಲಿಗರ ಆರ್ಥಿಕ ಬದುಕು ದುಸ್ಥಿತಿಯಲ್ಲಿದೆ. ಈ ಅಂಶಗಳಿಗೆ ಒತ್ತು ಕೊಟ್ಟು ಇಲ್ಲಿ ಚರ್ಚಿಸಲಾಗಿದೆ.

ಸೋಲಿಗರಿಗೆ ಅಕ್ಷರ ಜ್ಞಾನವಿಲ್ಲದಿದ್ದರೂ ನಿಸರ್ಗದ ಜ್ಞಾನ ಚೆನ್ನಾಗಿತ್ತು. ಅವರ ಪರಂಪರೆಯ ಅನುಭವವೇ ಸೋಲಿಗರನ್ನು ಜ್ಞಾನವಂತರನ್ನಾಗಿ ಮಾರ್ಪಡಿಸಿತ್ತು. ಸ್ವಾತಂತ್ರ್ಯ ನಂತರದಲ್ಲಿ ಸೋಲಿಗರಿಗೂ ಅಕ್ಷರಜ್ಞಾನವನ್ನು ನೀಡುವ ಧ್ಯೇಯದಿಂದಾಗಿ ಗಿರಿಜನ ಆಶ್ರಮ ಶಾಲೆಗಳನ್ನು ನಿರ್ಮಾಣ ಮಾಡಲಾಯಿತು. ಈ ಕಾರಣದಿಂದಾಗಿ ಅನೇಕ ಸೋಲಿಗರ ಮಕ್ಕಳು ಅಕ್ಷರವಂತರಾಗಲು ಸಾಧ್ಯವಾಯಿತು. ಬಿಳಿಗಿರಿರಂಗನ ಬೆಟ್ಟದ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವು ಸೋಲಿಗ ಮಕ್ಕಳಿಗೆ ಶಿಕ್ಷಣ ನೀಡಲು ಹೆಚ್ಚು ಶ್ರಮ ವಹಿಸಿತು. ಇಷ್ಟೆಲ್ಲದರ ನಡುವೆಯೂ ಸೋಲಿಗ ಮಕ್ಕಳು ಯುವ ಜನರು ಆಧುನಿಕ ಶಿಕ್ಷಣದಿಂದ ಹೇಗೆ ವಂಚಿತರಾಗುತ್ತಿದ್ದಾರೆ ಎಂಬ ಸೂಕ್ಷ್ಮ ವಿವರಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಒಟ್ಟಾರೆ ಜಾಗತೀಕರಣದ ಪ್ರಭಾವದಿಂದಾಗಿ ಸೋಲಿಗ ಸಮುದಾಯದ ವ್ಯಕ್ತಿ ಮತ್ತು ಕುಟುಂಬಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಕೂಡ ಗುರುತಿಸುವ ಕೆಲಸವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಅಧ್ಯಯನದ ಫಲಿತಗಳು**

೧. ಸೋಲಿಗರು ಪ್ರಾಚೀನ ಕಾಲದಿಂದಲೂ ಕರ್ನಾಟಕದ ದಕ್ಷಿಣ ಭಾಗದ ದಟ್ಟ ಅರಣ್ಯಗಳಲ್ಲಿ ವಾಸ ಮಾಡುತ್ತಿದ್ದವರು. ಸಾತಂತ್ರ್ಯ ನಂತರದ ಈ ದಿನಗಳಲ್ಲಿ ಕೆಲವರು ಅದೇ ಕಾಡಿನ ಪೋಡು ಗಳಲ್ಲಿಯೂ, ಕೆಲವರು ಊರಂಚಿನ ಪ್ರತ್ಯೇಕ ಕಾಲೋನಿ ಸ್ವರೂಪದ ಆಧುನಿಕ ಪೋಡುಗಳಲ್ಲಿಯೂ ವಾಸಿಸುತ್ತಿದ್ದಾರೆ. ಕಾಡಿನಲ್ಲಿ ಇರುವವರು ಪ್ರಸ್ತುತದಲ್ಲಿಯೂ ಕಿರುಅರಣ್ಯ ಉತ್ಪನ್ನಗಳ ಸಂಗ್ರಹವನ್ನೇ

ಪ್ರಮುಖ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ನಾಡುಗಳಲ್ಲಿ ಇರುವವರು ಸ್ವತಃ ಕೃಷಿ ಮತ್ತು ಕೃಷಿ ಕೂಲಿ ವೃತ್ತಿಯನ್ನು ನಿರ್ವಹಿಸುತ್ತಿದ್ದಾರೆ.

೨. ಸೋಲಿಗರು ಕಾಡುಗಳಲ್ಲಿ ವಾಸವಿರಲಿ ಅಥವಾ ನಾಡಿನ ಪೋಡುಗಳಲ್ಲಿಯೇ ವಾಸವಿರಲಿ ಪ್ರಕೃತಿಯ ಸಂಬಂಧವನ್ನು ಬಿಟ್ಟವರಲ್ಲ; ಪ್ರಕೃತಿ ಜೊತೆಗಿನ ಅವಿನಾಭಾವ ಸಂಬಂಧ ಅವರ ಜೀವನದ ಎಲ್ಲಾ ಹಂತಗಳಲ್ಲಿಯೂ ಕಂಡುಬರುತ್ತದೆ.

೩. ಸೋಲಿಗರ ಪಾರಂಪರಿಕ ವೈದ್ಯಪದ್ಧತಿ ಅತ್ಯಂತ ಮೌಲಿಕವಾದುದಾಗಿದೆ. ಸುತ್ತಲ ನಿಸರ್ಗದಿಂದಲೇ ಔಷಧಿಗಳನ್ನು ಪಡೆಯುವ ಇವರ ಪಾರಂಪರಿಕ ಜ್ಞಾನ ಅನನ್ಯವಾದುದ್ದು. ಇವರ ಹೆರಿಗೆಯ ಪದ್ಧತಿ ಆಧುನಿಕ ಕಾಲಕ್ಕೂ ಒಂದು ಆದರ್ಶ ಪದ್ಧತಿಯಾಗಿದೆ.

೪. ಸೋಲಿಗರ ವಿವಾಹ ಪದ್ಧತಿ ಅತ್ಯಂತ ಆರೋಗ್ಯಕರ ಲಕ್ಷಣವನ್ನು ಹೊಂದಿದೆ. ಪ್ರಾಚೀನ ಕಾಲದಿಂದಲೂ ಹೆಚ್ಚಿನ ಕಟ್ಟುಪಾಡುಗಳೇನು ಇಲ್ಲದ ಈ ಪದ್ಧತಿಯಲ್ಲಿ ವರ ಮತ್ತು ವಧುವಿಗೆ ಪರಸ್ಪರ ಆಯ್ಕೆಯ ಸ್ವಾತಂತ್ರ್ಯವಿದೆ.

೫. ಸೋಲಿಗರ ಕೃಷಿ ಪದ್ಧತಿ ಕೂಡ ನಿಸರ್ಗದ ಉಳಿವಿಗೆ ಪೂರಕವಾದುದ್ದಾಗಿದೆ. ಇವರ ಸ್ಥಳಾಂತರ ಬೇಸಾಯ ಪದ್ಧತಿಯು ಕಾಡಿನ ಉಳಿವಿಗೆ ಪೂರಕವಾದುದಾಗಿದೆ.

೬. ಸೋಲಿಗರು ರಾಗಿಯನ್ನು ಬೆಳೆಯುವ ಪದ್ಧತಿ, ಅವರು ಮಾಡುವ ರೊಟ್ಟಿ ಹಬ್ಬ ಹಾಗೂ ಇದಕ್ಕೆ ಪೂರಕವಾದ ಗೋರುಕಾನ ಕುಣಿತವು ಸೋಲಿಗರ ಪ್ರಾಚೀನತೆಯನ್ನು ಹಾಗೂ ನೈಸರ್ಗಿಕ ಪೋಡು ಕೃಷಿ ಪದ್ಧತಿಯನ್ನು ಸಂಕೇತಿಸುತ್ತದೆ.

೭ ಸೋಲಿಗರು ಪ್ರಮುಖವಾಗಿ ನಿಸರ್ಗವನ್ನೇ ದೈವವನ್ನಾಗಿ ಆರಾಧಿಸಿದವರು; ಈಗಲೂ ಸೋಲಿಗರು ಆರಾಧಿಸುವ ದೊಡ್ಡಸಂಪಿಗೆ ಮರದ ಪೂಜೆ ಇವರ ಚರಿತ್ರೆಯನ್ನು ಪುರಾತನ ಕಾಲಕ್ಕೆ ಒಯ್ಯುತ್ತದೆ. ಸೋಲಿಗರ ಕುಲ ಚಿಹ್ನೆಗಳು ನಿಸರ್ಗದ ಜೊತೆಗಿನ ಸಂಬಂಧವನ್ನೇ ಸ್ಥಾಪಿಸುತ್ತವೆ.

೮. ಸೋಲಿಗರ ಮೌಖಿಕ ಸಾಹಿತ್ಯ ಸಂಪತ್ತು ಅಪಾರವಾದುದ್ದಾಗಿದೆ. ಮಲೆಮಹದೇಶ್ವರ ಕಾವ್ಯ, ಬಿಳಿಗಿರಿರಂಗನ ಕಾವ್ಯ, ಗೋರುಕಾನ ಹಾಡು, ಖಗ್ಗದ ಸಾಲುಗಳು, ಹಾಡುಕೆ, ಓಲಗ ಮುಂತಾದ ಸಾಹಿತ್ಯ ಪ್ರಕಾರಗಳು ಸೋಲಿಗರ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಮೌಖಿಕ ಚರಿತ್ರೆಯನ್ನು ನಿರೂಪಿಸುತ್ತದೆ.

೯. ಸೋಲಿಗರ ದೈವಾರಾಧನೆಯ ಸಂದರ್ಭದಲ್ಲಿ ಅನೇಕ ಅವಸ್ಥಾಂತರಗಳನ್ನು ಗುರುತಿಸಲು ಸಾಧ್ಯವಿದೆ. ನಿಸರ್ಗ ಪೂಜೆಯಿಂದ ಹಿರಿಯರ ಆತ್ಮದ ಆರಾಧನೆಗೆ, ನಂತರದ ಕಾಲಘಟ್ಟದಲ್ಲಿ ತಮ್ಮ ಸಾಂಸ್ಕೃತಿಕ ನಾಯಕರ ಆರಾಧನೆಗೆ, ತದನಂತರದಲ್ಲಿ ಶೈವ ಮತ್ತು ವೈಷ್ಣವ ಪಂಥದ ಆರಾಧನೆಗೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ.

೧೦. ಸೋಲಿಗರ ವ್ಯಕ್ತಿ ಮತ್ತು ಕುಟುಂಬ ಸಂಬಂಧಗಳು ಆಧುನಿಕ ಕಾಲದ ವ್ಯವಸ್ಥೆಗೆ ತಕ್ಕಂತೆ ಬದಲಾವಣೆಗೆ ಒಳಪಡುತ್ತಿದೆ. ಪೋಡಿನ ನ್ಯಾಯ ವ್ಯವಸ್ಥೆ ಮತ್ತು ಕಟ್ಟೆಮನೆಯ ಪಂಚಾಯಿತಿ ವ್ಯವಸ್ಥೆಗಳು ಆಧುನಿಕ ರಾಜಕೀಯ ವ್ಯವಸ್ಥೆಗಳ ಪ್ರಭಾವದ ಕಾರಣಗಳಿಂದಾಗಿ ಶಿಥಿಲಗೊಳ್ಳುತ್ತಿವೆ.

ಭೂಮಾಲೀಕರ, ಬಲಾಢ್ಯರ ಮತ್ತು ಮೇಲ್ವರ್ಗದವರ ಪರೋಕ್ಷ ಆಳ್ವಿಕೆಗೆ ಒಳಗಾಗುವ ಅನಿವಾರ್ಯತೆ ಎದುರಾಗಿದೆ.

೧೧. ಪರಂಪರೆಯ ಅನುಭವದ ಜ್ಞಾನವನ್ನೇ ವಿದ್ಯೆ ಎಂದು ಪರಿಗಣಿಸಿದ್ದು ಸೋಲಿಗರು ಆಧುನಿಕ ಶಿಕ್ಷಣ ವ್ಯವಸ್ಥೆಯ ಪ್ರಯೋಜನೆಗಳನ್ನು ಪಡೆಯಲು ಇನ್ನೂ ಸಾಹಸ ಪಡುತ್ತಿದ್ದಾರೆ. ಸರಕಾರದ ಆಶ್ರಮ ಶಾಲೆಗಳು ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳ ಪ್ರಯತ್ನದ ನಡುವೆಯೂ ಸೋಲಿಗರ ಮಕ್ಕಳು ಸಾಮಾನ್ಯ ಶಿಕ್ಷಣ ಮತ್ತು ಉನ್ನತ ಶಿಕ್ಷಣ ಪಡೆಯಲು ವಿಫಲರಾಗುತ್ತಿದ್ದಾರೆ.

೧೨. ಒಂದಾನೊಂದು ಕಾಲಕ್ಕೆ ತಮ್ಮದೇ ಕಾಡಿನಲ್ಲಿ ಸ್ವತಂತ್ರವಾಗಿ, ಸ್ವಚ್ಛಂದತೆಯಿಂದ ಜೀವನ ನಡೆಸುತ್ತಿದ್ದ ಸೋಲಿಗರು ಅರಣ್ಯ ಇಲಾಖೆ ಮತ್ತು ಆಧುನಿಕ ವ್ಯವಸ್ಥೆಯ ಕಟ್ಟುಪಾಡುಗಳಿಂದಾಗಿ ಪರಾವಲಂಬಿಗಳಾಗಿ ಬದುಕಬೇಕಾದ ದಾರುಣ ವ್ಯವಸ್ಥೆ ಸೃಷ್ಟಿಯಾಗಿದೆ.

೧೩. ಬುಡಕಟ್ಟು ಸಮುದಾಯಗಳಿಗೆ ಸಿಗಬೇಕಾದ ಸೌಲಭ್ಯಗಳು ಮತ್ತು ರೂಪಿಸಬೇಕಾದ ಯೋಜನೆಗಳು ಮತ್ತು ಅನುಷ್ಠಾನಗೊಳಿಸಬೇಕಾದ ಕಾರ್ಯಕ್ರಮಗಳು ಬದ್ಧತೆಯ ಕೊರತೆಯಿಂದಾಗಿ ಹಾಗೂ ನಿರ್ಲಕ್ಷ್ಯತೆಯಿಂದಾಗಿ ಈ ಸಮುದಾಯವನ್ನು ಆತಂಕದ ಸ್ಥಿತಿಯಲ್ಲಿ ಇಟ್ಟಿವೆ.

**ಸಲಹೆಗಳು**

- ವಾಸಿಸಲು ಪ್ರತಿಯೊಂದು ಸೋಲಿಗರ ಕುಟುಂಬಗಳಿಗೂ ವಾಸದ ನೆಲೆಯನ್ನು ಕಲ್ಪಿಸುವುದು.
- ಸೋಲಿಗರು ಸಮುದಾಯದ ಪಾರಂಪರಿಕವಾದ ಜ್ಞಾನಸಂಪತ್ತನ್ನು ಉಳಿಸಿ ಬೆಳೆಸುವುದು.
- ಕಿರು ಅರಣ್ಯ ಉತ್ಪಾದನೆ ಮತ್ತು ಸಂಗ್ರಹಕ್ಕೆ ಅವಕಾಶ ಕಲ್ಪಿಸಿಕೊಡುವುದು.
- ಅರಣ್ಯ ಇಲಾಖೆಯಲ್ಲಿ ಸೋಲಿಗರಿಗೆ ಉದ್ಯೋಗ ಕಲ್ಪಿಸಿಕೊಡುವುದು.
- ಸಹಕಾರ ಸಂಘಗಳ ಮರುಸ್ಥಾಪನೆ ಮತ್ತು ಉತ್ತೇಜನ ನೀಡುವುದು.
- ಸಮೂಹ ಜೀವನದ ಮೌಲ್ಯಗಳನ್ನು ವೃದ್ಧಿಪಡಿಸುವುದು.
- ಪಾರಂಪರಿಕ ವಿವಾಹ ಪದ್ಧತಿಗಳಿಗೆ ಹೆಚ್ಚು ಪ್ರೋತ್ಸಾಹ ನೀಡುವುದು.
- ಗಿರಿಜನ ಆಶ್ರಮ ಶಾಲೆಗಳನ್ನು ನವೋದಯ ಮಾದರಿಯಂತೆ ರೂಪಿಸುವುದು. ಸಮುದಾಯದಲ್ಲಿ ತರಬೇತಿ ಹೊಂದಿದ ಯುವಕ ಯುವತಿಯರನ್ನು ಕಡ್ಡಾಯವಾಗಿ ಹೆಚ್ಚಿನ ತರಬೇತಿ ಕೊಟ್ಟು ಬುಡಕಟ್ಟು ಶಾಲೆಗೆ ನೇಮಕ ಮಾಡುವುದು.
- ಸಮುದಾಯದಲ್ಲಿ ಉನ್ನತ ವ್ಯಾಸಂಗ ಮಾಡಿದವರನ್ನು ಸರಕಾರ ಗುರುತಿಸಿ, ಅವರಿಗೆ ಸರಕಾರದ ವತಿಯಿಂದ ಹೆಚ್ಚಿನ ತರಬೇತಿ ನೀಡಿ ಅರಣ್ಯವಾಸಿಗಳು ವಾಸಿಸುವ ಪ್ರದೇಶಗಳಿಗೆ ಬುಡಕಟ್ಟು ಯೋಜನಾಧಿಕಾರಿಗಳಾಗಿ ನೇರವಾಗಿ ನೇಮಕ ಮಾಡುವುದು.
- ಸೋಲಿಗರ ಭಾಷೆ, ಸಂಸ್ಕೃತಿ ಹಾಗೂ ಅರಣ್ಯದ ಮಹತ್ವದ ಬಗ್ಗೆ ಶಾಲಾ ಪಠ್ಯವನ್ನು ಸಿದ್ಧಪಡಿಸುವುದು.
- ಸೋಲಿಗರ ಸಾವಯವ ಕೃಷಿ ಪದ್ಧತಿಯನ್ನು ಉತ್ತೇಜಿಸುವುದರ ಜೊತೆಗೆ ಆಧುನಿಕ ಕೃಷಿ ಪದ್ಧತಿಯನ್ನು ಅನುಸರಿಸುವಂತೆ ಮಾಡುವುದು.

- ಸೋಲಿಗರು ಸಮುದಾಯದಲ್ಲಿರುವ ನಾಟಿ ಔಷಧಿಯ ತಜ್ಞರನ್ನು ಗುರುತಿಸುವುದು, ಸರಕಾರದ ವತಿಯಿಂದ ಮಾಸಾಶನ ಕೊಡುವುದು ಹಾಗೂ ಅವರಿಗೆ ಔಷಧಿಯ ಮಾರಾಟದಲ್ಲಿ ಪೇಟೆಂಟ್ ನೀಡುವುದು.
- ಚಾಮರಾಜನಗರ, ಮೈಸೂರು, ಕೊಡಗು, ಚಿಕ್ಕಮಗಳೂರು, ಉಡುಪಿ, ಶಿವಮೊಗ್ಗ, ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಗಳ ಆದಿವಾಸಿಗಳಿಗೆ ಅನುಕೂಲವಾಗುವ ಸ್ಥಳದಲ್ಲಿ ಪ್ರತ್ಯೇಕವಾದ ಅರಣ್ಯವಾಸಿ ವಿಶ್ವವಿದ್ಯಾಲಯವನ್ನು ತೆರೆಯುವುದು. ಅರಣ್ಯವಾಸಿಗಳಲ್ಲಿ ಉನ್ನತ ವ್ಯಾಸಂಗ ಮಾಡಿದವರನ್ನು ವಯಸ್ಸಿನ ಮಿತಿಯಿಲ್ಲದೇ ಮತ್ತು ಸಮುದಾಯದ ಪಾರಂಪರಿಕವಾದ ಜ್ಞಾನಿಗಳಿಂದ ತಿಳುವಳಿಕೆ ಪಡೆಯುವುದು.
- ಸೋಲಿಗರ ವೈದ್ಯಪದ್ಧತಿಯ ಬಗ್ಗೆ ವೈಜ್ಞಾನಿಕ ಸಂಶೋಧನೆಯನ್ನು ನಡೆಸುವುದು.
- ಸೋಲಿಗ ಮಹಿಳೆಯರು ಹೆರಿಗೆ ಮಾಡಿಸುವುದರಲ್ಲಿ ನಿಪುಣರು. ಇದರಲ್ಲಿ ತಮ್ಮದೇ ಆದ ಪಾರಂಪರಿಕವಾದ ಜ್ಞಾನ ಹೊಂದಿದ್ದಾರೆ. ಆದುದರಿಂದ ಸಮುದಾಯದಲ್ಲಿ ಎಸ್‌ಎಸ್‌ಎಲ್‌ಸಿ ಆದ ಯುವತಿಯವರಿಗೆ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ವಿಶೇಷ ಯೋಜನೆಯಡಿಯಲ್ಲಿ ಉಚಿತವಾಗಿ ನರ್ಸಿಂಗ್ ತರಬೇತಿ ಕೊಟ್ಟು, ಅವರುಗಳನ್ನು ನೇರವಾಗಿ ಆಯ್ಕೆ ಮಾಡಿ ಎಲ್ಲೆಲ್ಲಿ ಹೆಚ್ಚು ಬುಡಕಟ್ಟು ಸಮುದಾಯಗಳಿರುವ ಜಿಲ್ಲೆಗಳಲ್ಲಿ ಸೇವೆ ಮಾಡಲು ಅವಕಾಶ ನೀಡುವುದು.
- ಸೋಲಿಗರ ಎಲ್ಲಾ ವೈದ್ಯ ಪದ್ಧತಿಗಳಿಗೆ ಸಂಬಂಧಿಸಿದ ವಿಷಯಗಳನ್ನು ಬರವಣಿಗೆಯ ಮೂಲಕ ಪುಸ್ತಕ ರೂಪಕ್ಕೆ ತರುವುದು. ಇದರ ಮೂಲಕ ಗಿಡಮೂಲಿಕೆ, ಮಾಂತ್ರಿಕ, ದೇವರು-ದಿಂಡರು ಈ ಎಲ್ಲಾ ವಿಷಯಗಳು ಬರವಣಿಗೆಯ ರೂಪದಲ್ಲಿದ್ದಾಗ ಎಲ್ಲರೂ ತಿಳಿದುಕೊಳ್ಳಲು ಸಹಾಯಕ ವಾಗಿರುತ್ತದೆ.

ಸೋಲಿಗರ ವೈದ್ಯ ಪದ್ಧತಿಗಳಿಗೆ ಸಂಬಂಧಿಸಿದ ಈ ಎಲ್ಲಾ ವಿಚಾರಗಳನ್ನು ಕಾರ್ಯಗತಗೊಳಿಸಿದ್ದೇ ಆದರೆ ಕಾನನಗಳ ಮಧ್ಯೆ ಕಾನನಗಳ ಅಂಚಿನಲ್ಲಿ, ಬೆಟ್ಟ-ಗುಡ್ಡಗಳಲ್ಲಿ ಎಲೆಮರೆ ಕಾಯಿಗಳಂತೆ ಕಣ್ಮರೆಯಾಗುತ್ತಿರುವ ವಯಸ್ಸಾದ, ನುರಿತ ಸೋಲಿಗ ಜನಪದ ವೈದ್ಯರು ಬೆಳಕಿಗೆ ಬರುವುದರ ಜೊತೆಗೆ ಇಡೀ ಮಾನವ ಸಮುದಾಯಕ್ಕೆ ಸೋಲಿಗರ ವೈದ್ಯ ಪದ್ಧತಿಯ ಪರಿಚಯವಾಗಿ ಬೆಳೆಯುವುದರಲ್ಲಿ ಯಾವುದೇ ರೀತಿಯ ಸಂದೇಹವಿಲ್ಲ.

ಸೋಲಿಗರಿಗೆ ಪ್ರಸ್ತುತ ದಿನಗಳಲ್ಲಿ ಬಹಳ ಮುಖ್ಯವಾದುದು; ಎಂದರೆ ಪರಿಸರದೊಟ್ಟಿಗಿನ ಶಿಕ್ಷಣ ಪದ್ಧತಿ. ಮೊದಲು ಅವರಿಗೆ ಪರಿಸರದೊಟ್ಟಿಗೆ ಮಾತೃಭಾಷೆಯಲ್ಲಿ ಶಿಕ್ಷಣವನ್ನು ಕೊಡಬೇಕು ಮತ್ತು ೧ನೇ ತರಗತಿಯಿಂದ ೧೨ನೇ ತರಗತಿಯವರೆಗೆ ನವೋದಯ ಮಾದರಿಯಲ್ಲಿ ಶಿಕ್ಷಣವನ್ನು ಕೊಡಬೇಕು ಜೊತೆಗೆ ಪ್ರತಿಯೊಂದು ತಾಲ್ಲೂಕಿಗೆ ಒಂದರಂತೆ ನವೋದಯ ಮಾದರಿಯ ಶಾಲೆಯನ್ನು ಸರಕಾರ ತೆರೆಯಬೇಕು ಅಲ್ಲದೆ ಕಡ್ಡಾಯವಾಗಿ ಮಕ್ಕಳಿಗೆ ಶಿಕ್ಷಣ ಕೊಡುವುದರ ಜೊತೆಗೆ ಮಕ್ಕಳ ತಂದೆ-ತಾಯಿಯರಿಗೂ ಶಿಕ್ಷಣದ ಮಾಹಿತಿ ಅರಿವಿನ ಜಾಗೃತಿಯನ್ನು ಮೂಡಿಸುವುದು. ಶಾಲೆ ಬಿಟ್ಟಿರುವ ಮಕ್ಕಳನ್ನು ಕಡ್ಡಾಯವಾಗಿ ಮನವೊಲಿಸಿ ಶಾಲೆಗೆ ಸೇರಿಸುವುದು.

ಆಧುನೀಕತೆಯ ವೈಪರೀತ್ಯದಿಂದಾಗಿ ಕೀಳರಿಮೆಗೆ ಒಳಗಾದ ಸಮುದಾಯಕ್ಕೊಂದು ಅನನ್ಯತೆ ಹಾಗೂ ವೈಶಿಷ್ಟ್ಯತೆ ಇದೆ ಎಂಬುದನ್ನು ಮನಗಾಣಿಸುವ ಕೆಲಸ ಆಗಬೇಕು. ಸೋಲಿಗರ ಪಾರಂಪರಿಕ ಜ್ಞಾನ ಪರಂಪರೆಯಾದ ಆಹಾರ, ಆರೋಗ್ಯ, ನ್ಯಾಯಪದ್ಧತಿ, ಆಡಳಿತ, ವ್ಯವಸ್ಥೆ ನಿಸರ್ಗದ ಬಗೆಗಿನ ಪರಿಭಾವನೆ ಮುಂತಾಗಿ ಅವರ ಆರೋಗ್ಯಕರ ಮೌಲ್ಯಗಳನ್ನು ಗುರುತಿಸುವಂತ ಜ್ಞಾನ ಪರಂಪರೆಗಳ ಶೋಧ ಆಗಬೇಕು. ಆ ಮೂಲಕ ಅವರ ಅನನ್ಯತೆಯನ್ನು ಮನಗಾಣಿಸಬೇಕು.

೧. ಈ ಅನನ್ಯತೆ ಮತ್ತು ವೈಶಿಷ್ಟ್ಯತೆಯ ಕಾರಣಕ್ಕಾಗಿ ಈ ನಾಡಿನ ಚರಿತ್ರೆಯಲ್ಲಿ ತಮಗೂ ಪ್ರಧಾನ ಪಾತ್ರವಿದೆ ಎಂಬ ಅರಿವಿನಲ್ಲಿ ಸ್ವಾಭಿಮಾನಿಗಳಾಗುವಂತೆ ಮಾಡಿ ತಾವು ಯಾರಿಗೂ ಕಡಿಮೆ ಇಲ್ಲ ಎಂಬ ಎಚ್ಚರ ಮಾಡುವ ಕಾರ್ಯಕ್ರಮಗಳನ್ನು ರೂಪಿಸಬೇಕು.

೨. ಬಹುಸಂಖ್ಯಾಂತರಿಂದ ಭೂಮಾಲೀಕರಿಂದ, ಅಧಿಕಾರಿಗಳಿಂದ ಬುಡಕಟ್ಟುಗಳನ್ನು ರಕ್ಷಿಸುವ ಸೂಕ್ತ ಕಾನೂನುಗಳ ರಚನೆಯಾಗಬೇಕು.

೩. ಸರಕಾರ ಅವರಿಗಾಗಿ ರೂಪಿಸಿರುವ ಯೋಜನೆಗಳನ್ನು ಅವರ ಮಧ್ಯೆಯೇ ರೂಪಿಸಬೇಕು. ಅವುಗಳ ಸಾಧಕಬಾಧಕಗಳನ್ನು ಕಾಯ್ದು ನೋಡಿ ಮರುಪರಿಶೀಲಿಸಿ, ಪುನರ್ ವಿಮರ್ಶಿಸಿ ಅಂತಿಮವಾಗಿ ಜಾರಿಗೆ ತರಬೇಕು. ಹಾಗೆ ತಾಳ್ಮೆಯಿಂದ ರೂಪಿಸಿದ ಯೋಜನೆಗಳು ಅವರ ಆರ್ಥಿಕತೆಗೆ ಮುಖ್ಯವಾಗಿ ಪ್ರಾಮುಖ್ಯತೆ ಕೊಟ್ಟು, ಸಾಂಸ್ಕೃತಿಕವಾಗಿ ಅವರ ಅನನ್ಯತೆ ರಕ್ಷಣೆಗೂ ಕಾರಣವಾಗುತ್ತದೆ.

೪. ಮೂಲ ನಿವಾಸಿಗಳ ಹಕ್ಕುಗಳನ್ನು ನಾಡಿನ ಕೆಲ ಜನತೆ ವಂಚಿಸಿ ತಮ್ಮದಾಗಿಸಿಕೊಳ್ಳುತ್ತಿರುವ ಪ್ರವೃತ್ತಿಯನ್ನು ತಡೆಗಟ್ಟಬೇಕು.

"ಸೋಲಿಗರು ಬುಡಕಟ್ಟು : ಸಮಾಜಶಾಸ್ತ್ರೀಯ ಅಧಯನ" ಈ ಅಧ್ಯಯನ ವಿಷಯದ ಮಹಾಪ್ರಬಂಧ ನನ್ನ ಪ್ರಾಮಾಣಿಕ ಪ್ರಯತ್ನವಾಗಿದೆ. ಅಧ್ಯಯನ ಕಾಲದಲ್ಲಿ ವಿಷಯಕ್ಕೆ ಸಂಬಂಧಿಸಿದ ಎಲ್ಲಾ ತರಹದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ ಆದರೂ ಯಾವುದಾದರೂ ಮಾಹಿತಿ ನನ್ನ ಗಮನಕ್ಕೆ ಬಾರದೆ ಉಳಿದಿದ್ದರೆ ಅವುಗಳನ್ನು ಮುಂದಿನ ಅಧ್ಯಯನಕಾರರ ಅಧ್ಯಯನಕ್ಕೆ ಬಿಡಲಾಗಿದೆ.

# ಅನುಬಂಧಗಳು

## ಅನುಬಂಧ ೧. ಸೋಲಿಗರು ಭಾಷೆ- ಮರಗಿಡಗಳು -ನಾಮಪದ(Noun)

| ಸೋಲಿಗರು ಉಪಯೋಗಿಸುವ ಭಾಷೆ | ಮರ/ ಗಿಡದ ಹೆಸರು | ನಾಮಪದ |
|---|---|---|
| ಮಾವಿನಮರ-ತೊರೆಮಾವು, ತೋಟಮಾವು, ಚಿಟ್ಟೆ ಮಾವು, ಬೆಲ್ಲ | ಮಾವಿನ ಮರ | Mango Tree |
| ಹುಣಸೆ ಮರ-ಹುಳಿ ಮರ, ಹುಳಿಕಾಯಿ ಕಿತ್ರೂಬಾ, ಹುಳಿ ತಿನ್ನಾಗೆ ಕಾಯಿ | ಹುಣಸೇ ಮರ | Tamarind Tree |
| ತೇಕಿನ ಮರ-ಹಿಟ್ಟಾ ತಿನ್ನಾಗೆ ತೇಕಿನ ಎಲೆ ಕಿತ್ರೂಬಾ, ಹಬ್ಬಕಾ ತೇಕಿನ ಎಲೆ ಕಿತ್ರೂಬಾ, ಗಿಣ್ಣೆ, ಸೊಟ್ಟೆ ಕಟ್ಟುವಾಗೆ ತೇಕಿನ ಎಲೆ ಎತ್ರು ಬಾಡಾ | ತೇಗದ ಮರ | Teak Tree |
| ಅಡಿಕೆ ಮರ-ಅಡಿಕೆ ಮರ, ಎಲೆ-ಅಡಿಕೆ ತಿನ್ನಾಗಿ ಅಡಕಿ ಎತ್ರುಬಾ, ಪೂಜಾಕ ಎಲೆ-ಅಡಕೆ ಎತ್ರುಬಾ, | ಅಡಿಕೆ ಮರ | Betelnut Tree |
| ಅತ್ತಿ ಮರ-ಅತ್ತಿರಮದಲ್ಲಿ ಅತ್ತಿ ಹಣ್ಣಾ ತಿನ್ನಾಕುಕಾ ಹತ್ತಿ ಹಣ್ಣಾ ತಿಂದ್ರು ಬರೋ ಬಾರೋಡೊ | ಅತ್ತಿ ಮರ | Fig tree |
| ಶ್ರೀಗಂಧ ಮರ-ಗಂಧದ ಸೊಪುಪ ದೇವರಿಗೆ ಮುಡಿಸಾಗೆ ಎತ್ರೂಬಾ ಗಂಧದ ತೇಕಾಗಿ ದೇವರಿಗೆ ಹಾಕಾಗೆ ಎತ್ರೂ ಬಾ | ಶ್ರೀಗಂಧದ ಮರ | Sandal Tree |
| ಜಾಲದ ಮರ-ಜಾಲದ ಹೂವಾ ಕಿತ್ರೂ ಬಾ ದೇವರಿಗೆ ಮುಡಿಸಾಕು ಜಾಲದ ಹೂವು ಮರದಲ್ಲಿ ಜೋಲಿದದೆ ಕಿತ್ರು ಬಾ ಜಾಲದೂವ ಎತ್ರುಬಾ ಹೆಣ್ಣಿಗೆ ಮೂಡಿಸಾಕು | ಜಾಲಿ ಮರ | Acacia |
| ಸೀಬೆ ಮರ-ಸೀಬೆಹಣ್ಣು ಬಾರಿಯಾಗಿ (ಹೆಚ್ಚಾಗಿ) ಬಿದ್ದಾದೆ (ಇದೆ) ತಿನ್ನಾಗೆ ಬಾರೋ ಹೋಗಾವ್ನೆ.ಸೀಬೆ ಹಣ್ಣು ತಿನ್ನಾಕು ಬಾ. | ಸೀಬೇಮರ | Guava Tree |
| ಹಲಸಿನ ಮರ-ಹಲಸಿನ ಹಣ್ಣು ಮರದಲ್ಲಿ ಬಿದ್ದರೆ ತಿನ್ನವು ಬಾರಡೊ. ಹಲಸಿನ ಹಣ್ಣು ಬಿದ್ದಾದೆ (ಇದೆ) | ಹಲಸಿನ ಮರ | Jackfruit Tree |

| ಸೋಲಿಗರು ಉಪಯೋಗಿಸುವ ಭಾಷೆ | ಮರ/ ಗಿಡದ ಹೆಸರು | ನಾಮಪದ |
|---|---|---|
| ಕರ್ಪೂರದ ಮರ- ಕರ್ಪೂರದ ಮರವಾ ತೊಲೆ ಗಿಲೆ ಕಿತ್ತುವಾಗೆ ಎತ್ರೂ ಬಾಡೊ. | ನೀಲಗಿರಿ ಮರ | Eucalyptus |
| ತೆಂಗಿನ ಮರ-ಕಾಯಿ ತಂದು ದೇವರಿಗೆ ಪೂಜೆ ಮಾಡಾಕು. ತೆಂಗಿನ ಮರದಲ್ಲಿ ಕಾಯಿ ಇದ್ದಲೆ ನೋಡು | ತೆಂಗಿನ ಮರ | Coconut Tree |
| ಅರಳಿ ಮರ-ಅರಳೀ ಮರದ ಎಲೆಯ ಎತ್ರು ಬಾಡೊ ರೊಟ್ಟಿ ಸುಟ್ಟಿ, ಮಕ್ಕಳಿಕ ಕೊಡಾಕು _ ಮಾತು ಬರಾಗೆ. | ಅರಳಿ ಮರ | Pupil Tree |
| ಬನ್ನಿ ಮರ-ಬನ್ನಿ ಮರದ ಕಾಯಿ ಎತ್ರು ಬನ್ನಿ ಚಪ್ಪಾರ ಕಟ್ಟಾಗೆ | ಬನ್ನಿ ಮರ | Calamander |
| ಬೀಡಿ ಮರ-ಬೀಡಿ ಮರದ ತೇಗೆ (ಚೆಕ್ಕೆ) ಕಿತ್ತು ಮಾಕು ಬೆಂಕಿ ಹಚ್ಚಾಗೆ. | ಬೀಟೆ ಮರ | Rosewood |
| ನುಗ್ಗೆ ಮರ-ನುಗ್ಗೆ ಮರದ ಸೊಪ್ಪು ತಿನ್ನಾಗೆ ನುಗ್ಗೆ ಕಾಯಿ ಸಾರು ಮಾಡಾರು | ನುಗ್ಗೆಮರ | Drumstick tree |
| ಕಂಯೆ ಬೇವಿನ ಮರ-ಕಂಯೆ ಬೇವಿನ ಸೊಪ್ಪು ಕಿತ್ರು ಬಾ, ಅರ್ತಾಕಿ ಕಜ್ಜೀಕಾ ಮೆತ್ತಾಕು | ಬೇವಿನ ಮರ | Neem tree |
| ಆಲದ ಮರ-ಆಲದ ಹಣ್ಣ ಕಾಡ ಕೋಳಿಗಾ ತಿಂದಾವೆ. | ಆಲದ ಮರ | Banyan Tree |
| ಸೀತಾಫಲ ಮರ-ಸೀತಾಫಲ, ರಾಮಪೆಲ, ಹಣ್ಣಾ ತಿನ್ನಾವೆ ಬಾರ ಡೊ. | ಸೀತಾಫಲ ಮರ | Custard Apple Tree |
| ಈಸಲು ಮರ-ಕಸಪರಕೆ ಮಾರ. ಈಸಲು ಗೋಳೆಯ ತಿನ್ನಾವೆ. ಈಸಲು ಹಣ್ಣು ತಿನ್ನಾವೆ ಬಾರಡೊ. | ಈಚಲು ಮರ | Toddy Palm |
| ಬೇಲದ ಮರ-ಬೇಲದ ಹಣ್ಣು ಕಿತ್ರು ಬಾ, ಕಸಾಯ ಮಾಡವೆ, ಜ್ಯೂಸ್ ಮಾಡಾಗೆ | ಬೇಲದ ಮರ | Elephant Apple |
| ಇಚ್ಚಿಮರ-ಇಕ್ಕಿ ಮರ, ಕರಿ ಇಚ್ಚಿ, ಬಿಳಿ ಇಚ್ಚಿ, ಇಚ್ಚಿ ಮರದ ಹಾಲು ಎತ್ರು ಬಂದು ಕುರಿಗು ಹಚ್ಚಾಕು | ಬಸರಿ ಮರ | Ficus species |
| ಹೊಂಗೆ ಮರ-೭ ಕುಲದ ಸೋಲಿಗರು ಹೊಂಗೆ ಮರದ ಸೊಪ್ಪವೆ ಸಪ್ಪರಕೆ ಬಳಸಿದವರೆ(ಬಳಸುತ್ತಾರೆ). | ಹೊಂಗೆ ಮರ | Pongamia |

